॥ ಶ್ರೀ ಹರಿಃ ಓಂ ॥

ಶ್ರೀ ಹರಿದಾಸ ಸಾಹಿತ್ಯ ಪ್ರಚಾರ ಗ್ರಂಥಮಾಲೆ

# ಭಜನಕೌಸ್ತುಭ

ಸಂಪುಟ—೩

ಶ್ರೀ ಹರಿಯ ಪ[illegible] ಮಾಲೆ

ಪ್ರಕಾಶರು

ಹೆಚ್. ಎಸ್. ಶ್ರೀನಿವಾಸಮೂರ್ತಿ

"ಶ್ರೀ ಉರಗಾದ್ರಿ", ನಂ. 61, 5ನೆಯ ಅಡ್ಡರಸ್ತೆ,

ನರಸಿಂಹರಾಜಾ ಕಾಲೋನಿ, ಬೆಂಗಳೂರು–560 019

BHAJANAKOUSTUBHA-VOLUME NO. THREE

Crown 1/8 Size.

No. of Pages 714

ಪ್ರಥಮ ಮುದ್ರಣ : ಜೂನ್ 1991

ಪ್ರತಿಗಳ ಸಂಖ್ಯೆ : 1000

**ಬೆಲೆ :** ಅರವತ್ತು ರೂಪಾಯಿಗಳು

ಪ್ರತಿಗಳು ದೊರೆಯುವ ಸ್ಥಳ :

**ಹೆಚ್. ಎಸ್. ಶ್ರೀನಿವಾಸಮೂರ್ತಿ**
"ಶ್ರೀ ಉರಗಾದ್ರಿ" ನಂ. 61, 5ನೆಯ ಅಡ್ಡ ರಸ್ತೆ,
ನರಸಿಂಹರಾಜ ಕಾಲೋನಿ, ಬೆಂಗಳೂರು–560 019

**ವೇದಾಂತ ಬುಕ್ ಹೌಸ್**
ಉಮಾ ಚಿತ್ರ ಮಂದಿರದ ಬಳಿ,
ಚಾಮರಾಜಪೇಟೆ,
ಬೆಂಗಳೂರು–560 018

**ನ್ಯೂ ವೇದಾಂತ ಬುಕ್ ಹೌಸ್**
ನಂ. 65/2, ಆರ್. ಕೆ. ಪ್ಲಾಜಾ, 8ನೆಯ ಕ್ರಾಸ್,
ಮಲ್ಲೇಶ್ವರಂ, ಬೆಂಗಳೂರು–560 003

**ಮುದ್ರಣಕಾರರು :** ಶಿಲ್ಪ ಪ್ರಿಂಟರ್ಸ್
ನಂ. 27. ವಿದ್ಯಾಪೀಠ ರಸ್ತೆ
ಬೆಂಗಳೂರು–560 028

**ಮುಖ ಚಿತ್ರ:** ಶ್ರೀ A.P.M. RAJ URS
ಸರಸ್ವತೀ ನಗರ, ಬೆಂಗಳೂರು–560 040

## ಶ್ರೀಪಾದಂಗಳವರ ಆಶೀರ್ವಚನ

ಶ್ರೀಭಂಡಾರಕೇರಿ ಪಲಿಮಾರು ಉಭಯ ಮಠಾಧೀಶರಾದ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರ ಕರಕಮಲ ಸಂಜಾತರಾದ ಶ್ರೀ ಶ್ರೀ ವಿದ್ಯೇಶತೀರ್ಥ ಶ್ರೀ ಪಾದಂಗಳವರ ಆಶೀರ್ವಚನ.

ಶ್ರೀಹೆಚ್. ಎಸ್. ಶ್ರೀನಿವಾಸಮೂರ್ತಿಯವರು "**ಭಜನಕೌಸ್ತುಭ**" ವೆಂಬ ಗ್ರಂಥವನ್ನು ಪ್ರಕಾಶನಗೊಳಿಸುತ್ತಿರುವುದು ಅತ್ಯಂತ ಅಭಿನಂದನೀಯ ವಾಗಿದೆ. ಈ ಗ್ರಂಥದಲ್ಲಿ ಶ್ರೀನಿವಾಸಮೂರ್ತಿಯವರು ನಾನಾ ದಾಸರು ಹಾಗೂ ಯತಿಪುಂಗವರ ಬಗೆಗಿನ ಜ್ಞಾನವರೇಣ್ಯರಿಂದ ರಚಿಸಲ್ಪಟ್ಟ ಕೀರ್ತನೆ ಗಳನ್ನು ಸಂಗ್ರಹಿಸಿದ್ದಾರೆ, ಇದಲ್ಲದೆ, ತಾರತಮ್ಯಕ್ಕನುಗುಣವಾದ ಕೀರ್ತನೆ ಗಳನ್ನು ಇಲ್ಲಿ ಅಳವಡಿಸಿದ್ದು ಅತ್ಯಂತ ಉಪಯುಕ್ತವೆನಿಸಿದೆ. ಈ ಗ್ರಂಥ ವನ್ನು "**ಭಾಗವತ ಕೀರ್ತನಾಸಾಗರ**" ವೆಂದು ಹೇಳಿದರೆ ಅತಿಶಯೋಕ್ತಿ ವೆನಿಸಲಾರದು. ಭಜಕರು ಈ ಸಾಗರವನ್ನು ತಲುಪಿದರೆ, ಭಗವಂತ–ಭಾಗವತರ ಗುಣರತ್ನಗಳನ್ನು ತಮ್ಮ ಬುದ್ಧಿಯಲ್ಲಿ ಪಡೆಯುವಲ್ಲಿ ಯಶಸ್ವಿ ಯಾಗಬಲ್ಲರು. ಮೂರ್ತಿಯವರ ಪ್ರಕಾಶನ ಕಾರ್ಯವು ಹರಿ–ಗುರು ದಾಸರಿಗೆ ಪ್ರಿಯವಾಗಿ ಸಫಲವಾಗಲಿ ಎಂದು ನಮ್ಮ ಉಪಾಸ್ಯಮೂರ್ತಿ ಯಾದ ಶ್ರೀ ಕೋದಂಡ ರಾಮಚಂದ್ರನನ್ನು ಈ ಸಂದರ್ಭದಲ್ಲಿ ವಿಶೇಷವಾಗಿ ಪ್ರಾರ್ಥಿಸುತ್ತೇವೆ,

ಇಂತೀ ನಾರಾಯಣ ಸ್ಮರಣೆಗಳು
**ಶ್ರೀ ವಿದ್ಯೇಶ ತೀರ್ಥರು**
(ಸಹಿ)

ಮೊಕ್ಕಾಂ ಬೆಂಗಳೂರು
(ಚಾತುರ್ಮಾಸ್ಯ)
ದಿನಾಂಕ 3–8–1993

# ಶ್ರೀ ಹರಿದಾಸ ಸಾಹಿತ್ಯ ಪ್ರಚಾರ ಗ್ರಂಥಮಾಲೆ
## ನಮ್ಮಲ್ಲಿ ದೊರೆಯುವ ಪುಸ್ತಕಗಳು

೧. ಶ್ರೀಮದ್ಹರಿಕಥಾಮೃತಸಾರ ಸಂಧಿ ೧ (ಮಂಗಳಾಚರಣ ಸಂಧಿ)
(ತೃತೀಯ ಮುದ್ರಣ) ಬೆಲೆ: ೧೫ ರೂ.

೨. " " ಸಂಧಿ ೨ (ಕರುಣಾ ಸಂಧಿ)
(ದ್ವಿತೀಯ ಮುದ್ರಣ) ಬೆಲೆ: ೨೦ ರೂ.

೩. " " ಸಂಧಿ ೬ (ಪಂಚಮಹಾಯಜ್ಞ ಸಂಧಿ)
ಬೆಲೆ: ೨೫ ರೂ.

೪. " " ಸಂಧಿ ೭ (ಪಂಚತನ್ಮಾತ್ರಾ ಸಂಧಿ)ಬೆಲೆ: ೨೫ರೂ.

೫. " " ಸಂಧಿ ೮ (ಮಾತೃಕಾ ಸಂಧಿ) ಬೆಲೆ: ೨೫ರೂ.

೬. " " ಸಂಧಿ ೯(ವರ್ಣಪ್ರಕ್ರಿಯಾ ಸಂಧಿ)ಬೆಲೆ: ೨೫ರೂ.

೭. " " ಸಂಧಿ ೧೦ (ಸರ್ವಪ್ರತೀಕ ಸಂಧಿ)
ಬೆಲೆ: ೨೫ ರೂ.

೮, " " ಸಂಧಿ ೧೧ (ಸ್ಥಾವರಜಂಗಮ ಸಂಧಿ)
ಬೆಲೆ: ೩೦ ರೂ.

೯. " " ಸಂಧಿ೧೨ (ನಾಡಿಪ್ರಕರಣಸಂಧಿ) ಬೆಲೆ ೩೦ ರೂ.

೧೦. " " ಸಂಧಿ ೧೩ (ನಾಮಸ್ಮರಣ ಸಂಧಿ)
ಬೆಲೆ., ೩೦ ರೂ ಗಳು

೧೧ ಸಂಧಿ ೧೪ (ಪಿತೃಗಣ ಸಂಧಿ) ಬೆಲೆ೩೦ ರೂ

೧೨ ಸಂಧಿ ೧೫ (ಶ್ವಾಸ ಸಂಧಿ) ಬೆಲೆ: ೩೦ ರೂ.

ಸಂಧಿ ೪ ಮತ್ತು ೫-೬-೭ ಪುನರ್ಮುದ್ರಣವಾಗಬೇಕಾಗಿವೆ.

೧೩ ಭಜನಕೌಸ್ತುಭ (ಪ್ರಥಮ ಸಂಪುಟ) ಬೆಲೆ ೪೦ ರೂ.

೧೪ " " (ದ್ವಿತೀಯ ಸಂಪುಟ) ದೇವತಾತಾರತಮ್ಯ
ಬೆಲೆ: ೪೦ ರೂ.

೧೫ " " (ತೃತೀಯ ಸಂಪುಟ)
ಶ್ರೀ ಹರಿಯ ಪರವಾದ ಕೀರ್ತನೆಗಳ ಸಮಗ್ರ ಸಂಗ್ರಹ
ಬೆಲೆ. ೬೦ ರೂ ಗಳು

೧೬ ಶ್ರೀಮಧ್ವನಾಮ ಬೆಲೆ ೨೫ ರೂ.

# ಪ್ರಕಾಶಕರ ನುಡಿ

ಹರಿದಾಸ ಸಾಹಿತ್ಯಾಭಿಮಾನಿಗಳಾದ ಆಧ್ಯಾತ್ಮಬಂಧುಗಳಲ್ಲಿ ವಿನಂತಿ.

**ಭಜನಕೌಸ್ತುಭವು** ಎರಡು ಸಂಪುಟಗಳಲ್ಲಿ ದಿನಾಂಕ 17-8-93 ರಂದು ಶ್ರೀ ಭಂಡಾರಕೇರಿ ಪಲಿಮಾರು ಉಭಯ ಮಠಾಧೀಶರಾದ ಶ್ರೀ೧೦೮ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರ ಕರಕಮಲ ಸಂಜಾತರಾದ ಪೂಜ್ಯ **ಶ್ರೀ೧೦೮ ಶ್ರೀ ಶ್ರೀ ವಿದ್ಯೇಶತೀರ್ಥ ಶ್ರೀಪಾದಂಗಳವರ** ಅಮೃತ ಹಸ್ತದಿಂದ ಬಿಡುಗಡೆ ಮಾಡಲ್ಪಟ್ಟಿತು.

ಒಂಭತ್ತು ತಿಂಗಳ ನಂತರ ಈಗ **ಭಜನಕೌಸ್ತುಭದ ತೃತೀಯ ಸಂಪುಟವನ್ನು** ನಿಮ್ಮ ಕೈಯ್ಯಲ್ಲಿಡಲು ಹರ್ಷಿಸುತ್ತೇನೆ.

ಈ ಸಂಪುಟದಲ್ಲಿ **ಶ್ರೀಹರಿಯ** ಪರವಾದ ಶ್ರೀಹರಿದಾಸರ ಅಪೂರ್ವ ಕೀರ್ತನೆಗಳ ಸಂಗ್ರಹವಿದೆ. ಈ ಕೀರ್ತನ ತರಂಗಿಣಿಯನ್ನು ವಿವಿಧ ಹಂತ ಗಳಲ್ಲಿ ವಿಂಗಡಿಸಿ, ಪ್ರಕಟಿಸಲಾಗಿದೆ.

೧) ಶ್ರೀಹರಿಯ ಆಹ್ವಾನರೂಪದ ಕೀರ್ತನೆಗಳು, ೨) ದರ್ಶನ ಕುತೂಹಲ. ೩) ಶ್ರೀಹರಿಯ ಆಗಮನ. ೪) ಆವನ ದರ್ಶನಭಾಗ್ಯ ವನ್ನು ಕುರಿತ ಪದಗಳು. ೫) ದಶಾವತಾರ ಸ್ತೋತ್ರ ಪದಗಳು. ೬) ಶ್ರೀ ವೆಂಕಟೇಶ ದೇವರ ಪರವಾದ ಕೀರ್ತನೆಗಳ ಅಖಂಡ ಸಂಗ್ರಹ. ೭) ಶ್ರೀರಾಮದೇವರ ಪರವಾದ ಕೀರ್ತನೆಗಳ ಮಂಜರಿ. ೮) ಶ್ರೀ ಕೃಷ್ಣನ ಪರವಾದ ಅಪೂರ್ವ ಕೀರ್ತನಮಾಲೆ. ೯) ಮಂಗಳ ಪದಗಳು– ಈ ರೀತಿ ೯ ವಿವಿಧ ಹಂತಗಳಲ್ಲಿ ವಿಂಗಡಿಸಿ, ಸಂಗ್ರಹಿಸಿ, ಪ್ರಕಟಿಸಲಾಗಿದೆ.

ಈ ಸಂಪುಟದ ವೈಶಿಷ್ಟ್ಯವೇನೆಂದರೆ–ಪ್ರತಿಕೀರ್ತನೆಯ ಕೊನೆಯಲ್ಲಿ **ಅರ್ಥವಿವರಣೆಯನ್ನು** ಪ್ರತಿಪದಕ್ಕೂ ವಿವರವಾಗಿ ಕೊಟ್ಟಿದೆ. ಇದರಿಂದ ಕೀರ್ತನೆಯನ್ನು ಹಾಡುವವರಿಗೂ ಮತ್ತು ಅಧ್ಯಯನಮಾಡುವವರಿಗೂ,

ಕೀರ್ತನಸಾಹಿತ್ಯದ ಅರ್ಥವು ಚೆನ್ನಾಗಿ ಮನವರಿಕೆಯಾಗುವುದು. ಪ್ರತಿ ಪದಾರ್ಥದ ಜೊತೆಗೆ ಇತಿಹಾಸ, ಪುರಾಣಗಳಿಂದ ಸಂದರ್ಭೋಚಿತರಾದ ಪ್ರಾಸಂಗಿಕ ವಿವರಣೆಗಳನ್ನು ಕೊಟ್ಟಿದೆ. ಇದರಿಂದ ಶಾಸ್ತ್ರಪ್ರಮಾಣಗಳೂ ಉಲಪಬ್ಧವಾದಂತಾಯಿತು, ಈ ಸರ್ವದೃಷ್ಟಿಗಳಿಂದಲೂ ಪ್ರತಿ ಕೀರ್ತನ ಸಾಹಿತ್ಯವೂ ಸರ್ವಾಂಗ ಪರಿಪೂರ್ಣವಾಗಿದೆ.

ಕರ್ನಾಟಕ ಹರಿದಾಸ ಸಾಹಿತ್ಯದ ಆದ್ಯಪ್ರವರ್ತಕರೆಂದು ಖ್ಯಾತನಾಮರಾದ ಶ್ರೀ **ಶ್ರೀಪಾದರಾಜ ಗುರುಸಾರ್ವಭೌಮರಿಂದ** ವಿರಚಿತ ಶ್ರೀ ರಂಗವಿಠಲಾಂಕಿತ ಕೀರ್ತನೆಗಳಿಂದ ಆರಂಭಿಸಿ, ಶ್ರೀ ಜಗನ್ನಾಥದಾಸರು, ಅವರ ಶಿಷ್ಯ ಪ್ರಶಿಷ್ಯರಿಂದ ವಿರಚಿತ ಅಪೂರ್ವಕೀರ್ತನ ವಾಹಿನಿ ಓತಪ್ರೋತವಾಗಿ ಹರಿದಿದೆ. ಈ ಕೀರ್ತನಗಂಗೆಯಲ್ಲಿ ಶ್ರೀವಿಷ್ಣುಪ್ರೇರಣೆಯಾ ಶ್ರೀ ವಿಷ್ಣುಪ್ರೀತ್ಯರ್ಥವಾಗಿ ಸಂಕಲ್ಪ ಪೂರ್ವಕವಾಗಿ ಸ್ನಾನಮಾಡುವ ಭಗವದ್ಭಕ್ತರೇ ಪರಮ ಧನ್ಯರು.

ಈ **ತೃತೀಯ ಸಂಪುಟದಲ್ಲಿ** ಶ್ರೀಕೃಷ್ಣದೇವರ ಪರವಾದ ಕೀರ್ತನೆಗಳ ಸಂಗ್ರಹ ಗಮನಾರ್ಹ. ಶ್ರೀಮದ್ಭಾಗವತದ ದಶಮಸ್ಕಂಧಗತ ಸಮಗ್ರ ಕಥಾನಕವು ಶ್ರೀಕೃಷ್ಣಾವತಾರ–ಬಾಲ್ಯ– ಲೀಲಾವಿನೋದಗಳು–ಭ್ರಮರಗೀತಾ–ಗೋಪಿಕಾಗೀತೆ-ಕಂಸಾಸುರನ ಸಂಹಾರ–ಇತ್ಯಾದಿ ವಿವಿಧ ಘಟಕಗಳಲ್ಲಿ ಹರಿದಾಸ ಪರಂಪರೆಯಲ್ಲಿ ಬಂದಿರುವ ಹರಿದಾಸರುಗಳಿಂದ ವಿರಚಿತವಾದ ಕೀರ್ತನೆಗಳ ರೂಪದಲ್ಲಿ ನಿರೂಪಿಸಲ್ಪಟ್ಟಿರುವುದು–ಈ ಸಂಪುಟದ ವೈಶಿಷ್ಟ್ಯ.

**ಗಮನಿಸಿ :** ದಿನಾಂಕ 17–8–93ರಂದು ಪ್ರಕಟವಾದ **ಭಜನಕೌಸ್ತುಭ** ಸಂಪುಟಗಳ ಬೆಲೆಗಳು ಈ ರೀತಿ ಇವೆ.

೧) **ಭಜನಕೌಸ್ತುಭ**–ಪ್ರಥಮ ಸಂಪುಟ–ದಾಸಕಕ್ಷೆ ಮತ್ತು ಯತಿಕಕ್ಷೆ
ಬೆಲೆ = 40 ರೂ.

೨) –ದ್ವಿತೀಯ ಸಂಪುಟ–ದೇವತಾತಾರತಮ್ಯ ಬೆಲೆ = 40 ರೂ.

ಈಗ ಪ್ರಕಟವಾಗಿರುವ ಭಜನಕೌಸ್ತುಭದ ಸಂಪುಟದ ಬೆಲೆ 60 ರೂ. 3 ಸಂಪುಟಗಳನ್ನೂ ಒಟ್ಟಿಗೆ ತೆಗೆದುಕೊಳ್ಳುವವರಿಗೆ 100 ರೂ. ಆಗುವುದು. ಇದರಿಂದ 40 ರೂ ಉಳಿತಾಯವಾಗುವುದು

ಬಿಡಿ ಪ್ರತಿಗಳನ್ನು ಕೊಳ್ಳುವವರು ಅವುಗಳ ಮುಖಬೆಲೆಯನ್ನೇ ಕೊಡಬೇಕು.

ಶ್ರೀ ಪಾಂಡುರಂಗನ ಚಿತ್ರವನ್ನು ಅಂದವಾಗಿ ಬರೆದು ಕೊಟ್ಟು ಸಹಕರಿಸಿದ ಪ್ರಖ್ಯಾತ ಕಲಾವಿದರಾದ ಶ್ರೀ ಎ. ಪಿ. ಎಸ್. ರಾಜ್ ಅರಸ್ ಸರಸ್ವತೀನಗರ ಬೆಂಗಳೂರು–560 040 ಇವರಿಗೆ ಪ್ರಕಾಶಕರು ಆಭಾರಿಗಳಾಗಿದ್ದಾರೆ. ಶ್ರೀಯುತರಿಗೆ ಧನ್ವಂತ್ರೀನಾಮಕ ಶ್ರೀಹರಿಯು ಉತ್ಕೃಷ್ಟವಾದ ಆರೋಗ್ಯವನ್ನು ದಯಪಾಲಿಸಿ, ಅವರ ದ್ವಾರಾ ಚಿತ್ರಕಲಾಸೇವೆಯನ್ನು ಹೆಚ್ಚಾಗಿ ತೆಗೆದು ಕೊಳ್ಳಲೆಂದು ಪ್ರಾರ್ಥನೆ.

ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಶಿಲ್ಪಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಎಸ್. ಎಲ್. ಗುರುಶಾಂತಮೂರ್ತಿ ಮತ್ತು ಅವರ ಸಿಬ್ಬಂದಿವರ್ಗದವರಿಗೆ ನಮ್ಮ ಅಭಿನಂದನೆಗಳು.

ತೃತೀಯ ಸಂಪುಟದ ಪ್ರತಿಗಳನ್ನು ಅಚ್ಚುಕಟ್ಟಾಗಿ ಬೈಂಡ್ ಮಾಡಿದ, ಆಫ್‌ಸೆಟ್ಟಿನಲ್ಲಿ ವರ್ಣರಂಜಿತ ಮುಖಪುಟವನ್ನು ಮಾಡಿಕೊಟ್ಟ ಶ್ರೀರಂಗ ಬೈಂಡರ್ಸ್–ಮಾಲೀಕರಾದ ಶ್ರೀ ಬಾಲಕೃಷ್ಣ ಅವರಿಗೆ ನಮ್ಮ ವಂದನೆಗಳು. **ಭಜನಕೌಸ್ತುಭದ ಮುಂದಿನ ಚತುರ್ಥಸಂಪುಟವು ಶ್ರೀಘ್ರದಲ್ಲಿಯೇ ಪ್ರಕಟವಾಗಲಿದೆ.** ಅದರಲ್ಲಿ ೧) ಶ್ರೀಹರಿಯ ಕೇಶವಾದಿ ಚತುರ್ವಿಂಶತಿ ಭಗವದ್ರೂಪಗಳ ಕೀರ್ತನೆಗಳ ಸಂಗ್ರಹ, ೨) ಶ್ರೀಪಾಂಡುರಂಗ ೩) ಶ್ರೀನರಸಿಂಹದೇವರು, ೪) ಕಪಿಲ ಧನ್ವಂತ್ರಿ–ದತ್ತಾತ್ರೇಯ ಇತ್ಯಾದಿ ಭಗವದವತಾರಗಳ ಪರವಾದ ಪದ–ಸುಳಾದಿಗಳು, ೫) ಪ್ರಮೇಯಾರ್ಥ

ಗಳಿಂದ ಕೂಡಿದ ಅನೇಕ ಕೀರ್ತನೆಗಳು, ೬) ತತ್ತ್ವಸುತ್ತ್ವಾಲಿ ೭) ಮುಂಡಿಗೆಗಳು, ೮) ನೀತಿಬೋಧಕ ಪದಗಳು, ೯) ಶ್ರೀಹರಿಯಲ್ಲಿ ಆತ್ಮನಿವೇದನ ರೂಪವಾದ ಅನೇಕ ಪದಗಳು, ೧೦) ಹರಿವಾಣ ಸೇವಾ ಪದಗಳು, ೧೧) ಜೋಗುಳ ಪದಗಳು, ೧೨) ಉದಯರಾಗಗಳು- ಇತ್ಯಾದಿ ಅತ್ಯಮೂಲ್ಯ ಹಾಗೂ ಅಪರೂಪವಾದ ಕೀರ್ತನೆಗಳ ಅಖಂಡ ಸಂಗ್ರಹವಿದೆ. ಈಗಿನಿಂದಲೇ 50ರೂ. ಗಳನ್ನು ಮುಂಗಡವಾಗಿ ಮೊಬಲಗನ್ನು ಕಳುಹಿಸಿ, ಪ್ರತಿಗಳನ್ನು ಕಾಯ್ದಿರಿಸಿಕೊಳ್ಳಬೇಕಾಗಿ ವಿನಂತಿ.

ಇಂತಿ ವಿಜ್ಞಾಪನೆಗಳು

ಬೆಂಗಳೂರು

ಹೆಚ್. ಎಸ್. ಶ್ರೀನಿವಾಸಮೂರ್ತಿ

(ಹರಿದಾಸ ಪಾದಪದಾರಾಧಕ)

(ಭಜನ ಕೌಸ್ತುಭ ತೃತೀಯ ಸಂಪುಟ)

# ಕೀರ್ತನಾನುಕ್ರಮಣಿಕೆ

## ವಿಭಾಗ-೧ ಆಹ್ವಾನ ಪದಗಳು

॥ ಶ್ರೀಮಧ್ವೇಶಾರ್ಪಣ ಮಸ್ತು ॥

## ವಿಭಾಗ-೨ ದೇವರ ಆಗಮನ

|| ಶ್ರೀ ಕೃಷ್ಣಾರ್ಪಣಮಸ್ತು ||

## ವಿಭಾಗ–೩ ಶ್ರೀಹರಿಯ ದರ್ಶನಭಾಗ್ಯ

॥ ಶ್ರೀ ಅಚ್ಯುತಾರ್ಪಣ ಮಸ್ತು ॥

## ವಿಭಾಗ–೪ ದಶಾವತಾರ ಸ್ತುತಿ ಪದಗಳು

## ವಿಭಾಗ–೫

## ಶ್ರೀನಿವಾಸ ದೇವರ ಪರವಾದ ಕೀರ್ತನೆಗಳು

(ಶ್ರೀ ಅಕ್ಷೋಭ್ಯ ತೀರ್ಥ ಕರಾರ್ಚಿತ

ಶ್ರೀ ರಾಮದೇವರ ಸ್ತೋತ್ರ ಪದ)



ಹನುಮದ್ವಿಲಾಸದಿಂದ



(ಹನುಮದ್ವಿಲಾಸದಿಂದ)



(ಹನುಮದ್ವಿಲಾಸದಿಂದ)

|| ಶ್ರೀ ದಶರಥನಂದನಾರ್ಪಣ ಮಸ್ತು ||

## ವಿಭಾಗ–೭ ಶ್ರೀಕೃಷ್ಣದೇವರ ಪರವಾದ
## ಕೀರ್ತನೆಗಳ ಸಂಗ್ರಹ

## ಮಂಗಳ ಪದಗಳು

| | | | | |
|---|---|---|---|---|
| 690 | 102 | ಜಯ ಮಂಗಳಂ | ಪ್ರಸನ್ನ ವೆಂಕಟ | 1635–1636 |
| 691 | 103 | ಜಯ ಮಂಗಳಂ ನಿತ್ಯ ಶುಭಮಂಗಳಂ | ವಿಜಯ ವಿಠ್ಠಲ | 1936–1640 |
| 692 | 104 | ಮಂಗಳಂ ಮಂಗಳಂ ಭವತು | ಗೋಪಾಲ ವಿಠ್ಠಲ | 1640–1641 |
| 693 | 105 | ಮಂಗಳಂ ಮಂಗಳಂ ದಯಾನಿಧೇ | ವರದ ಗೋಪಾಲ ವಿಠ್ಠಲ | 1642–1643 |
| 694 | 106 | ಸುವ್ವಿ ಶ್ರೀ ದೇವಿರಮಣ | ಜಗನ್ನಾಥ ವಿಠ್ಠಲ | 1643–1646 |
| 695 | 107 | ಮಂಗಳಂ ಜಯ ಮಂಗಳಂ | ಪ್ರಾಣೇಶ ವಿಠ್ಠಲ | 1647–1648 |
| 696 | 108 | ಮುತ್ತಿನಾರತಿಯೆತ್ತಿ | ಭೀಮೇಶ ಕೃಷ್ಣ | 1649–1650 |
| 697 | 109 | ಮಂಗಳೆಂದು ಪಾಡಿರೆ | ಶ್ಯಾಮ ಸುಂದರ | 1651–1653 |
| 698 | 110 | ಮಂಗಳಂ ವೇಣುಗೋಪಾಲ | ಕಾರ್ಪರ ನರಹರಿ | 1653–1655 |
| 699 | 111 | ಮಂಗಳ ಜೈ ಪಾಂಡುರಂಗನಿಗೇ | ಶ್ರೀಕರ ವಿಠ್ಠಲ | 1655–1657 |
| 700 | 112 | ಮಂಗಳಂ ಮಂಗಳಂ | ತಂದೆ ವೆಂಕಟೇಶ ವಿಠ್ಠಲ | 1657–1658 |
| 701 | 113 | ಮಂಗಳಂ ಸರ್ವೇಶ | ಕಮಲೇಶ ವಿಠ್ಠಲ | 1659–1660 |

॥ ಶುಭಮಸ್ತು ॥

॥ ಶ್ರೀ ಮಧ್ವೇಶಾರ್ಪಣ ಮಸ್ತು ॥



## ೪೪೭

### (ಹಯವದನಾಂಕಿತ)

ರಾಗ–ಆನಂದಭೈರವಿ ಆದಿತಾಳ

ಬೇಗ ಬಾರೋ ಬೇಗ ಬಾರೋ ನೀಲಮೇಘವರ್ಣ
ಬೇಗ ಬಾರೋ ಬೇಗ ಬಾರೋ ವೇಲಾಪುರದ ಚೆನ್ನ || ||ಪ||

ಇಂದಿರೆರಮಣ ಗೋವಿಂದ ಬೇಗ ಬಾರೋ
ನಂದನಕಂದ ಮುಕುಂದ ಬೇಗ ಬಾರೋ || ||೧||

ಧೀರ ಉದಾರ ಗಂಭೀರ ಬೇಗ ಬಾರೋ
ಹಾರಾಲಂಕೃತ ರಘುವೀರ ಬೇಗ ಬಾರೋ || ||೨||

ರಂಗ ಉತ್ತುಂಗ ನರಸಿಂಗ ಬೇಗ ಬಾರೋ
ಗಂಗೆಯ ಪಡೆದ ಪಾಂಡುರಂಗ ಬೇಗ ಬಾರೋ || ||೩||

ಶುದ್ಧ ಅಘದುದ್ಧ ಅನಿರುದ್ಧ ಬೇಗ ಬಾರೋ
ಹದ್ದನೇರಿದ ಸುಪ್ರಸಿದ್ಧ ಬೇಗ ಬಾರೋ || ||೪||

ಅಯ್ಯ ಸಾಹಸಯ್ಯ ವಿಜಯ್ಯ ಬೇಗ ಬಾರೋ
ಅಹಿಯಾದ್ರಿವಾಸ ಹಯವದನ ಬೇಗ ಬಾರೋ || ||೫||

**ಅರ್ಥವಿವರಣೆ :—**

ಶ್ರೀವಾದಿರಾಜಗುರುಸಾರ್ವಭೌಮರು ಬೇಲೂರಿಗೆ ಹೋಗಿದ್ದಾಗ ಅಲ್ಲಿಯ ಕ್ಷೇತ್ರಮೂರ್ತಿ ಚೆನ್ನಕೇಶವನನ್ನು (ವೇಲಾಪುರದ ಚೆನ್ನ) ಸ್ತುತಿಸಿದ್ದಾರೆ.

**ವೇಲಾಪುರದ ಚನ್ನ**=ಬೇಲೂರಿನ ಚೆನ್ನಕೇಶವಸ್ವಾಮಿ. **ನೀಲಮೇಘವರ್ಣ**=ನೀಲಮೇಘಶ್ಯಾಮ, **ಗೋವಿಂದ**=ವೇದಪ್ರತಿಪಾದ್ಯ, **ನಂದನಕಂದ**=ನಂದಗೋಪನ ಸಾಕುಮಗ ಶ್ರೀಕೃಷ್ಣ. **ಮುಕುಂದ** = ಮೋಕ್ಷಪ್ರದ. **ಧೀರ**= ಸರ್ವಶಕ್ತ, **ಉದಾರ**=ಕ್ಷಮಾದಿ ಉತ್ತಮಗುಣಪೂರ್ಣ. **ಗಂಭೀರ**=ಅಪ್ರಮೇಯ. **ಹಾರಾಲಂಕೃತ**=ವನಮಾಲೀ, **ರಘುವೀರ**=ರಘುಕುಲೋತ್ತಮನಾದ ಶ್ರೀ ರಾಮಚಂದ್ರ, **ರಂಗ**=ಜಗತ್ತಿನ ಸರ್ವಾಧಿಷ್ಠಾನಗಳಲ್ಲಿ ವಿಹರಿಸುವನು. **ಉತ್ತುಂಗ** = ಸರ್ವೋತ್ತಮ. **ನರಸಿಂಗ**=ಶ್ರೀನರಸಿಂಹದೇವರು, **ಗಂಗೆಯನು ಪಡೆದ**=ಗಂಗಾಜನಕನಾದ ತ್ರಿವಿಕ್ರಮ **ಪಾಂಡುರಂಗ**=ಪಂಢರಾಪುರದ ಕ್ಷೇತ್ರಮೂರ್ತಿ. **ಶುದ್ಧ**=ನಿರ್ಮಲಾತ್ಮ. **ಅಘುರುದ್ಧ**= ಸಮಸ್ತದೋಷವಿದೂರ. ಇದರಿಂದ ತನ್ನ ಭಕ್ತರಿಗೆ ಪಾಪಗಳು ಸೋಂಕದಂತೆ ತಡೆಯುವನು. **ಅನಿರುದ್ಧ**=ಯಾವ ಪ್ರತಿಬಂಧಕವೂ ಇಲ್ಲದವನು (ಸರ್ವತಂತ್ರಸ್ವತಂತ್ರನು). **ಹದ್ದನೇರಿದ** = ಗರುಡವಾಹನ **ಅಯ್ಯ**=ಜಗತ್ಪಿತ. **ಸಾಹಯ್ಯ**=ನಿತ್ಯನಾಟಕ ಬಿಂಬ, **ವಿಜಯ್ಯ**=ಪಾರ್ಥನಮಿತ್ರ. **ಅಹಿಯಾದ್ರಿವಾಸ**=ಶೇಷಾಚಲನಿವಾಸ,



**೪೪೮**

**(ಪುರಂದರವಿಠ್ಠಲಾಂಕಿತ)**

**ರಾಗ-ಭೈರವಿ** **ಆದಿತಾಳ**

ಓಡಿ ಬಾರೋ ಶ್ರೀ ವೈಕುಂಠಪತಿ ನಿನ್ನ
ನೋಡುವೆ ಮನದಣಿಯ ॥ ||ಪ||

ನೋಡಿ ಮುದ್ದಾಡಿ ಮಾತಾಡಿ ಸಂತೋಷಗೊಂಡಿ
ಪಾಡಿ ಪೊಗಳುವೆನು ಪರಮಪುರುಷ ಹರಿಯೇ ॥ ॥೮॥

ಕೆಂದಾವರೆ ಪೋಲ್ವ ಪಾದಗಳಿಂದ – ರಂಗ
ಧಿಂಧಿಮಿಧಿಕೆಂದು ಕುಣಿಯುತಲಿ
ಅಂದಿಗೆ ಕಿರುಗೆಜ್ಜೆ ಘಲುಘಲುರೆನ್ನುತ
ಚಂದದಿ ಪೀತಾಂಬರ ನಲಿದಾಡುತ ॥ ॥೯॥

ಕೋಟಿಸೂರ್ಯ ಪ್ರಕಾಶದಂತೆ–ಕಿ–
ರೀಟ ಕುಂಡಲ ಬಾವುಲಿ ಪೊಳೆಯೆ–ಲ–
ಲಾಟದಿ ಕಸ್ತೂರಿ ತಿಲಕವಿಡುವೆ ರಂಗ
ಕೊಟ್ಟ ಗೋಪಾಲರ ಆಟ ಸಾಕೋ ಈಗ ॥ ॥೧೦॥

ಎಣ್ಣೊರಿಗತಿರಸ ದಧಿ ಘೃತವೊ–ರಂಗ
ಎನ್ನಯ್ಯ ನಿನಗೆ ಕೊಡುವೆ ಬಾರೋ
ಚಿಣ್ಣರ ಒಡನಾಟ ಸಾಕು ಬಿಡೋ ರಂಗ
ಬೆಣ್ಣೆಯ ಮೆಲುವುದು ಬೇಡ ಎನ್ನ ಕಂದ ॥ ॥೧೧॥

ತುರುಬಿನ ಮೇಲೆ ನಲಿಯುತಲಿರುವ
ಮರುಗ ಮಲ್ಲಿಗೆ ಜಾಜಿ ತುಲಸಿಯ ದಂಡೆ
ಕರದಲಿ ಪಿಡಿದು ಪೊಂಗೊಳಲವೆ ಊದುತ
ಸರಸದಿಂದಲಿ ನೀ ನಲಿನಲಿದಾಡುತ ॥ ॥೧೨॥

ಮಂಗಳಾತ್ಮ ಮೋಹನಕಾಯ–ರಂಗ
ಸಂಗೀತಲೋಲ ಸದ್ಗುಣಶೀಲ
ಅಂಗನೆಯರಿಗೆಲ್ಲ ಅತಿ ಪ್ರಿಯನಾದ–ಶು–
ಭಾಂಗ ಪುರಂದರವಿಠಲರಾಯಾ ॥ ॥೧೩॥

**ಅರ್ಥ ವಿವರಣೆ**

ಪರಮಪುರುಷ = ಪುರುಷೋತ್ತಮ (ಸರ್ವೋತ್ತಮನಾದ), ಕೆಂದಾವರೆ = ಕನ್ನೈದಿಲೆಪುಷ್ಪ, ಅಂದಿಗೆ (ಅಂದುಗೆ) = ಕಾಲಿನ ಕಡಗ_ರುಳಿ. ಕುಂಡಲ = ಕಿವಿಯ ಆಭರಣ, ಬಾವುಲಿ = ಇನ್ನೊಂದು ತರೆಹದ ಕರ್ಣಾಭರಣ, ಎಣ್ಣೂರಿಗೆ = ಎಣ್ಣೆಯಲ್ಲಿ ಕರಿದ ಪದಾರ್ಥ, ಅತಿರಸ = ಅಪೂಪ ಎಂಬ ಮಧುರ ಭಕ್ಷ್ಯ, ಚಿಣ್ಣರ = ಚಿಕ್ಕಮಕ್ಕಳ, ಶುಭಾಂಗ = ಮಂಗಳಸ್ವರೂಪ,



## ೪೪೯

## (ಪ್ರಸನ್ನ ವೆಂಕಟಾಂಕಿತ)

**ರಾಗ-ದೇಸಾಕ್ಷಿ** **ಆದಿತಾಳ**

ಅಮ್ಮಾ ಬಾರೊ_ರಂಗಮ್ಮಾ ಬಾರೊ-ಪುಟ್ಟ
ತಮ್ಮ ಬಾರೋ_ಮುದ್ದಿನಮ್ಮ ಬಾರೋ || ||ಪ||

ಅಯ್ಯಾ ಬಾರೋ-ಅಜನಯ್ಯಾ ಬಾರೋ_ಜನು
ಮಯ್ಯಾ ಬಾರೋ_ಬೆಣ್ಣೆಗಯ್ಯಾ ಬಾರೋ || ||೧||

ಕಂದ ಬಾರೋ-ಪೂರ್ಣಾನಂದ ಬಾರೋ-ಸುರ
ವಂದ್ಯಾ ಬಾರೋ_ಬಾಲುಕುಂದ ಬಾರೋ || ||೨||

ಅಣ್ಣ ಬಾರೋ ತಾವರೆಗಣ್ಣ ಬಾರೋ-ಎನ್ನ
ಚಿನ್ನ ಬಾರೋ-ಶಿಶುರನ್ನ ಬಾರೋ || ||೩||

ನಲಿದು ಬಾರೋ_ಕರುಣಾಜಲಧಿ ಬಾರೋ-ಆಡಿ
ಬಳಲಿದೆ ಬಾರೋ_ಕರೆದರೊಲಿದು ಬಾರೋ || ||೪||

ಶ್ರೀಶಾ ಬಾರೊ-ಹಸುಗೂಸೆ ಬಾರೋ-ಪರಿ
ತೋಷಾ ಬಾರೊ-ಪ್ರಸನ್ವೆಂಕಟೇಶ ಬಾರೋ ॥ ॥೫॥



**ಅರ್ಥವಿವರಣೆ** —

ಈ ಕೀರ್ತನೆಯಲ್ಲಿ ಶ್ರೀಪ್ರಸನ್ನವೆಂಕಟದಾಸವರ್ಯರು ಶ್ರೀಪರಮಾತ್ಮನನ್ನು ನಾನಾ ವಿಧ ಭಾವ ಭಂಗಿಗಳಲ್ಲಿ ಆಹ್ವಾನಿಸುತ್ತಾರೆ. **ಅಮ್ಮಾ**-ಎಂದು ಕರೆದಿದ್ದಾರೆ. ಮಕ್ಕಳಿಗೆ ತಾಯಿಯಿದ್ದಂತೆ. ಮಾತೃವಾತ್ಸಲ್ಯದಿಂದ ತನ್ನ ಭಕ್ತರನ್ನು ಪರಿಪಾಲಿಸುವವನು, **ತಮ್ಮಾ**—ಎಂದು ಆಹ್ವಾನಿಸಿದ್ದಾರೆ, ಬಲರಾಮನಿಗೆ ಶ್ರೀಕೃಷ್ಣನು ತಮ್ಮನಾಗಬೇಕು. **ಮುದ್ದಿನುಮ್ಮ** = ಮುದ್ದಿನ ಖಣಿ, ಪುಟಾಣಿ ಕೃಷ್ಣರೂಪ. **ಅಯ್ಯಾ** = ಜಗಜ್ಜನಕ. **ಅಜನಯ್ಯಾ** = ಬ್ರಹ್ಮದೇವರ ಜನಕ. **ಚಿನುಮಯ್ಯಾ** = ಚಿದಾನಂದ ಸ್ವರೂಪಿ (ಪರಾತ್ಪರನು) **ಬೆಣ್ಣೆಗಯ್ಯಾ** = ನವನೀತಚೋರ, **ಕಂದ** = ಯಶೋದೆಯ ಕಂದ, **ಪೂರ್ಣಾನಂದ** = ಅನಂತಕಲ್ಯಾಣಗುಣಗಣ ಪರಿಪೂರ್ಣವಸ್ತು. **ಬಾಲ್ಮುಕುಂದ** = ವಟಪತ್ರಶಾಯಿ ಬಾಲಗೋಪಾಲ. **ಶಿಶುರನ್ನ** = ಮಕ್ಕಳ ಮಾಣಿಕ್ಯವೇ. **ಕರುಣಾಜಲಧಿ** = ದಯಾಸಾಗರ, **ಶ್ರೀಶಾ** = ಶ್ರೀಲಕ್ಷ್ಮೀರಮಣ. **ಹಸುಗೂಸೆ** = ಎಳೆಯ ಕಂದ. **(ಶಿಶುರೂಪ–ಕೃಷ್ಣ) ಪರಿತೋಷಾ** = ಆನಂದಪೂರ್ಣ.



## ೪೫೦

(ಅಂಕಿತ ಮಹೀಪತಿ)

ರಾಗ–ಭೈರವಿ **ಆದಿತಾಳ**

ಬಾರಯ್ಯ ಗೋವಿಂದಾ - ಬಾರೋ ನಂದನ ಕಂದಾ ॥ ॥ಪ॥

ಕನಕಗರ್ಭನ ತಂದೆ - ಕನಕಮೃಗವ ಕೊಂದೆ
ಕನಕಾಂಬರಧರ - ಕನಕನಯನಹರ
ಕನಕಪಕ್ಕಿಗಮನ - ಕನಕಾಭರಣ ॥ ॥೧॥

ಹರಿಯನಂದನ ಕೊಲಿಸಿ - ಹರಿಯನಂದನನಾಳಿಸಿ
ಹರಿಯಸುತನಾತ - ಹರಿಯರಿಪುಸುತ
ಹರಿಯ ಬಾಯನ್ನ - ಹರಿಯಾದೇ ॥ ॥೨॥

ಗೋಕುಲಪಂಧರ - ಗೋಕುಲವಿಹಾರಾ
ಗೋಕರ್ಣಶಯನ - ಗೋಕೋಟಿತೇಜ
ಮಹೀಪತಿಸುತ ಪ್ರಭು - ಗೋಪಾಲಾ ॥ ॥೩॥



**ಅರ್ಥವಿವರಣೆ :—**

ಮಹೀಪತಿದಾಸರ ಕೃತಿ ಇದು. ಇದರಲ್ಲಿ ದಾಸವರ್ಯರು ಏಕಪದ ಪ್ರಯೋಗ ಚಮತ್ಕಾರರೂಪವಾದ ಶ್ಲೇಷಾಲಂಕಾರವನ್ನು ಬಳಸಿದ್ದಾರೆ

ಗೋವಿಂದಾ = ವೇದಪ್ರತಿಪಾದ್ಯ - ಗೋ ಬ್ರಹ್ಮಣ್ಯದೇವ, ನಂದನ ಕಂದಾ = ನಂದಗೋಪನ ಸಾಕುಮಗ ಶ್ರೀಕೃಷ್ಣ. ಕನಕಗರ್ಭನ ತಂದೆ = ಬ್ರಹ್ಮದೇವರ ಪಿತ (ಶ್ರೀ ಪದ್ಮನಾಭದೇವರ ನಾಭಿ ಕಮಲವು ಸುವರ್ಣಾತ್ಮಕ ವಾದದ್ದು. ಲಕ್ಷ್ಮ್ಯಾತ್ಮಕವು. ಅದರಲ್ಲಿ ಉದ್ಭವಿಸಿದ ಬ್ರಹ್ಮದೇವರಿಗೆ - ಹಿರಣ್ಯ ಗರ್ಭ - ರೆಂತ ನಾಮ) ಕನಕಮೃಗನ ಕೊಂದೆ = ಭಂಗಾರದ ಜಿಂಕೆಯ ವೇಷದಲ್ಲಿ ಬಂದಿದ್ದ ಮಾರೀಚನನ್ನು ಕೊಂದ ಶ್ರೀರಾಮಚಂದ್ರ (ಕನಕ - ಸುವರ್ಣ, ಮೃಗ - ಜಿಂಕೆ). ಕನಕಾಂಬರಧರ = ಪೀತಾಂಬರಧಾರಿ. ಕನಕನಯನಹರ = ಹಿರಣ್ಯಾಕ್ಷನನ್ನು ಸಂಹರಿಸಿದ ಶ್ರೀ ವರಾಹದೇವರು (ಕನಕ-ಚಿನ್ನದ, ನಯನ-ಕಣ್ಣು. ಅಂತಹ ಹಿರಣ್ಯಾಕ್ಷ). ಕನಕಪಕ್ಕಿಗಮನ = ಗರುಡಗಮನ (ಕನಕಪಕ್ಕಿ - ಸುವರ್ಣವರ್ಣದ ರೆಕ್ಕೆಗಳುಳ್ಳ ಗರುಡ).

**ಕನಕಾಭರಣ**=ಸುವರ್ಣಾಭರಣಗಳಿಂದಲಂಕೃತ. ಈ ನುಡಿಯಲ್ಲಿ **ಕನಕ** - ಎಂಬ ಏಕಪದವನ್ನು ನಾನಾ ಅರ್ಥಗಳಲ್ಲಿ ಉಪಯೋಗಿಸಿದ್ದಾರೆ.

**ಹರಿಯನಂದನ ಕೊಲಿಸಿ** = ಇಂದ್ರನ ಮಗನಾದ ವಾಲಿಯನ್ನು ಕೊಂದ ಶ್ರೀರಾಮಚಂದ್ರ (ಹರಿ – ಇಂದ್ರ) ಹರಿಯನಂದನನುಳಿಸಿ= ಅದೇ ಇಂದ್ರಪುತ್ರನಾದ ಅರ್ಜುನನನ್ನು ಯುದ್ಧದಲ್ಲಿ ರಕ್ಷಿಸಿ, **ಹರಿಯಸುತನುತ**=ವಾಯುಪುತ್ರನಾದ ಹನುಮಂತನಿಂದ ನಮ್ಯ (ಹರಿಯ-ವಾಯುವಿನ- ಅಥವಾ ಸೂರ್ಯಪುತ್ರನಾದ ಸುಗ್ರೀವನಿಂದನುತ (ಹರಿ-ಸೂರ್ಯ). **ಹರಿಯರಿಪುಸುತ**=ಚಂದ್ರನ ಪ್ರತಿಕಕ್ಷಿ ಸೂರ್ಯನ ಕುಲದಲ್ಲಿ ಜನಿಸಿದ ಶ್ರೀರಾಮಚಂದ್ರ ಅಥವಾ ಸೂರ್ಯ ಪ್ರತಿಕಕ್ಷಿ ಚಂದ್ರಕುಲೋದ್ಭವ ಶ್ರೀಕೃಷ್ಣ (ಇಲ್ಲಿ ಹರಿ – ಸೂರ್ಯ ಮತ್ತು ಚಂದ್ರ ಎಂಬ ಎರಡು ಅರ್ಥಗಳಿವೆ), **ಹರಿಯೆ**=ಸಜ್ಜನರ ಸರ್ವಪಾಪ ಪರಿಹಾರಕನಾದ ಶ್ರೀ ಮನ್ನಾರಾಯಣನೇ. **ಹರಿಯಾದೆ**=ತಾತ್ಸಾರಮಾಡದೆ, ಶಬ್ದದಲ್ಲಿ ಶ್ಲೇಷಾಲಂಕಾರ ಪ್ರಯೋಗ ಇಲ್ಲಿ **ಹರಿಗೋಕುಲವರಧರ** = ಗೋಕುಲಕ್ಕೆ ಶ್ರೇಷ್ಠವಾಗಿದ್ದ ಗೋವರ್ಧನವನ್ನೆತ್ತಿದ ಶ್ರೀಕೃಷ್ಣ. **ಗೋಕುಲವಿಹಾರಾ** = ನಂದಗೋಕುಲದಲ್ಲಿ ವಿಹರಿಸಿದ ಶ್ರೀಗೋಪಾಲ, **ಗೋಕರ್ಣಶಯನಾ**=ತನ್ನ ಕಣ್ಣನ್ನೇ ಕಿವಿಯಾಗಿ ಉಳ್ಳ-ಸರ್ಪ ಅಂದರೆ ಶೇಷಶಯನ (ಗೋ–ಕಣ್ಣು) **ಗೋಕುಲ ತೇಜ** = ಕೋಟಿಸೂರ್ಯ ಪ್ರಭಾನ್ವಿತನು. (ಗೋ–ಕಿರಣಗಳಿಂದ ಯುಕ್ತನಾದ ಸೂರ್ಯ) **ಗೋಪಾಲ** = ವೇದಗಳನ್ನು ರಕ್ಷಿಸಿದ ಶ್ರೀಮತ್ಸ್ಯ. (ಗೋ– ವೇದಗಳು) ಗೋವುಗಳನ್ನು ಪಾಲನೆಮಾಡುವ (ಗೋ–ಹಸುಗಳು) ಗೋ–ಬ್ರಾಹ್ಮಣರಪಾಲಕ ಬ್ರಹ್ಮಣ್ಯದೇವ. (ಇಲ್ಲಿ **ಗೋ**–ಎಂಬ ಪದದ ನಾನಾರ್ಥಯುಕ್ತ ಶ್ಲೇಷಾಲಂಕಾರ).



## ೪೫೧

### (ಮಹಿಪತಿಸುತ-ಅಂಕಿತ)

ರಾಗ ಭೈರವಿ ತ್ರಿಪುಟತಾಳ

ಬಾರೋ ವಾರಿಜಚರಣಾ-ಭೂರಿ ದುರಿತ ಹರಣಾ || ||ಪ||

ಸಾರಂಗ ಹರಸಖ ಪತಿತೋದ್ಧರಣಾ
ಸಾರಂಗಧರ ಕರುಣಾ || ||ಅ||

ದ್ವಿಜರಾಜ ವಾಹನಾ-ಪೀತಾಂಬರಾವರಣಾ
ದ್ವಿಜರಾಜ ಕುಲಾಭರಣಾ || ||೧||

ಸುರವಾರಿ ನಂದನನ ಕಾಯಿದೇ ಹರಣಾ
ಸುರಪಾದಿ ಮುನಿಸ್ಫುರಣಾ || ||೨||

ಮಹಿಪತಿ ಸುರಪ್ರಭು ಕೇಯೂರಾಭರಣಾ
ಇಹಪರಾನಂದಪೂರಣಾ|| ||೩||



**ಅರ್ಥವಿವರಣೆ :-**

**ವಾರಿಜಚರಣಾ** = ಪಾದಪಂಕಜ. **ಭೂರಿದುರಿತಹರಣಾ** = ಅಗಾಧ ಪಾಪ ಪಾಪಗಳನ್ನು ಕ್ಷಾಳನಮಾಡುವವನು, ಇಲ್ಲಿ "ಹರ" ಶಬ್ದವನ್ನು ಎರಡು ಬೇರೆ ಬೇರೆ ಅರ್ಥಗಳಲ್ಲಿ ಪ್ರಯೋಗಿಸಿದ್ದಾರೆ:- (೧) ಸಾರಂಗಹರ = ಭಂಗಾರದ ಜಿಂಕೆಯ ವೇಷಧಾರಿಯಾಗಿದ್ದ ಮಾರೀಚನನ್ನು ಸಂಹರಿಸಿದ ಶ್ರೀರಾಮಚಂದ್ರ. (೨) ಹರಸಖ = ರುದ್ರದೇವರ ಮಿತ್ರ. **ಪತಿತೋ**

ದ್ಧರಣಾ = ಪಾತಕಿಗಳಾದ ಸಜ್ಜನರನ್ನು ಉದ್ಧರಿಸುವವನು. ಸಾರಂಗಧರ = ಶಾರ್ಙ್ಗವೆಂಬ ಧನುರ್ಧಾರೀ. ದ್ವಿಜರಾಜವಾಹನಾ = ಗರುಡಗಮನ (ದ್ವಿಜ-ಎರಡಾವರ್ತಿ ಹುಟ್ಟುವ ಪಕ್ಷಿ) ದ್ವಿಜರಾಜಕುಲಾಭರಣಾ = ಚಂದ್ರ ಕುಲೋತ್ಪನ್ನನಾದ ಶ್ರೀಕೃಷ್ಣ, ಸುರಪಾರಿನಂದನನ = ಇಂದ್ರನ ಶತ್ರುವಾದ ಹಿರಣ್ಯಕಶಿಪುವಿನ ಪುತ್ರ ಪ್ರಹ್ಲಾದನನ್ನು ಸಂರಕ್ಷಿಸಿದೆ. (ಸುರಪ-ಇಂದ್ರ) ಮುನಿಸ್ಫುರಣಾ = ಮುನಿಯೋಗಿಗಳಿಗೆ ಪ್ರೇರಕನು, ಇಹಪರಾನಂದ ಪೂರಣಾ = ಇಹ ಮತ್ತು ಪರ ಎರಡರಲ್ಲೂ ಆನಂದಪ್ರದನು.



## ೪೫೨

### (ವಿಜಯವಿಠ್ಠಲಾಂಕಿತ)

### (ವೃಂದಗಾನದಲ್ಲಿ)

**ರಾಗ-ರೇಗುಪ್ತಿ** **ಆದಿತಾಳ**

ಬಾಬಾ ಭಕುತರ ಹೃದಯಮಂದಿರ
ಬಾಬಾ ಜಗದೋದ್ಧಾರ ॥ ॥ಪ॥

ಬಾ ಬಾ ವೇಂಕಟಚಲ ವಿಹಾರ
ಬಾ ಬಾನೇಕಾವತಾರ-ಧೀರ ॥ಅ॥

ದಕ್ಷ ಕಮಲಾಕ್ಷ ರಾಕ್ಷಸಕುಲ ಶಿಕ್ಷ
ಲಕ್ಷ್ಮಣಾಗ್ರಜ ಲಕ್ಷ್ಮೀವಕ್ಷ
ಪಕ್ಷಿವಾಹನ ಪೂರ್ಣಲಕ್ಷಣ ಸರ್ವೇಶ
ಮೋಕ್ಷದಾಯಕ ಪಾಂಡವ ಪಕ್ಷ ॥

ಅಕ್ಷಯವಂತ ಸೂಕ್ಷಾಂಬರಧರಾ
ಧ್ಯಕ್ಷ ಪ್ರತ್ಯಕ್ಷದ ದೈವ
ಅಕ್ಷತನಾರೀರ ತತ್ಕ್ಷಣದಲಿ ತಂದ
ಅಕ್ಷರಪುರುಷ ಗೋವಿಂದ ॥ ॥೧॥

ಜಾಂಬೂನದಾಂಬರ ಸಾಂಬಜನಕ-ನೀ
ಲಾಂಬುದವರ್ಣ ಸುವರ್ಣ
ಸಾಂಬವಿನುತ ಸುಗುಣಾಂಬುಧಿ ನಾನಾ ವಿ-
ಡಂಬನ ತೋರಿದ ಮಹಿಮಾ ॥

ಕಾಂಬುವೆ ನಿನ್ನ ಚರಣಾಂಬುಜವ ಮನದೊಳು
ಜಾಂಬವಂತನ ಪರಿಪಾಲ ವಿ-
ಶ್ವಂಭರಂಬರಗ್ಗವಣೆಯ ಪಡೆದ ಖು-
ತಂಭರ ಶಂಬರಶಾಯಿ ॥೨॥

ಬಂಗಾರರಥದೊಳು ಶೃಂಗಾರವಾದ-ಶ್ರೀ
ಮಂಗಳಾಂಗ ಕಾಳಿಂಗ-
ಭಂಗ ನರಸಿಂಗ ಅಂಗಜಜನಕ ಶಾ-
ರಂಗ ರಥಾಂಗ ಪಾಣಿ ॥

ಸಂಗ ನಿಸ್ಸಂಗ ಮಾತಂಗ ವಿಹಂಗ ಪ್ಲ-
ವಂಗನಾಯಕ ಪರಿಪಾಲ
ಸಂಗೀತಲೋಲ ಗೋಪಾಂಗನೆಯರ ಅಂತ-
ರಂಗಸಂತಾಪ ವಿದೂರ ॥ ॥೩॥

ತಾಳ ಜಾಗಟೆ ಮದ್ದಳೆ ದುಂದುಭಿ-ಭೇರಿ
ಕಾಳೆ ಹೆಗ್ಗಾಳೆ ತಮ್ಮಟೆ ನಿ-
ಸ್ಸಾಳೆ ಪಟಹ ತಂಬೂರಿ ಪಣವ ಕಂಸಾಳೆ
ಕಂಬು ಢಕ್ಕ ವಾದ್ಯ ॥

ಸೂಳೈಸುತಲಿರೆ ಭಾಗವತರ ಸಂ-
ಮೇಳನ ಕುಣಿದೊಲಿದಾಡೆ
ಸಾಲುಪಂಜಿನ ಗುಂಪು ಛತ್ರ ಚಾಮರ ಧ್ವಜ-
ದಾಳಿಗಳು ಒಪ್ಪಿ ಹರೋ ॥ ॥೩॥

ಮುದ್ರೆ ನಾಮಂಗಳ ಧರಿಸಿದ ದಾಸರು
ವೀರ ಮಾರುತಿಮತದವರು
ಸಾರುತ್ತ ಸಂತತ ಬ್ರಹ್ಮಾದಿಗಳನ್ನು
ತಾರತಮ್ಯದಿಂದ ತಿಳಿದು ॥

ಬಾರಿ ಬಾರಿ ನಿನ್ನ ಹಾರೈಸಿ ಆನಂದ-
ವಾರಿಧಿಯಲಿ ಮಗ್ನರಾಗಿ
ತಾರರು ಮನಸಿಗೆ ಊರದೇವತೆಗಳ
ಸಾರ ಹೃದಯರು ನಿಂದಿಹರು ॥ ॥೫॥

ಹಿಂದೆ ಬಲೀಂದ್ರನ ದ್ವಾರದಿ ನೀನಿರೆ
ಮಂದಮತಿಯು ರಾವಣನು
ಬಂದು ಕೆಣಕಲು ನಗುತ ಮಹಲೀಲೆ-
ಯಿಂದಲಿ ನೀನೆ ಆ ಖಳನ ॥

ಅಂದು ತಡಮಾಡದೆ ಬಲು ಯೋಜನವಿರೆ
ಹಿಂದೆ ಬೆರಳಲ್ಲಿ ಒಗೆದೆ
ಇಂದು ನಿನಗೆ ಈ ರಥ ನಡೆಸುವುದು
ಅಂದವಾಗಿಹುದೇನೋ ಹರಿಯೇ ॥ ॥೬॥

ತಡ ಮಾಡಲಾಗದು ಪೊಡವೀಶ ನಿನಗೀ
ತಡೆ ಎದುರು ಪೊರಟರೆ
ತಡೆವರಿನ್ನಾರೈಯ ಒಡೆಯ ವೇದವೇದ್ಯ
ಕಡೆಗಣ್ಣನಿಂದ ನೋಡದಲೆ ॥

ನಡೆವುದು ನುಡಿವುದು ಅಡಿಗಡಿಗೆ ನೀನೇ
ಬಿಡದೆ ಒಳಗೆ ಹೊರಗಿದ್ದು

ಸಡಗರವೈವವೆ ಸುಡಿಯು ಲಾಲಿಸುವುದು
ಅಡಿಗಡಿಗೆ ಪಾಲಿಸುತ್ತ ॥ ॥೭॥

ಹಂಸವಾಹನ ಕ್ರತುಧ್ವಂಸಿ ಸಮನಸೋ-
ತ್ತಂಸ ಕೃಶಾನು ಪಾಶಿಗಳ
ಹಿಂಸೆಯುಗೊಳಿಸುವ ಪುಂಸರಕ್ಕಸ ಪಾಶಿ
ಕೌಂಶಿಕಾಪತಿಯು ಧನಪ ॥

ಅಂಶುಮಾಲಿ ಸೋಮ ಕೌಂಶಿಕಮುನಿ ಪರಮ-
ಹಂಸರು ಅಲ್ಲಲ್ಲಿ ನಿಂದು
ಸಂಸೇವೆ ಮಾಡುತ ಸಮ್ಮೊಗವಾಗಿಹರು
ಕಂಸಾರಿ ತ್ರಿಗುಣಾತೀತ ॥ ॥೮॥

ಹತ್ತಾವತಾರದ ಹರಿಯೋ- ಘನಸಿರಿಯೇ
ಮತ್ತೊಬ್ಬರನು ಹೀಗೆ ಕರೆಯೆ
ಭೃತ್ಯರ ಸಂಗಡೋಡ್ಯಾಡುವ ಧೊರೆಯೆ-ಎ
ನ್ನಿತ್ತಲಿ ಆಡುವ ಮರಿಯೆ

ಚಿತ್ತದೊಲ್ಲಭ ನಮ್ಮ ವಿಜಯವಿಠ್ಠಲರೇಯ
ಎತ್ತ ನೋಡಲು ನಿನಗೆ ಸರಿಯೆ
ಅತ್ತಿತ್ತ ಪೋಗದೆ ಇತ್ತ ಬಾರ್ಯೆಯ್ಯಾ ಎ
ನ್ನಿತ್ತಲಿ ವೆಂಕಟ ಧೊರೆಯೇ ॥ ॥೯॥

**ಅರ್ಥವಿವರಣೆ :—**

ಪರಮಪವಿತ್ರವಾದ ಶ್ರೀ ತಿರುಪತಿ ಕ್ಷೇತ್ರಕ್ಕೆ ಆ ಸಪ್ತಗಿರಿನಿವಾಸನ ದರ್ಶನಾಕಾಂಕ್ಷಿಗಳಾಗಿ, ಶ್ರೀವಿಜಯದಾಸವರ್ಯರು ತಪ್ಪದೇ ಪ್ರತಿವರ್ಷವೂ ಬ್ರಹ್ಮೋತ್ಸವಸಮಯಕ್ಕೆ ಹೋಗುತ್ತಿದ್ದರು. ಆಗ ರಥಾರೂಢನಾದ

ಶ್ರೀ ವೆಂಕಟೇಶನ ಮುಂದೆ ತಾಳಗತಿಲಯ ಬದ್ಧವಾಗಿ ನರ್ತಿಸುತ್ತಾ, ಭಕ್ತಿ ಪರವಶರಾಗಿ ಶಿಷ್ಯರಿಂದಸಹಿತರಾಗಿ, ಈ ಪದವನ್ನು ಹಾಡುತ್ತಿದ್ದರು.

**ಬಾಬಾ** = ಎಲ್ಲೈ ದೇವದೇವನೇ, ನನ್ನ ಹೃನ್ಮಂದಿರಕ್ಕೆ ಬಂದು ನೆಲೆಸು. **ಭಕ್ತರಹೃದಯಮಂದಿರ** = ಭಗವದ್ಭಕ್ತರ ಮನಸ್ಸೆಂಬ ಮಂದಿರದಲ್ಲಿರುವವನೆ. **ಜಗದ ಉದ್ಧಾರ** = ಸಜ್ಜನರನ್ನು ಉದ್ಧರಿಸುವ ಕರುಣಾಳು. **ವೆಂಕಟಾಚಲವಿಹಾರ** = ಶೇಷಾಚಲಪರ್ವತದಲ್ಲಿರುವ. ಶ್ರೀತಿರುಪತಿ ಕ್ಷೇತ್ರದಲ್ಲಿ ವಿಹರಿಸುತ್ತ ನೆಲೆಸಿರುವ ಜಗದೊಡೆಯನೆ, **ಅನೇಕಾವತಾರ** = ಭಕ್ತರಿಗಾಗಿ ಅನೇಕ ಅವತಾರಗಳನ್ನು ಎತ್ತಿದ, **ಧೀರ** = ಮಹಾಸಮರ್ಥ. **ದಕ್ಷ** = ಶಕ್ತಿವಂತನು, (ಸಾಮರ್ಥ್ಯವಂತನು), **ಕಮಲಾಕ್ಷ** = ಕಮಲ ನೇತ್ರನು, **ರಾಕ್ಷಸಕುಲಶಿಕ್ಷ** = ದೈತ್ಯರ ವಂಶಸಂಹಾರಕ. **ಲಕ್ಷ್ಮಣಾಗ್ರಜ** = ಲಕ್ಷ್ಮಣನ ಅಣ್ಣನಾದ ಶ್ರೀ ರಾಮಚಂದ್ರ. **ಲಕ್ಷ್ಮೀವಕ್ಷ** = ಶ್ರೀಲಕ್ಷ್ಮೀ ದೇವಿಯನ್ನು ತನ್ನ ವಕ್ಷಸ್ಥಲದಲ್ಲಿ ಧರಿಸಿರುವವನು. **ಪಕ್ಷಿವಾಹನ** = ಗರುಡ ಗಮನ, **ಪೂರ್ಣಲಕ್ಷಣ** = ಸಕಲ ಅಪ್ರಾಕೃತ ಶುಭಲಕ್ಷಣಸಂಪನ್ನನು, **ಸರ್ವೇಶ** = ಸರ್ವಜೀವರ ನಿಯಾಮಕನು, **ಮೋಕ್ಷದಾಯಕ** = ಮುಕ್ತಿ ಪ್ರದನು. **ಪಾಂಡವಪಕ್ಷ** = ಪಾಂಡವರ ಪಕ್ಷಪಾತಿ— ಸಜ್ಜನರ ರಕ್ಷಕನು, **ಅಕ್ಷಯವಂತ** = ನಿತ್ಯತ್ವವುಳ್ಳವನು (ಜೀವರ ನಿತ್ಯತ್ವವು ಭಗವದಧೀನವು), **ಸೂಕ್ಷ್ಮಾಂಬರಧರಾ** = ರೇಷ್ಮೆಯ ಪೀತಾಂಬರ ವಸ್ತ್ರವನ್ನು ಧರಿಸಿರುವ (ಅವನ ವಸ್ತ್ರಾಭರಣಗಳೆಲ್ಲವೂ ಅಪ್ರಾಕೃತವೇ) **ಅಧ್ಯಕ್ಷ** = ಸರ್ವ ಕರ್ಮ ಗಳಿಗೂ ಪ್ರೇರಕ ಹಾಗೂ ಸಾಕ್ಷಿ, **ಪ್ರತ್ಯಕ್ಷ ದೈವ** = ಸಕಲ ಕ್ರಿಯಾಭಿವ್ಯಕ್ತಿ ಮಾಡುವ ಬಿಂಬರೂಪೀ ಶ್ರೀಹರಿ. **ಅಕ್ಷತನಾರೀರ** = ತನ್ನನ್ನೇ ಪತಿಯನ್ನಾಗಿ ಕೋರಿ. ಶುದ್ಧ ಕನ್ಯಾವಸ್ಥೆಯಲ್ಲಿದ್ದ ೧೬,೦೦೦ ಸ್ತ್ರೀರತ್ನಗಳನ್ನು ನರಕಾಸುರನನ್ನು ಸಂಹರಿಸಿ, ಬಂಧನದಿಂದ ಬಿಡಿಸಿ, ಲಗ್ನ ಮಾಡಿಕೊಂಡ ಶ್ರೀಕೃಷ್ಣ (ಅಕ್ಷತ–ಕನ್ಯಾವಸ್ಥೆ), **ಅಕ್ಷರಪುರುಷ** = ಅಕ್ಷರ ನಾಮಕಳಾದ ಶ್ರೀ ಲಕ್ಷ್ಮಿಯ ಅಂತರ್ಯಾಮಿರೂಪ, **ಗೋವಿಂದ** = ವೇದಪ್ರತಿಪಾದ್ಯ,

**ಜಾಂಬೂನದಾಂಬರ** = ಬಂಗಾರದ ಜರತಾರಿ ವಸ್ತ್ರವನ್ನು ಧರಿಸಿರುವ (**ಜಾಂಬೂನದ**–ಸುವರ್ಣ. **ಅಂಬರ** = ವಸ್ತ್ರ) **ಸಾಂಬಜನಕ**ರಜಾಂಬು

ವತಿ ಪುತ್ರನು ಸಾಂಬನು. ಅವನ ತಂದೆಯಾದ ಜಾಂಬುವತೀರಮಣ ಶ್ರೀಕೃಷ್ಣ. ನೀಲಾಂಬರವರ್ಣ=ನೀಲಮೇಘದಂತೆ ದೇಹಕಾಂತಿಯುಳ್ಳ (ನೀಲ=ನೀಲವರ್ಣ, ಅಂಬುದ=ನೀರನ್ನು ಕೊಡುವ ಮೇಘಗಳು) ಸುವರ್ಣ = ಸ್ಫುರದ್ರೂಪಿ, (ಮಂಗಳಾಂಗ). ಸಾಂಬವಿನುತ = ರುದ್ರದೇವರಿಂದ ಸ್ತುತ್ಯನು. (ಇಲ್ಲಿ ಸಾಂಬ—ಎಂಬ ಶಬ್ದವನ್ನು ಎರಡು ಅರ್ಥಗಳಲ್ಲಿ ಉಪಯೋಗಿಸಿದ್ದಾರೆ. ೧. ಸಾಂಬ ಜಾಂಬವತೀಪುತ್ರ, ೨. ಸಾಂಬ=ಸ+ಅಂಬ=ಪಾರ್ವತೀಸಹಿತನಾದ ರುದ್ರ). ನಾನಾವಿಡಂಬನ =ವಿವಿಧವಾದ ಲೋಕಾನುಕರಣ. (ದೈತ್ಯರ ಮೋಹನಾರ್ಥವಾಗಿ). ಜಾಂಬವಂತನ ಪರಿಪಾಲ=ಸ್ಯಮಂತಕಮಣಿಯ ಅನ್ವೇಷಣಾಪ್ರಸಂಗದಲ್ಲಿ ಜಾಂಬುವಂತನೊಡನೆ ಹೋರಾಟ. ಆಗ ಶ್ರೀರಾಮ ದರ್ಶನ ಕೊಟ್ಟದ್ದು, ಜರ್ಝರಿರವಾದ ಅವನ ದೇಹದ ಗಾಯಗಳನ್ನು ತನ್ನ ಅಮೃತಹಸ್ತಸ್ಪರ್ಶ ದಿಂದ ವಾಸಿಮಾಡಿ, ಅವನನ್ನು ಸಂರಕ್ಷಿಸಿದ ಪ್ರಸಂಗ ವಿಶೇಷ. ವಿಶ್ವಂಬರ = ಸರ್ವಜಗತ್ತನ್ನೂ ಧರಿಸಿರುವವನು. (ಜಗದಾಶ್ರಯರೂಪ), ಅಂಬರಗ್ಗವಣಿಯು=ಆಕಾಶಗಂಗೆಯನ್ನು (ಅಂಬರ—ಆಕಾಶ. ಅಗ್ಗವಣಿ ಪೂಜಾರ್ಹವಾದ ನೀರು. ಅದೇ ಗಂಗಾನದಿ.) ಋತಂಭರ=ಸತ್ಯ ಸಂಕಲ್ಪನಾದ ಶ್ರೀಹರಿ, (ಋತಂ-ಸತ್ಯವನ್ನು) ಶಂಬರಶಾಯಿ = ಕ್ಷೀರ ಸಮುದ್ರದಲ್ಲಿ ಮಲಗಿರುವವನು.

ಬಂಗಾರ ರಥದೊಳು=ಬಹ್ಮದೇವರಿಂದ ದತ್ತವಾದ ಸುವರ್ಣ ರಥ. ಶೃಂಗಾರವಾದ=ನಾನಾ ವಸ್ತ್ರಾಭರಣಗಳಿಂದ ಅಲಂಕೃತನಾದ. ಶ್ರೀ ಮಂಗಳಾಂಗ=ಮಂಗಳಸ್ವರೂಪಿಯಾದ ಅಪ್ರಾಕೃತ ದೇಹಿ, ಕಾಳಿಂಗ ಭಂಗ=ಕಾಳಿಂಗನ ಗರ್ವವನ್ನು ಮುರಿದ ಶ್ರೀಕೃಷ್ಣ. ನರಸಿಂಗ=ನಾರ ಸಿಂಹ, ಅಂಗಜಜನಕ=ಮನ್ಮಥನ ತಂದೆ, ((ರುದ್ರನ ಫಾಲನೇತ್ರಾಗ್ನಿ ಯಿಂದ ಭಸ್ಮೀಭೂತನಾದ ಕಾಮನು ಅನಂಗನಾದನು). ಶಾರ್ಙ ರಥಾಂಗ ಪಾಣಿ=ಶಾರ್ಙವೆಂಬ ಧನುಸ್ಸನ್ನು ಕೈಯ್ಯಲ್ಲಿ ಹಿಡಿದಿರುವ ಶ್ರೀ ವಿಷ್ಣು, ಮತ್ತು ಸುದರ್ಶನವೆಂಬ ಚಕ್ರವನ್ನು (ರಥಾಂಗ) ಹಿಡಿದಿರುವವನು. ಸಂಗ ನಿಸ್ಸಂಗ=ಎಲ್ಲರಲ್ಲಿದ್ದರೂ ಅವರಿಂದ ಅತ್ಯಂತ ಭಿನ್ನನು. ಮಾತಂಗ

=ಗಜೇಂದ್ರ, ವಿಹಂಗ=ಪಕ್ಷಿಶ್ರೇಷ್ಠನಾದ ಗರುಡ, **ಪ್ಲವಂಗನಾಯಕ** ಕಪಿವರನಾದ ಹನುಮಂತ. [ಇಲ್ಲಿ **ನಾಯಕ ಶಬ್ದವನ್ನು** ಮಾತಂಗನಾಯಕ ವಿಹಂಗನಾಯಕ, ಎಂದು ಸಮನ್ವಯ ಮಾಡಿಕೊಳ್ಳಬೇಕು], ಅಂತರಂಗ **ಸಂತಾಪವಿದೂರ** = ಗೋಪಿಕಾಸ್ತ್ರೀಯರ ಮನಸ್ಸಿನಲ್ಲಿದ್ದ ವಿರಹವೇದನೆಯನ್ನು ಪರಿಹರಿಸಿ ತೃಪ್ತಿನೀಡಿದ ಶ್ರೀಕೃಷ್ಣ.

**ತಾಳ** = ತಾಳವಾದ್ಯ, **ಜಾಗಟೆ**=ಬಾರಿಸುವ ಕಂಚಿನ ಜಾಗಟೆ **ಮದ್ದಳೆ** = ಡೋಲುವಾದ್ಯ, **ದುಂದುಭಿ**=ನಗಾರಿ (ಭೇರಿವಾದ್ಯ) **ಕಾಳೆ**=ದೊಡ್ಡ ಪ್ರಮಾಣದ ಡೊಂಕಾದ ತುತ್ತೂರಿ (ಗಾಳೀವಾದ್ಯ), **ಹೆಗ್ಗಳೆ**=ದೊಡ್ಡ ಗಾತ್ರದ ಆನೆಯ ಸೊಂಡಲಿನ ಆಕಾರದಲ್ಲಿರುವ ತುತ್ತೂರಿ, **ತಮ್ಮಟೆ**=ಬಾರಿಸುವ ಚರ್ಮವಾದ್ಯ (ಡಂಗೂರವಾದ್ಯ), **ನಿಸ್ಸಾಳೆ**=ಹೆಗಲಿಗೆ ತೂಗುಹಾಕಿ ಬಾರಿಸುವ ಚರ್ಮವಾದ್ಯ. **ಪಟಹ** = ನಗಾರಿಯಂತಹ ಚರ್ಮವಾದ್ಯ, **ತಂಬೂರಿ**=ತಂತೀವಾದ್ಯ, **ಪಣವ** = ಒಂದು ಬಗೆಯ ಚರ್ಮವಾದ್ಯ, **ಕಂಸಾಳೆ**=ಕಂಚಿನ ಕಹಳೆ, **ಕಂಬು**=ಶಂಖ, **ಢಕ್ಕ**=ಬಾರಿಸುವ ಚರ್ಮವಾದ್ಯ, ಈ ವಾದ್ಯವಿಶೇಷಗಳು ಆ ಕಾಲದಲ್ಲಿ ಸುಪ್ರಸಿದ್ಧವಾಗಿದ್ದವು. **ಸೂಳೈಸುತಲಿರೆ**=ಗಟ್ಟಿಯಾಗಿ ಧ್ವನಿಮಾಡುತ್ತಿರಲು, **ಭಾಗವತರ**=ಹರಿನಾಮ ಹೇಳುವ ಭಕ್ತರ ತಂಡ, **ಕುಣಿದೊಲಿದಾಡೆ** = ನರ್ತಿಸುತ್ತಾ ಆನಂದಿಸುತ್ತಿರಲು, **ಸಾಲುಪಂಜಿನ ಗುಂಪು**=ಸಾಲುಸಾಲಾಗಿರುವ ಪಂಜುಗಳ ಸಮೂಹ, **ಛತ್ರ, ಚಾಮರ, ಧ್ವಜದ ಅಳಿಗಳು**=ಶ್ವೇತಚ್ಛತ್ರಿ, ಚಾಮರ, ಧ್ವಜ ಇವುಗಳನ್ನು ಎತ್ತಿ ಹಿಡಿದಿರುವ ಜನರು, **ಒಪ್ಪಿಹರೋ** =**ಶೋಭಿಸುತ್ತಿದ್ದಾರೆ,**

**ಮೂರುನಾಮಂಗಳ ಧರಿಸಿದ ದಾಸರು** = ಜನ್ಮನಾಮ, ಅಂಕಿತನಾಮ, ಸ್ವರೂಪನಾಮ ಎಂಬ ಮೂರು ನಾಮಗಳನ್ನು ಧರಿಸಿದ ಭಗವದ್ದಾಸರು (ಆಧಿಭೂತ— ಅಧ್ಯಾತ್ಮ— ಅಧಿದೈವಗಳಲ್ಲಿ ನಿಯಾಮಕನಾದ ಶ್ರೀಹರಿಯ ಅನಂತ— ಗೋವಿಂದ— ಅಚ್ಯುತನೆಂಬ ನಾಮತ್ರಯಗಳನ್ನು

ಮನಸಾಧಾರಣೆಮಾಡಿದ ದಾಸರು) ವೀರವಮಾರುತಿಮತದವರು = ಶ್ರೀಮದಾಚಾರ್ಯರಿಂದ ಸ್ಥಾಪಿತವಾದ ಸದ್ವೈಷ್ಣವಮತವನ್ನು, ಸಾರುತ್ತಾ = ಎರಡು ಕೈಗಳನ್ನೂ ಎತ್ತಿ ಉದ್ಘೋಷಿಸುತ್ತಾ, ಸಂತತ = ಎಡಬಿಡದೆ ಬೊಮ್ಮಾದಿಗಳನ್ನು ತಾರತಮ್ಯದಿಂದ ತಿಳಿದು = ಬ್ರಹ್ಮಾದಿಸಮಸ್ತ ದೇವತಾವರ್ಗವನ್ನೂ ತಾರತಮ್ಯೋಕ್ತವಾಗಿ ಅರಿತು. ಆನಂದವಾರಿಧಿಯಲಿ ಮಗ್ನರಾಗಿ = ಸಂತೋಷಸಾಗರದಲ್ಲಿ ಮುಳುಗಿದವರಾಗಿ, ಊರ ದೇವತೆಗಳ = ಮಾರಿ, ಮಸಣಿ ಮುಂತಾದ ಕ್ಷುದ್ರ ದೇವತೆಗಳನ್ನು (ಗ್ರಾಮ ದೇವತೆಗಳು), ತಾರರು ಮನಸಿಗೆ = ಮನಸಾ ಚಿಂತಿಸದೇ, ಸಾರಹೃದಯರು = ಹರಿಸರ್ವೋತ್ತಮತ್ವದ ಸಾರವನ್ನು ನಿರ್ಣಯಾತ್ಮಕವಾಗಿ ಬಲ್ಲವರು. ನಿಂದಿಹರು = ನಿನ್ನ ಸಮ್ಮುಖದಲ್ಲಿ ನಿಂತಿದ್ದಾರೆ.

ಹಿಂದೆ = ಪೂರ್ವದಲ್ಲಿ ಬಲೀಂದ್ರನ = ಬಲಿಚಕ್ರವರ್ತಿಯ, ದ್ವಾರದಿ = ಸುತಲಲೋಕದಲ್ಲಿ ಅವನ ಹೆಬ್ಬಾಗಿಲಿನಲ್ಲಿ. ನೀನಿರೆ = ವಾಮನರೂಪದಿಂದ ನೀನು ದ್ವಾರರಕ್ಷಕನಾಗಿರುತ್ತಿರಲು. ಕೆಣಕಲು = ರಾವಣನು ಬಂದು ತೆಗಳಿ ಮಾತನಾಡಲು. ಮಹಲೀಲೆಯಿಂದ = ನೀನು ನಸುನಗುತ್ತಾ ಅತ್ಯದ್ಭುತ ಮಹಿಮೆಯಿಂದ. ಆ ಖಳನ = ಆ ದುಷ್ಟರಾಕ್ಷಸನನ್ನು. ಅಂದು ತಡಮಾಡದೆ = ಆಗ ತಕ್ಷಣದಲ್ಲಿ. ಬಲು ಯೋಜನ ವಿರೆ ............ಒಗೆದೆ = ನಿನ್ನ ಕಿರುಬೆರಳಿನಿಂದ ಆ ರಾಕ್ಷಸನನ್ನು ಅನೇಕ ಯೋಜನೆಗಳ ದೂರ ಬಿಸಾಡಿದೆ. ಇಂದು = ಈಗ. ಈ ರಥ ತರಿಸುವುದು = ಈ ರಥಾರೂಢನಾಗಿ ಬರುವುದು. ಅಂದವಾಗಿಹುದೇನೋ = ಚಂದವಾಗಿದೆಯೇ? ಪರಮಾನುಗ್ರಹಮಾಡು ಬಾ ಸ್ವಾಮಿ!

ತಡಮಾಡಲಾಗದು = ಸ್ವಲ್ಪವೂ ವಿಳಂಬಮಾಡಬೇಡ. ಪೊಡವೀಶ = ಜಗದೊಡೆಯನೇ (ಪೊಡವಿ-ಭೂಮಿ. ಭೂರಮಣನೆಂತಲೂ ಅರ್ಥ) ಈ ತಡೆ ಎದುರು = ಈ ಪ್ರತಿಬಂಧಕವು ತಡೆಯಾಗಬಲ್ಲುದೇ ಇಲ್ಲಿ ಬ್ರಹ್ಮೋತ್ಸವದ ಸಂದರ್ಭದಲ್ಲಿ ಅರ್ಚಕರಿಗೂ ಮತ್ತು ಕ್ಷೇತ್ರದ ಧರ್ಮದರ್ಶಿ ಮಹಂತನಿಗೂ ವಿವಾದ ಉಂಟಾಗಿ ಅದರಿಂದ ರಥೋತ್ಸವಕ್ಕೆ ತಡೆಯಾಯಿತು.

**ತಡವಮಾಡಲಾಗದು** = ಸ್ವಲ್ಪವೂ ವಿಳಂಬ ಮಾಡಬೇಡ, **ಪೊಡವೀಶ** = ಜಗದೊಡೆಯನೇ (ಪೊಡವಿ-ಭೂಮಿ, ಭೂಮಿರಮಣನೆಂತಲೂ ಅರ್ಥ) **ಈ ತಡೆ ಎದುರೇ** = ಈ ಪ್ರತಿಬಂಧಕವು ತಡೆಯಾಗಬಲ್ಲುದೇ ? ಇಲ್ಲಿ ಬ್ರಹ್ಮೋತ್ಸವದ ಸಂದರ್ಭದಲ್ಲಿ ಅರ್ಚಕರಿಗೂ ಮತ್ತು ಕ್ಷೇತ್ರದ ಧರ್ಮದರ್ಶಿ ಮಹಂತನಿಗೂ ವಿವಾದ ಉಂಟಾಗಿ. ಅದರಿಂದ ರಥೋತ್ಸವಕ್ಕೆ ತಡೆಯಾಯಿತು. **ತಡೆವರಿನ್ನಾರೈಯ್ಯ** = ನಿನ್ನನ್ನು ತಡೆದು ನಿಲ್ಲಿಸುವವರಾರು ? **ಒಡೆಯ** = ಜಗತ್ಪತಿ- ಸರ್ವನಿಯಾಮಕ. **ವೇದವೇದ್ಯ** = ವೇದಪ್ರತಿಪಾದ್ಯ, **ಕಡೆಗಣ್ಣಿನಿಂದ ನೋಡದೆಲೆ** = ಭಕ್ತರನ್ನು ಕಡೆಗಣಿಸದೆ. **ನಡೆವುದು** = ಗಮನಾಗಮನಕ್ರಿಯೆ, **ನುಡಿವುದು** = ವಾಗ್ರೂಪವಾದ ವ್ಯಾಪಾರ, **ಅಡಿಗಡಿಗೆ** = ಪ್ರತಿಕ್ಷಣದಲ್ಲಿಯೂ, **ನೀನೇ ಬಿಡದೆ ಒಳಗೆ ಹೊರಗಿದ್ದು** = ನೀನೇ ಬಿಂಬರೂಪದಿಂದ ಅಂತರ್ಬಹಿಶ್ಚವ್ಯಾಪ್ತನಾಗಿದ್ದು, **ಸಡಗರ ದೈವವೇ** = ಸರ್ವಕರ್ತನಾದ ವೈಭವಮೂರ್ತಿಯೆ, **ನುಡಿಯ ಪಾಲಿಸುವುದು** = ನನ್ನ ಪ್ರಾರ್ಥನೆಯನ್ನು ಈಡೇರಿಸು, **ಅಡಿಗಡಿಗೆ ಲಾಲಿಸುತ್ತ** = ಪದೇಪದೇ ನಿನ್ನ ಮನಸ್ಸಿಗೆ ತಂದುಕೊಂಡು, ಇಲ್ಲಿ ಶ್ರೀ ವಿಜಯದಾಸವರ್ಯರು ರಥಾರೂಢನಾಗಿದ್ದ ಶ್ರೀ ಶ್ರೀನಿವಾಸನನ್ನು ರಥವನ್ನು ನಡೆಯಿಸಿಕೊಂಡು ಮುಂದೆ ಸಾಗಿ ಬಾ -ಎಂದು ಅಡಿಗಡಿಗೆ ಪ್ರಾರ್ಥಿಸಿಕೊಂಡಿದ್ದಾರೆ.

**ಪ್ರಮೇಯಾರ್ಥ :** ಮಾನವರ ಶರೀರವೇ ಒಂದು ರಥ. ಬಿಂಬರೂಪನಾದ ಶ್ರೀ ಹರಿಯೇ ರಥಿಕ, ಹೃತ್ಪದ್ಮವೇ ಅವನ ಪೀಠಸ್ಥಳ. ರಥಿಕನಾದ ಹೇ ಸ್ವಾಮಿಯೇ, ದೇಹಗಳ ಸರ್ವೇಂದ್ರಿಯಗಳಲ್ಲಿ ನೀನಿದ್ದು, ಈ ದೇಹರಥವನ್ನು ನಡೆಯಿಸು. ನನಗೆ ಸನ್ಮುಖನಾಗೆಂದು ಪ್ರಾರ್ಥನೆ.

**ಹಂಸವಾಹನ** = ಹಂಸಪಕ್ಷಿಯನ್ನೇ ವಾಹನವಾಗಿ ಉಳ್ಳ ಬ್ರಹ್ಮದೇವರು, **ಕ್ರತುಧ್ವಂಸಿ** = ದಕ್ಷ ಪ್ರಜಾಪತಿಯ ಯಾಗವನ್ನು ಧ್ವಂಸಮಾಡಿದ ಶ್ರೀ

ರುದ್ರದೇವರು (ಕ್ರತು-ಯಜ್ಞ) **ಸುಮನಸೋತ್ತಂಸ** = ದೇವಶ್ರೇಷ್ಠನಾದ ಇಂದ್ರ. (ಸುಮನಸ—ದೇವತೆಗಳು. ಉತ್ತಂಸ–ಶ್ರೇಷ್ಠ-ರಾಜ), **ಕೃಶಾನು** = ಅಗ್ನಿದೇವರು. **ಪಾಪಿಗಳ ಹಿಂಸೆಗೊಳಿಸುವ** = ಪಾಪಿಗಳನ್ನು ಹಿಂಸೆ ಮಾಡುವ, **ಪುಂಸರಕ್ಕಸ** = ರಾಕ್ಷಸರ ಯೋನಿಯಲ್ಲಿ ಜನಿಸಿದ ನಿಋರುತಿ, **ಪಾಶಿ** = ಪಾಶವನ್ನು ಹಸ್ತದಲ್ಲಿ ಹಿಡಿದಿರುವ ಯಮದೇವರು. **ಕೌಂಶಿಕಾಪತಿಯು** = ಕೌಶಿಕನಾಮಕ ನದಿಯ ಪತಿಯಾದ ವರುಣ. (ಕೌಂಶಿಕೆ ಎಂಬ ನದ್ಯಭಿಮಾನಿದೇವತೆಯು ಪಾರ್ವತಿಯ ದೇಹದಿಂದ ಜನಿಸಿ, ಶುಂಭನಿಶುಂಭರ ಎಂಬ ದೈತ್ಯರನ್ನು ಸಂಹರಿಸಿ, ನಂತರ ನದಿಯ ರೂಪದಲ್ಲಿ ಪ್ರವಹಿಸಿ, ಗಂಗೆಯೊಡನೆ ಸೇರಿ, ಸಮುದ್ರವನ್ನು ಸೇರುವಳು). **ಧನಪ** = ಕುಬೇರ, **ಅಂಶುಮಾಲಿ** = ಸೂರ್ಯ (ಅಂಶು–ಕಿರಣ, ಮಾಲಿ–ಮಾಲೆಯಂತೆ ಧರಿಸಿರುವ) **ಸೋಮ** = ಚಂದ್ರ. **ಕೌಂಶಿಕಮುನಿ** = ಕುಶಿಕ ಗೋತ್ರೋದ್ಭವನಾದ ವಿಶ್ವಾಮಿತ್ರಋಷಿ. **ಹರಮಹಂಸರು** = ಇತ್ಯಾದಿ ಅನೇಕ ಯತಿಶ್ರೇಷ್ಠರು. **ಅಲ್ಲಲ್ಲಿ ನಿಂದು . ..ಸನ್ಮೊಗಲಾಗಿಹರು** = ಅಲ್ಲಲ್ಲಿ ನಿಂತುಕೊಂಡು, ನಿನ್ನನ್ನು ಸೇವಿಸುತ್ತಾ, ನಿನ್ನೆದುರಿಗೆ ನಿಂತಿದ್ದಾರೆ **ಕಂಸಾರಿ** = ಕಂಸನನ್ನು ಸಂಹರಿಸಿದ ಶ್ರೀಕೃಷ್ಣನೇ, **ತ್ರಿಗುಣಾತೀತ** = ಸತ್ವರಜಸ್ತಮಗಳೆಂಬ ಪ್ರಾಕೃತಗುಣತ್ರಯಗಳಿಂದ ದೂರನೇ. (ಅಪ್ರಾಕೃತನು ಶ್ರೀ ಪರಮಾತ್ಮ).

**ಹತ್ತವತಾರದ ಹರಿಯೆ** = ಮತ್ಸ್ಯಾದಿ ಕಲ್ಕಿ ಪರ್ಯಂತ ಹತ್ತು ಅವತಾರಗಳನ್ನು ಎತ್ತಿದ ಶ್ರೀಹರಿಯೇ, **ಘನಸಿರಿಯೆ** = ಪೂರ್ಣೈಶ್ವರ್ಯ ಸ್ವರೂಪನಾದ ಭಗವಂತನೇ **ಮತ್ತೊಬ್ಬರನು ಹೀಗೆ ಕರೆಯೆ** = ಸರ್ವೋತ್ತಮನಾದ ನಿನ್ನನಲ್ಲದೆ ಇನ್ಯಾವ ದೇವತೆಗಳನ್ನು ಹೀಗೆ ಪ್ರಾರ್ಥಿಸುವುದಿಲ್ಲ. **ಭೃತ್ಯರ ಸಂಗಡ** = ನಿನ್ನ ಕಿಂಕರರಾದ ದಾಸವರ್ಗದವರೊಡನೆ, **ಎನ್ನೊತ್ತಿಲಿ ಆಡುವ ಮರಿಯೆ** = ನನ್ನನ್ನು ಎಂದೆಂದೂ ಅಗಲದೆ ಅನಿಮಿತ್ತಬಂಧುವಾಗಿ ಇರುವ ಬಿಂಬ ರೂಪಿಯೇ, ನೀನೇ ನನ್ನಲ್ಲಿದ್ದು ಆಡುವೆ-ಎಂದರೆ, ಸಮಸ್ತ ಕ್ರಿಯಾವಿಶೇಷಗಳನ್ನು ಮಾಡಿ, ಮಾಡಿಸುತ್ತಿರುವೆ **ಚಿತ್ತದೊಲ್ಲಭ** = **ಸರ್ವಜೀವರ ಚಿತ್ತದಲ್ಲಿದ್ದು ನಿಯಮಿಸುವ ಪ್ರಭುವೇ,** (ಚಿತ್ತದಲ್ಲಿ ಆನಂದ

ಪ್ರದಳಾದ (ಶ್ರೀರಮಾಪತಿಯೇ) ಎತ್ತ ನೋಡಲು=ಎಲ್ಲೆಲ್ಲಿ ಯಾವ ಪ್ರಕಾರದಿಂದ ನೋಡಿದರೂ, ನಿನಗೆ ಸರಿಯೆ= ನಿನಗೆ ಸರಿಸಮಾನರ್‍ಯಾರಿದ್ದಾರೆ ? ನೀನು ಸಮಾಭ್ಯಧಿಕ ಶೂನ್ಯನು. ಎನ್ನತ್ತಲೆ=ನನ್ನ ಹೃನ್ಮಂದಿರದಲ್ಲಿ ಬಂದು ಸ್ಥಿರವಾಗಿ ನೆಲೆಸು, ಹೇ ವೆಂಕಟಾಚಲ ಧೊರೆಯೇ.



## ೪೫೩

## (ಗೋಪಾಲವಿಠಲಾಂಕಿತ)

**ರಾಗ–ಸಾವೇರಿ** **ಆದಿತಾಳ**

ನಡೆದು ಬಾರಯ್ಯ ನೀನು ॥ ॥ಪ॥

ನಡೆದು ಬಾರಯ್ಯ ಭವಕಡಲಿಗೆ ಕುಂಭಸಂಭವ
ಸಡಗರದಿಂದಲಿ ಮೆಲ್ಲನಡಿಯನಿಡುತ ಬೇಗ ।
ಎಡಬಲದಲಿ ನಿನ್ನ ಮಡದೇರಿಂದೊಪ್ಪುತ
ತಡಮಾಡದೆ ಬಾ ಮೃಡಸಖ ವೆಂಕಟ ॥ ॥ಅ॥

ವಿಜಯದಶಮಿ-ಆಶ್ವಿಜಮಾಸ ಶುದ್ಧದಲ್ಲಿ
ನಿಜರಥಾರೂಢನಾಗಿ-ಸುಜನರಿಂದೊಡಗೂಡಿ
ಗಜಸಿಂಹ ಮಯೂರ-ದ್ವಿಜಸಿಂಗ ಸಾರಂಗ
ಮಝಭಾಪುರೇ ಎನಲು ತ್ರಿಜಗವು ತಲೆದೂಗೆ ॥
ಅಜನು ಸ್ತುತಿಯ ಮಾಡೆ ಋಜುಗುಣಾಧಿಪ ಪಾಡೆ
ಗಜಮುಖನಯ್ಯನು ನಿಜಾನಂದದಲಾಡೆ
ಭುಜಗಶ್ರೇಷ್ಠ ದ್ವಿಜರಾಜರು ಜಯವೆನ್ನೆ
ಕುಜನರೆದೆಯ ಮೆಟ್ಟಿ ರಜತಮ ಕಳೆಯುತ ॥ ॥೧॥

ದಕ್ಷಿಣದಿಕ್ಕಿನಲ್ಲಿ-ರಾಕ್ಷಸರೆದುರಾಗಿ
ಅಕ್ಷೋಣಿ ಬಲ-ನಿನ್ನುಪೇಕ್ಷೆ ಮಾಡುತ್ತಲಿರೆ
ಪಕ್ಷಿವಾಹನನೆ-ನೀನಾಕ್ಷಣದಲ್ಲಿ-ಖಳರ
ಶಿಕ್ಷಿಸಿ-ಸುಜನರ ರಕ್ಷಿಸಿ-ಮೆರೆದ್ಯೈಯ್ಯಾ ॥

ತಕ್ಷಕಸುತ ಸಹಸ್ರಾಕ್ಷನನ ಮಗನನು
ಭಕ್ಷಿಸ ಬರುತಿರೆ ಈಕ್ಷಿಸಿ ರಥವನು
ತಕ್ಷಣ ನೆಲಕ್ಕೊತ್ತಿ ಮೋಕ್ಷವಗ್ಗೈಸಿದೆ
ಕುಕ್ಷಿಯೊಳಗೆ ಜಗ ರಕ್ಷಿಪ ವಿಶ್ವ ॥ ॥೨॥

ಅಂಬುಜಾಕ್ಷನೆ ಬಾರೋ-ಅಂಬುಜವದನನೆ
ಅಂಬುಜಾಲಯಾಪತೇ-ಅಂಬುಜನಾಭನೆ
ಅಂಬುಜ ಭವಜನಕ-ಅಂಬುಜಾರಿಧರ
ಅಂಬುಜನಿವಾಸ ಅಂಬುಜಮಿತ್ರ ತೇಜ ॥

ಕೊಂಬು ಕಹಳೆಗಳು ಭೋಂ ಭೋರಿಡುತಿರೆ
ತುಂಬುರು ನಾರದರಿಂಬಾಗಿ ಪಾಡಲು
ಅಂಬರದಲಿ ವಾದ್ಯತುಂಬಿ ಧಂ ಧಂ ಧಣಿರೆನ್ನೆ
ಸಂಭ್ರಮದಲಿ ಬಾರೋ ಶಂಭುವಂದಿತನೆ ॥ ॥೩॥

ಮನಕೆ ಬಾರಯ್ಯಾ-ಸುದಾಮನ ಸಖ ಹರಿಯೇ-ಸೋ
ಮನ ಧರಿಸಿದವನ ಮನಕುಮುದಕೆ ಚಂದ್ರ
ಮನೆ ಕೇಳೊ-ಎನ್ನ ದುಮ್ಮಾನ ಪರಿಹರಿಸಿ ಒ-
ಮ್ಮಾನಕೊಡು ಅಹಿಗಿರಿ ತಿಮ್ಮನೆ ಕೇಳೊ ಬಿನ್ನಪ ॥

ಮನ ನಿನ್ನದು ಹೇ ಮನಸಿಜಜನಕ ಸು-
ಮನಸರೊಡೆಯ ಬೊಮ್ಮನ ಪೆತ್ತನೆ ಸು-
ಮ್ಮನೆ ತಡಮಾಕೆ ನಿಮ್ಮನೆಯುವರೋಡನೆ ಹಿ-
ಮ್ಮನಮಾಡದೆ ಗಮ್ಮನೆ ಬಾ ವೆಂಕಟ ॥ ॥೪॥

ಪರಿಪರಿ ವಿಧದಲಿ-ಕರವ ಮುಗಿದು_ನಿನ್ನ
ಕರೆದರೆ ಬಾರದ ಗರುವತನವು ಏಕೋ
ಕರಿಯ ಮೊರೆಯ ಕೇಳಿ ಸಿರಿಗೆ ಹೇಳದೆ ಬಂದೆ
ಕರಿರಾಜ ಆವ ನಿನ್ನ ಹಿರಿಯಪ್ಪನ ಮಗನೇನೋ ||

ಶರಣಾಗತ ರಕ್ಷಾಮಣಿ ಎನ್ನುವ
ಬಿರುದು ಬೇಕಾದರೆ ಸರಸರ ಬಾರಯ್ಯ
ಗರುಡಗಮನ ಗೋಪಾಲವಿಠ್ಠಲರೇಯ
ಕರುವಿನ ಮೊರೆಗಾವು ನೆರೆದಂತೆ ಪೊರೆಯಲು || ||೫||



**ಅರ್ಥವಿವರಣೆ :—**

**ನಡೆದುಬಾರಯ್ಯ** = ಬ್ರಹ್ಮರಥಾರೂಢನಾದ ಶ್ರೀನಿವಾಸ ಸಕಲ ವೈಭವಗಳಿಂದದೊಪ್ಪುತ ಬೇಗ ಸಾಗಿ ಬಾ –ಎಂದು ಮೊರೆ ಇಟ್ಟಿದ್ದಾರೆ ಆ ಸಪ್ತಗಿರಿವಾಸನಲ್ಲಿ, **ಭವಕಡಲಿಗೆ** = ಸಂಸಾರವೆಂಬ ಮಹಾಸಮುದ್ರಕ್ಕೆ **ಕುಂಭಸಂಭವ** = ಅಗಸ್ತ್ಯರಿದ್ದಂತೆ (ಮಿತ್ರಾವರುಣರೆಂಬ ಋಷಿವರ್ಯರು ಒಮ್ಮೆ ಊರ್ವಶಿಯನ್ನು ಕಂಡು ಮೋಹಿತರಾದರು. ಊರ್ವಶಿಯು ಅವರ ವೀರ್ಯವನ್ನು ಒಂದು ಕುಂಭದಲ್ಲಿ ಇರಿಸಿದಳು, ಅದರಿಂದ ಅಗಸ್ತ್ಯನೂ, ವಸಿಷ್ಠನೂ ಜನಿಸಿದರು ಇದರಿಂದ ಇಬ್ಬರಿಗೂ **ಕುಂಭ ಸಂಭವ ಮತ್ತು ಮೈತ್ರಾವರಣಿ** ಎಂತಲೂ ಹೆಸರಾಯಿತು ಸಮುದ್ರದ ಜಲವನ್ನು ಪಾಪಮಾಡಿದ್ದರಿಂದ ಈ ಅಲಂಕಾರ) **ಸಡಗರದಿಂದ** =ವೈಭವದಿಂದ, **ಎಡಬಲದಲಿ ನಿನ್ನ ಮಡದೇರಿಂದೊಪ್ಪುತ**= ಶ್ರೀದೇವಿ ಭೂದೇವಿ ಸಮೇತನಾಗಿ, **ಮೃಡಸಖ** = ರುದ್ರನ ಮಿತ್ರ, **ವೆಂಕಟ** = ಪಾಪಪರಿಹಾರಕನಾದ ಶ್ರೀನಿವಾಸ, **ವಿಜಯದಶಮಿ** = ಪ್ರತಿವರ್ಷವೂ ಅಶ್ವಯುಜಮಾಸದ ಶುಕ್ಲ ದಶಮೀದಿನದಂದು (ವಿಜಯದಶಮೀ) ತಿರುಪತಿಯಲ್ಲಿ ಬ್ರಹ್ಮೋತ್ಸವ. **ನಿಜರಥಾರೂಢನಾಗಿ** = ಬ್ರಹ್ಮರಥದಲ್ಲಿ, **ಕುಳಿತು ಸುಜನ** = ಸಚ್ಚೇತನ

ರಾದ ಭಗವದ್ಭಕ್ತರು ಗಜಸಿಂಹ ............ ಸಾರಂಗ = ಆನೆ, ಸಿಂಹ, ನವಿಲು, ಗರುಡ, ಜಿಂಕೆ ಇತ್ಯಾದಿ ಧ್ವಜಲಾಂಛನಗಳಿಂದ ಯುಕ್ತನಾಗಿ, ಮುಖ್ಯ ಘಾಪುರೇ ಎನಲು = ಹೇ ಸ್ವಾಮಿ, ಜಗದೊಡೆಯ, ಶಹಬ್ಬಾಸ್ ಎಂಬ ಹೆಗ್ಗಳಿಕೆಯ ಘೋಷಣೆಯಿಂದ, ತ್ರಿಜಗವು ತಲೆದೂಗೆ= ಮೂರುಲೋಕದ ಜನರೂ ಭಕ್ತಿಭಾವದಿಂದ ತಲೆದೂಗುತ್ತಿರಲಾಗಿ ಅಜನು = ಬ್ರಹ್ಮದೇವರು ವೇದಘೋಷ ಮಾಡುತ್ತಿರಲು, ಋಜುಗಣಾಧಿಪ= ಬ್ರಹ್ಮನ ನಂತರ ಋಜುಗಣಕ್ಕೆ ಅಧಿಪರಾದ ಶ್ರೀವಾಯುದೇವರು ಹಾಡುತ್ತಿರಲು, ಗಜಮುಖನಯ್ಯನು =ಗಣಪತಿಯ ತಂದೆ ಶ್ರೀರುದ್ರದೇವರು ಆನಂದೋದ್ರೇಕದಿಂದ ನೃತ್ಯ ಮಾಡುತ್ತಿರಲು, ಭುಜಗಶ್ರೇಷ್ಠ =ಸರ್ಪಶ್ರೇಷ್ಠರಾದ ಶೇಷದೇವರು, ದ್ವಿಜರಾಜರು = ಪಕ್ಷಿಶ್ರೇಷ್ಠರಾದ ಗರುಡದೇವರು, ಜಯಕಾರ ಮಾಡುತ್ತಿರಲು, ಕುಜನರೆಯದೆಯ ಮೆಟ್ಟಿ=ದುರ್ಜನರ ಎದೆಯನ್ನು ಮೆಟ್ಟುತ್ತಾ, ರಜ ತಮ ಕಳೆಯುತ = ನನ್ನ ರಜೋಗುಣ ತಮೋಗುಣವನ್ನು ಪರಿಹರಿಸುತ್ತಾ.

ದಕ್ಷಿಣದಿಕ್ಕಿನಲಿ = ಕೌರವರ ೧೧ ಸಂಖ್ಯಾಕವಾದ ಅಕ್ಷೋಹಿಣಿ ಸೈನ್ಯವು ಉತ್ತರಕ್ಕೆ ಅಭಿಮುಖನಾಗಿ ನಿಂತಿದೆ. ದಕ್ಷಿಣದಿಕ್ಕಿನಲ್ಲಿ ಸಾಲಾಗಿ ಸಜ್ಜಾಗಿದ್ದ ದುರುಳರಾದ ಕೌರವರ ಸೇನಾಬಲವು ನಿನ್ನನ್ನು ತಿರಸ್ಕಾರದಿಂದ ನೋಡುತ್ತಿರಲಾಗಿ. ಪಕ್ಷಿವಾಹನನೆ =ಗರುಡಗಮನನಾದ, ಹೇ ಕೃಷ್ಣನೇ, ಖಳರ ಶಿಕ್ಷಿಸಿ = ದುಷ್ಟರನ್ನು ದಮನಮಾಡಿ, ಸುಜನರ ರಕ್ಷಿಸಿ= ಸಜ್ಜನರೂ ಧರ್ಮಾತ್ಮರೂ ಆದ ಪಾಂಡವರನ್ನು ಪಾಲಿಸಿ ವೈಭವದಿಂದ ಮೆರೆದೆ, ತಕ್ಷಕಸುತ = ತಕ್ಷಕನ ಮಗನು ಸರ್ಪಾಸ್ತ್ರರೂಪದಲ್ಲಿ ಕರ್ಣನ ಬತ್ತಳಿಕೆಯನ್ನು ಸೇರಿದ್ದನನು, ಸಹಸ್ರಾಕ್ಷನ ಮಗನನು = ಇಂದ್ರನ ಮಗನಾದ ಅರ್ಜುನನನ್ನು. ಭಕ್ಷಿಸ ಬರುತಿರೆ = ಕರ್ಣನಿಂದ ಆಕರ್ಣಾಂತವಾಗಿ ಸೆಳೆದು ಬಿಡಲ್ಪಟ್ಟ ಸರ್ಪಾಸ್ತ್ರವು ಅರ್ಜುನನನ್ನು ನುಂಗಲು ಅತ್ಯಂತ ವೇಗದಲ್ಲಿ ಬರುತ್ತಿರಲು, ಈಕ್ಷಿಸಿ = ಆ ಸರ್ಪಾಸ್ತ್ರವನ್ನು ನೋಡಿ, ರಥವನು ತಕ್ಷಣ ನೆಲಕೊತ್ತಿ =ಶ್ರೀಕೃಷ್ಣನು ತನ್ನ ಕಾಲಿನ ಹೆಬ್ಬೆಟ್ಟಿನಿಂದ ರಥವನ್ನು ಒತ್ತಿದನು. ಆಗ ರಥವು ಕೆಳಗಿಳಿದು ರಭಸದಿಂದ, ಬರುತ್ತಿದ್ದ ಸರ್ಪಾಸ್ತ್ರವು ಅರ್ಜುನನ

ಕಿರೀಟವನ್ನು ಹಾರಿಸಿಕೊಂಡು ಹೋಯಿತು. **ನೋಕ್ಷವ ಗೈಸಿದೆ** = ಹೀಗೆ ದಯಾಮಯನಾದ ಶ್ರೀಕೃಷ್ಣನು ಅರ್ಜುನನ್ನು ಸರ್ವಾಸ್ತ್ರದಿಂದ ರಕ್ಷಿಸಿದನು. **ಕುಕ್ಷಿಯೊಳಗೆ** = ಭೂಮಿಯಲ್ಲಿ (ಬ್ರಹ್ಮಾಂಡದಲ್ಲಿ) **ಜಗ ರಕ್ಷಿಪ ವಿಶ್ವ** = ಜಾಗ್ರತ್ಸ್ವಪ್ನಪ್ರೇರಕನಾದ ಸರ್ವಜೀವರ ಬಲಗಣ್ಣಿನ ತುದಿಯಲ್ಲಿ ಸ್ತಂಭ ರೂಪಿಯಾಗಿಪ್ಪ ವಿಶ್ವನಾಮಕ ಶ್ರೀಪರಮಾತ್ಮನು (ವಿಶೇಷ—ವಿಶ್ವಂಭರ ಮೂರ್ತಿಯು ಗಣಪತಿಯ ಬಿಂಬಮೂರ್ತಿ. ಶ್ರೀಗೋಪಾಲದಾಸರು ಗಣೇಶಾಂಶರು. ತಮ್ಮ ಬಿಂಬಮೂರ್ತಿಯ ಪ್ರಾರ್ಥನೆ.)

ಇನೆಯ ನುಡಿಯಲ್ಲಿ ಅಂಬು–ಎಂಬ ಶಬ್ದದ ವಿವಿಧಾರ್ಥಗಳ ಪ್ರಯೋಗ ವಿದೆ, ೧. **ಅಂಬುಜಾಕ್ಷನೆ** = ಕಮಲದಳನೇತ್ರನೆ (ಅಂಬು- ನೀರು ಅಂಬುಜ –ಕಮಲ) ೨. **ಅಂಬುಜವದನನೆ** = ಕಮಲಪುಷ್ಪದಂತೆ ದುಂಡಾದ ಮುಖವುಳ್ಳವನು, ಇನ್ನೊಂದರ್ಥ–ಚಂದ್ರವದನ (ಅಂಬು–ಕ್ಷೀರಸಮುದ್ರ ದಲ್ಲಿ ಉತ್ಪನ್ನನಾದ ಚಂದ್ರ) ೩. **ಅಂಬುಜಾಲಯಪತಿ** = ಕಮಲ ಮಂದಿರೆಯಾದ ಶ್ರೀಲಕ್ಷ್ಮೀದೇವಿಯ ರಮಣ (ಅಂಬುಜ + ಆಲಯ = ಕಮಲದ ಮನೆ) ೪. **ಅಂಬುಜನಾಭನೆ** = ಪದ್ಮನಾಭನೇ, **ಅಂಬುಜ ಭವಜನಕ** = ಕಮಲೋದ್ಭವರಾದ ಬ್ರಹ್ಮನ ತಂದೆಯೇ.

೫. **ಅಂಬುಜಾರಿಧರ** = ಅಂಬುಜ-ನೀರಿನಲ್ಲಿ ಹುಟ್ಟಿದ ಶಂಖ (ಪಾಂಚ ಜನ್ಯವೆಂಬ ಶಂಖ) ಅರಿ = ಅರವುಳ್ಳದ್ದು ಚಕ್ರ (ಸುದರ್ಶನವೆಂಬ ಚಕ್ರ), ಅಂದರೆ ಶಂಖ ಚಕ್ರಧರನೇ, (ಅಂಬುಜ + ಅರಿ = ಅಂಬುಜಾರಿ) . ೬ **ಅಂಬುಜ ನಿವಾಸ** = ಕ್ಷೀರಸಮುದ್ರನಿವಾಸಿ, ೭ **ಅಂಬುಜ ಮಿತ್ರತೇಜ** = ಕಮಲಾಪ್ತ ನಾದ ಸೂರ್ಯ, ಕೋಟಿಸೂರ್ಯಪ್ರಭಾನ್ವಿತನು. **ಕೊಂಬು** = ಗೋವಿನ ಕೊಂಬನ್ನು ಉಪಯೋಗಿಸಿ ಮಾಡಿರುವ ವಾದ್ಯವಿಶೇಷ. **ಕಹಳೆಗಳು** = ತುತ್ತೂರಿ ಎಂಬ ಊದುವ ವಾದ್ಯ ವಿಶೇಷ **ಭೊಂ ಭೋರಿಡುತಿರೆ** = ಭೋಂ ಭೋಂ ಎಂದು ಉಚ್ಚಧ್ವನಿಯಲ್ಲಿ ಮೊಳಗುತ್ತಿರಲು, **ಇಂಬಾಗಿ** = ಇಂಪಾಗಿ ಹಾಡುತ್ತಿರಲು (ಶ್ರವಣಾನಂದಕರವಾಗಿ), **ಅಂಬರದಲಿ** =

ಆಕಾಶದಲ್ಲಿ, **ವಾದ್ಯತುಂಬಿ** = ವಾದ್ಯಗಳ ಶಬ್ದ ಮಾರ್ದನಿಯಾಗಿ ಪ್ರತಿಧ್ವನಿಸುತ್ತಿರಲು, (ಅಣುರಣಿತವಾಗುತ್ತಿರಲು), **ಶಂಭುವಂದಿತನೆ** = ರುದ್ರನಿಂದ ನಮಸ್ಕೃತನೇ.

೪ನೆಯನುಡಿಯಲ್ಲಿ ಶ್ರೀ ಗೋಪಾಲದಾಸಪರ್ಯರು "**ಮನ**"— ಎಂಬ ಶಬ್ದವನ್ನು ನಾನಾರ್ಥಗಳಲ್ಲಿ ಪ್ರಯೋಗಿಸಿದ್ದಾರೆ. ೧ **ಮನಕೆ ಬಾರಯ್ಯ** = ನನ್ನ ಮನಸ್ಸೆಂಬ ಆಲಯಕೆ ದಯಮಾಡು. ೨ **ಸುಧಾಮನಸಖ** = ಕುಚೇಲನ ಮಿತ್ರ ಶ್ರೀಕೃಷ್ಣ. ೩ **ಸೋಮನ ಧರಿಸಿದವನ** = ಚಂದ್ರನ ಕಳೆಯನ್ನು ತನ್ನ ಶಿರದಲ್ಲಿ ಧರಿಸಿರುವ ಮಹರುದ್ರದೇವರ, ೪ **ಮನಕುಮುದಕೆ ಚಂದ್ರಮನೆ** = ಮನಸ್ಸೆಂಬ ಕನ್ನೈದಿಲೆ ಪುಷ್ಪಕ್ಕೆ ಚಂದ್ರಸದೃಶನೇ. (ಇಲ್ಲಿ **ಚಂದ್ರ** ಎಂಬ ಪದದ ಅರ್ಥವನ್ನು **ಸೋಮ** ಮತ್ತು **ಕುಮುದಚಂದ್ರ** ಎಂಬ ಉಭಯಾರ್ಥಗಳಲ್ಲಿ ಉಪಯೋಗಿಸಿದ್ದಾರೆ.) **ದುಮ್ಮಾನ** = ಮನಸ್ಸಿನ ಕಳವಳ (ಪರಿತಾಪ), ಚಂದ್ರನು ಶ್ರೀಹರಿಯ ಮನಸ್ಸಿನಿಂದ ಉತ್ಪತ್ತಿಯಾದವನು. (ಚಂದ್ರಮಾ ಮನಸೋಜಾತಃ-ಪುರುಷಸೂಕ್ತ) ಚಂದ್ರನು ಮನಸ್ಸಿಗೆ ಆಹ್ಲಾದಕರನು, ತಾಪತ್ರಯಪರಿಹಾರಕನು. ೬ **ಒಮ್ಮನ ಕೊಡು** = ಏಕಾಗ್ರಚಿತ್ತವನ್ನು ನೀಡು, **ಅಹಿಗಿರಿ ತಿಮ್ಮನೆ** = ಶೇಷಪರ್ವತಾಧಿಪತಿ ಶ್ರೀನಿವಾಸನೇ (ಅಹಿ-ಸರ್ಪ ಅಹಿಗಿರಿ-ಶೇಷಾಚಲ), **ಮನಸಿಜ ಜನಕ** = ಮನ್ಮಥನ ತಂದೆ (ಇಲ್ಲಿಯೂ ಮನ್ಮಥನು ಮನೋಭಿಮಾನಿ), **ಸುಮನಸರೊಡೆಯ** = ದೇವತೆಗಳಿಗೆ ಪ್ರಭುವೆ (ಸುಮನಸರು-ಸಾತ್ವಿಕ ಮನೋಭಾವವುಳ್ಳ ದೇವತೆಗಳು), **ಬೊಮ್ಮನ ಪೆತ್ತನೆ** = ತನ್ನ ನಾಭೀಕಮಲದಲ್ಲಿ ಬ್ರಹ್ಮನನ್ನು ಪಡೆದವನೇ, **ನಿಮ್ಮನೆಯವರೊಡನೆ** = ನಿನ್ನ ಪರಿವಾರಸಹಿತನಾಗಿ (ರಮಾದಿ ದೇವತಾವರ್ಗದಿಂದ ಒಡಗೂಡಿ) **ಹಿಮ್ಮನ ಮಾಡದೆ** = ಹಿಂದೇಟು ಹಾಕದೆ— ಮನಸ್ಸು ಒದಲಾಯಿಸದೆ, **ಗಮ್ಮನೆ** = ತ್ವರಿತವಾಗಿ.

ಕೊನೆಯ ನುಡಿಯಲ್ಲಿ ನಿಂದಾಸ್ತುತಿರೂಪವಾದ ಕೀರ್ತನೆ ಮಾಡಿದ್ದಾರೆ, **ಗರುವತನವು** = ಅಹಂಕಾರವು, **ಕರಿಯು** = ಮಡುವಿನಲ್ಲಿ ಮೊಸಳೆಯ

ಹಿಡಿತಕ್ಕೆ ಸಿಕ್ಕಿಬಿದ್ದಿದ್ದ ಗಜೇಂದ್ರನ ಹಿರಿಯಪ್ಪನ ಮಗನೇನೋ ಆ ಗಜರಾಜ ನಿನ್ನ ದೊಡ್ಡಪ್ಪನ ಪುತ್ರನೇನು? ಕರುವಿನ ಮೊರೆಗೆ ಆವು= ಕರು ಕೂಗಿದ ತಕ್ಷಣ. ಹಸುವು ಬಂದು ಒದಗುವಂತೆ ಬೇಗ ಬಾ. ನೀನು ಶರಣಾಗತವತ್ಸಲನು, ಆ ಬಿರುದು ಉಳಿಸಿಕೋ. ಹೇ ಗರುಡಗಮನ, ಗೋಪಾಲವಿಠ್ಠಲ, ನನ್ನ ಪ್ರಾರ್ಥನೆಗೆ ಓಗೊಟ್ಟು ಬೇಗ ಬಾ-ಎಂದು ಮೊರೆ ಇಟ್ಟಿದ್ದಾರೆ- ಭಕ್ತಿಗೆ ಹೆಸರಾದ ಭಾಗಣ್ಣದಾಸರು,



## ೪೫೪

### (ಗೋಪಾಲವಿಠ್ಠಲಾಂಕಿತ)

**ರಾಗ-ಮೋಹನ** **ಆದಿತಾಳ**

ಬಾರಯ್ಯ-ಬಾಬಾ ಭಕುತರ ಪ್ರಿಯ-ಶ್ರೀನಿವಾಸರಾಯ
ಮಾರಜನಕ ಮುಕುತರೊಡೆಯ-ದೇವಯ್ಯ ಜೀಯ್ಯ ॥ ॥ಪ॥

ವಾರಿಜಾಲಯಪತೆ ವಾರಿಜನಾಭನೆ
ವಾರಿಜಭವಪಿತ ವಾರಿಜನೇತ್ರನೆ
ವಾರಿಜಮಿತ್ರ ಅಪಾರಪ್ರಭಾವನೆ
ವಾರಿಜಜಾಂಡದ ಕಾರಣ ಧೊರೆಯೇ ॥ ||ಅ||

ಸ್ಯಂದನವೇರಿ ಬಪ್ಪ ರಂಗ-ದೇವೋತ್ತುಂಗ
ನಂದನಂದನ ಅರಿಮದಭಂಗ-ಕಾರುಣ್ಯಾಪಾಂಗ
ಸಿಂಧುಶಯನ ಸುಂದರಾಂಗ-ಹೇ ನಾರಸಿಂಗ

ಕಂದ ವಿರಿಂಚಿಯು ನಂದಿವಾಹನ ಅಮ-
ರೇಂದ್ರ ಸನಕಸನಂದನಾದಿ ಮುನಿ

ವೃಂದ ಬಂದು ನಿಂದು ಧಿಂ ಧಿಂ ಧಿಮಿಕೆಂದು
ನಿಂದಾಡಲು ಆನಂದದಿ ಮನಕೆ ॥ ॥೧॥

ಜಗಜ್ಜನ್ಮಾದಿಕರ್ತ ಗೋವಿಂದ– ಉದರದಿ ಲೋಕ
ಲಘುವಾಗಿ ಧರಿಸಿದ ಮುಕುಂದ–ಭಕ್ತರ ಮನಕೆ
ಝಗ ಝಗಿಸುತ ಪೊಳೆವಾನಂದ–ನಿಗಮಾವಳಿಯಿಂದ ॥

ಅಗಣಿತ ಮುನಿಗಣ ನಗ ಖಗ ಮೃಗ ಶಶಿ
ಗಗನ ಮಣ್ಯಾದ್ಯರು ಸೊಗಸಾಗಿ ಬಗೆ ಬಗೆ
ಪೊಗಳುತಲೀ ಬೇಗ ಚಿಗಿಚಿಗಿದಾಡಲು
ಮುಗುಳುನಗೆಯ ಮಹೋರಗಗಿರಿವಾಸ ॥ ॥೨॥

ತಡಮಾಡ ಬೇಡವೋ ಹೇ ನಲ್ಲ-ಮಾಕು ಲಾಲಿಸು ಎ–
ನ್ನೊಡೆಯ ಶ್ರೀ ಗೋಪಾಲವಿಠ್ಠಲ-ದೇವ ಪರಾಕು
ಅಡಿಗಳನಿಡು ಭಕ್ತವತ್ಸಲ–ಶ್ರೀ ಲಕುಮಿನಲ್ಲ ॥

ಮಡುವಿನೊಳಗೆ ಗಜ ಮೊರೆಯಿಡಲಾಕ್ಷಣ
ಮಡದಿಗೆ ಹೇಳದೆ ದಡದಡನೇ ಬಂದು
ಹಿಡಿದ ನಕ್ರನ ಬಾಯ್ ಕಡಿದು ಬಿಡಿಸಿದನೆ
ಸಡಗರದಲಿ ರಮೆ ಪೊಡವಿಯೊಡನೆ ಕೂಡಿ ॥ ॥೩॥



**ಅರ್ಥವಿವರಣೆ** .—

ಭಕುತರ ಪ್ರಿಯ = ಭಗವದ್ಭಕ್ತರಿಗೆ ಅತ್ಯಂತ ಪ್ರೀತಿಯ ವಸ್ತುವೇ, **ಮಾರಜನಕ** = ಮನ್ಮಥನ ತಂದೆ, (ಮನ್ಮಥನು ಶ್ರೀಪುರುಷರೂಪೀ ಪರಮಾತ್ಮನ ಮನಸ್ಸಿನಿಂದ ಹುಟ್ಟಿದವನು) **ದೇವಯ್ಯ** = ದೇವೋತ್ತಮ (ದೇವ+ಅಯ್ಯ), **ಜೀಯ** = ನಿಯಾಮಕನೇ, ಜಗತ್ಪ್ರಭುವೇ.

ಅನುಪಲ್ಲವಿಯಲ್ಲಿ **ವಾರಿಜ**= ಎಂಬ ಶಬ್ದವನ್ನು ನಾನಾರ್ಥಗಳಲ್ಲಿ ಪ್ರಯೋಗಿಸಿದ್ದಾರೆ. (೧) **ವಾರಿಜಾಲಯಪತೆ**=ಕಮಲಮಂದಿರೆಯಾದ ಲಕ್ಷ್ಮೀದೇವಿಯ ರಮಣ. (೨) **ವಾರಿಜನಾಭನೆ** = ಪದ್ಮನಾಭನೇ (ನಾಭಿಯಲ್ಲಿ ಸುವರ್ಣಾತ್ಮಕವಾದ ಕಮಲವನ್ನು ಇಚ್ಛಾಮಾತ್ರದಿಂದ ಸೃಷ್ಟಿಸಿದ ಪದ್ಮನಾಭರೂಪ), (೩) **ವಾರಿಜಭವಪಿತ**=ಕಮಲೋದ್ಭವರಾದ ಬ್ರಹ್ಮದೇವರ ತಂದೆ (೪) **ವಾರಿಜನೇತ್ರನೆ**=ಕಮಲದಳದಂತೆ ವಿಸ್ತಾರವಾದ ಕಣ್ಣುಳ್ಳವನೇ (೫) **ವಾರಿಜಮಿತ್ರ**=ಕಮಲಸಖನಾದಸೂರ್ಯ. ಅನಂತ ಕೋಟಿಸೂರ್ಯಪ್ರಕಾಶವುಳ್ಳವನು. (೬) **ವಾರಿಜಜಾಂಡದ** = ಬ್ರಹ್ಮಾಂಡದ (ವಾರಿಜ-ಕಮಲ. ವಾರಿಜಜ-ಕಮಲೋದ್ಭವರಾದ ಬ್ರಹ್ಮ. ವಾರಿಜಜಾಂಡ—ಬ್ರಹ್ಮಾಂಡ), **ಕಾರಣ ಧೊರೆಯೇ** = ಬ್ರಹ್ಮಾಂಡದ ಸೃಷ್ಟಿಗೆ ಮೂಲ ಕಾರಣನಾದ ಜಗತ್ಪ್ರಭುವೇ.

**ಸ್ಯಂದನವೇರಿ**=ಬ್ರಹ್ಮರಥದಲ್ಲಿ ಕುಳಿತು, (ನಮ್ಮ ಶರೀರವೇ ಬಿಂಬ ರೂಪನಾದ ಶ್ರೀಹರಿಗೆ ರಥ, ಮನಸ್ಸೇ ಬಿಂಬನ ಪೀಠ), **ಬಪ್ಪ**=ವೈಭವ ದಿಂದ ಬರುವ. **ರಂಗ**=ಕ್ರೀಡಾದಿವಿಶಿಷ್ಟನು (ಶರೀರಗತ ಸಕಲೇಂದ್ರಿಯ ಗಳ ಕ್ರಿಯಾಪ್ರವರ್ತಕನು) **ದೇವೋತ್ತುಂಗ**=ದೇವತಾಶ್ರೇಷ್ಠ (ಸರ್ವೋ ತ್ತಮ) (ದೇವ+ಉತ್ತುಂಗ), **ನಂದನ ನಂದನ** = ನಂದಗೋಪನ ಸಾಕುಮಗ ಶ್ರೀಕೃಷ್ಣ. **ಅರಿಮದಭಂಗ**=ಶತ್ರುಗಳಾದ ದೈತ್ಯರ ಮದವನ್ನು ಮುರಿಯುವವನು. **ಕಾರುಣ್ಯಾಪಾಂಗ** = ದಯಾರ್ದ್ರದೃಷ್ಟಿಯುಳ್ಳವನು. (ಕಾರುಣ್ಯ+ಅಪಾಂಗ, ಅಪಾಂಗ—ಕುಡಿನೋಟ), **ಸಿಂಧುಶಯನ**= ಕ್ಷೀರಸಾಗರಶಾಯಿ. **ಸುಂದರಾಂಗ**=ಅಪ್ರಾಕೃತವಾದ ಜ್ಞಾನಾನಂದಮಯ ಸ್ವರೂಪನು. **ಕಂದ**=ಜ್ಯೇಷ್ಠಪುತ್ರನಾದ, **ವಿರಿಂಚಿಯು**=ಬ್ರಹ್ಮದೇವರು, **ನಂದಿವಾಹನ** = ರುದ್ರದೇವರು, **ಅಮರೇಂದ್ರ** = ಸುರಾಧಿಪನಾದ ದೇವೇಂದ್ರ, **ಸನಕಸನಂದನಾದಿ ಮುನಿವೃಂದ** = ಸನಕ-ಸನಂದನ-ಸನತ್ಕುಮಾರ-ಸನತ್ಸುಜಾತ ಎಂಬ ಬ್ರಹ್ಮಪುತ್ರರೇ ಆದಿಯಾಗಿ ಸಕಲ ಋಷಿ ಗಳ ಸಮೂಹ, **ಬಂದುನಿಂದು**=ನಿನ್ನ ಸಮ್ಮುಖದಲ್ಲಿ ಬಂದು, ನಿಂತಿದ್ದಾರೆ. **ಆನಂದದಿಂದ ಮನಕೆ** = ಮಂದಹಾಸಯುಕ್ತನಾಗಿ ನನ್ನ ಮನೋಮಂದಿ ರಕ್ಕೆ ಬಾ.

**ಜಗಜ್ಜನ್ಮಾದಿ ಕರ್ತ** = ಜಗತ್ತಿನಸೃಷ್ಟಿ-ಸ್ಥಿತಿ-ಲಯ-ನಿಯಮನ ಜ್ಞಾನ ಅಜ್ಞಾನ ಬಂಧ-ಮೋಕ್ಷಗಳೆಂಬ ಅಷ್ಟಕರ್ತೃವಾದ (ಓಂ ಜನ್ಮಾದ್ಯಸ್ಯಯತಃಓಂ ॥-ಬ್ರಹ್ಮಸೂತ್ರವಾಕ್ಯ) **ಗೋವಿಂದ** = ವೇದಪ್ರತಿಪಾದ್ಯ, **ಲಘುವಾಗಿ** ೬ ನಿನ್ನ ಉದರದಲ್ಲಿ ಇಡೀ ಬ್ರಹ್ಮಾಂಡವನ್ನು ಹಗುರವಾಗಿ, ಅಂದರೆ ನಿರಾಯಾಸವಾಗಿ ಧರಿಸಿರುವೆ. **ಮುಕುಂದ** = ಮುಕ್ತಿಪ್ರದ. **ಝಗಝಗಿಸುತ** = ಅತ್ಯಂತ ಪ್ರಕಾಶಮಾನವಾಗಿ ಹೊಳೆಯುತ್ತಾ (ತಟಿತ್ಕೋಟಿಗಳಂತೆ) **ನಿಗಮಾವಳಿಯಿಂದ** = ಅನಂತ ವೇದಸ್ತೋತ್ರಗಳಿಂದ ಸ್ತುತ್ಯನಾಗಿ.

**ಅಗಣಿತಮುನಿಗಣ** = ಅಪಾರಸಂಖ್ಯೆಯಲ್ಲಿ ಋಷಿಗಳ ಸಮೂಹ. **ನಗ** = ಪರ್ವತಾಭಿಮಾನಿ ದೇವತೆಗಳು, **ಖಗ** = ಪಕ್ಷಿಸಮೂಹದ ಅಭಿಮಾನಿ ದೇವತೆಗಳು, (ಖಗೇಶನಾದ ಗರುಡನೂ ಗ್ರಾಹ್ಯ) **ಮೃಗ**=ಪ್ರಾಣಿ ಸಮೂಹಗಳ ಅಭಿಮಾನಿದೇವತೆಗಳು. ಮೃಗವಾಹನರಾದ ವಾಯುದೇವರೂ ಗ್ರಾಹ್ಯ (ಸಾಂಕೇತಾರ್ಥದಿಂದ) **ಶಶಿ** = ಶಶಾಂಕನಾದ ಚಂದ್ರ, **ಗಗನಮಣಿ** = ಸೂರ್ಯ-ಇವರೇ ಆದಿಯಾಗಿ **ಚಿಗಿ ಚಿಗಿದಾಡಲು** = ಕುಣಿದು ಕುಣಿಯುತ್ತಾ, **ಮಹೋರಗಗಿರಿನಿವಾಸ** = ಶೇಷಾದ್ರಿವಾಸ (ಮಹ+ ಉರಗ= ಸರ್ಪಶ್ರೇಷ್ಠರಾದ ಶೇಷ) **ನಾಕುಲಾಲಿಸು**=ನನ್ನ ಪ್ರಾರ್ಥನೆಯನ್ನು ಅಂತಃಕರಣದಿಂದ ಕೇಳು.

**ದೇವ ಪರಾಕು** = ಎಲೈ ಸ್ವಾಮಿಯೇ, ನಿನಗೆ ಪರಾಕು (ಹೊಗಳಿಕೆಯ ಧ್ವನಿ), **ಗಜ** =ಗಜೇಂದ್ರ **ಹಿಡಿದ ನಕ್ರನ** = ಗಜೇಂದ್ರನ ಕಾಲನ್ನು ಬಲವಾಗಿ ಹಿಡಿದುಕೊಂಡು ನೀರಿನೊಳಗೆ ಎಳೆಯುತ್ತಿದ್ದ ಮೊಸಳೆಯನ್ನು ಚಕ್ರಾಯುಧದಿಂದ ಛೇಧಿಸಿ ಗಜೇಂದ್ರನನ್ನು ಸಂರಕ್ಷಿಸಿದೆ, **ರಮೆ ಪೊಡವಿಯೊಡನೆ** = ಶ್ರೀದೇವಿ ಮತ್ತು ಭೂದೇವಿಯರೊಡಗೂಡಿ,

## ೪೫೫

### (ವರದಗೋಪಾಲವಿಠ್ಠಲಾಂಕಿತ)

ರಾಗ-ಬೇಹಾಗ್ ಆದಿತಾಳ

ಶ್ರೀನಿವಾಸ ಬಾರೋ ಮನಕೆ-ನೀ ಬೇಗನೆ ॥ ॥ಪ॥

ನೀ ಕುಣಿಸಿದಂತೆ-ನಾನು ಕುಣಿವೆನಲ್ಲ
ದೇನು ಇದಕೆ ಅನುಮಾನ ಮಾಡದಲೆ ॥ ॥೧॥

ಪಾಪಿಯೆಂಬಯು ಎನ್ನ-ಶ್ರೀಪತಿ ನಿನ್ನ ನಾಮಕೆ
ಪೋಪದ ಪಾಪಮಾಡಲಾಪೆನೆ ಏನೋ ॥ ॥೨॥

ಸಿರಿಯಿಂದೊಪ್ಪುತ ನಿನ್ನ ಪರಿವಾರ ಸಹಿತದಿ
ವರದಗೋಪಾಲವಿಠ್ಠಲನೆ ವಾರುತೆಗೆ ॥ ॥೩॥



**ಅರ್ಥವಿವರಣೆ**

ಈ ಕೀರ್ತನೆಯ ಕರ್ತೃಗಳು ಶ್ರೀಗೋಪಾಲದಾಸರ ತಮ್ಮಂದಿರಾದ ಸೀನಪ್ಪದಾಸರು. ಅವರ ಅಂಕಿತನಾಮ **ವರದಗೋಪಾಲವಿಠ್ಠಲ.** ಶ್ರೀ ಭಾಗಣ್ಣದಾಸರೇ ಅವರ ಗುರುಗಳು,

**ನೀ ಕುಣಿಸಿದಂತೆ** = ಶ್ರೀಪರಮಾತ್ಮನು ಬಿಂಬನು. ಜೀವರು ಅವನ ಪ್ರತಿಬಿಂಬಭೂತರು, ಪ್ರತಿಬಿಂಬದ ಸಕಲಕ್ರಿಯೆಗಳೂ ಬಿಂಬಾಧೀನ. **ಶ್ರೀಪತಿ ನಿನ್ನನಾಮಕೆ** = ಶ್ರೀಹರಿಯನಾಮವು ಸಕಲದುರಿತ ಪರಿಹಾರಕ. ಸಮಸ್ತ ಪಾಪಪ್ರಕ್ಷಾಳಕ, **ಪರಿವಾರಸಹಿತದಿ** = ಬ್ರಹ್ಮಾದಿಸಕಲದೇವತಾ ವರ್ಗದಿಂದ ಸಹಿತನಾಗಿ. ಇಲ್ಲಿ ದಾಸರಾಯರು- "ನನ್ನ ಶರೀರವೆಂಬ ಮಂದಿರಕ್ಕೆ ಬಾ. ಮನಸ್ಸೇ ನೀನು ಕೂಡುವ ಪೀಠ. ಸಕಲೇಂದ್ರಿಯಾಭಿಮಾನಿ ದೇವತೆಗಳೇ ನಿನ್ನ ಪರಿವಾರ"- ಎಂಬ ಅರ್ಥಾನುಸಂಧಾನದಿಂದ ಪ್ರಾರ್ಥಿಸಿರುತ್ತಾರೆ. **ವಾರುತೆಗೆ** = ನನ್ನ ಕೀರ್ತನರೂಪವಾದ ಪ್ರಾರ್ಥನೆಗೆ ಓಗೊಟ್ಟು.



೪೫೭

(ಜಗನ್ನಾಥವಿಠ್ಠಲಾಂಕಿತ)

ರಾಗ–ಮೋಹನ (ಪಂತುವರಾಳಿ) ಆದಿತಾಳ

ಬಾ ವೆಂಕಟಶೈಲಾಧಿಪ ಮನ್ಮನಕೆ
ತಡಮಾಡುವುದೇಕೆ ॥ ॥ಪ॥

ಶ್ರೀವಲ್ಲಭ ನಿನ್ನಂಘ್ರಿಕಮಲಕೆ
ನಮಿಸುವೆ ಪ್ರತಿಕ್ಷಣಕೆ ।
ನೀ ಒಲಿದೆನ್ನ ದಯಾವಲೋಕನದಿ
ಪಾವನಮಾಡಲು ದೇವವರೇಣ್ಯ ॥ ॥ಅ॥

ವೈಕುಂಠಾಧೀಶ ವಿಗತಕ್ಲೇಶ
ಚಿತ್ಸುಖಮಯವಪುಷ ।
ಆಕಾಶವತ್ ಸರ್ವತ್ರವಕಾಶ
ಶ್ರೀವೆಂಕಟೇಶ ॥
ಶ್ರೀಕಮಲಜಭವ ಪಾಕಹ ಮದನ ದಿ–
ವಾಕರ ಪ್ರಮುಖ ದಿದೌಕಸವರದ ॥ ॥೧॥

ಮಮಸ್ವಾಮಿ ಮದಂತರ್ಯಾಮಿ
ಸರ್ವಾಂತರ್ಯಾಮೀ
ಅಮೇಯಾತ್ಮಾ ನಿರ್ಗುಣ ನಿಷ್ಕಾಮಿ
ಸೇವಿತ ಶ್ರೀಭೂಮಿ ॥
ಶಮಲವರ್ಜಿತ ಅಮಿತಸುಗುಣಪೂ
ರ್ಣಮಲಮಹಿಮ ಖಳದಮನ ದಯಾಳೋ ॥ ॥೨॥

ಸೋಮಾರ್ಕಾನಲ ಸಂಕ್ರಮ್ಯಯುತ ಋಕ್ಷ
ಸಿತಾಸಿತ ಪಕ್ಷ ।

ನಾಮಾಭಿಧೇಯ ಲೋಕಾಧ್ಯಕ್ಷ
ಕಮಲಾಯತಾಕ್ಷ ॥
ಸೋಮ ಭೂಮ ನಿಸ್ಸೀಮ ಮಹಿಮ ತ್ರಿ-
ಧಮ ರಾಮ ಘನಶ್ಯಾಮ ಲಲಾಮ ॥ ॥೩॥

ಪವನಾಂತರಾತ್ಮ ನಿರ್ಮಲಾತ್ಮ
ಪರಮಾತ್ಮ ಜ್ಞಾನಾತ್ಮ ।
ಅವಿಕಾರಾತಿರೋಹಿತ ಭೂತಾತ್ಮ
ಪೂತಾತ್ಮ ಮಹಾತ್ಮ ॥
ತ್ರಿವಿಧಜೀವರಿಗೆ ವಿವಿಧ ಫಲಂಗಳ
ತವಕದಿ ಕೊಟ್ಟವರದರನು ಪಾಲಿಸು ॥ ॥೪॥

ಸೃಷ್ಟ್ಯಾದಿಕರ್ತ ತ್ರಿಜಗದ್ಭರ್ತ
ಲೋಕೈಕ ಸಮರ್ಥ ।
ವೃಷ್ಣೀಶ ವೃಂದಾರಕರಿಪು ಹರ್ತ
ಮುಕುತರ ಪುರುಷಾರ್ಥ ॥
ಹೃಷ್ಟ ಪುಷ್ಟ ಪರಮೇಷ್ಠಿ ಜನಕ ಶಿ-
ಷ್ಟೇಷ್ಟ ದೃಷ್ಟ ಅನಿವಿಷ್ಟ ನಿವಿಷ್ಟ ॥ ॥೫॥

ವೇದಸ್ತೇಯಾರಿ ಮಂಥರಧಾರಿ
ಭೂವರಹ ನರಹರಿ ।
ಭೂದಾನವ ಬೇಡಿದ ಚಾಪಕುಠಾರಿ
ರಾವಣಕುಲವೈರಿ ॥
ಯಾದವವಂಶ ಮಹೋದಧಿ ಚಂದ್ರಮ
ಸಾಧಿತ ತ್ರಿಪುರ ಖಳೋದರ ಪಾಟ॥ ॥೬॥

ದಯದಿಂದ ನೋಡೋ ದೀನೋದ್ಧಾರ
ಸದ್ಗುಣ ಗಂಭೀರ ।

ಪ್ರಿಯ ನೀನೆ ಎನಗೆ ಲೋಕೋದ್ಧಾರ
ಸೌಂದರ್ಯಸಾರ ||
ಹಯಮುಖ ಲೋಕತ್ರಯಪ ತ್ರಯೀಮಾಯ
ವಯನಗಮ್ಯ ನಾ ಬಯಸುವೆ ನಿನ್ನ || ||೭||

ಬಹು ಮಾತುಗಳ್ಯಾಕೋ ಭವಭಯಹಾರಿ
ಬಿನ್ನೈಸುವೆ ಶೌರಿ |
ವಿಹಿತಾವಿಹಿತಂಗಳ ನಿನ್ನನು ಮೀರಿ
ಮಾಳ್ಪೆನೆ ಕಂಸಾರಿ ||
ರಹಿತಶಮಲ ಸನ್ಮಹಿತ ಲಕುಮಿ ಭೂ-
ಸಹಿತ ಮನದಿ ಸನ್ನಿಹಿತನಾಗಲು || ||೮||

ದಾತಾ ನೀನಲ್ಲದನ್ಯರನರಿಯೆ
ಕಂಡವರನು ಕರೆಯೇ
ಪ್ರೀತನಾಗೆನ್ನೊಳು ಶ್ರೀಹರಿಯೆ
ಮೂಲೋಕದ ಧೊರೆಯೆ ||
ಶ್ರೀತರುಣಿಯ ಕೂಡೀ ತನುಸದನಕೆ
ನೀ ತ್ವರಿತದಿ ಜಗನ್ನಾಥವಿಠ್ಠಲಾ || ||೯||

**ಅರ್ಥವಿವರಣೆ —**

**ವೆಂಕಟಶೈಲಾಧಿಪ** = ವೆಂಕಟಾಚಲಪತಿಯಾದ ಶ್ರೀನಿವಾಸನೇ, **ಮನ್ಮನಕೇ** = ಮನಸ್ಸಿನ ಮಂದಿರಕ್ಕೆ ಬಾ (ಧ್ಯಾನಗೋಚರನಾಗು), **ಶ್ರೀವಲ್ಲಭ** = ರಮಾರಮಣ. **ದಯಾವಲೋಕನದಿ** = ಕರುಣಾದೃಷ್ಟಿಯಿಂದ (ದಯ+ಅವಲೋಕನ). **ದೇವವರೇಣ್ಯ** = ದೇವೋತ್ತಮಾ

(ಸರ್ವೋತ್ತಮ) **ಪಾವನವಾಡಲು** = ನನ್ನ ಮನಸ್ಸನ್ನು ಪವಿತ್ರಗೊಳಿಸಲು (ಮನಶುದ್ಧಿಯನ್ನು ನೀಡಲು). **ವೈಕುಂಠಾಧೀಶ** = ವೈಕುಂಠ ಲೋಕಾಧಿಪತಿ. ವಿಗತಕ್ಲೇಶ = ನಿರ್ದುಃಖಿ (ಸಕಲದುಃಖವಿದೂರ) **ಚಿತ್ಸುಖಮಯವಪುಷ** = ಜ್ಞಾನಾನಂದ ಸ್ವರೂಪನು. **ಆಕಾಶವತ್** = ಆಕಾಶದಂತೆ. ಸರ್ವತ್ರವಕಾಶ = ಎಲ್ಲೆಲ್ಲಿಯೂ ವ್ಯಾಪ್ತನು **ಶ್ರೀ** = ಲಕ್ಷ್ಮೀದೇವಿ **ಕಮಲಜ** = ಕಮಲೋದ್ಭವನಾದ ಬ್ರಹ್ಮ. **ಭವ** = ರುದ್ರದೇವರು. **ಪಾಕಶ** = ಪಾಕನಾಮಕ ದೈತ್ಯನನ್ನು ಸಂಹರಿಸಿದ ಇಂದ್ರದೇವರು, **ಮದನ** = ಕಾಮ. **ದಿವಾಕರ** = ಸೂರ್ಯ. **ಪ್ರಮುಖ** = ಇವರೇ ಆದಿಯಾಗಿ **ದಿವೌಕಸ** = ದೇವತೆಗಳಿಗೆ, **ವರದ** = ಅಭೀಷ್ಟಪ್ರದನು. **ಮಮಸ್ವಾಮಿ** = ನನಗೂ ಮತ್ತು ನನ್ನ ಸರ್ವಕಾರ್ಯಗಳಿಗೂ ನಿಯಾಮಕ. **ಮದಂತರ್ಯಾಮಿ** = ನನ್ನಲ್ಲಿ ಅಂತಸ್ಥಿತನಾಗಿರುವ ಬಿಂಬಮೂರ್ತಿಯೇ. **ಸರ್ವಾಂತರ್ಯಾಮಿ** = ಸರ್ವಜೀವರಲ್ಲೂ ಅಂತರ್ನಿಯಾಮಕನಾಗಿರುವ. **ಆಮ್ನಾಯಾತ್ಮಾ** = ವೇದಾದಿಗಳಿಂದಲೂ ಸಾಕಲ್ಯೇನ ತಿಳಿಯಲ್ಪಡದಿರುವವನು (ಆಮ್ನಾಯ- ವೇದರಾಶಿಗಳು). **ನಿರ್ಗುಣ** = ಪ್ರಾಕೃತಗುಣರಹಿತನು. **ನಿಷ್ಕಾಮಿ** = ಪೂರ್ಣಕಾಮನು (ನಿತ್ಯನಿರಪೇಕ್ಷನು) **ಸೇವಿತ ಶ್ರೀಭೂಮಿ** = ಶ್ರೀದೇವಿ (ಲಕ್ಷ್ಮೀ) ಭೂರೂಪಳಾದ ಮಹಾಲಕ್ಷ್ಮೀ ಇವರಿಂದ ಸಂಸೇವ್ಯಮಾನನು. **ಶಮಲವಿವರ್ಜಿತ** = ದೋಷದೂರ. **ಅಮಿತಸುಗುಣಪೂರ್ಣ** = ಅನಂತ ಕಲ್ಯಾಣಗುಣಗಣ ಪರಿಪೂರ್ಣ. **ಅಮಲಮಹಿಮ** = ಪರಮ ಪಾವನ ಮೂರ್ತಿ. **ಖಳದಮನ** = ದೈತ್ಯಸಂಹಾರಿ. **ದಯಾಳೋ** = ಸಜ್ಜನರಿಗೆ ದಯಾಸಾಗರನು.

**ಸೋಮ** = ಚಂದ್ರ, **ಅರ್ಕ** = ಸೂರ್ಯ, **ಅನಲ** = ಅಗ್ನಿ, **ಸಂಕ್ರಮ** = ಉತ್ತರಾಯಣ ಮತ್ತು ದಕ್ಷಿಣಾಯನ ಎಂಬ ಆಯನದ್ವಯಗಳು. **ಋತು** = ವಸಂತಾದಿ ಷಡೃತುಗಳು. **ಋಕ್ಷ** = ಅಶ್ವಿನ್ಯಾದಿ ೨೭ ನಕ್ಷತ್ರಗಳು. **ಸಿತ** = ಶುಕ್ಲಪಕ್ಷ, **ಅಸಿತಪಕ್ಷ** = ಕೃಷ್ಣಪಕ್ಷಗಳೆಂಬ ಪಕ್ಷ

ದ್ವಯಗಳು. **ನಾಮರೂಪಾಭಿಧೇಯ** = ಇವುಗಳಿಂದ ವಾಚ್ಯನು (ದೇಶಾದಿ ಕಾಲಾದಿವಾಚಕನು) **ಲೋಕಾಧ್ಯಕ್ಷ** = ಸರ್ವಜೀವರುಗಳ ಸಾಕ್ಷೀ ಭೂತನು. **ಕಮಲಾಯತಾಕ್ಷ** =ಕಮಲದಳದಂತೆ ವಿಸ್ತೃತವಾದ ಕಣ್ಣುಳ್ಳ ವನು. **ಸೋಮ** = ನಿತ್ಯಮುಕ್ತನು (ಅಮೃತನು) **ಭೂಮ** = ಪರಿ ಪೂರ್ಣನು. **ನಿಸ್ಸೀಮಮಹಿಮ** = ಅಪಾರ ಮಹಿಮಾಸಂಪನ್ನನು. **ತ್ರಿಧಾಮ** = ವೈಕುಂಠ-ಶ್ವೇತದ್ವೀಪ-ಅನಂತಾಸನಗಳೆಂಬ ಮೂರು ಮುಕ್ತ ಲೋಕಗಳಲ್ಲಿ. **ರಾಮ** = ಸ್ವೇಚ್ಛೆಯಿಂದ ಕ್ರೀಡೆಯಾಡುತ್ತಿರುವವನು (ನಿತ್ಯ ಪ್ರಕಟನಾಗಿರುವವನು) **ಘನಶ್ಯಾಮ** = ದಟ್ಟವಾದ ನೀಲಮೇಘದಂತೆ ವರ್ಣವಿಶಿಷ್ಟನು, **ಲಲಾಮ** = ಶುಭಲಕ್ಷಣವಂತ (ನಿತ್ಯಮಂಗಳ ಸ್ವರೂಪಿ).

**ಪವನಂತರಾತ್ಮ** = ವಾಯ್ವಂತರ್ಗತ ಶ್ರೀಹರಿ. **ನಿರ್ಮಲಾತ್ಮ** = ಶುದ್ಧ ಸ್ವರೂಪಿ (ಅಪ್ರಾಕೃತಸ್ವರೂಪನು). **ಪರಮಾತ್ಮ** = ಸರ್ವೋ ತ್ತಮ (ಪುರುಷೋತ್ತಮ). **ಜ್ಞಾನಾತ್ಮ** =ಜ್ಞಾನಸ್ವರೂಪನು. **ಅವಿ ಕಾರ**=ಯಾವಿಧವಾದ ವಿಕಾರವೂ ಇಲ್ಲದಿರುವವನು ಅಂದರೆ ಶಶ್ವದೇಕ-ಪ್ರಕಾ ರನು. **ಅತಿರೋಹಿತ** = ತಿರೋಧಾನರಹಿತವಾದ ಸ್ವರೂಪವುಳ್ಳವನು, **ಭೂತಾತ್ಮ** = ಸರ್ವಪ್ರಾಣಿಗಳ ಅಂತರ್ಯಾಮಿ, **ಪೂತಾತ್ಮ**= ಶುದ್ಧಾತ್ಮ (ಸರ್ವದೋಷವಿದೂರ), **ಮಹಾತ್ಮ**= ಅಪರಿಚ್ಛಿನ್ನ ಮಹಿಮಾಸಂಪನ್ನನು. **ತ್ರಿವಿಧಜೀವರಿಗೆ** = ಸಾತ್ವಿಕ (ಮುಕ್ತಿಯೋಗ್ಯ), ರಾಜಸ (ನಿತ್ಯಸಂಸಾರಿ ಗಳು), ಮತ್ತು ತಾಮಸರು (ತಮೋಯೋಗ್ಯರು) ಮುಂತಾದ ಮೂರು ವರ್ಗದ ಜೀವರಾಶಿಗಳಿಗೆ. **ವಿವಿಧಫಲಂಗಳ** = ಅವರವರ ಸ್ವರೂಪ ಯೋಗ್ಯತೆಗನುಸಾರವಾಗಿ ನಿತ್ಯಸುಖ, ಸುಖದುಃಖಮಿಶ್ರ. ನಿತ್ಯದುಃಖರೂಪ ವಾದ ಅಂಧತಮಸ್ಸು ಗತಿಗಳನ್ನು. **ತವಕದಿ ಕೊಟ್ಟು** =ಸಾಧನ ಪೂರ್ತಿ ಯಾದ ತಕ್ಷಣ ನೀಡಿ.

**ಸೃಷ್ಟ್ಯಾದಿಕರ್ತ** = ಜಗತ್ತಿನ ಸೃಷ್ಟಿ-ಸ್ಥಿತಿ-ಲಯ-ನಿಯಮನ- ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳೆಂಬ ಅಷ್ಟಕರ್ತೃತ್ವವುಳ್ಳವನು. **ತ್ರಿಜ ಗದ್ಭರ್ತ** = ವಿಶ್ವವ್ಯಾಪಕನು **ವೃಷ್ಣೀಶ** = ಯಾದವರಪತಿ ಶ್ರೀಕೃಷ್ಣ (ವೃಷ್ಣಿಕುಲವು ಯದುಕುಲದ ಒಂದು ಶಾಖೆ) **ವೃಂದಾರಕರಿಪುಹರ್ತ** =

ದೇವತೆಗಳ ಶತ್ರುಗಳಾದ ಅಸುರರ ಸಂಹಾರಕ. **ಮುಕುಂತರ ಪುರುಷಾರ್ಥ** =ಮುಕ್ತರಿಗೆ ಪ್ರಾಪ್ಯಫಲಸ್ವರೂಪನು. **ಹೃಷ್ಟಪುಷ್ಟ**= ಆನಂದಾಭಿವೃದ್ಧಿವುಳ್ಳ ಶತಾನಂದ ನಾಮಕರಾದ, **ಪರಮೇಷ್ಠಿ ಜನಕ**= ಬ್ರಹ್ಮದೇವರ ತಂದೆ **ಶಿಷ್ಟೇಷ್ಟ** = ಸಜ್ಜನರಿಗೆ ಪ್ರಿಯನು. **ದೃಷ್ಟ**=ಸರ್ವವನ್ನೂ ಸಾಕ್ಷಾತ್ತಾಗಿ ನೋಡುವ-ಸರ್ವದರ್ಶಿ. **ಅನಿವಿಷ್ಟ** = ತನ್ನಲ್ಲಿ ಪ್ರವೇಶಿಸಿ ನಿಯಾಮಿಸುವವರು ಯಾರೂ ಇಲ್ಲದಿರುವ. **ನಿವಿಷ್ಟ** =ಆದರೆ ತಾನು ಮಾತ್ರ ಸರ್ವರಲ್ಲಿ ಪ್ರವೇಶಿಸಿ ಸರ್ವನಿಯಾಮಕನಾಗಿರುವವನು,

**ವೇದಸ್ತೇಯಾರಿ** = ವೇದಗಳನ್ನು ಕದ್ದೊಯ್ದ ಹಯಗ್ರೀವಾಸುರನನ್ನು ಮತ್ಸ್ಯರೂಪದಿಂದ ಕೊಂದ (ವೇದ-ವೇದಗಳನ್ನು ಸ್ತೇಯ-ಚೋರ ಅರಿ-ಶತ್ರು). **ಮಂಥರಧಾರಿ** = ಮಂದರಪರ್ವತವನ್ನು ತನ್ನ ಬೆನ್ನಿನ ಮೇಲೆ ಹೊತ್ತ ಕೂರ್ಮಾವತಾರಿ ಶ್ರೀಹರಿ, **ಭೂವರಹ**=ಹಿರಣ್ಯಾಕ್ಷನನ್ನು ಸಂಹರಿಸಿದ ಭೂವರಾಹರೂಪೀ ಶ್ರೀಪರಮಾತ್ಮ. **ನರಹರಿ** = ಪ್ರಹ್ಲಾದ ವರದನಾದ ನಾರಸಿಂಹ, **ಭೂದಾನವ ಬೇಡಿದ** =ಮೂರುಪಾದ ಭೂಮಿಯನ್ನು ಬಲಿರಾಜನಿಂದ ಯಾಚಿಸಿದ ಶ್ರೀವಟುವಾಮನ. **ಚಾಪಕುಠಾರಿ** = ಧನಸ್ಸು ಮತ್ತು ಕೊಡಲಿಗಳನ್ನು ಹಿಡಿದು ದುಷ್ಟಕ್ಷತ್ರಿಯರನ್ನು ಕೊಂದ ಶ್ರೀಪರಶುರಾಮರೂಪ. **ವಂಶವುಹೋದಧಿಚಂದ್ರಮ** = ಯಾದವರ ವಂಶವೆಂಬ ಮಹಾಸಾಗರವನ್ನು ಉಕ್ಕಿಸುವ ಚಂದ್ರಸದೃಶನಾದ ಯದುಕುಲಲಲಾಮ ಶ್ರೀಕೃಷ್ಣ. **ಸಾಧಿತತ್ರಿಪುರ** =ತ್ರಿಪುರಾಸುರರೆಂಬ ದುಷ್ಟದೈತ್ಯರ ವಿನಾಶವನ್ನು ಸಾಧಿಸಿದ ಬುದ್ಧರೂಪೀ ಶ್ರೀವಿಷ್ಣು. **ಖಳೋದರ ಪಾಟಿ** = ದಾನವರ ಉದರವನ್ನು ಬಗೆದು ಸಂಹರಿಸಿದ ಶ್ರೀಕಲ್ಕಿ. ಈರೀತಿ ಶ್ರೀಹರಿಯ ದಶಾವತಾರಗಳನ್ನು ಸ್ತೋತ್ರಮಾಡಿದ್ದಾರೆ.

**ದೀನೋದ್ಧಾರ** = ದೀನರಾದ ಶರಣಜನರನ್ನು ಸಂಸಾರದಿಂದ ದಾಟಿಸುವವನು, **ಸದ್ಗುಣಗಂಭೀರ** = ಅನಂತಕಲ್ಯಾಣಗುಣಗಳಿಂದ ಪರಿಪೂರ್ಣಸ್ವರೂಪನು, **ಲೋಕೋದ್ಧಾರ** = ಸಜ್ಜನರ ಉದ್ಧಾರಕ. **ಸೌಂದರ್ಯ ಸಾರ**=ಅಪ್ರಾಕೃತರೂಪಸೌಂದರ್ಯನಿಧಿ, **ಹಯಮುಖ**=

ಶ್ರೀಹಯಗ್ರೀವ ದೇವರು. **ಲೋಕತ್ರಯಾವ** = ಜಗದ್ರಕ್ಷಕ (ಜಗತ್ಸ್ವಾಮಿ), **ತ್ರಯೀಮಯಿ** = ಋಗ್ವೇದ, ಯಜುರ್ವೇದ, ಸಾಮವೇದಗಳೆಂಬ ವೇದತ್ರಯಗಳಿಂದ ಪ್ರತಿಪಾದ್ಯನಾದ (ವೇದಸ್ವರೂಪನು), **ವಯುನಗಮ್ಯ** = ಜ್ಞಾನಗಮ್ಯ (ಅಪರೋಕ್ಷ ದರ್ಶನದಿಂದ ಮಾತ್ರ ಪ್ರಾಪ್ಯನು).

**ಭವಭಯಹಾರಿ** = ಜನನ ಮರಣಾಖ್ಯವಾದ ಘೋರವಾದ ಸಂಸಾರ ಭಯವನ್ನು ಪರಿಹರಿಸುವವನು (ಸಂಸಾರಪರಿಹಾರಕ). **ಶೌರಿ** = ವಸುದೇವನ ವಂಶ ಶೂರಕುಲದಲ್ಲಿ ಜಾತನು, **ವಿಹಿತಾವಿಹಿತಂಗಳನು** = ವಿಧಿನಿಷೇಧ ಕರ್ಮಗಳನ್ನು, **ನಿನ್ನನ್ನು ಮೀರಿ ಮಾಳ್ಪನೆ** = ನಿನ್ನನು ಬಿಟ್ಟು ನಾನೇ ಸ್ವತಂತ್ರನಾಗಿ ಮಾಡಬಲ್ಲನೆ ? (ನೀನೇ ಬಿಂಬಕ್ರಿಯಾದ್ವಾರಾ ಸಕಲ ಕರ್ಮಗಳನ್ನೂ ಮಾಡಿ ಮಾಡಿಸುವೆ) **ಕಂಸಾರಿ** = ಕಂಸಧ್ವಂಸಿಯಾದ ಶ್ರೀಕೃಷ್ಣನೇ. **ರಹಿತಶಮಲ** = ದೋಷರಹಿತ. **ಸನ್ಮಹಿತ** = ಅಪಾರ ಸನ್ಮಹಿಮಾಸಂಪನ್ನನು. **ಮನದಿ ಸನ್ನಿಹಿತನಾಗಲು** = ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲಲು, **ಲಕುಮಿ ಭೂ ಸಹಿತ** = ಶ್ರೀಭೂದೇವಿ ಸಮೇತನಾಗಿ,

**ದಾತ** = ಕೊಡುಗೈಯಿಂದ ನೀಡುವ ಮಹಾದಾನಿ. **ನೀನಲ್ಲದ್ಯರನರಿಯೆ** = ನಿನ್ನನ್ನು ಬಿಟ್ಟು ಮತ್ತೊಬ್ಬ ದೇವರನ್ನು ನಾ ಕಂಡು ಅರಿಯೆ. **ಕಂಡವರನು** = ಅನ್ಯದೇವತೆಗಳನ್ನು. **ಕರೆಯೆ** = ಬರಲು ಪ್ರಾರ್ಥಿಸುವುದಿಲ್ಲ, (ವಿಷ್ಣುತತ್ತ್ವನಿಷ್ಠೆ) **ಶ್ರೀತರುಣಿಯ ಕೂಡಿ** = ಶ್ರೀಮಹಾಲಕ್ಷ್ಮೀಸಮೇತನಾಗಿ, **ತನುಸದನಕೆ** = ನನ್ನ ದೇಹವೆಂಬ ಮಂದಿರಕ್ಕೆ, **ನೀ ತ್ವರಿತದಿ** = ನೀನು ತಡಮಾಡದೆ ಶೀಘ್ರವಾಗಿ ಆಗಮಿಸು.



## ೪೫೭

## (ಮೋಹನವಿಠಲಾಂಕಿತ)

ರಾಗ ಸಾವೇರಿ ಆದಿತಾಳ

ತರಳಿ ಬಾರಯ್ಯ ಭವಶರಧಿ ತಾರಕನೇ–ನಾ
ಕರವಾ ಮುಗಿವೆ–ಎನ್ನ ಕರುಣದಲ್ಲಿ ನೋಡೋ ॥ ॥ಪ॥

ಎರಡು ಭಾಗದಿ-ಶ್ರೀ ಧರಣೇರಿಂದೊಪ್ಪುತ
ತ್ವರಿತದಿ ದಯಮಾಡು-ಉರಗಾಗಿರಿ ವೆಂಕಟ ॥ ॥ಅ॥

ತೇರಿನೊಳಿಪ್ಪ ಶೃಂಗಾರ ಪುರುಷನೆ-ಭಂ-
ಗಾರ ಮಾಣಿಕದಲಂಕಾರವ ಧರಿಸಿದ
ಮಾರಮಣನೆ-ವನಜಾರಿವದನ-ಬಲು
ಶೂರ ಸಮರಧೀರ ನಾರಾಯಣ ಕಂಸಾರೇ ॥

ನರ ಕಂಠೀರವ ಕಮಲನಾಭ
ನಾರದ ಮುನಿಪ್ರಿಯ ಚಾರು–
ಚರಿತ ಪನ್ನಗಾರಿಗಮನ ಮದ-
ನಾರಿಯ ಸಲಹಿದ ಧೀರ ಮುರಾರಿ ॥ ॥೧॥

ನಿಂದರೆ ಬಪ್ಪುದು-ಸಿಂಧುಶಯನ ದಯ-
ದಿಂದ ಎನ್ನನು ನೋಡು–ಕಣ್ದೆರೆದೀಕ್ಷಿಸಿ ।
ಕಂದಗೊಲಿದು ಕಂಬದಿಂದ ಬಂದಸುರನ
ಕೊಂದು ಕರುಳಹಾರ ಕಂಧರದಿ ತಾಳಿದೇ ॥

ಮಂದಮತಿ ಇವನೆಂದಲೇ ಗೋ–
ವಿಂದ-ಗೋವಳ ವೃಂದದೊಡನೆ ಕಾ–
ಳಿಂದಿಯ ಧುಮುಕಿ-ಫಣೀಂದ್ರನ ಶಿರದಲಿ
ಧಿಂ ಧಿಮಿ ಧಿಮಿಕೆಂದು ಕುಣಿದ ಹರಿ ॥ ॥೨॥

ಜಲದೊಳು ಪೊಕ್ಕು-ಆ ಇಳೆಯ ತಸ್ಕರನು ದುಂ-
ಬಲಗೊಂಡು-ಮಡುಹಿ ನಂಬಿದ ಪ್ರಹ್ಲಾದ ಹಂ-
ಬಲಿಸೆ-ಧರ್ಮದಿ ಕಾಯ್ದು ಸಲೆ ಕ್ಷತ್ರಿಯ
ಕುಲವವಳಿದೆ-ನಿನ್ನೊಳು ನೀನೇ ಕಾಯ್ದು ॥

ಮಲೆತ ಮಾವನ ಕೊಂದೆ ಸಲೆ
ಖಳತ್ರಿಪುರನ ಗೆದ್ದು ಕಲಿಯ ಸಂಹರಿಸಿದೆ
ಸುಲಭಮೂರುತಿ ಮೋಹನವಿಠ್ಠಲ
ಚೆಲುವ ತಿರುವೇಂಗಳ ॥ ।೩॥



**ಅರ್ಥವಿವರಣೆ:—**

**ಭವಶರಧಿ ತಾರಕನೆ** = ಸಂಸಾರವೆಂಬ ಮಹಾಸಾಗರವನ್ನು ದಾಟಿಸುವವನು. **ಎರಡು ಭಾಗದಿ** = ಎಡ ಬಲ ಪಾರ್ಶ್ವಗಳಲ್ಲಿ, **ಉರಗಾದ್ರಿ** = ಶೇಷಾಚಲಪರ್ವತನಿವಾಸಿ ವೇಂಕಟ, **ಮಾಣಿಕ** = ರತ್ನ. **ಮಾರಮಣನೆ** = ಲಕ್ಷ್ಮೀಪತಿಯು, **ವಾರಿಜಾರಿವದನ** = ಚಂದ್ರಮಂಡಲ ಸದೃಶವಾದ ಮುಖವುಳ್ಳವನು (ವಾರಿಜ-ಕಮಲ. ವಾರಿಜಾರಿ-ಕಮಲದ ಶತ್ರು. ಚಂದ್ರ) (ಈ ಅಲಂಕಾರದಲ್ಲಿ ಚಂದ್ರಮಂಡಲದಂತೆ ಗುಂಡಾದ ಮುಖವಿನ್ಯಾಸ. ಚಂದ್ರನಂತೆ ಪ್ರಶಾಂತವಾದ ಮುಖ) **ಸಮರಧೀರ** = ರಣದಲ್ಲಿ ಪರಾಕ್ರಮಿಯೂ (ರಣಶೂರನು) **ಕಂಸಾರಿ** = ಮಾವನಾದ ಕಂಸನನ್ನು ಸಂಹರಿಸಿದ ಶ್ರೀಕೃಷ್ಣ. **ನರಕಂಠೀರವ** = ನರಸಿಂಹ. **ಚಾರುಚರಿತ** = ಶುಭ ಚಾರಿತ್ರ್ಯವುಳ್ಳ. **ಪನ್ನಗಾರಿಗಮನ** = ಗರುಡಗಮನ (ಪನ್ನಗ-ಸರ್ಪ. ಪನ್ನಗಾರಿ = ಸರ್ಪಗಳಿಗೆ ಶತ್ರುವಾದ ಗರುಡ) **ಮದನಾರಿಯ ಸಂಹಿದ** = ರುದ್ರದೇವರ ಸಂರಕ್ಷಕ (ಮದನ = ಮನ್ಮಥ. **ಮದನಾರಿ** = ಮನ್ಮಥನನ್ನು ಫಾಲನೇತ್ರದಿಂದ ದಹಿಸಿದ ರುದ್ರ. ರುದ್ರದೇವರು ವಿಷಪಾನಮಾಡಿ

ದಾಗ ಅದು ಕಂಠದಿಂದ ಕೆಳಗೆ ಇಳಿಯದಂತೆ ಶ್ರೀ ಹರಿಯು ತನ್ನ ಅಮೃತ ಹಸ್ತದಿಂದ ರುದ್ರನ ಕಂಠವನ್ನು ಸ್ಪರ್ಶಿಸಿ, ವಿಷಬಾಧೆಯಿಂದ ಸಂರಕ್ಷಿಸಿದ ಪ್ರಸಂಗ). **ಮುರಾರಿ** = ಮುರಾ ಎಂಬ ಅಸುರನನ್ನು ಸಂಹರಿಸಿದ ಶ್ರೀ ಕೃಷ್ಣ. **ಸಿಂಧುಶಯನ** = ಕ್ಷೀರಾಬ್ಧಿಶಾಯಿ. **ಕಂದಗೊಲಿದು** = ಬಾಲ ಪ್ರಹ್ಲಾದನಿಗೆ ಒಲಿದು. **ಸುರನ ಕೊಂದು** = ಹಿರಣ್ಯಕಶಿಪುವನ್ನು ಸಂಹರಿಸಿ. **ಕಂಧರದಿ** = ನಿನ್ನ ಕಂಠದಲ್ಲಿ, **ಗೋವಳರ** = ಗೋಪಾಲಕರ, **ಕಾಳಿಂದೀ** = ಕಾಳಿಂದಿಯ ಮಡುವನ್ನು, **ಇಳೆಯ ತಸ್ಕರ** = ಭೂಮಿಯನ್ನು ಕದ್ದ ಹಿರಣ್ಯಾಕ್ಷನನ್ನು. **ನಿನ್ನೊಳು ನೀನೇ ಕಾಯ್ದೆ** = ಪರಶುರಾಮ ದೇವರು ದಶರಥ ರಾಮನೊಡನೆ ಯುದ್ಧ ಮಾಡಿದ ಪ್ರಸಂಗ (ಎರಡೂ ಶ್ರೀಹರಿಯ ಅಭಿನ್ನರೂಪಗಳೇ) **ಮಲೆತ** = ದರ್ಪದಿಂದ ಕೊಬ್ಬಿದ್ದ. **ಮಾವನ** = ನಿನ್ನ ಸೋದರಮಾವನಾದ ಕಂಸಾಸುರನನ್ನು. **ತ್ರಿಪುರರನಳಿದು** = ತ್ರಿಪುರಾಸುರರನ್ನು ಸಂಹರಿಸಿ. **ಸುಲಭಮೂರುತಿ** = ಭಕ್ತ್ಯೈಕಲಭ್ಯನಾದ ಶ್ರೀಹರಿ. **ತಿರುವೇಂಗಳ** = ತಿರುಪತಿಯ ವೆಂಕಟೇಶ.



## ೪೫೮

(ವಾಸುದೇವವಿಠ್ಠಲಾಂಕಿತ)

**ರಾಗ-ಯಮುನಕಲ್ಯಾಣಿ** **ಆದಿತಾಳ**

ಬಾರೋ ಬಾರೋ ಬಾರೋ ಶ್ರೀಹರಿ
ತೋರೋ ಮುಖ ಬದರಿ ॥ ॥ಪ॥

ಧೀರನೆ ಗುಣಗಂಭೀರನೆ ಗೋರಸ
ಚೋರನೆ ಗೋಪೀಜಾರನೆ ಬೇಗನೆ
ವೀರಾಧಿವೀರನೆ ನಿನ್ನ ವಾರಿನೋಟ ನೋಡುವರೆ
ಗಾರುಮಾಡದಲೆ ಮನ ಸೇರಿ ಸುಖಪಡಿಸಲು ॥ ॥ಅ॥

ಭೃಂಗಗಳ್ಯಾತಕೆ ಕೂಡಿದವ್ರೋ ರಂಗ–ಅಂಗಕೆ ಶರಗಳ್ ಸೇರಿದವ್ರೋ
ರಂಗನೆ ಗರುಡತುರಂಗನೆ–ವಿಧೃತ ರಥಾಂಗನೆ–ಸಜ್ಜನ
ಸಂಗನೆ ಪಾಲಿಸೋ–ಮಂಗಳರೂಪನೆ ಬೆಳ-
ದಿಂಗಳೊಳಗೆ ನೀ ವೇಳ್ ಪೊಂಗೊಳಲೂದುತ ಅನಂಗ ಎನ್ನ ಬಾಧಿಸುವ ||
||೧||

ಕಾವರು ನಿನ್ ಹೊರತಿನ್ನಾರೋ–ರಂಗ-ಭಾವಜಪಿತ ಮಂದಿರ ಸೇರೋ
ದೇವನೆ–ಭಕ್ತರ ಕಾವನೆ–ವರಗಳನೀವನ ರಿ–
ಪುವನದಾವನೆ–ಬ್ಯಾಗನೆ ದೇವಾದಿದೇವನೆ–ಎನ್ನ ಕಾವನು ನೀನಲ್ಲದೆ ಇ–
ನ್ಯಾವನ್ನ-ಈ ಭೂಮಿಯೊಳಗಾವನ್ನ–ನಾ ಕಾಣೆನು || ||೨||

ಈ ಸಮಯದಿ ಪರಿಪಾಲಿಪರ್ಯಾರೋ–ರಂಗ ವಾಸುದೇವವಿಠ್ಠಲ ತೋರೋ
ಶ್ರೀಶನೆ–ಸುಂದರಹಾಸನೆ–ಮುನಿಮಾನವಾಸನೆ-
ಶತರವಿಭಾಸನೆ ಬ್ಯಾಗನೆ ಹಾಸುವ-ಂಚದೋಳ್ ಪೂಪಿಸ-
ಹಾಸಿಕೆಯೋಳ್ ಮಲಗಿ–ಬ್ಯಾಸರಗೊಳದೆ-ಪರಿಹಾಸವ ಮಾಡದೆ || ||೩||



ಅರ್ಥವಿವರಣೆ :—

ಬದರಿ = ಬದರೀವಾಸನಾದ ಶ್ರೀವೇದವ್ಯಾಸದೇವರು. **ಗೋರಸ ಚೋರನೆ** = ಬೆಣ್ಣೆಯನ್ನು ಕದ್ದವನೆ (ನವನೀತಚೋರ), **ಗೋಪೀ ಜಾರನೇ** = ಗೋಪಸ್ತ್ರೀಯರನ್ನು ಸಂತುಷ್ಟಗೊಳಿಸಿದವನೆ. **ವಾರಿನೋಟ ನೋಡುವರೆ** = ಕಡೆಗಣ್ಣಿನಿಂದ ಎನ್ನನ್ನು ನೋಡುತ್ತಾರೆಯೋ ? **ಗಾರ್ಕು ಮಾಡದಲೆ** = ಹಿಂಸೆ ಮಾಡದೆ, **ಅಂಗಕೆ ಶರಗಳ್** = ನನ್ನದೇಹ ಕೆ ಮನ್ಮಥನ ಪಂಚಬಾಣಗಳು ತಾಕಿದವೋ ರಂಗ ಕಾಮಾದಿಅರಿಷಡ್ವರ್ಗಗಳಿಗೆ ವಶನಾಗಿ ಬಾಧಿತನಾಗಿದ್ದೇನೆ. **ಗರುಡತುರಂಗನೆ** = ಗರುಡವಾಹನನೆ (ತುರಂಗ–ಕುದುರೆ-ವಾಹನ) **ವಿಧೃತ ರಥಾಂಗನೆ** = ಕೈಯಲ್ಲಿ ಧರಿಸಿದ ಚಕ್ರವನ್ನುಳ್ಳವನೇ (ಚಕ್ರಪಾಣಿ). **ಮಂಗಳ ರೂಪನೆ** = ಸನ್ಮಂಗಳ ಸ್ವರೂ

ಪನೆ. **ಪೊಂಗೊಳಲೂದುತ** = ಚಿನ್ನದ ಕೊಳಲನ್ನು (ರಮಾತ್ಮಕವಾದ) ಬಾರಿಸುತ್ತ. **ಅನಂಗ** = ಮನ್ಮಥ, **ಭಾವಜಪಿತ** = ಕಾಮನ ತಂದೆ. **ರಿಪುವನದಾವನೆ** = ಶತ್ರುಗಳಾದ ದೈತ್ಯರೆಂಬ ಅರಣ್ಯಕ್ಕೆ ಕಾಳ್ಗಿಚ್ಚು ಸದೃಶನೇ, **ದೇವಾದಿದೇವನೆ** = ದೇವೋತ್ತಮನಾದ ಸರ್ವೋತ್ತಮನೇ, **ಸುಂದರಹಾಸನೆ** = ಮನ್ಮನ ಸೆಳೆಯುವ ಮುಗುಳ್ನಗೆಯಿಂದ ಕೂಡಿದವನೇ, **ಮುನಿಮನವಾಸನೆ** = ತಾಪಸಿಗಳ ಹೃನ್ಮಂದಿರಸ್ಥಿತನೆ, **ಶತರವಿಭಾಸನೆ** = ಅನಂತಕೋಟಿ ಸೂರ್ಯ ಪ್ರಕಾಶವುಳ್ಳವನೇ (ಇಲ್ಲಿ "ಶತ"—ಎಂಬ ಪದಕ್ಕೆ ಅನಂತ ಎಂದರ್ಥ), **ಪೂವಿನ ಹಾಸಿಕೆಯೊಳ್** = ಸರ್ಪಶಯನನಾಗಿ,



## ೪೫೯

### (ಗುರುಶ್ರೀಶವಿಠ್ಠಲಾಂಕಿತ)

**ರಾಗ-ದೇವಗಾಂಧಾರಿ** **ಆದಿತಾಳ**

ಬಾರೋ ಶ್ರೀನರಹರಿಯೇ-
ಭವಬಂಧಮೋಚಕ-ಬಾರೋ ನರಹರಿಯೇ ॥ ॥ಪ॥

ನಂದ ಗೋಪನಕಂದ-ಹರಿ ಮುಕುಂದ
ಸುಂದರ-ಮಂದರೋದ್ಧರ-
ಸಿಂಧುಶಯನ-ಗೋವಿಂದ ಇಂದಿನ
ಮಂದಮತಿಗೆ ಸ್ವಾನಂದವೀಯಲು ॥ ॥ಅ॥

ಗಾಢಾಂಧಕಾರದೊಳೂ-ನಾ ಬಲು ಕಿಡಿ-
ಗೇಡಿ ಜೀವನನಾಗಲೂ ॥
ನೀಡದಂದಲಿಪ್ಪ ಲಿಂಗದಿ
ಆಡುತಾಡುವ ದೂಡಿ ಎನ್ನನು

ಬೇಡಗೊಳಲೀ ಕಾಡೊಳಟ್ಟಿದ
ನಾಡ ರಕ್ಷಿಪ ಗಾಡಿಕಾರನೆ॥ ॥೧॥

ಏಸು ಜನ್ಮಗಳೊಂದಿದವೋ-ಈ ವಿಧದಿಂ-
ದೇಸು ಜನ್ಮಗಳುಳಿದವೋ ॥
ದಾಸನಾನಿಹೆ ಕ್ಲೇಶದಿಂದಲಿ
ಘಾಸಿಯಾಗುವೆ ಮೋಸಮಾಡದೆ
ಶ್ರೀಶ ಈ ಭವಪಾಶದಿಂದಲಿ
ಪೋಷಿಸಯ್ಯ ವಾಸುದೇವನೆ ॥ ॥೨॥

ಪ್ರಾರಬ್ಧವದುದಾವದೋ-ನಿನಿಚ್ಛೆ ಇಲ್ಲದೆ
ಬೇರಿಹುದಲ್ಲಾವುದೋ ॥
ದಾರಿಗಾಣೆನೋ ದೂರನೋಡದೆ
ಪಾರುಮಾಡ್ವದನಂತ ಮಹಿಮನೆ
ಸೇರಿಸೆನ್ನ ರಮೇಶ ಪಾದಕೆ
ಮಾರಪಿತ ಗುರುಶ್ರೀಶವಿಠ್ಠಲಾ ॥ ॥೩॥

ಶ್ರೀ

**ಅರ್ಥವಿವರಣೆ :—**

ಈ ಕೀರ್ತನೆಯ ಕರ್ತೃಗಳು ಶ್ರೀಜಗನ್ನಾಥದಾಸಪರ್ಯರ ಪ್ರಶಿಷ್ಯರಾದ **ಗುರು ಶ್ರೀಶವಿಠ್ಠಲಾಂಕಿತ ಕುಂಟೋಜಿ ದಾಸರು.**

**ಭವಬಂಧಮೋಚಕ** = ಜೀವರಿಗೆ ಬಂಧಕನೂ ಅವನೇ. ಮೋಚಕನೂ ಅವನೇ. **ನಂದಗೋಪನ ಕಂದ** = ನಂದಗೋಪನ ಮಗ ಶ್ರೀಕೃಷ್ಣ. **ಹರಿ** = ಸಜ್ಜನರ ಸರ್ವಪಾಪಪರಿಹಾರಕ ಬಿಂಬರೂಪ. **ಮುಕುಂದ** = ಮುಕ್ತಿಪ್ರದ. **ಸುಂದರ** = ಸಕಲ ಶುಭ ಲಕ್ಷಣ ಸಂಪನ್ನ.

**ಮಂದರೋದ್ಧರ** = ಸಮುದ್ರಮಥನಸಮಯದಲ್ಲಿ ಮಂದರಪರ್ವತ ವನ್ನು ಕೂರ್ಮಾವತಾರಿಯಾಗಿ ತನ್ನ ಬೆನ್ನಿನ ಮೇಲೆ ಧರಿಸಿದವನು. **ಸಿಂಧು ಶಯನ** = ಕ್ಷೀರಸಮುದ್ರ ಶಯನ, **ಗೋವಿಂದ**= ವೇದಪ್ರತಿಪಾದ್ಯ. **ಇಂದಿನ ಮಂದಮತಿಗೆ** = ಈ ದುಸ್ಥಿತಿಯಲ್ಲಿರುವ ಅಜ್ಞಾನಿಯಾದ ನನಗೆ. **ಸ್ವಾನಂದವೀಯಲು** = ಸ್ವರೂಪಗತಆನಂದಾವಿರ್ಭಾವರೂಪವಾದ ನಿತ್ಯ ಸುಖಪ್ರದನಾಗಿ.

**ಗಾಢಾಂಧಕಾರದೊಳು** = ಅಸೃಜ್ಯರಾಶಿಯಲ್ಲಿ ಜೀವರು ಪ್ರಾಜ್ಞ ನಾಮಕ ಪರಮಾತ್ಮನ ಗಾಢಾಲಿಂಗನದಲ್ಲಿ ಸುಷುಪ್ತ್ಯವಸ್ಥೆಯಲ್ಲಿರುವಾಗ, **ಕಡಿಗೇಡಿ ಜೀವನ** = ಅಹಂಕಾರ ಮಮಕಾರಗಳಿಂದ ಗ್ರಸ್ತನಾಗಲು, **ನೀಡದಂದಲಿಪ್ಪ** = ಪಕ್ಷಿಯು ಗೂಡಿನಂತೆ ಇರುವ, **ಲಿಂಗದಿ** = ಲಿಂಗ ಶರೀರದಲ್ಲಿ. ಅನಾದಿನಿತ್ಯವಾದ ಜೀವನ ಸ್ವರೂಪದೇಹದ ಸುತ್ತಲೂ ಅನಾದಿ ಲಿಂಗಶರೀರವು ಸಾವಕಾಶವಾಗಿ ಇದೆ. **ಆಡುತಾಡುತ ದೂಡಿ ಎನ್ನನು** = ನಿನ್ನ ಇಚ್ಛೆ ಎಂಬ ಲೀಲೆಯಿಂದ. ಸ್ವರೂಪದೇಹಕ್ಕೆ ಲಿಂಗೋಪಚಯ ಮಾಡಿಸಿ. (ತ್ರಿಗುಣಾತ್ಮಕವಾದ ಲಿಂಗದೇಹವು ಪ್ರಾಕೃತವಾದದ್ದು. ಸಾವ ಕಾಶವಾಗಿರುವ ಆ ಲಿಂಗಶರೀರವನ್ನು ಸ್ವರೂಪಕ್ಕೆ ನಿರವಕಾಶವನ್ನಾಗಿ ಮಾಡಿ ಸಂಬಂಧಪಡಿಸುವ ಕ್ರಿಯೆಗೆ **ಲಿಂಗೋಪಚಯ ಅಥವಾ ಲಿಂಗೋಪದಾನ** ವೆಂದು ಹೆಸರು, ಇದು ಶ್ರೀಹರಿಯ ಇಚ್ಛೆಯಂತೆ ಆಗುವುದು, ಲಿಂಗ ದೇಹದ ಸಂಬಂಧದಿಂದ ಸುಷುಪ್ತ್ಯವಸ್ಥೆಯಲ್ಲಿದ್ದ ಜೀವನಿಗೆ ಜಾಗೃತಿ ಉಂಟಾಗಿ ನಾನು-ನನ್ನದು ಎಂಬ ಅಹಂಕಾರ ಮಮಕಾರ ಗ್ರಸ್ತನಾಗುವನು) **ಬೇಡಗೊಳಲೀಕಾಡೊಳಟ್ಟಿದ** = ನನಗೆ ಇಷ್ಟವಿಲ್ಲದ ಈ ಜನನ ಮರಣ ವೆಂಬ ಚಕ್ರದ ಸುಳಿಯಲ್ಲಿ, ಅಂದರೆ ಸಂಸಾರದಲ್ಲಿ ಸಿಲುಕಿಸಿದ, **ನಾಡ ರಕ್ಷಿಪ** =ಲೋಕಸಂರಕ್ಷಕನಾದ. **ಗಾಡಿಕಾರನೆ** = ಬಂಡಿಬೋವನಾದ ಪಾರ್ಥ ಸಾರಥಿಯೇ, **ಏಸುಜನ್ಮಗಳ್ಹೋದವೋ** =ನನಗೆ ಎಷ್ಟು ಜನ್ಮಗಳು ಕಳೆ ಯಿತೋ ? **ಏಸುಜನ್ಮಗಳುಳಿದವೋ** = ಇನ್ನು ಮುಂದೆ ಎಷ್ಟು ಜನ್ಮ ಗಳು ಉಳಿದಿವೆಯೋ ?, **ಭವಪಾಶದಿಂದಲಿ** = ಸಂಸಾರವೆಂಬ ಹಗ್ಗದಿಂದ, **ವಾಸುದೇವನೇ** =ಮೋಕ್ಷಪ್ರದನಾದ ವಾಸುದೇವರೂಪಿಯೇ, **ಪ್ರಾರಬ್ಧ**

ದಾವದೋ = ಪ್ರಾರಬ್ಧ ಕರ್ಮವೆಂಬುದು ಅದಾವುದೋ, ನಿನ್ನಿಚ್ಛೆ ಇಲ್ಲದೆ = ಪ್ರಾರಬ್ಧಕರ್ಮಭೋಗವೂ ಸಹ ಶ್ರೀಹರಿಯ ಸಂಕಲ್ಪದಂತೆಯೇ ನಡೆಯುವುದು. **ಸೇರಿಸೆನ್ನ ರಮೇಶ ಪಾದಕೆ** = ಹೇ ರಮಾಪತಿಯಾದ ಶ್ರೀಹರಿಯೇ, ನಿನ್ನ ಪಾದಾರವಿಂದಗಳಲ್ಲಿ ನನ್ನನ್ನು ಸೇರಿಸಿಕೋ. **ಮಾರ ಪಿತ** = ಕಾಮನ ತಂದೆ. ಇಂದೊಂದು ಭಕ್ತಿರಸದಿಂದ ತುಂಬಿ ತುಳುಕುವ ಕೀರ್ತನೆ.

## ೪೭೦

## (ಶ್ಯಾಮಸುಂದರವಿಠ್ಠಲಾಂಕಿತ)

**ರಾಗ-ಮೋಹನ** **ಆದಿತಾಳ**

ಹರಿಯೇ ಬಾರೊ ಪರಾತ್ಪರಾ ॥ ॥ಪ॥

ಘೋರಾರಣ್ಯ ಸೇರಿ ದಾರಿ ತೋರದೀಗ ಸಾರಿ ಕರೆವೆ ॥ ॥ಅ॥

ಮಂದರಾರು ಮಂದಿ ಎನ್ನ ಬಂಧಿಸುತಲಿ ಪಾಶದಿಂದ
ಮುಂದೆನ್ನ ಬಿಡದಲಿಹರು ನೊಂದು ಬಾಯಿ ಬಿಡುವೆ ॥ ॥೧॥

ಮುಂದೆ ಪಾವು ನಿಂದು ಕಾದು ನೋಡುತಿಹವು
ಬಂದು ನೀನು ಕಾಯದಿರಲು ತಂದೆಯೆನಗಿನ್ನಾರು ಗತಿಯೋ ॥ ॥೨॥

ನಂದಸುತ ಗೋವಿಂದ ಶ್ಯಾಮಸುಂದರ ನಿಮ್ಮ ನಾಮ
ಒಂದು ನಿಮಿಷ ಧ್ಯಾನಿಸದೆ ನಾ ಮಂದಭಾಗ್ಯನಾದೆನಯ್ಯಾ ॥ ॥೩॥



ಅರ್ಥವಿವರಣೆ —

**ತ್ವರಾ** = ಬೇಗ (ಶೀಘ್ರದಿ). **ಘೋರಾರಣ್ಯ** = ಸಂಸಾರವೆಂಬ ದುರ್ಗಮವಾದ ಕಾಡು. **ದಾರಿತೋರದೀಗ** = ನನಗೆ ಈಗ ಭವಾಟವಿ

ಯನ್ನು ದಾಟಲು ದಾರಿ ತೋರುತ್ತಿಲ್ಲ. **ಸಾರಿ ಕರವೆ**=ಪುನಃ ಪುನಃ ನಿನ್ನನ್ನು ಆಹ್ವಾನಿಸುತ್ತೇನೆ **ಮುಂಪರಾರು**=ಕಾಮಾದಿಅರಿಷಡ್ವರ್ಗಗಳೆಂಬ ಆರು ಮಂದಿ. **ಬಂಧಿಸುತಲಿ ಪಾಶದಿಂದ**=ಮೋಹಪಾಶದಿಂದ ಈ ಸಂಸಾರದಲ್ಲಿ ಬಂಧಿಸಿದ್ದಾರೆ. **ಮುಂದೆನ್ನ ಬಿಡದಲಿಹರು** = ನನ್ನ ಆತ್ಮಪ್ರಗತಿಗೆ ಪ್ರತಿಬಂಧಕರಾಗಿದ್ದಾರೆ. **ನೊಂದು** = ಸಂಸಾರದಲ್ಲಿ ಕ್ಲೇಶ ಪಟ್ಟು. **ಮುಂದೆ ಸಾವು**= ಮುಂದೆ (ಭವಿಷ್ಯದಲ್ಲಿ) ಸರ್ಪದಂತೆ ಆಗಾಮಿ ಕರ್ಮಗಳು ಕಾದು ನೋಡುತ್ತಿವೆ. **ಮಂದಭಾಗ್ಯ** = ಮಾನವ ಜನ್ಮ ಬಂದರೂ ಸಾರ್ಥಕವಾಗಲಿಲ್ಲ.

❁

## ೪೩೧

### (ಗುರುಜಗನ್ನಾಥವಿಠ್ಠಲಾಂಕಿತ)

**ರಾಗ-ಮೋಹನ** **ಆದಿತಾಳ**

ಬಾರಯ್ಯ ವೇಂಕಟ ಮನ್ಮನಕೆ
ತ್ವರಿತದಿ ನಿಜನಾರೀಸಹಿತದಿ ಈ ಸಮಯಕೆ ||ಪ||
ಶರಣೆಂಬೆನು ಪದಯುಗಕೆ ||

ಸಾರಿದ ನಿಜಶರಣನ ಈ ಭವಭವ
ಘೋರಭಯವ ಪರಿಹರಿಸುವುದಕ್ಕೆ || ||ಅ||

ವ್ಯಕ್ತಾವ್ಯಕ್ತ ತ್ರಿಜಗದ್ವ್ಯಾಪ್ತಾ
ದೋಷ ನಿರ್ಲಿಪ್ತಾ |
ಮುಕ್ತಾಮುಕ್ತ ಜೀವರಗಣದಾಪ್ತಾ
ನೀ ಸರ್ವತ್ರದಿ ವ್ಯಾಪ್ತ ||
ಭಕ್ತನ ಹೃದಯದಿ ವ್ಯಕ್ತನಾಗಿ ನಿಜ
ಮುಕ್ತಿ ಪಥವ ತೋರೊ ಭಕ್ತಿಯನಿತ್ತು || ||೧||

ಆನಂದ ನಿಲಯಾ ನಿರ್ಮಲಕಾಯಾ
ಕವಿಜನಗೇಯಾ ।
ಆನಂದದಾಯಕ ನಿರ್ಜಿತಮಾಯಾ
ಕಾಯುಯ್ಯ ಜೀಯಾ ॥
ಆನತಜನಸನ್ಮಾನದ ಮನ್ಮನ
ವನಜದಿ ನೀ ಸನ್ನಿಹಿತಾಗುವುದಕೆ ॥ ॥೨॥

ಸೋಮಾಸುರನಾಮಕ ದೈತ್ಯನ ಕೊಂದೂ
ವೇದವ ತಂದೂ ।
ಕೂರ್ಮ ಕಿಟಿ ನರಹರಿರೂಪದಿ ನಿಂದೂ
ವಾಮನನೆಂದೂ ॥
ರಾಮ ಭಾರ್ಗವ ಯದುಕುಲಸಾಗರ
ಸೋಮ ಬೌದ್ಧ ಕಲ್ಕಿ ಪ್ರೇಮದಿ ಮನಕೆ ॥ ॥೩॥

ನಿಗಮಗೋಚರ ನಿತ್ಯಾನಂದಾ
ಸುಗಮ ನಿನ್ನಿಂದಾ ।
ಬಗೆಬಗೆ ಜನ್ಮವನೈದಿದೆ ಮುಕುಂದಾ
ಮುಗಿವೆನೊ ಕರದಿಂದಾ ॥
ಅಗಣಿತ ಗುಣನಿಧಿ ಸುಗಮದಿ ಭವದ
ಬಗೆಯನು ತಿಳಿಸೋ ನಗೆಮೊಗದಿ ಬಾ ॥ ॥೪॥

ಸಾಸಿರನಾಮ ನತಜನಪ್ರೇಮಾ
ಪೊರೆಯೋ ಶ್ರೀರಾಮಾ ।
ಆಶೇ ಪೂರ್ತಿಸಿ ಮಾಡೆನ್ನಲಿ ಪ್ರೇಮಾ
ಸುರಸಾರ್ವಭೌಮಾ ॥
ವಾಸಮಾಡಿ ಅಭಿಲಾಷೆಯ ಪೂರ್ತಿಸೋ
ವಾಸುದೇವ ವಾರಾಸಿಜರಮಣಾ ॥ ॥೫॥

ವಿಧಿ ಶಂಭುವಂದಿತ ಪದಯುಗಕಮಲಾ
ನಿತ್ಯನಿರ್ಮಲಾ ।
ಆಧಿಭೂತಾಧ್ಯಾತ್ಮಿಕ ತಾಪದ ಶಮಲಾ
ನೀ ಮಾಡೆನ್ನನು ವಿಮಲಾ ॥
ಸದಯ ಸುಧಾಕರ ಹೃದಯದಿ ತವ ಪದ-
ಪದುಮ ಭಜಿಪೆ ನೀ ಮುದದಲಿ ಮನಕೆ ॥ ॥೬॥

ಶರಣಾಗತಜನ ಪರಿಪಾಲಾ
ಕರುಣಾಲವಾಲಾ ।
ಕರುಣಿಸೆನ್ನನು ಹೇ ಸಿರಿಲೋಲಾ
ನಮಿತ ಜನ ಸುರಸಾಲ ॥
ಸಿರಿ ಅಜ ಭವ ಸುರನಿಕರಾರ್ಚಿತಪದ
ಸರಸಿಜಯುತ ನೀ ಸುರವರ ದೇವಾ ॥ ॥೭॥

ಪನ್ನಗಗಿರಿ ನಿಜಕೃತವಾಸಾ
ಪೊರೆ ಎನ್ನನು ಶ್ರೀಶಾ ।
ಬಿನ್ನಪ ಮಾಳ್ಪೆನು ಹೇ ಶ್ರೀನಿವಾಸಾ
ಕೊಡು ಎನಗೆ ಲೇಸಾ ॥
ಎನ್ನ ಸಲಹೋದಕೆ ಅನ್ಯರ ಕಾಣೆನೊ
ಮನ್ನಿಸು ನೀನಾಪನ್ನಜನಸುಖದ ॥೮॥

ಲಕ್ಷ್ಮೀನಾಯಕ ವರಪಕ್ಷಿಗಮನಾ
ಅಕ್ಷಯಫಲವನ್ನ ।
ರಕ್ಷಿಸಿ ಕಾಯ್ವುದೋ ನೀ ಎನ್ನಾ
ಲಕ್ಷಣವಣ್ಣಾ ॥
ಅಕ್ಷರಾಕ್ಷರ ವಿಲಕ್ಷಣ ಕರುಣಕ-
ಟಾಕ್ಷದಿ ಎನ್ನ ವೀಕ್ಷಿಸು ಕ್ಷಣ ಕ್ಷಣ ॥ ॥೯॥

ಧರ್ಮಾರ್ಥಮೋಕ್ಷವ ನಾನೊಲ್ಲೆ
ಕರ್ಮದ ಸುಳಿಯೊಲ್ಲೆ ।
ಮರ್ಮವ ತಿಳಿಯದೆ ಬೀಳುವೆ ನಾನಿಲ್ಲೆ
    ಕರ್ಮಜವದ ಮಹಮರ್ಮವ ತಿಳಿಸಿ
    ದುರ್ಮನ ಬಿಡಿಸೆಲೊ ಬೊಮ್ಮನ ತಾತ ॥ ॥೧೦॥

ದಿಟ್ಟ ಗುರುಜಗನ್ನಾಥ
ವಿಠ್ಠಲನೆ ನಾನನಾಥಾ ।
ಧಿಟ್ಟನೆ ನೀ ಎನ್ನನು ಕಾಯೊ ಶ್ರೀನಾಥಾ
ಇಷ್ಟೇ ಎನಮನದರ್ಥ ॥
    ಸೃಷ್ಟಿಯೊಳಗೆ ಜನ ಭ್ರಷ್ಟರ ಸ್ತುತಿಸಿ ನಿ-
    ಕೃಷ್ಟನಾದೆನೋ ಶ್ರೀಪ್ರಮಾರುತೀ ॥ ॥೧೧॥



**ಅರ್ಥವಿವರಣೆ**

**ನಿಜನಾರೀಸಹಿತದಿ** = ನಿನ್ನ ಪತ್ನಿಯಾದ ಶ್ರೀಲಕ್ಷ್ಮಿಯೊಡಗೂಡಿ. **ಈ ಸಮಯಕೆ** = ನಾನು ಧ್ಯಾನಿಸುವ ಕಾಲದಲ್ಲಿ, **ಸಾರಿದ** = ನಿನ್ನನ್ನು ಮೊರೆಹೊಕ್ಕ. **ಭವಭವಘೋರಭಯ** = ಸಂಸಾರದಿಂದ ಉತ್ಪತ್ತಿಯಾದ ಭಯಂಕರವಾದ ಕ್ಲೇಶಾದಿಗಳನ್ನು. **ವ್ಯಕ್ತಾವ್ಯಕ್ತ** = ಜ್ಞಾನಿಗಳಿಗೆ ಗೋಚರನು. ಪಾಮರರಿಗೆ ಅವ್ಯಕ್ತನು. **ತ್ರಿಜಗದ್ವ್ಯಾಪ್ತಾ** = ಬ್ರಹ್ಮಾಂಡಗತ ತ್ರಿಲೋಕಗಳಲ್ಲಿ ಸರ್ವತ್ರ ವ್ಯಾಪ್ತನಾದವನು. **ದೋಷನಿರ್ಲಿಪ್ತಾ** = ದೋಷ ಸ್ಪರ್ಶವಿಲ್ಲದವನು. **ಗಣದಾಪ್ತಾ** = ಮುಕ್ತಜೀವರು ಆ ಮುಕ್ತಜೀವ ಗಳ ಸಮೂಹಕ್ಕೆ ಪರಮಾಪ್ತಬಂಧುವು (ಸರ್ವರಬಿಂಬ) **ಆನಂದನಿಲಯಾ** = ಆನಂದಗಿರಿವಾಸಾ (ಮುಕ್ತಧಾಮನಿವಾಸ) **ನಿರ್ಮಲಕಾಯಾ** = ಪರಿಶುದ್ಧವಾದ ಜ್ಞಾನಾನಂದಾತ್ಮಕ ಶರೀರವುಳ್ಳವನು. **ಕವಿಜನಗೇಯಾ**= ಜ್ಞಾನಿಗಳಿಂದ ಗೇಗೀಯಮಾನನು, **ನಿರ್ಜಿತಮಾಯಾ** = ಮಾಯಾಬಂಧ ರಹಿತನು (ಈಶನ ಇಚ್ಛೆಯೇ ಮಾಯೆಯು, ಅದರಿಂದ ಸರ್ವಜೀವರೂ

ಒದ್ದರು) **ಅನತಜನಸನ್ಮಾನದ** = ಶರಣಾಗತಜನರಿಗೆ. ಸನ್ಮಾನಪ್ರದನು. **ಮನ್ಮನ ವನಜದಿ** = ನನ್ನ ಮನಸ್ಸೆಂಬ ಕಮಲಮಂದಿರಕ್ಕೆ. **ಸೋಮಾಸುರ ನಾಮಕ** = ಸೋಮಕನೆಂಬ ಹೆಸರಿನ ದೈತ್ಯನು ಬ್ರಹ್ಮನಿಂದ ವೇದಗಳನ್ನು ಅಪಹರಿಸಿ ಸಮುದ್ರಗರ್ಭ ಸೇರಿದನು. **ಕಿಟಿ** = ಭೂವರಾಹರೂಪ. **ರಾಮ** = ಇಲ್ಲಿ "ರಾಮ" ಪದವು ಉಭಯಾರ್ಥಸಂಬಂಧೀ (೧) ಪರಶುರಾಮ (**ಭಾರ್ಗವ**) (೨) ದಶರಥರಾಮ **ಯದುಕುಲಸಾಗರಸೋಮ** = ಯಾದವವಂಶವೆಂಬ ಸಮುದ್ರಕ್ಕೆ ಚಂದ್ರಸದೃಶನಾದ ಶ್ರೀಕೃಷ್ಣ. **ನಿಗಮ ಗೋಚರಾ** = ವೇದಪ್ರತಿಪಾದ್ಯ. **ನಿತ್ಯಾನಂದಾ** = ಸದಾ ಆನಂದ ಸ್ವರೂಪನು. **ಸುಗಮ** = ಸತ್ಪಥವಾದ ಮುಕ್ತಿಮಾರ್ಗ ನಿನ್ನ ಪರಮಾನು ಗ್ರಹದಿಂದಲೇ ಪ್ರಾಪ್ತಿ. **ಅಗಣಿತ ಗುಣನಿಧಿ** = ಅಪಾರವಾದ ಅನಂತ ಕಲ್ಯಾಣಗುಣಗಣ ಪರಿಪೂರ್ಣನು. **ಭವದ ಬಗೆಯುನು** = ಸಂಸಾರದಿಂದ ಪಾರಾಗುವ ಹಾದಿಯುನ್ನು. **ವಿಧಿ ಶಂಭುವಂದಿತ ಪದಯುಗಕಮಲಾ** = ಬ್ರಹ್ಮ ರುದ್ರೇಂದ್ರಾದಿಗಳಿಂದ ವಂದಿತನಾದ ಪಾದಕಮಲದ್ವಯುವುಳ್ಳವನೇ. **ನಿತ್ಯನಿರ್ಮಲಾ** = ಸದಾ ಪರಮಮಂಗಳಸ್ವರೂಪನೇ. **ಸುಧಾಕರ** = ಚಂದ್ರ. ತಾಪತ್ರಯಗಳನ್ನು ದೂರಗೈಸುವ ಚಂದ್ರನಂತಿರುವವನು. (ಮನಸ್ಸಿನ ತಾಪಪರಿಹಾರಕನು ಚಂದ್ರನು. **ವಾರಾಸಿಜ ರಮಣಾ** = ಕ್ಷೀರಸಮುದ್ರ ತನುಜೆಯಾದ ಲಕ್ಷ್ಮೀಪತಿಯು. (ವಾರಾಸಿ-ಸಮುದ್ರ) **ಸಿರಿ ಅಜ ಭವ ಸುರನಿಕರಾರ್ಚಿತಪದ ಸರಸಿಜಯುಗ** = ಶ್ರೀ ಲಕ್ಷ್ಮೀ, ಬ್ರಹ್ಮ ರುದ್ರಾದಿ ಸಕಲದೇವತಾಗಣದಿಂದ ಪೂಜಿತವಾದ | ಪಾದಾರವಿಂದಗಳುಳ್ಳ ವನು. **ಸುರವರದೇವಾ** = ದೇವತಾಶ್ರೇಷ್ಠನಾದ ಸರ್ವೋತ್ತಮನಾದ ಶ್ರೀಹರಿ. **ಪನ್ನಗಗಿರಿ ನಿಜಕೃತವಾಸಾ** = ಶೇಷಾಚಲದಲ್ಲಿ ನಿವಾಸಿಯಾದ ಶ್ರೀಶ್ರೀನಿವಾಸ. **ನಿನ್ನಾಪನ್ನ ಜನಸುಖದಾ** = ನಿನ್ನ ಮೊರೆಹೊಕ್ಕ ಶರ ಣಾಗತ ಜನರಿಗೆ ಸುಖಪ್ರದನು. **ವರಪಕ್ಷಿಗಮನಾ** = ಪಕ್ಷಿಶ್ರೇಷ್ಠರಾದ ಗರುಡದೇವರನ್ನು ವಾಹನವನ್ನಾಗಿ ಉಳ್ಳವನು. **ಲಕ್ಷ್ಮಣನಣ್ಣ** = ಲಕ್ಷ್ಮ ಣನ ಅಣ್ಣನಾದ ಶ್ರೀರಾಮಚಂದ್ರ. **ಅಕ್ಷರಾಕ್ಷರವಿಲಕ್ಷಣ** = ಅಕ್ಷರನಾಮಕ

ಳಾದ ಶ್ರೀಲಕ್ಷ್ಮೀ, ಕ್ಷರನಾಮಕರಾದ ಬ್ರಹ್ಮಾದಿಸಕಲಜೀವ ವರ್ಗದಿಂದ ಅತ್ಯಂತ ಭಿನ್ನನು. **ಮರ್ಮವ ತಿಳಿಯದೇ** = ಜ್ಞಾನಪ್ರಾಪ್ತಿಗೆ ಕಾರಣ ವಾದ ಕರ್ಮದ ರಹಸ್ಯವನ್ನು ನಾನು ತಿಳಿಯದೇ, **ಬೀಳುವೆ ನಾನಿಲ್ಲೀ** = ಅದೇ ಕರ್ಮಕೂಪದಲ್ಲಿಯೇ ಬೀಳುತ್ತಿದ್ದೇನೆ. **ಕರ್ಮಭವದ** = ಕರ್ಮ ಜನ್ಯವಾದ ಸಂಸಾರವನ್ನು ದಾಟುವ ರಹಸ್ಯವನ್ನು ನೀನು ತಿಳಿಸಿ, **ದುರ್ಮನ**=ದುಷ್ಟಬುದ್ಧಿಯನ್ನು, **ಬೊಮ್ಮನ ತಾತಾ** =ಬ್ರಹ್ಮನ ಜನಕ. **ನಿಕೃಷ್ಟನಾದೆನೋ** = ಕೀಳಾದೆನೋ.

## ೪೭೨

### (ವರದೇಶವಿಠ್ಠಲಾಂಕಿತ)

ರಾಗ-ಬಿಲಹರಿ ತ್ರಿಪುಟತಾಳ

ಬಾರೋ ನೂತನ ಗೃಹಕೆ ಹರಿಯೇ-ಸಿರಿ
ಮಾರುತಮುಖ ಸುರರೊಡಗೂಡಿ-ಧೊರೆಯೇ ॥ ॥ಪ॥

ಯಾರು ಕೇಳದಲಿಹ ಸ್ಥಳವ-ನೀನೆ
ಪ್ರೇರಿಸಿ ಗೃಹವ ನಿರ್ಮಿಸಿದೆಯೋ-ದೇವ
ನೂರಾರು ಪರಿ ರೂಪಾಂತರವ-ಪೊಂದಿ
ಈ ರೀತಿ ಸುಂಸ್ಕೃತವಾದ ಗೃಹವ ॥ ॥೧॥

ಈರಪ್ಪ ಬಡಿಗನೆಂಬುವನು-ಮನಿಯ
ಚಾರುತನದಲಿಂದ ನಿರ್ಮಿಸಿರುವನು
ತೋರುವ ಸಿಂಹಾಸನವನು-ಮಧ್ಯಾ
ದಾರದಿ ನಿನಗಾಗಿ ವಿರಚಿಸಿಹನು ॥ ॥೨॥

ಸುತ್ತಲು ನಿರ್ಭಯವಿಹುದು ಒಂ
ಭತ್ತು ದ್ವಾರಗಳಿಂದ ಶೋಭಿಸುತಿಹುದು

ಹತ್ತಿರ ಗುರುಗೃಹವಿಹುದು-ಮುಂದೆ
ಚಿತ್ತಜನಯ್ಯನ ಮಂದಿರವಿಹುದು ॥ ॥೩॥

ಉತ್ತಮಗೃಹವೆನಿಸುವುದು-ಇ
ಪ್ಪತ್ತುನಾಲಕು ವಸ್ತುಗಳು ಕೂಡಿಹುದು
ಸುತ್ತೇಳು ಪ್ರಾಕಾರವಿಹುದು-ಸುತ್ತು
ಮುತ್ತಲು ದ್ವಿಜಜನ ಹೊಂದಿಕೊಂಡಿಹುದು ॥ ॥೪॥

ಗೃಹವು ನಾಲ್ಕುವಿಧವಿಹುದು-ಸೂಕ್ಷ್ಮ
ಗೃಹ ನಿನಗಾಗಿಯೇ ನೇಮಿಸಿ-ಇಹುದು
ಬಹಿರದಿ ಪಾಕಗೃಹವಿಹುದು-ಅಲ್ಲಿ
ಗೃಹಿಣಿಯಿಂ ತ್ರಿವಿಧಾನ್ನ ಪಕ್ವಗೈತಿಹುದು ॥ ॥೫॥

ನಡುಮನೆ ದೊಡ್ಡದಾಗಿಹುದು-ಅಲ್ಲಿ
ಸಡಗರದಲಿ ಬ್ರಹ್ಮವೃಂದ ಕೂಡುವುದು
ಬಿಡದೆ ಸತ್ಕಥೆ ನಡೆಯುವುದು-ಮುಂದೆ
ಪಡಸಾಲೆಯಲಿ ಸರ್ವಜನ ಸಭೆಯಹುದು ॥ ॥೬॥

ಶ್ವಸನ ಮಾರ್ಗವಲಂಬಿಸಿರುವೆ-ಮುನಿಯೆ
ಹಸನ ಮೋಹದೀ ನಾದಿಯಿಂ ಮಾಡಿಸಿರುವೆ
ಹೊಸಸುಣ್ಣವನ್ನು ಹಚ್ಚಿಸಿರುವೆ-ಏಕಾ
ದಶ ಸೇವಕರ ನಿನ್ನ ವಶದೊಳಿರಿಸುವೆ ॥ ॥೭॥

ನಾನಾ ಧನ ನಿನಗರ್ಪಿಸುವೆನು-ತನು
ಮಾನಿನಿ ಸಹ ನಿನ್ನಾಧೀನ ಮಾಡುವೆನು
ಜ್ಞಾನ ಭಕ್ತಿಯ ಇಚ್ಛಿಸುವೆನು-ನಿನ್ನ
ಧ್ಯಾನಾನಂದದಿ ಧನ್ಯನೆಂದೆನಿಸುವುದು ॥ ॥೮॥

ಹರಿಯು ಲಾಲಿಸು ಎನ್ನ ಸೊಲ್ಲಾ—ಮುಂದೀ
ಪರಿಗ್ರಹ ದೊರೆವುದು ಸುಲಭವೇನಲ್ಲಾ
ಖರೆ ನಿನ್ನ ಬಿಡೆನೋ ಶ್ರೀನಲ್ಲಾ—ಎನ್ನ
ಮೊರೆಯುನಾಲಿಸಿ ನೋಡೋ ವರದೇಶವಿಠ್ಠಲಾ ॥ ॥೯॥



**ಅರ್ಥವಿವರಣೆ :—**

**ವರದೇಶವಿಠ್ಠಲಾಂಕಿತರಾದ** ಶ್ರೀಸ್ವಾಮಿರಾಯರ ಕೃತಿ ಇದು. ದಾಸರಾಯರ ಸ್ಥಳ, ರಾಯಚೂರುಜಿಲ್ಲೆಯ ಲಿಂಗಸುಗೂರು. ಶ್ರೀಗೋಪಾಲ ದಾಸವರ್ಯರ ಶಿಷ್ಯಸಂತತಿಗೆ ಸೇರಿದ **ಕೋಸಿಗಿ ಶ್ರೀ ಗುರುಜಗನ್ನಾಥ ದಾಸರು** ಇವರು ಅಂಕಿತೋಪದೇಶಗುರುಗಳು. ಲಿಂಗಸುಗೂರಿನಲ್ಲಿ ಶ್ರೀವರದೇಂದ್ರತೀರ್ಥರ ವೃಂದಾವನದ ಹಿಂಭಾಗದಲ್ಲಿರುವ ಮನೆಯೇ ದಾಸರಾಯರ ಸ್ವಗೃಹವು. ತಮ್ಮ ನೂತನಗೃಹವನ್ನು ಕಟ್ಟಿಸಿ, ಗೃಹ ಪ್ರವೇಶದ ಸಮಯದಲ್ಲಿ ರಚಿಸಿದ ಕೀರ್ತನೆ ಇದು. ಕೀರ್ತನೆಯಲ್ಲಿ ವಿವರಿರುವಂತೆ ವಿಧ್ಯುಕ್ತವಾಗಿ ಸ್ವಗೃಹವನ್ನು ನಿರ್ಮಿಸಿದರು.

**ನೂತನ ಗೃಹಕೆ** = ಹೊಸದಾಗಿ ಕಟ್ಟಿಸಿದ ಈ ಗೃಹಕ್ಕೆ, ಉತ್ತಮ ವೈಷ್ಣವಜನ್ಮದಲ್ಲಿ ಜನ್ಮತಾಳಿದ ದಾಸರಾಯರು ಪಿಂಡಾಂಡರೂಪವಾದ ತಮ್ಮ ಶರೀರವೆಂಬ ದೇವಮಂದಿರಕ್ಕೆ ಶ್ರೀ ಪರಮಾತ್ಮನನ್ನು ಆಹ್ವಾನಿಸಿದ್ದಾರೆ. **ಸಿರಿ ಮಾರುತಮುಖ** = ಶ್ರೀಲಕ್ಷ್ಮೀದೇವಿ, ವಾಯುದೇವರಾದಿಯಾಗಿ ದೇವತಾವರ್ಗಸಹಿತ ಆಗಮಿಸು. ಅವ್ಯಕ್ತತತ್ವಾಭಿಮಾನಿ ಶ್ರೀ ಲಕ್ಷ್ಮೀದೇವಿ, ಸಕಲತತ್ವಾಭಿಮಾನಿ ದೇವತೆಗಳಿಗೆ ನಿಯಾಮಕರಾದ ಶ್ರೀ ವಾಯುದೇವರು, ಈ ಶರೀರದಲ್ಲಿದ್ದು ದೇಹ ವ್ಯಾಪಾರಗಳನ್ನು ಮಾಡಿ ಮಾಡಿಸುತ್ತಿರುವರು. **ಸುಸಂಸ್ಕೃತವಾದ** = ಸಂಸ್ಕಾರ ಹೊಂದಿದ ಈ **ಶರೀರವು** ಶ್ರೀಹರಿಯ ಮಂದಿರವೆಂಬ ಅನುಸಂಧಾನ. **ಈರಪ್ಪ ಬಡಿಗ**=

**ನೆಂಬುವನು** = ದಾಸರಮನೆಯನ್ನು ಕಟ್ಟಿದ ಬಡಿಗೆಯುವನು ಈರಪ್ಪನೆಂಬುವನು. ಈರಪ್ಪನೆಂದರೆ, ಸಮೀರ ನಾಮಕರಾದ ವಾಯುದೇವರು. ತತ್ತ್ವೇಶರಿಗೆ ಅಧಿಪತಿಗಳು. **ಸಿಂಹಾಸನವನು** = ಹೃತ್ಕಮಲವೆಂಬುದೇ ಬಿಂಬನ ಪೀಠಸ್ಥಳವು. **ಮಧ್ಯಾಗಾರದಿ** = ದಾಸರಮನೆಯ ಮಧ್ಯದ ಅಂಕಣದಲ್ಲಿ ಶರೀರದ ಹೃದಯಸ್ಥಾನ. **ಒಂಬತ್ತು ದ್ವಾರಗಳಿಂದ** = ದಾಸರ ಮನೆಯು ೯ ಬಾಗಿಲುಗಳಿಂದ ಕೂಡಿದೆ. ಇವು ಶರೀರಗತ ನವದ್ವಾರಗಳ ಸಾಂಕೇತ. **ಹತ್ತಿರ ಗುರುಗೃಹವಿಹುದು** = ಮನೆಯ ಸಮೀಪದಲ್ಲಿಯೇ ಗುರುವರ್ಯರಾದ ಶ್ರೀವರದೇಂದ್ರತೀರ್ಥರ ವೃಂದಾವನವಿದೆ. **ಚಿತ್ರಜನಯ್ಯನ ಮಂದಿರ** = ದಾಸರಾಯ ಗೃಹದ ಮುಂಭಾದ ಮೂಲೆಯಲ್ಲಿ ಮನ್ಮಥಜನಕನಾದ ಶ್ರೀ ವೇಂಕಟೇಶ್ವರ ದೇವಾಲಯವಿದೆ. **ಇಪ್ಪತ್ತು ನಾಲಕು ವಸ್ತುಗಳ** = ಚತುರ್ವಿಂಶತಿ ತತ್ತ್ವಗಳಿಂದ ನಿರ್ಮಿತವಾಗಿದೆ ನಮ್ಮೀಶರೀರ. **ಸುತ್ತೇಳು ಪ್ರಾಕಾರವಿಹುದು** = ಸಪ್ತಧಾತುಗಳೆಂಬ ಆವರಣಗಳು. **ಸುತ್ತಮುತ್ತಲ ದ್ವಿಜಜನ** = ದಾಸರಾಯರ ಗೃಹದ ಸುತ್ತಲೂ ವಿಪ್ರರ ಅಗ್ರಹಾರವಿದೆ. **ಗೃಹವು ನಾಲ್ಕುವಿಧವಹುದುವಿಧ** = ದಾಸರ ಮನೆಯು ೪ ಅಂಕಣವುಳ್ಳದ್ದು. ಇದು ಸ್ವರೂಪ-ಲಿಂಗ-ಅನಿರುದ್ಧ-ಸ್ಥೂಲ ಎಂಬ ತನುಚತುಷ್ಟಯಗಳ ಸಾಂಕೇತ. **ಸೂಕ್ಷ್ಮಗೃಹ** = ಮಧ್ಯದ ಮನೆ ದೇವಪೂಜಾಮಂದಿರ. ಅದು ಸೂಕ್ಷ್ಮ ಶರೀರ ಸಾಂಕೇತವಾದ ಸ್ವರೂಪ ಶರೀರ, ಬಿಂಬನ ಮಂದಿರ. **ಬಹಿರದಿ ಪಾಕಗೃಹ ವಿಹುದು** = ಮುಂದಿನ ಆವರಣದಲ್ಲಿ ಅಡಿಗೆಮನೆ ಇದೆ. ಕರ್ಮಬೀಜಗಳ ನೆಲೆಯಾದ ಲಿಂಗಶರೀರ ಸಾಂಕೇತವಿದು. **ಗೃಹಿಣಿಯಿಂ ತ್ರಿವಿಧಾನ್ನ** = ಗೃಹಿಣಿಯೇ ಲಿಂಗಶರೀರದ ಅಭಿಮಾನಿಯಾದ ಶ್ರೀರಮಾ, ತ್ರಿವಿಧಾನ್ನವು ಗುಣತ್ರಯಗಳು. ಅವುಗಳ ಜನ್ಮಕರ್ಮ ಫಲಾನುಭವವೇ ಪಕ್ವಮಾಡಿದ ಅನ್ನ (ಭೋಜ್ಯವಸ್ತುಗಳು). **ನಡುಮನೆ** = ಅಲ್ಲಿಂದ ಮುಂದೆ ನಡುಮನೆಯೇ ಅನಿರುದ್ಧದೇಹದ ಸಾಂಕೇತವು. **ಪಡಶಾಲೆಯುಲಿ** = ಅದರ ಮುಂದಿನದೇ ಪಡಸಾಲೆಯು. ದೇವದಾನವರು (ತತ್ತ್ವದೇವತೆಗಳು ತತ್ತ್ವದೈತ್ಯರು) ಪೈಪೋಟಿಯಿಂದ ವ್ಯಾಪಾರ ಮಾಡುವ ವಿಶಾಲವಾದ ಕ್ರಿಯಾಕ್ಷೇತ್ರ. ಇದೇ ಸ್ಥೂಲಶರೀರ ಸಾಂಕೇತ. **ಶ್ವಸನಮಾರ್ಗವ** = ಶ್ರೀವಾಯುದೇವರ ಮತಾವಲಂಬಿಯಾಗಿದ್ದೇನೆ.

ಹರಿಮತಾನುಯರಾಯಿ. ಹೊಸಸುಣ್ಣ = ಶರೀರಕ್ಕೆ ಅಲಂಕಾರವಾಗಿ ದ್ವಾದಶನಾಮಗಳು ಪಂಚ ಮುದ್ರೆಗಳ ಲಾಂಛನ. ಏಕಾದಶ ಸೇವಕರ= ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು ಮತ್ತ ಮನಸ್ಸು.



೪೭೩

(ಅಂಕಿತ-ನಾಮಗಿರಿ ನಾರಸಿಂಹ)

**ರಾಗ-ಕಮಾಚ್** **ಆದಿತಾಳ**

**ಬಾರೋ** ಕ್ಷೀರೋದಧಿಶಯನ ಹರೇ ನಿನ್ನ
**ಕರು**ಣವ ಎನ್ನೊಳು ತೋರೋ || ||ಪ||

ನಂದನಂದನ ಹೃನ್ಮಂದಿರಕೆ
ಈ ಬೇಗ ಬಾರೋ || ||ಅ||

**ಶೌರೇ** ನಿಂಗೆ ಸೇರಿದವನಾಗಿ-ಇನ್ನ್ಯಾ
**ರಿಗೆ ಬೇಡಲೋ**-ಮುರಾರೇ-ಕರುಣಿಸಿ ಬಾರೋ || ||೧||

ಕೃಷ್ಣಾಮೂರ್ತೇ ಸೃಷ್ಟಿ ಪಾಲನಾಗಿ-ಪರ
ಮೇಷ್ಠಿ ಜನಕ ನಿಂಗಿಷ್ಟು ಉಪೇಕ್ಷೆಯಾಕೋ || ||೨||

ಇಂದಿರೇಶ ಚಂದಿರವದನ-ಮುಚು-
ಕುಂದವರದ ಗೋವಿಂದ ಕರುಣಿಸಿ ಬಾರೋ || ||೩||

ಮಂಗಳಾಂಗ ಅಂಗಜ ಜನಕ-ಯದು
ಪುಂಗವ ಕೈಬಿಡದ್ದಾಂಗೆ ಪಾಲಿಸು || ||೪||

ನಾಮಗಿರಿ ಸ್ವಾಮಿ ನಾರಸಿಂಹ-ಬಲ
ರಾಮಸೋದರ ಪ್ರಣಾಮ ಮಾಡುವೆ-ಬಾರೋ ‖ ‖೫‖



**ಅರ್ಥವಿವರಣೆ—**

**ಕ್ಷೀರೋದಧಿಶಯನ**= ಕ್ಷೀರಸಮುದ್ರದಲ್ಲಿ ಶೇಷನಮೇಲೆ ಮಲಗಿರುವವನು (ಕ್ಷೀರ + ಉದಧಿ = ಕ್ಷೀರಸಾಗರ). **ನಂದನಂದನ** = ನಂದ ಗೋಪನ ಸಾಕುಪುತ್ರ ಶ್ರೀಕೃಷ್ಣ. **ಹೃನ್ಮಂದಿರಕೆ**= ಹೃತ್ಕಮಲವೆಂಬ ಮನೆಗೆ, **ಶೌರೇ** = ಯದುವಂಶ ಸಂಜಾತನಾದ ಶ್ರೀಕೃಷ್ಣ (ಶೂರಸೇನನ ವಂಶದಲ್ಲಿ ಅವತರಿಸಿದ). **ಮುರಾರೇ** = ಮುರಾ ಎಂಬ ಅಸುರನನ್ನು ಸಂಹರಿಸಿದ ಶ್ರೀಕೃಷ್ಣ. **ಸೃಷ್ಟಿಪಾಲನಾಗಿ**= ಜಗತ್ತಿನ ಸೃಷ್ಟಿಕರ್ತನಾಗಿ, ಜಗದ್ರಕ್ಷಕನಾಗಿ, **ಪರಮೇಷ್ಠಿಜನಕ** = ಜೇಷ್ಠ ಪುತ್ರನಾದ ಬ್ರಹ್ಮದೇವರ ತಂದೆಯಾದ ಶ್ರೀ ವಿಷ್ಣು. **ಮಂಗಳಾಂಗ**=ಮಂಗಳಸ್ವರೂಪ. **ಅಂಗಜ ಜನಕ** = ಮನ್ಮಥನ ತಂದೆಯಾದ ಶ್ರೀಹರಿ. (ಶ್ರೀಹರಿಯ ಮನಸ್ಸಿನಿಂದ ಜಾತನಾದವನು). **ಯದುಪುಂಗವ** = ಯಾದವಕುಲಲಲಾಮನಾದ ಶ್ರೀಕೃಷ್ಣ. **ಬಲರಾಮಸೋದರ** = ಶೇಷಾವತಾರರಾದ ಬಲರಾಮನ ತಮ್ಮನಾದ ಶ್ರೀಕೃಷ್ಣ.



## ೪೬೪

(ಅಂಕಿತ-ಪ್ರಸನ್ನ)

**ರಾಗ-ಕೇದಾರಗೌಳ** **ಆದಿತಾಳ**

ಬಾ ಬಾ ಯದುಕುಲತಿಲಕ-ಮದನಜನಕ
ಹೃದಯನಿಲಯಕೆ ಮುರಮಥನ ‖ ‖ಪ‖

ಆದರದಲಿ ಉಪಚರಿಸುವೆನು ಕಲಿ
ಬಾಧೆಯು ಪರಿಹರಿಸೋ ಮಧುಸೂದನ ॥ ॥ಅ॥

ಪೂರ್ಣಸದಾಗಣಿತೇಷ್ಟ ಗುಣಾನುಭ
ವೈಕ ಕಲುಷದೂರ
ಜೀರ್ಣ ಪುಣ್ಯಚಯದಿಂದ ಕರೆಯಲು
ತ್ರಾಣವಿಹುದು ಮನ್ಮನದಲಿ ನೆಲೆಸೋ ॥ ॥೧॥

ಶಮದಮಗಳನನುಗ್ರಹಿಸುತ ಸಜ್ಜನ
ಸಮಿತಿಯ ಸಹವಾಸವನೀಡೋ
ಅಮಿತಪ್ರಮತಿಗಳ ಶಾಸ್ತ್ರ ಪ್ರವಚನದಿ
ಮಮತೆಯ ಸ್ಥಿರಪಡಿಸೋ ಶ್ರುತಿಪತೇ ॥ ॥೨॥

ಗುರುಕರುಣವು ನಿನ್ನರಿಯಲು ಕಾರಣ
ಶರಣಂ ಭವ ಸಂತತ ಎನ್ನ
ಹಿರಿಯರು ಮಾಡಿದ ಸಾಧನಗಳಿಗಿದು
ಹಿರಿದಾಗುವುದೇ ಪ್ರಣತ ಪ್ರಸನ್ನ ॥ ॥೩॥



**ಅರ್ಥವಿವರಣೆ :—**

ಈ ಕೀರ್ತನೆಯು ಶ್ರೀಮದ್ವ್ಯಾಸರಾಜಮಠಾಧೀಶರಾಗಿದ್ದ ಪರಮಪೂಜ್ಯ ಶ್ರೀ ವಿದ್ಯಾಪ್ರಸನ್ನತೀರ್ಥಶ್ರೀಪಾದಂಗಳವರಿಂದ ರಚಿತವಾದದ್ದು. ಈಗ ಶ್ರೀ ಸರ್ವಜ್ಞಾಚಾರ್ಯರ ಮಹಾಪೀಠದಲ್ಲಿ ವಿರಾಜಮಾನರಾಗಿರುವ ಶ್ರೀ ವಿದ್ಯಾಪಯೋನಿಧಿತೀರ್ಥ ಶ್ರೀಪಾದಂಗಳವರ ಆಶ್ರಮಗುರುಗಳು. ಪ್ರಸನ್ನ—ಎಂಬ ಅಂಕಿತನಾಮದಲ್ಲಿ ಅನೇಕ ಭಕ್ತಿರಸಪೂರ್ಣವಾದ ಕೀರ್ತನೆಗಳನ್ನು ರಚಿಸಿದ್ದಾರೆ. **ಯದುಕುಲತಿಲಕ**=ಸಂಸ್ಥಾನದ ದೈವ ಶ್ರೀಕೃಷ್ಣ.

**ಮದನಜನಕ** = ಮನ್ಮಥನ ತಂದೆ (ಕಾಮನ ಅವತಾರಿಯಾದ ಪ್ರದ್ಯುಮ್ನನ ಜನಕ ಶ್ರೀಕೃಷ್ಣ). **ಹೃದಯನಿಲಯಕೆ** = ಹೃತ್ಪದ್ಮವೆಂಬ ಮಂದಿರಕ್ಕೆ. **ಮುರಮಥನ** = ಮುರಾ ಎಂಬ ಅಸುರನನ್ನು ಸಂಹರಿಸಿದ ಶ್ರೀಕೃಷ್ಣ. **ಮಧುಸೂದನ** = ಮಧು ಎಂಬ ದೈತ್ಯಸಂಹಾರಿಯಾದ ಶ್ರೀಹರಿ. **ಪೂರ್ಣ ಸದಾಗಣಿತೇಢ್ಯಗುಣಾ** = ಅನಾದ್ಯನಂತಕಾಲದಿಂದಲೂ ಅನಂತಕಲ್ಯಾಣಗುಣ ಗಣಪರಿಪೂರ್ಣನು (ಪೂರ್ಣ + ಸದಾ + ಅಗಣಿತ + ಈಢ್ಯ). **ಅನುಭವೈಕ** = ಪರಿಪೂರ್ಣಗುಣಸಂಪನ್ನನು. ಸರ್ವಪ್ರಕಾರದಿಂದಲೂ ಪರಿಪೂರ್ಣನು. **ಶರೀರ** = ಪೂರ್ಣಜ್ಞಾನಾನಂದೈಕದೇಹನು. (ಚಿನ್ಮಯಸ್ವರೂಪನು). **ಕಲುಷದೂರ** = ಲವಲೇಶ ದೋಷವೂ ಇಲ್ಲದವನು. **ಚೀರ್ಣಪುಣ್ಯಚಯದಿಂದ** = ಹಿಂದಿನ ಜನ್ಮಗಳಲ್ಲಿ ಮಾಡಲ್ಪಟ್ಟ ಪುಣ್ಯರಾಶಿಗಳಿಂದ (ಚೀರ್ಣ- ಮಾಡಲ್ಪಟ್ಟ, ಚಯ–ಸಮೂಹ, ರಾಶಿ) **ತ್ರಾಣವಿಹುದು** = ಆತ್ಮ ಶಕ್ತಿ ಇದೆ. **ಶಮದಮಗಳ** = ಮನೋನಿಗ್ರಹ, ಇಂದ್ರಿಯನಿಗ್ರಹಾದಿ ಗಳನ್ನು. **ಸಮಿತಿಯ** = ಕೂಟ (ಸಹವಾಸ) (ಶಬ್ದ ಪ್ರಯೋಗದ ಚಮತ್ಕಾರ ವನ್ನು ಪರಿಶೀಲಿಸಿ). **ಅಮಿತಪ್ರಮತಿಗಳ** = ಅಲವಬೋಧರ (ಪೂರ್ಣ ಪ್ರಜ್ಞರ) ಶಾಸ್ತ್ರಗಳ ಪ್ರವಚನ (ಅಮಿತ-ಪೂರ್ಣ, ಪ್ರಮತಿ-ಪ್ರಜ್ಞರು) **ಮಮತೆಯ** = ಧೃಢವಾದ ಭಕ್ತಿಯನ್ನು **ಶೃತಿಪತೇ** = ವೇದಾಭಿಮಾನಿಗಳಾದ ಶ್ರೀ ಲಕ್ಷ್ಮೀದೇವಿಯ ರಮಣ. (ವೇದಪ್ರತಿಪಾದ್ಯ) **ಗುರುಕರಣವು ನಿನ್ನರಿಯಲು ಕಾರಣ** = ನಿನ್ನ ಅನುಗ್ರಹಕ್ಕೆ ಗುರುಗಳ ಕಾರುಣ್ಯವೇ ಕಾರಣ. (ಮುಕುಂದ ಭಕ್ತ್ಯೈಃ ಗುರುರ್ಭಕ್ತಿಜಾಯ್ಯೈಃ **ಸಮಧ್ವವಿಜಯ-ವಚನ**) **ಶರಣಂ ಭವ** = ನನ್ನನ್ನು ಸದಾ ಸಂರಕ್ಷಿಸು. **ಪ್ರಣತ ಪ್ರಸನ್ನ** = ಶರಣಾಗತ ರಾದವರಿಗೆ ಅನುಗ್ರಹಮಾಡುವವನು (ಇಲ್ಲಿ ಅಂಕಿತನಾಮ ಪ್ರಸನ್ನ— ಎಂಬ ಶಬ್ದವನ್ನು ಅನುಗ್ರಹ ಎಂಬ ಅರ್ಥದಲ್ಲಿ ಉಪಯೋಗಿಸಿದ್ದಾರೆ.)



## ೪೩೪

## (ಅಂಕಿತ-ಕಾರ್ಪರನರಹರಿ)

ರಾಗ—ಸಾವೇರಿ ಆದಿತಾಳ

ದೇವಾ ಬಾರಯ್ಯಾ- ವೈಭವದಿ ರಥವೇರಿ
ಸೇವಿಸುವೆ ಮದ್ಭಾವದಿ ನೆಲೆಸೆಂದು
    ಪಾವನಮಣಿಪುರ ರಾವಿನೊಳಿಹ ಭೂ-
    ದೇವವರ್ಯ ಸಂಸೇವಿತ ಕೇಶವ ॥ ॥ಪ॥

ದೇವಗಂಗೆಯು ಪೆತ್ತ- ಪಾವನಗಾತ್ರ ಧ್ರುವ
ಭೂವರೋಪಾಸಿತನಾಗಿ ಈ ವಸುಧೆಗೆ ಬಂದು
ಪಾವಮಾನಶಾಸ್ತ್ರದಿ ಕೋವಿದ ಯತಿವರ
ಶ್ರೀವಿದ್ಯಾನಿಧಿತೀರ್ಥ ಸೇವಿತ- ಸಂಸ್ಥಾಪಿತ ॥
    ಸೇವಕಜನ ಸಂಭಾವಿತ-ಕಾಮಿತ
    ಜೀವ-ಕಾವ-ಸದಶಾವತಾರ ನಮೋ
    ಶ್ರೀ ವಿರಂಚಿಮುಖದೇವ ನಮಿತ ಕಂ-
    ಚೀವರದನೆ ಪೊರೆ ಶ್ರೀ ವರಕೇಶವ ॥ ॥೧॥

ಕಡುಶೋಭಿಸುವ ಬಿಳಿಗೊಡೆ-ಚಾಮರಾದಿಗಳ
ಪಿಡಿದು ಸೇವಿಪ ಜನರೆಡಬಲದಿ ಬರೆ
ಪೊಡವಿಸುರರು ಪಂಥವಿಡಿದು ವೇದಪಠಣ
ಬಿಡದೆ ಮಾಡುತ ಬರೆ ನುಡಿವ ವಾದ್ಯಗಳಿಂದ ॥
    ಸಡಗರದಲಿ ದ್ವಿಜ ಮಡದಿಯರಾರುತಿ
    ಪಿಡಿದು ಬೆಳಗುತಿರೆ ಕಡು ವೈಭವದಲಿ
    ಅಡಿಗೆರಗುವೆ ಪಾಲ್ಗಡಲಶಯನ ಮೂ-
    ರಡಿರೂಪನೆ ಜಗದೊಡೆಯ ಕೇಶವ ॥ ॥೨॥

ನಂದತೀರ್ಥರ ಮತ- ಸಿಂಧುವಿಗೆ ಪೂರ್ಣ
ಚಂದ್ರರೆನಿಪ ಯತೀಂದ್ರ ಸತ್ಯಪ್ರಮೋದ
ರಿಂದ ಪೂಜಿತ ಪದದ್ವಂದ್ವ ಮಧ್ಯದೊಳಿಹ
ಮಂದಾಕಿನಿಪಿತನೆಂದು ತೋರಿಸಿದಂಥ ||

ಇಂದಿರೆಯರಸನೆ ಮಂದರಧರ ಗೋ-
ವಿಂದ ಪಾಹಿ ಮುಕುಂದನೆ ಬಾ ಬಾ
ರೆಂದು ಕರೆವ ದ್ವಿಜವೃಂದ ಮಧ್ಯದಲಿ
ಸ್ಯಂದನವೇರಿದ ಸುಂದರ ಕೇಶವ || ||೩||

ಅಂಬುಜನಾಭನೆ-ನಿತಂಬದಿ ಪೊಳೆವ ಪೀ-
ತಾಂಬರ ಧೃತ ಶಾತಕುಂಭಮುಕುಟ ವದ-
ನಾಂಭೋಜವನು ತೋರೋ ಕುಂಭೀನಸ ಪರಿಯಂಕ
ಶಂಭ್ವಾದಿ ನಮಿತ ನೀಲಾಂಬುದನಿಭಗಾತ್ರ ||

ಕಂಬು ಚಕ್ರ ಸುಗದಾಂಬುಜಧರ ಬಲು
ಸಂಭ್ರಮದಲಿ ಮುನಿಕುಂಭಜ ಪೂಜಿತ
ನಂಬಿದ ಭಕುತ ಕದಂಬ ದುರಿತ ಕಾ-
ದಂಬಿನೀಪವನ ಕೃಪಾಂಬುಧೇ ಕೇಶವ || ||೪||

ಗರುಡಮಾರುತರಿಂದ ಪರಸೇವಿತನೆ ಬಾರೋ
ಶರಣಜನರ ಸುರತರುವೆ ಚೆನ್ನ ಕೇಶವ
ಧರೆಯೊಳಧಿಕ ಮಣಿಪುರದಿ ಪಂಡಿತಾಗ್ರಣಿ
ವರದಾಚಾರ್ಯಸನ್ನುತ ಸರಸಿಜಾಸನ ಪಿತ ||

ಸಿರಿದೇವಿಯು ಈರೆರಡು ರೂಪದಲಿ
ಕರದೊಳಗಾರುತಿ ವರಚಾಮರಗಳ
ಧರಿಸಿ ಸೇವಿಪಳು ಸಿರಿ ಕಾರ್ಪರ
ನರಹರಿ ರೂಪನೆ ಮಾಡಿ ಪೊರೆವುದು ಕೇಶವ || ||೫||



## ೪೭೫

### (ಶ್ರೀಕರವಿಠ್ಠಲಾಂಕಿತ)

ರಾಗ—ಯಮುನ ತ್ರಿಪುಟತಾಳ

ಬಾರೋ ಬಾರೋ ಬೇಗ–ತೋರೊ ತೋರೊ ದಯ
ನೀರಜನಾಭ ಪಾರ್ಥಸಾರಥಿಯೆ ॥ ॥ಪ॥

ಪನ್ನಗ ಪ್ರಪನ್ನವತ್ಸಲದೇವ
ಎನ್ನ ಬಿನ್ನಪ ಮನದ ಲಾಲಿಸು ॥ ॥೧॥

ಮಂದರೋದ್ಧರ ಅರವಿಂದನಯನ ಮನ-
ಮಂದಿರದೊಳು ದಯಾಸಿಂಧು ನೀ ಬಂದು ನಿಲ್ಲೊ ॥ ॥೨॥

ಪಾಲ್ಬೆಣ್ಣೆ ಮೆದ್ದ ಗೋಪಾಲ ಶ್ರೀ ಕರವಿಠ್ಠಲ
ಕಾಳಿ ಕುಂಜರಪಾಲ ಮಾಲೋಲ ಬೇಗ ಬಾರೋ ॥ ॥೩॥



**ಅರ್ಥವಿವರಣೆ:—**

**ನೀರಜನಾಭ** = ಪದ್ಮನಾಭನಾಮಕ ಶ್ರೀ ಪರಮಾತ್ಮ (ನೀರಜ-ನೀರಿನಲ್ಲಿ ಹುಟ್ಟಿದ ಪದ್ಮಪುಷ್ಪ) **ಪ್ರಪನ್ನವತ್ಸಲ** = ಶರಣಾಗತಜನ ಪ್ರೇಮಿ. **ಮಂದರೋದ್ಧರ** = ಮಂದರಗಿರಿಯನ್ನು ತನ್ನ ಬೆನ್ನಿನ ಮೇಲೆ ಹೊತ್ತ ಕೂರ್ಮಾವತಾರಿ ಶ್ರೀಹರಿ. **ಅರವಿಂದನಯನ** = ಕಮಲದಳದಂತೆ ವಿಸ್ತಾರವಾದ ಕಣ್ಣುಳ್ಳವನು. **ಪಾಲ್ಬೆಣ್ಣೆ** = ಹಾಲು ಬೆಣ್ಣೆ. **ಕಾಳಿ ಕುಂಜರ ಪಾಲ** = ಕಾಳಿಂಗಸರ್ಪನ ಗರ್ವವನ್ನು ಮುರಿದು, ಅವನನ್ನು ರಕ್ಷಿಸಿದ ಶ್ರೀಕೃಷ್ಣ. ಅಂತೆಯೇ, ಕುಂಜರ ಎಂದರೆ, ಗಜರಾಜನನ್ನು ಮೊಸಳೆಯ ಬಾಧೆಯಿಂದ ತಪ್ಪಿಸಿ, ಸಂರಕ್ಷಿಸಿದ ಗಜೇಂದ್ರವರದ. **ಮಾಲೋಲ** = ರಮಾಪತಿ. ಶ್ರೀಲಕ್ಷ್ಮೀದೇವಿಯರಲ್ಲಿ ರಮಣಮಾಡುವ ಸ್ವರಮಣನು,

## ೪೭೭

(ಅಂಕಿತ-ಶ್ರೀವೆಂಕಟೇಶ)

ರಾಗ- ತಾಳ

ಪಾಮರೋದ್ಧರಾ-ಬಂದು ಕಣ್ಣಮುಂದೆ-ನಿಲ್ಲೋ ॥ಪ॥

ಒಡೆಯರೊಡೆಯನೆಂದು ನಿನ್ನ
ಅಡಿಯ ಬಿಡದೆ ನಂಬಿದೆನೋ
ಕಡುದಯಾನಿಧೆ ಬಡಕುಚೇಲನ
ಪಿಡಿಯವಲಿಗೆ ಒಲಿದು ಪೊರೆದ ॥ ॥೧॥

ಸರ್ವಸಾರಭೋಕ್ತ ನೀನೆ
ತೋರ್ಪುದಿಲ್ಲ ಕೊಡಲು ನಿನಗೆ
ಸರ್ವದೇವ ಸಾರ್ವಭೌಮ ನೀ
ನೋರ್ವ ಸರ್ವವ್ಯಾಪ್ತ ನಿರ್ಲಿಪ್ತ ॥ ॥೨॥

ಪ್ರಣತಕಾಮದನೆಂದು- ಅಂದು
ಅಣುಗ ಧ್ರುವನಾಕ್ಷಣದಿ ಪೊರೆದೆ
ಪ್ರಣತಾರ್ಥಿಹರನೆಂದು ನಂಬಿದೆ
ದಣಿಸಲಾಗದೋ ದೀನರಕ್ಷಕ ॥ ॥೩॥

ಮುಕುತರೊಡೆಯ ಭಕುತವತ್ಸಲ
ಯುಕುತಿ ತೋರದೋ ನಿನ್ನ ಧ್ಯಾನಕೆ
ಶಕುತಿಯಿತ್ತು ಸಲಹೋ ಎನ್ನನು ನೀ
ಸಕಲೋಕೋಧ್ಧಾರ ಧೀರಾ ॥ ॥೪॥

ಎಲ್ಲ ಜನರಾ ಪೊರೆಯಲು ಶ್ರೀ
ನಲ್ಲ ನಿಂತೆಯೋ ನೀ ಶೇಷಶೈಲದಿ
ವಲ್ಲಭಾ ಶ್ರೀವೆಂಕಟೇಶ ನೀ
ನೆಲ್ಲ ಬಲ್ಲೆನ್ನ ಸೊಲ್ಲ ಲಾಲಿಸೋ ॥ ॥೫॥

**ಅರ್ಥವಿವರಣೆ .-**

ನಮ್ಮ ಪರಮಪೂಜ್ಯ ಗುರುವರ್ಯರಾದ ಶ್ರೀ ಉರಗಾದ್ರಿವಾಸವಿಠ್ಠ ಲಾಂಕಿತ ದಾಸವರ್ಯರು ತಮ್ಮ ಗುರುಗಳಿಂದ ಅಂಕಿತೋಪದೇಶವಾಗುವುದಕ್ಕೆ ಪೂರ್ವದಲ್ಲಿ ತಮ್ಮ ಕುಲದೈವ ಹಾಗೂ ಇಷ್ಟದೈವನೂ ಆದ ಸಪ್ತಗಿರಿವಾಸ ಹೆಸರಿನಲ್ಲಿ ಶ್ರೀವೆಂಕಟೇಶ ಎಂಬ ನಾಮಾಂಕಿತದಿಂದ ಹಲವಾರು ಕೀರ್ತನೆ ರಚಿಸಿದ್ದರು.

**ಮಂದರೋದ್ಧರ** = ಸಮುದ್ರಮಥನ ಸಮಯದಲ್ಲಿ ಕ್ಷೀರಸಾಗರ ದಲ್ಲಿ ಮುಳುಗಿದ್ದ ಮಂದರ ಪರ್ವತವನ್ನು ಶ್ರೀಹರಿಯು ಕೂರ್ಮಾತಾರವ ನ್ನೆತ್ತಿ ತನ್ನ ಬೆನ್ನಿನ ಮೇಲೆ ಧರಿಸಿದನು. **ಹಿಡಿಯವಲಿಗೆ** = ಭಾಗವ ತೋತ್ತಮನಾದ ಸುದಾಮನು ತಂದಿದ್ದ ಮೂರು ಹಿಡಿ ಅವಲಕ್ಕಿಯಲ್ಲಿ ಶ್ರೀ ಕೃಷ್ಣನು ಒಂದು ಮುಷ್ಟಿ ಅವಲಕ್ಕಿಯನ್ನು ಬಾಯಿಗೆ ಹಾಕಿಕೊಂಡು. ಅತುಲೈಶ್ವರ್ಯವನ್ನು ಕುಚೇಲನ ಪತ್ನೀ ಮತ್ತು ಪುತ್ರರಿಗೆ ಕರುಣಿಸಿದನು. **ಸರ್ವಸಾರಭೋಕ್ತನೆ** = ಭೋಜ್ಯವಸ್ತುಗಳಲ್ಲಿ ರಸಪದವಾಚ್ಯನಾಗಿ ಅಂತ ರ್ಗತನಾಗಿದ್ದು ಸ್ವಾಖ್ಯರಸವನ್ನು ಸ್ವೀಕರಿಸುತ್ತಾನೆ. **ಸರ್ವದೇವ** = ಸಕಲ ರಿಗೂ ನಿಯಾಮಕನಾದ ಸರ್ವೋತ್ತಮನಾದ ಶ್ರೀಪರಮಾತ್ಮ. **ಸಾರ್ವ ಭೌಮ** = ಸಮಸ್ತರಿಗೂ ಸರ್ವಾಧಿಪತಿಯು. **ನೀನೋರ್ವ** = ನೀನೊಬ್ಬನೇ, (ಏಕೈಕದೇವ). **ಸರ್ವವ್ಯಾಪ್ತ** = ಸರ್ವಚೇತನರಲ್ಲಿ ಬಿಂಬರೂಪನಾಗಿ, ಸಕಲಜಡವಸ್ತುಗಳಲ್ಲಿ ಅಣುರೇಣು ತೃಣಕಾಷ್ಠ ಪರಿಪೂರ್ಣನಾಗಿದ್ದಾನೆ. **ನಿರ್ಲಿಪ್ತ** = ಜಗದ್ವಿಲಕ್ಷಣನು. ಸಕಲ ಜೀವ ಜಡರಿಂದ ಅತ್ಯಂತಭಿನ್ನನು. **ಪ್ರಣತಕಾಮದ** = ಶರಣಾಗತರ ಸಕಲ ಅಭೀಷ್ಟಗಳನ್ನು ಕೊಡುವವನು. **ಅಣುಗ** = ಬಾಲಕನಾದ, **ಪ್ರಣತಾರ್ಥಿಹರನೆಂದು** = ಶರಣು ಹೊಕ್ಕ ವರ ದುಃಖವನ್ನು ಪರಿಹರಿಸುವವನು, (ಪ್ರಣತ + ಅರ್ಥಿ + ಹರ). **ಯುಕುತಿ ತೋರದೋ** = ಉಪಾಯ (ಸಾಧನಮಾರ್ಗ)ವನ್ನು ನಾನ ರಿಯೆ. **ಶಕುತಿಯಿತ್ತು** = ನನಗೆ ಆತ್ಮಶಕ್ತಿಯನ್ನು ಕರುಣಿಸು. **ಶೇಷ ಶೈಲದಿ** = ಶೇಷಗಿರಿಯಲ್ಲಿ (ವೆಂಕಟಾಚಲ), **ವಲ್ಲಭಾ** = ಜಗತ್ಪತಿ. **ಸೊಲ್ಲ** = ಮಾತನ್ನು (ಮೊರೆಯನ್ನು).

❖

## ೪೬೭

### (ಪ್ರಾಣನಾಥವಿಠ್ಠಲಾಂಕಿತ)

ರಾಗ —ಕಾಂಬೋದಿ ಆದಿತಾಳ

ಬಾರೋ ಬೇಗ ತೋರೋ ಮುಖವನು ನಿನ್ನ
ಬಾರಿಗೆ ಬಿದ್ದೆನು ಪಾರಗಾಣಿಸೋ ॥ ॥ಪ॥

ಅಂಗಜನಯ್ಯಾ ಭುಜಂಗಶಯನಾ ಶ್ರೀ
ರಂಗ ಎನ್ನಾ ಅಂತರಂಗಕ್ಕೆ ನೀ ॥ ॥೧॥

ಕುಂಜಲೋಚನ ನಾ ನಿನಗಂಜಲಿ ಮುಗಿಯುವೆ
ಕುಂಜರೇಶವರದ ಭುಜಂಗಶಯನ ॥ ॥೨॥

ಘನ್ನಮಹಿಮ ಸನ್ಮತಿಯ ಪಾಲಿಸು ಪ್ರ-
ಸನ್ನ ಪ್ರಾಣನಾಥವಿಠ್ಠಲರಾಯನೆ ॥ ॥೩॥



ಅರ್ಥವಿವರಣೆ —

ಬಾಗೇಪಲ್ಲಿ ಶ್ರೀ ಶೇಷದಾಸರಿಂದ (ಕ್ರಿ. ಶ. 1865-1924) ಈ ಕೀರ್ತನೆಯು ರಚಿತವಾಗಿದೆ. ಶ್ರೀಯುತರು ಶೇಷವಿಠಲ ಮತ್ತು ಪ್ರಾಣನಾಥವಿಠ್ಠಲ- ಎಂಬ ಅಂಕಿತನಾಮಗಳಿಂದ ಕೃತಿಗಳನ್ನು ರಚಿಸಿರುವರು. ಶ್ರೀದಾಸರಿಗೆ ಕ್ರಿ.ಶ. 1902 ರಲ್ಲಿ ಶ್ರೀತಂದೆಮುದ್ದುಮೋಹನ ವಿಠ್ಠಲಾಂಕಿತರಾದ ಪರಮಪ್ರಿಯ ಸುಬ್ಬರಾಯದಾಸರಿಂದ "ಪ್ರಾಣನಾಥ ವಿಠ್ಠಲ"- ಎಂಬ ಅಂಕಿತ ಪ್ರಾಪ್ತಿಯಾಯಿತು. ತತ್ಪೂರ್ವ ಅವರ ಕೃತಿಗಳೆಲ್ಲವೂ ಶೇಷವಿಠ್ಠಲಾಂಕಿತದಲ್ಲಿದೆ.

**ಬಾರಿಗೆ** = ಏತದ ಬಾವಿಯ ಇಳಿಜಾರು, **ಅಂಗಜನಯ್ಯ** = ಮನ್ಮಥನ ತಂದೆ ಶ್ರೀಹರಿ, **ಭುಜಂಗಶಯನಾ** = ಶೇಷನ ಮೇಲೆ ಮಲಗಿರುವವನು **ಕಂಜಲೋಚನ** = ಕಮಲದಳದಂತೆ ವಿಸ್ತಾರವಾದ ಕಣ್ಣುಳ್ಳವನು. (ಕಂ–ನೀರು, ಕಂಜ-ನೀರಿನಲ್ಲಿ ಬೆಳೆಯುವ ಕಮಲ), **ಅಂಜಲಿ** = ಜೋಡಿಸಿದ ಕೈಗಳು. **ಕುಂಜರೇಶವರದ** = ಗಜೇಂದ್ರ ಪರಿಪಾಲಕ (ಕುಂಜರ-ಆನೆ ಕುಂಜರೇಶ-ಗಜೇಂದ್ರ-ಸಲಗ), **ಸನ್ಮತಿಯು** = ಸಮೀಚೀನವಾದ ಜ್ಞಾನಪೂರ್ಣವಾದ ಬುದ್ಧಿ.



## ೪೩೮

**(ತಂದೆ ವೆಂಕಟೇಶವಿಠ್ಠಲಾಂಕಿತ)**

**ರಾಗ—ಕೇದಾರಗೌಳ** **ಆದಿತಾಳ**

ಬಾ ಬಾ ಕೃತಿರಮಣ- ಧೃತಿ ಸುಸದನ
ಅತಿಹಿತದಲಿ ಹೃಚ್ಛತಪತ್ರನಿಲಯಕೆ || ||ಪ||

ಹಿತಪ್ರಾಗ್ವ್ಬಣ್ಯಾದಿ ಪತಿಕರಿಸುವೆ ಭವ
ತ್ಪ್ರಥಿತ ಪಾದದ್ವಯ ವ್ರತತಿಜ ಶೋರೀ || ||ಅ||

ಪ್ರಳಯ ಸೃಷ್ಟಿ ಸ್ಥಿತಿ ನಿಯಮನ ಜ್ಞಾನ ಸಂ
ಕಲನ ವಿಕಲನದಿ ಬಿಂಬಕ್ರಿಯಾ
ಘಳಿಗೆ ಬಿಡದು ಬಲ ಪ್ರಮುಖರಿಗೆನ್ನಲು
ಕಲಕಿ ಮನವ ಧೃತಿಗಳೆದುಪೇಕ್ಷಿಸದೆ || ||೧||

ತ್ರಯತಾಪದಿ ತ್ರಯಕರ್ಮದ ಲೋಪದಿ
ತ್ರಯಗುಣಲೇಪದಿ ತ್ರಯಭ್ರಾಮಕದಿ

ತ್ರಯ ವೇದವೇದ್ಯ ತತ್ವ ನಿರ್ದಿಷ್ಟವಿ
ತ್ರಯವಾದೆನೊ ತ್ರಯೀಮಯ ತ್ರಯರೂಪ|| ||೨||

ಗುರು ವಿಜಯಾರ್ಯರ ಪರಮಾನುಗ್ರಹ
ಪರಿಸರಸಮಯದಿ ಸ್ಥಿರಮತಿಯ
ದೊರಕಿಸಿಕೊಟ್ಟರೆ ಅರೆಮರೆಗೊಳಿಸುವ
ಸರಸವಾಡೆ ಭೃಗು ನಾರದರಾಣೆ || ||೩||

ದಕ್ಷಿಣಾಕ್ಷಿಗಪರೋಕ್ಷ ಪ್ರಿಯನೆ ಅ-
ಧ್ಯಕ್ಷ ಸಾಕ್ಷಿ ಚೇತಾಕ್ಷರನೇ
ತ್ರ್ಯಕ್ಷ ತಾರ್ಕ್ಷ್ಯಕಾದೀಕ್ಷರ ಜೀವರ
ರಕ್ಷ ಶಿಕ್ಷಣಾಧ್ಯಕ್ಷಯಮಹಿಮಾ || ||೪||

ದೇಶ ಕಾಲ ಸ್ವಭಾವಗುಣಗಳ ವಿ-
ಶೇಷವೆಲ್ಲ ಸಹಕರಿಸುತಿವೆ
ಶ್ರೀಶ ತಂದೆವೆಂಕಟೇಶವಿಠ್ಠಲ "ಏನಂ
ಮೋಚಯಾಮಿ" ಎಂಬೀವರ ಸಲಿಸಲು || ||೫||

ಅರ್ಥವಿವರಣೆ :-

ಕೃತಿರಮಣ=ಕೃತಿನಾಮಕಳಾದ ಶ್ರೀಲಕ್ಷ್ಮಿಯಪತಿ ಪ್ರದ್ಯುಮ್ನನೇ, ಧೃತಿಸುಸದನ=ಧೃತಿನಾಮಕ ಶ್ರೀವಾಯುದೇವರ ಅಂತಸ್ಥರೂಪ, ಅತಿ ಹಿತದಲಿ=ಅತ್ಯಂತ ಅನುಗ್ರಹಪ್ರದನಾಗಿ, ಹೃತ್‌ಶತಪತ್ರನಿಲಯಕೆ= ಹೃದಯವೆಂಬ ಕಮಲಮಂದಿರಕ್ಕೆ (ಶತಪತ್ರ-ಕಮಲ), ಹಿತಪ್ರಾಗ್ಪ್ಯ

**ಣ್ಯಾದಿ**= ಸಂತೋಷಕರವಾದ ಹಿಂದಿನ ಜನ್ಮಗಳ ಪುಣ್ಯಸಂಚಯದಿಂದ. **ಪತಿ** ಕರಿಸುವೆ=ಸೇವಿಸುತ್ತೇನೆ. ಭವತ್ಪ್ರಥಿತ=ನಿನ್ನ ಪ್ರಸಿದ್ಧವಾದ. ಪಾದ ದ್ವಯ ವ್ರತತಿಜ= ಚರಣಕಮಲದ್ವಯಗಳನ್ನು (ವ್ರತತಿ-ಬಳ್ಳಿ, ವ್ರತತಿಜ -ಬಳ್ಳಿಯಲ್ಲಿ ಬೆಳೆದ ಹೂವು, ಇಲ್ಲಿ ಕಮಲ ಎಂದರ್ಥ) ಸಂಕಲನ= ಬಂಧ ವಿಕಲನ=ಮೋಕ್ಷ, ಅಂದರೆ ಸೃಷ್ಟ್ಯಾದಿ ಅಷ್ಟಕಾರ್ಯಗಳಲ್ಲಿ ಬಲಪ್ರಮುಖರಿಗೆ =ವಾಯುದೇವರೇ ಆದಿಯಾಗಿ ಎಲ್ಲರಿಗೂ (ಬಲ-ಬಲ್ ಸಿರುವ ಪ್ರವೃತ್ತಿ-ಭಳಿತ್ಥಾ ಸೂಕ್ತ ಪ್ರತಿಪಾದ್ಯ ಶ್ರೀವಾಯುದೇವರು). ಧೃತಿ ಗಳೆದು =ನನ್ನ ದಾರ್ಢ್ಯವನ್ನು ಕುಂದಿಸಿ (ಅಂದರೆ, ಅಹಂಕರ್ತೃತ್ವಭ್ರಮೆ ಹುಟ್ಟಿಸಿ), ತ್ರಯತಾಪದಿ=ಆದಿ ಭೌತಿಕ, ಆದಿ ದೈವಿಕ, ಆಧ್ಯಾತ್ಮಿಕ- ಎಂಬ ಮೂರು ತಾಪಗಳಿಂದ, **ತ್ರಯಕರ್ಮದ ಲೋಪದಿ** = ದೈಹಿಕ, ದೇಶಿಕ, ಕಾಲಿಕ ಎಂಬ ಮೂರು ಪ್ರಕಾರವಾದ ಕ್ರಿಯೆಗಳ ಲೋಪದಿಂದ, **ತ್ರಯಗುಣಲೇಪದಿ**=ಸತ್ವ. ರಜ, ತಮಗಳೆಂಬ ಪ್ರಾಕೃತ ಗುಣತ್ರಯಗಳ ಸಂಬಂಧದಿಂದ, **ತ್ರಯಭ್ರಾಮಕದಿ**=ಕಾರಕ, ಕ್ರಿಯಾ, ದ್ರವ್ಯ (ಅಹಂ-ಮಯಾ-ಮಮ ಕಾರಗ್ರಸ್ತನಾಗಿ) ಎಂಬ ಮೂರು ಪ್ರಕಾರವಾದ ಭ್ರಮೆ ಗಳಿಂದ. ತ್ರಯತೆರದ ಅದ್ವೈತತತ್ವ=ಭಾವಾದ್ವೈತ, ಕ್ರಿಯಾದ್ವೈತ ಮತ್ತು ದ್ರವ್ಯಾದ್ವೈತವೆಂಬ ಅದ್ವೈತತ್ರಯಗಳ (ಜ್ಞಾನ, ಜ್ಞೇಯ, ಜ್ಞಾತೃ), **ನಿರ್ಲಕ್ಷ್ಯದಿ**=ಅಂತಃಪ್ರೇರಕನಾದ ನಿನ್ನನ್ನು ತಿಳಿಯದೇ, **ತ್ರಯವಾದೆನೋ** = ಗುಣತ್ರಯಗಳಿಂದ ಭವದಲ್ಲಿ ಬಂಧಿತನಾದೆ. **ತ್ರಯೀಮಯ**=ಋಕ್, ಯಜು, ಸಾಮ ಎಂಬ ವೇದತ್ರಯಗಳು- ಅನಂತಾಸನ, ವೈಕುಂಠ, ಶ್ವೇತದ್ವೀಪ ಎಂಬ ಮುಕ್ತಿಧಾಮತ್ರಯಗಳು, **ತ್ರಯರೂಪ**=ಬ್ರಹ್ಮಾಂಡಾಂತರ್ಗತ, ಬಹಿರ್ಬ್ರಹ್ಮಾಂಡ ಮತ್ತು ಶರೀರಾಂ ತರ್ಗತ ಎಂಬ ಪುರುಷರೂಪತ್ರಯ. **ಪರಿಸರ ಸಮಯದಿ**=ವಾಯುಮತ ಸಿದ್ಧಾಂತದಲ್ಲಿ. ದೊರಕಿಸಿಕೊಟ್ಟಿರೆ = ದೃಢಮತಿಯನ್ನು ದೊರಕಿಸಿ ಕೊಟ್ಟಿರುವಿರಾಗಿ, ಅದಮಾಡಿಕೊಳಿಸುವ = ನನ್ನ ಈ ದೃಢನಂಬಿಕೆಯನ್ನು ಅಲ್ಲಾಡಿಸುವ ಪ್ರಯತ್ನರೂಪವಾದ, **ಸರಸವಾಡೆ**=ಚೆಲ್ಲಾಟವಾಡಿದರೆ, **ಭೃಗು ನಾರದರಾಣೆ** = ಭೃಗುಅಂಶಸಂಭೂತರಾದ ಶ್ರೀವಿಜಯದಾಸ

ಪರ್ಯರು, ನಾದಯಾಂತಸಂಜಾತರಾದ ಶ್ರೀ ಪುರಂದರದಾಸವರೇಣ್ಯರ ಅಣಿ ಇದೆ.

ದಕ್ಷಿಣಾಕ್ಷಿಗ = ಪ್ರತಿಜೀವರ ಬಲಗಣ್ಣಿನ ತುದಿಯಲ್ಲಿರುವ ಜಾಗ್ರತಾವಸ್ಥಾಪ್ರೇರಕ ವಿಶ್ವರೂಪ, ಅಪರೋಕ್ಷ ಪ್ರಿಯನೆ = ಅಪರೋಕ್ಷಿಗಳಿಗೆ ಪ್ರೀತಿವಿಷಯನೆ, ಅಧ್ಯಕ್ಷ = ಸಕಲಕಾರ್ಯಗಳಿಗೂ ಮುಖ್ಯ ಪ್ರೇರಕ ಹಾಗೂ ನಿಯಾಮಕ, ಸಾಕ್ಷಿ = ಸರ್ವವ್ಯಾಪಾರಗಳಿಗೂ ಸಾಕ್ಷೀಭೂತನು, ಚೇತಾಕ್ಷರನೆ = ಪರಮಚೇತನನೆ, ನಾಶರಹಿತನೇ (ಅಕ್ಷರ-ನಾಶರಹಿತ), ತ್ರ್ಯಕ್ಷ = ತ್ರಿನೇತ್ರನಾದ ರುದ್ರ, ತಾರ್ಕ್ಷ್ಯ = ಗರುಡ, ಕಾದಿ ಈಕ್ಷರಜೀವರ = ಬ್ರಹ್ಮಾದಿ ಕ್ಷರ ಜೀವರ (ಕ-ಬ್ರಹ್ಮ), ರಕ್ಷ = ರಕ್ಷಕನೇ, ಶಿಕ್ಷಣ = ದುಷ್ಟಶಿಕ್ಷಣಕಾರ್ಯ, ಆದಿ ಅಕ್ಷಯಮಹಿಮಾ = ಇವೇ ಮುಂತಾದ ಕಾರ್ಯನಿರ್ವಾಹಕನಾದ ಅಪರಿಮಿತ ಮಹಿಮಾಸಂಪನ್ನನೇ. ದೇಶ = ಪ್ರದೇಶ (ಸ್ಥಳ). ಕಾಲ = ಪ್ರವಾಹತೋನಿತ್ಯವಾದ ಕಾಲ, ಸ್ವಭಾವ = ಸ್ವರೂಪಯೋಗ್ಯತೆ, ಗುಣಗಳ = ಸತ್ವಾದಿತ್ರಿಗುಣಗಳು, ವಿಶೇಷವೆಲ್ಲ ಸಹಕರಿಸುತಿವೆ = ಇವೆಲ್ಲಾ ಸಹಕರಿಸುತ್ತಿರಲಾಗಿ, ಏನಂ ಮೋಚಯಾಮಿ = ಇವನನ್ನು ಮುಕ್ತನನ್ನಾಗಿಸುತ್ತೇನೆ - ಎಂಬ ನಿನ್ನ ಸತ್ಯಸಂಕಲ್ಪದಂತೆ, ಎಂಬೀವರ ಸಲಿಸಲು = ಎಂಬ ನಿನ್ನ ಇಚ್ಛೆಯನ್ನು ಅನುಗ್ರಹಿಸಲು-ಬಾ ಬಾ ಕೃತಿರಮಣ.



೪೬೭

(ಕಮಲನಾಭವಿಠ್ಠಲಾಂಕಿತ)

ರಾಗ-ದರ್ಬಾರ್ ಆದಿತಾಳ

ಬಾರೋ ಸುಂದರ ಶ್ಯಾಮ-ಬಾರೋ ಭಕ್ತರ ಪ್ರೇಮ
ಬಾರೋ ಬಾ ಬಾ ಧೊರೆಯೇ ॥ ॥ಪ॥

ಬಾರೊ ಬಾ ಭಜಕರುದ್ಧಾರಕರ್ತನೆ ನಿನ್ನ
ಬಾರಿ ಬಾರಿಗೆ ಶಿರಬಾಗಿ ನಮಿಸುವೆನೂ || ||ಅ||

ಎಳೆಯ ತಳಿರು ಪೋಲುವ ದಿವ್ಯ ಚರಣ
ಕಮಲಕೆ ನಾ ನಮಿಸುವೆನೂ
ಶಿರೆಯಾದ ಅಹಲ್ಯೆಯ ಪರಿಪಾಲಿಸಿದ ದಿವ್ಯ
ಚರಣಕೆ ನಮೋ ಎಂಬೆನೂ
ಕಲಿ ಸುಯೋಧನನ ಒಲಗದಿ ಕೆಡಹಿದ ಪಾದ
ಸ್ಮರಣೆಯ ಮಾಡುವೆನೂ ||
ಚರಣದಲ್ಲಿ ರುಳಿ ಗೆಜ್ಜೆ ಘಲುರೆನೆ
ಮೆರೆವ ಪೈಜಣ ಪಾಡಗವು ರುಳಿ
ಹೊಳೆವ ಪೀತಾಂಬರದ ಅಂಚಿನ
ಲೋಲಿವ ಗಿಣಗಳು ನಲಿದು ಪಾಡ್ವವವು ||೧||

ವಟಪತ್ರಶಾಯಿ ನೀ ಸ್ಫುಟವಾಗಿ ಕಂಭದಿ
ಕುಟಿಲ ದೈತ್ಯರ ತರಿದೆ
ಹಟವ ಮಾಡಿದ ಮುದ್ದು ಪ್ರಹ್ಲಾದಗೆ ಪ್ರ-
ಕಟ ಮಾಡುತ ಪೊರೆದೇ
ಕುಟಿಲ ದಿತಿಜರನೆಲ್ಲ ತರಿದು ಸಜ್ಜನರಿಗೆ
ಹಿತವ ತೋರುತ ಮೆರೆದೆ ||
ಅಮಿತವಿಕ್ರಮ ಅಪ್ರಾಕೃತನೆ ನಿನ್ನ
ನಮಿಸಿ ಬೇಡುವ ಭಕ್ತವೃಂದಕೆ
ವಿವಿಧ ಭೋಗಗಳಿತ್ತು ಪಾಲಿಸಿ
ಭುವನಸುಂದರ ಭಕ್ತಹೃದಯಕೆ || ||೨||

ಕಂತುಪಿತನೆ ಬಾರೋ-ಕಮಲಸಂಭವನಯ್ಯ
ಕುಂತಿ ಸುತನ ಸಖನೆ
ಭ್ರಾಂತರಾದರೊ ನಿನ್ನ ಮಹಿಮೆ ತಿಳಿಯದಲೇ-

ಕಾಂತಭಕ್ತರು ಪರಿಯ
ಚಿಂತಿಸಿ ತಿಳಿಯಬೇಕೋ ಶ್ರೀಕಾಂತ ನಿನ್ನಯ ಮಹಿಮೆ
ಎಂದು ಉದ್ಧರಿಸುವೆಯೋ

ಸಂತತವು ಬಿಡದಂತೆ ಸ್ಮರಿಸುವ
ಚಿಂತೆ ಪಾಲಿಸು ಶ್ರೀ ಮನೋಹರ
ಪಂಥವಾಡಲಿಬೇಡ ಕಮಲಾ-
ನಾಭವಿಠ್ಠಲನೆ ನಮಿಸಿ ಬೇಡುವೆ ॥ ೩೨ ॥



**ಅರ್ಥವಿವರಣೆ :—**

ಈ ಕೀರ್ತನೆಯ ಕರ್ತೃಗಳು ಮೈಸೂರಿನ ಕೀರ್ತಿಶೇಷ ಶ್ರೀಮತಿ ಜೀವೂಬಾಯಿಯವರು. ಶ್ರೀ ಉರಗಾದ್ರಿವಾಸವಿಠ್ಠಲಾಂಕಿತ ದಾಸವರ್ಯರ ಶಿಷ್ಯಕೋಟಿಗೆ ಸೇರಿದವರು. ಕಮಲನಾಭವಿಠ್ಠಲ ಎಂಬ ಅಂಕಿತನಾಮದಲ್ಲಿ ಇವರು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಬಿಡಿ ಪದಗಳಲ್ಲದೆ, ಗಾಲವ ಚರಿತ್ರೆ-ಪ್ರಹ್ಲಾದ ಚರಿತ್ರೆ — ಪುರಂದರದಾಸರ ಚರಿತ್ರೆ ಇತ್ಯಾದಿ ಅನೇಕ ದೀರ್ಘಕೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಕೀರ್ತನೆ-ವೃತ್ತ-ಕಂದ ಪದ್ಯಗಳು-ವಚನ ಇತ್ಯಾದಿ ಅನೇಕ ಸಾಹಿತ್ಯಪ್ರಕಾರಗಳನ್ನು ಕಾಣಬಹುದು, ಶ್ರೀಯುತರು ಅನಕ್ಷರಸ್ಥರು. ಭಕ್ತಿಪೂರ್ಣವಾಗಿ ಅವರ ಬಾಯಿಂದ ಹೊರ ಹೊಮ್ಮುತ್ತಿದ್ದ ಆಶುಕೃತಿಗಳನ್ನು ಅವರ ತಮ್ಮಂದಿರಾದ ಶ್ರೀ ನಾಗೇಶ ಮೂರ್ತಿಗಳು ಅಂದವಾದ ಅಕ್ಷರಗಳಲ್ಲಿ ಬರೆದು ಸಂಗ್ರಹಿಸಿರುತ್ತಾರೆ. ಈಚೆಗೆ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯ ಅಂಗವಾದ ಹರಿದಾಸ ಸಾಹಿತ್ಯ ಪ್ರಕಟಣಾ ವಿಭಾಗವು ಆ ಸಮಗ್ರ ಕೀರ್ತನೆಗಳ ಸಂಗ್ರಹವನ್ನು ಮುದ್ರಣಕ್ಕಾಗಿ ತೆಗೆದುಕೊಂಡಿರುವರೆಂದು ತಿಳಿದುಬಂದಿದೆ.

ಸುಂದರ = ಲಾವಣ್ಯಮಯ, ಶ್ಯಾಮ = ನೀಲಮೇಘವರ್ಣವಿಶಿಷ್ಟವಾದ ಶರೀರ, ಎಳೆಯ ತಳಿರು = ಚಿಗುರೆಲೆ, ಶ್ರೀಹರಿಯ ದಿವ್ಯ ಭವ್ಯ

ಪಾದವು ಚಿಗುರಿನಂತೆ ಮೃದು ಕೋಮಲವಾಗಿದೆ. ಓಲಗದಿ = ತುಂಬಿದ ಸಭೆಯಲ್ಲಿ. ಝಳಿ = ಕಾಲಿನ ಬೆಳ್ಳಿಯ ಸರಪಳಿ (ಒಂದು ಪಾದಾಭರಣ). ಘಲುರೆನೆ = ಶ್ರೀಹರಿಯು ಕುಣಿವಾಗ ಘಲ್ ಘಲ್ ಎಂಬ ಶಬ್ದ. ಪೈಜಣ = ಕಿರುಗೆಜ್ಜೆಗಳಿಂದ ಕೂಡಿದ ಪಾದಾಭರಣ. ಪಾಡಗ = ಕಾಲಿನ ಬಳೆ. ಒಲಿವ ಗಿಣಿಗಳು = ಶ್ರೀಹರಿಯ ಪೀತಾಂಬರದ ಅಂಚಿಗೆ ಹೊಂದಿಸಿರುವ ಗಿಣಿಗಳು ನಲಿದು ಪಾಡುತ್ತಿವೆ ಎಂಬ ಉತ್ಪ್ರೇಕ್ಷಾಲಂಕಾರ. ವಟಪತ್ರಶಾಯಿ = ಮಹಾಪ್ರಳಯಕಾಲದಲ್ಲಿ ಶ್ರೀಹರಿಯು ಪ್ರಳಯೋದಕದ ಮೇಲೆ ಆಲದೆಲೆಯ ಮೇಲೆ ಶಿಶುರೂಪದಲ್ಲಿ ಮಲಗುವವನು. ಕುಟಿಲ = ವಕ್ರ ಬುದ್ಧಿಯುಳ್ಳ ದುಷ್ಟರಾದ ದೈತ್ಯರನ್ನು. ಪ್ರಕಟಿಸಮಾಡುತ = ನರಸಿಂಹರೂಪದಿಂದ ಕಂಭವನ್ನು ಸೀಳಿದು ಪ್ರತ್ಯಕ್ಷನಾದೆ. ದಿತಿಜ = ದಿತೀದೇವಿಯ ಮಕ್ಕಳಾದ ದೈತ್ಯರು. ಅಮಿತವಿಕ್ರಮ = ಅಸದೃಶಪರಾಕ್ರಮಿ. (ಅಸಮಾಸಾಹಸಮಲ್ಲ) ಭುವನಸುಂದರ = ಲೋಕಸುಂದರನಾದವನು. ಕಂತುಪಿತನೆ = ಮನ್ಮಥನ ತಂದೆ. ಕಮಲಸಂಭವನಯ್ಯ = ಶ್ರೀಪದ್ಮನಾಭನ ನಾಭೀಕಮಲದಲ್ಲಿ ಉದ್ಭವರಾದ ಬ್ರಹ್ಮದೇವರ ಜನಕನು. ಕುಂತೀಸುತನ ಸಖನೆ = ಕುಂತಿಯ ಮಗ ಅರ್ಜುನ, ಪಾರ್ಥಮಿತ್ರನಾದ ಶ್ರೀಕೃಷ್ಣ. ಭ್ರಾಂತರಾದರೋ = ಶ್ರೀಹರಿಯ ಮಹಿಮಾತಿಶಯಗಳನ್ನು ಸಾಕಲ್ಯೇನ ಯಾರೂ ಅರಿಯಲು ಅಸಾಧ್ಯ. ಪಂಥ ಮಾಡಲಿಬೇಡ = ನನ್ನೊಡನೆ ಹಠಮಾಡಲು ಬೇಡ.



## ೪೭೦

### (ಕೃಷ್ಣವಿಠ್ಠಲಾಂಕಿತ)

ರಾಗ— ತಾಳ

ಬಾರೋ ಕೃಷ್ಣ-ಬಾರೋ ಕೃಷ್ಣ-ಬಾರೋ ಕೃಷ್ಣ
ಮನದ ಸದನಕೆ ॥ ॥ಪ॥

ತೋರೋ ಕೃಷ್ಣ-ತೋರೋ ಕೃಷ್ಣ-ತೋರೋ ಕೃಷ್ಣ
ಚರಣ ಬಡವಗೆ ॥ ॥ಪ॥

ಶಿರವ ನೀಡುವೆ-ಚರಣದಲ್ಲಿ
ದುರಿತ ಹರಣ-ಕರುಣಭರಿತನೆ
ಸಿರಿಯ ರಮಣ-ನಿರಜ ಸುಗುಣ
ಸುರರ ಪೊರೆವ-ಧರಣಿ ಧರಿಪನೆ ॥ ॥೧॥

ಸಿರಿಯ ಮದದಿ-ಮರೆತೆ ನಿನ್ನ
ಕರೆದು ಪೊರೆಯೋ-ಶರಣರಕ್ಷಕಾ
ಅರಿಯೆ ಮಹಿಮೆ- ತರಳ ನಾನು
ತೊರೆಯಬಳಿವೆ-ಕ್ಷೇಮ ಧಾಮನೆ ॥ ॥೨॥

ವೇದವಿನುತ-ಮೋದಭರಿತ
ಸಾಧುಚರಿತ-ಆದಿಕಾರಣಾ
ಮಂದಮತಿಯು-ಕುಂದನಳಿದು
ತಂದೆ ಕಾಯೋ-ಬಂಧ ನೀಡ್ಡನೇ ॥ ॥೩॥

ನೀರಜಾಕ್ಷ-ವಾರಿನಿಲಯಾ
ಸೂರಿಗಮ್ಯ-ಪೂರ್ಣಧಾಮನೆ
ಸರ್ವನಾಮ-ಸರ್ವಕರ್ಮ
ಸರ್ವಶ್ರೇಷ್ಠ-ಸರ್ವಪ್ರೇರಕಾ ॥ ॥೪॥

ಇಂದಿರೇಶ-ನಂದಪೂರ್ಣ
ಸುಂದರಾಂಗ-ಛಂದ ಮೋಚಕ
ಕುಂದುರಹಿತ-ವಂದನಾರ್ಹ
ಬಿಂದು ಬಿಂಬ-ಕಂದರಾಶ್ರಯಾ ॥ ॥೫॥

ಭುವನ ವಿತತ-ಭುವನ ಮೂಲ
ಭುವನ ಪಾಲ-ಭುವನ ನಾಶಕ
ಭುವನ ಭಿನ್ನ-ಸ್ತವನ ಪ್ರಿಯ
ಕವನವರಿಯೆ- ಕವಿಭಿರೀಡಿತ ॥೬॥

ಮುಕುತರೊಡೆಯ-ಮುಕುತಿ ದಾತ
ಭಕುತಿ ಪ್ರಿಯ-ಭಕುತಿದಾಯಕ
ಶಕುತ ಶ್ರೀಕೃಷ್ಣವಿಠ್ಠಲ
ಯುಕುತಿಗೊಲಿಯ-ಲಕುಮಿ ನಾಯಕ ॥ ॥೭॥

**ಅರ್ಥವಿವರಣೆ:—**

ಈ ಕೀರ್ತನೆಯ ಕರ್ತೃಗಳು ಕೀರ್ತಿಶೇಷ ಹೊಳೆನರಸೀಪುರದ ಶ್ರೀ ಭೀಮರಾಯರು. ಉನ್ನತವಾದ ಲೌಕಿಕವೃತ್ತಿಯಲ್ಲಿದ್ದು, ಶ್ರೀಹರಿವಾಯುಗಳ ಪರಮಾನುಗ್ರಹದಿಂದ ವೈರಾಗ್ಯತಾಳಿ, ಸರ್ವಸಂಪತ್ತು, ಭೋಗಭಾಗ್ಯಗಳನ್ನು ಕೃಷ್ಣಾರ್ಪಣಗೈದು, ಶ್ರೀ ಮಳಖೇಡಕ್ಷೇತ್ರದಲ್ಲಿ ಆರು ತಿಂಗಳ ಕಾಲ ಕಠಿಣಸೇವೆಗೈದು, ಜಯತೀರ್ಥಶ್ರೀಮಚ್ಚರಣರ ಅನುಗ್ರಹಕ್ಕೆ ಪಾತ್ರರಾಗಿ, ಅಲ್ಲಿನ ಶ್ರೀಟೀಕಾಕೃತ್ಪಾದರ ವೃಂದಾವನವನ್ನು ಸ್ವಪ್ನ ದ್ವಾರಾ ಸೂಚನೆಯಂತೆ ಹೊಂದಿ, ದಾಸದೀಕ್ಷಾಪರರಾಗಿ ಶ್ರೀ ಉರಗಾದ್ರಿವಾಸವಿಠ್ಠಲದಾಸರಿಂದ ತಾಂಡವ ನವನೀತಧರ ಶ್ರೀಕೃಷ್ಣವಿಠಲ- ಎಂಬ ಅಂಕಿತವನ್ನು ಪಡೆದು. ಅದೇ ಅಂಕಿತನಾಮದಲ್ಲಿ ನೂರಾರು ಪದ-ಪದ್ಯ-ಸುಳಾದಿಗಳನ್ನು ರಚಿಸಿದರು. ಅಲ್ಲದೆ ಶ್ರೀಮದ್ಭಾಗವತ ದಶಮಸ್ಕಂಧವನ್ನು ಪೂರ್ಣವಾಗಿ ಕನ್ನಡನುಡಿಯಲ್ಲಿ ಪದ, ವೃತ್ತ, ಪದ್ಯಗಳ ರೂಪದಲ್ಲಿ ಶ್ರೀ ಕೃಷ್ಣ ಚರಿತಾಮೃತ — ಎಂಬ ಶಿರೋನಾಮೆಯಲ್ಲಿ ಉದ್ಗ್ರಂಥವನ್ನು ರಚಿಸಿ, ಉಡುಪಿಗೆ ಹೋಗಿ ಅಲ್ಲಿ ಕಡಲತೀರದ ದೈವನಿಗೆ ಅರ್ಪಿಸಿ, ಕೃತಕೃತ್ಯರಾದರು. ಐತರೇಯಾದಿ ದಶೋಪನಿಷತ್ತುಗಳನ್ನು ಭಾಮಿನೀಷಟ್ಪದಿಯಲ್ಲಿ

ಅರ್ಥಪೂರ್ಣವಾಗಿ ಬರೆದಿಟ್ಟಿರುವ ಮಹನೀಯರಿವರು. ಪ್ರತಿವರ್ಷವೂ ಶ್ರೀ ಟೀಕಾಕೃತ್ಪಾದರ ಆರಾಧನೆ, ಶ್ರೀಪುರಂದರದಾಸರ ಪುಣ್ಯದಿನಗಳನ್ನು ವಿಧ್ಯುಕ್ತವಾಗಿ ತಮ್ಮ ಗುರುಗಳ ಸಹಿತವಾಗಿ, ಹರಿದಾಸ ಬಂಧುಗಳೊಡಗೂಡಿ ಭರತಖಂಡದ ವಿವಿಧ ತೀರ್ಥಕ್ಷೇತ್ರಗಳಿಗೆ ಹೋಗಿ, ಐದು ದಿನಗಳ ಕಾಲ ಆಚರಿಸುತ್ತಿದ್ದ ಪುಣ್ಯಪುರುಷರಿವರು. ಪ್ರಕಾಶಕರ ಚಿಕ್ಕಪ್ಪಂದಿರು. ಪ್ರಾತಃ ಸ್ಮರಣೀಯರಾದ ಶ್ರೀ ಸತ್ಯಧ್ಯಾನತೀರ್ಥಶ್ರೀಪಾದಂಗಳವರಲ್ಲಿ ಶಾಂತಿ ಪಾಠ ಹಾಕಿ, ಸಚ್ಛಾಸ್ತ್ರಗಳನ್ನು ಅಧ್ಯಯಿಸಿದರು. ಇವರ ಸಮಗ್ರ ಕೀರ್ತನೆಗಳನ್ನು ಮುದ್ರಿಸಿ ಪ್ರಕಟಿಸುವ ಯೋಜನೆ ಇದೆ.



## ೪೭೧

(ಗುರುಗೋವಿಂದವಿಠ್ಠಲಾಂಕಿತ)

ರಾಗ-ಕಾಪಿ | ಅಟ್ಟತಾಳ

ಓಡೋಡಿ ಬಾರೋ ಶ್ರೀಹರಿಯೋ-ಎನ್ನಯ ದೊರೆಯೋ ॥ ॥ಪ॥

ಕಾಡುವ ರೋಗವನೋಡಿಸೆ ಬಾಹೋದು
ಜೋಡು ಕುಂಡಲಧಾರಿ ಹರಿಯೆ ಮುರಾರಿ ॥ ॥ಅ॥

ಮಾಡಿದ ಅಪರಾಧ ಅನಂತ_ಹೇ ಮಹಾಂತ
ಜೋಡಿಸಿ ಕರ ಮುಗಿವೆ ಕ್ಷಮೆಕಾಂತ- ಕಳೆವುದು ಧ್ವಾಂತ
ನಾಡೊಳಗಾವೆಡೆ ನೋಡಲು ನಿನಗೆ
ಈಡು ಕಾಣೆನೋ ಬಲು ಗೂಢ ಮಹಿಮ ಹರಿಯೋ ॥ ॥೧॥

ಕರ ಕರ್ಣಚಿತ್ತ ತ್ವಕು ರಸನ- ಕಾಯವು ಮನ್ನನ
ಕರಣಾಹಂಕಾರವು ಘ್ರಾಣ- ಬುದ್ಧಿಯು ನಯನಾ

ಕರಣ ಸರ್ವೋದ್ಭವ ಉರುತರ ಪಾಪವ
ಪರಿಹರಿಸುತ ಪೊರೆ ತ್ವರಿತದಿ [illegible] ॥೨॥

ಧರಣೀಧರ ಹರಿಯೆ ಮಾಲೋಲ–[illegible] ಕೋಲ
ಎರಡೇಳು ಲೋಕಗಳ್ಪಾಲಾ–[illegible] ಲೀಲಾ
ಗುರುಗೋವಿಂದವಿಠ್ಠಲ–ಚರಣಪಂಕಜ ತೋರಿ
ಪರಿಹರಿಸುವುದು ಭವ– ಪರಮ ದಯಾನಿಧೆ ॥ ॥೩॥

ಅರ್ಥವಿವರಣೆ :-

**ಕಾಡುವ ರೋಗವ** = ದುಃಖಭರಿತವಾದ ಸಂಸಾರವೆಂಬ ರೋಗ. **ಜೋಡುಕುಂಡಲಧಾರಿ** = ಕಿವಿಗಳ ಎರಡು ಕರ್ಣಾಭರಣಗಳು. **ಮುರಾರಿ** = ನರಕಾಸುರನೆಂಬುವನ ಪರಿವಾರದಲ್ಲಿ ಒಬ್ಬ ರಾಕ್ಷಸ, ಮುರ ಎಂಬುವನನ್ನು ಶ್ರೀಕೃಷ್ಣನು ಸಂಹರಿಸಿದನು. **ಮಹಾಂತ** = ಘನ್ನ ಮಹಿಮನಾದ ಶ್ರೀ ಪರಮಾತ್ಮ, **ಕ್ಷ್ಮೆಕಾಂತ** = ಭೂದೇವಿಯ ರಮಣ (ಕ್ಷಮೆ-ಭೂಮಿ) **ಧ್ವಾಂತ** = ಅಜ್ಞಾನರೂಪವಾದ ಕತ್ತಲೆ, **ಈಡುಕಾಣೆನೋ** = ನಿನ್ನ ಸರಿಯಾದವರನ್ನು ಯಾರನ್ನೂ ನಾ ಕಾಣೆ. (ಸಮಾಭ್ಯಧಿಕಶೂನ್ಯ) **ಗೂಢಮಹಿಮ** = ಗುಪ್ತಮಹಿಮಾಸಂಪನ್ನ, **ಕರಕವರ್ಗ** = ಕರ್ಮೇಂದ್ರಿಯವಾದ ಎರಡು ಕೈಗಳು, **ಚಿತ್ತ** = ಸಂಕಲ್ಪ ಮಾಡುವ ಚಿತ್ತವೆಂಬ ಮನೋವೃತ್ತಿ. **ತ್ವಕು** = ತ್ವಗಿಂದ್ರಿಯ, **ರಸನ** = ರಸನೇಂದ್ರಿಯವಾದ ನಾಲಿಗೆ, **ಕಾಯವು** = ಸ್ಥೂಲಶರೀರ, **ಮನ್ಮನ** = ನನ್ನ ಮನಸ್ಸೆಂಬ ಇಂದ್ರಿಯ, **ಕರಣಾಂಹಕಾರವು** = ಅಹಂಕಾರತತ್ತ್ವದಿಂದ ಜನ್ಯವಾದ ಇಂದ್ರಿಯಗಳು. **ಘ್ರಾಣ** = ನಾಸಿಕೇಂದ್ರಿಯ, **ನಯನಾ** = ನೇತ್ರೇಂದ್ರಿಯ, **ಬುದ್ಧಿ** = ನಿಶ್ಚಯ ಜ್ಞಾನವನ್ನು ಕೊಡುವ ಬುದ್ಧಿ, **ಕರಣ ಸರ್ವೋದ್ಭವ** = ಇಂದ್ರಿಯಗಳ ದ್ವಾರಾ ಉಂಟಾಗುವ ಸಕಲವಾದ, **ಉರುತರ ಪಾಪವ** = ಅತ್ಯಧಿಕ ಪಾಪಗಳು. **ಮಾಲೋಲ** = ಇಂದಿರಾರಮಣ. ಶ್ರೀ ಲಕ್ಷ್ಮಿಯಲ್ಲಿ ಕ್ರೀಡೆಯಾಡುವ ಶ್ರೀ ಪರಮಾತ್ಮ, **ಎರಡೇಳು** = ೨ × ೭ = ೧೪ ಲೋಕಗಳು. **ಕೋಲ** = ವರಾಹರೂಪೀ ಶ್ರೀಹರಿ, **ಭವ** = ಜನನ ಮರಣಾಖ್ಯವಾದ ಸಂಸಾರ.

✣

॥ ಶ್ರೀಃ ಹರಿಃ ಓಂ ॥

# ಶ್ರೀ ಹರಿಯ ಪರವಾದ ಕೀರ್ತನಮಾಲಾ

## ದೇವರ ಆಗಮನ

## ವಿಭಾಗ—೨

ಭಜನಕೌಸ್ತುಭ

## ೪೭೨

### (ಅಂಕಿತ-ಹಯವದನ)

ರಾಗ—ಮುಖಾರಿ ಝಾಪುತಾಳ

ಒಂದ ಶ್ರೀಕೃಷ್ಣ ನಲಿಯುತ್ತ ನಸುನಗೆ
ಯಿಂದ ಬೇಗ ಯಶೋದೆಯಿದ್ದೆಡೆಗೆ || ||ಪ||

ಉದಯದೊಳೆದ್ದು ಮೊಸರ ಕಡೆವಾಗ ತನ್ನ
ಅದುಭುತ ಬಾಲಲೀಲೆಗಳ ಪಾಡೆ
ಮುದದಿ ನಯನದಿ ಜಲ ತುಳುಕಾಡುತಿರೆ ಕಂಡು
ಮದನಯ್ಯನ ನಚ್ಚಿ ಬೆಣ್ಣೆಯ ಬೇಡುತ್ತ || ||೧||

ಮಕ್ಕಳುಗಳ ಕೂಡಿ ಮನೆ ಮನೆಯೊಳಗಾಡಿ
ಮಿಕ್ಕು ಮೀರಿದ ರಕ್ಕಸರನೀಡ್ಯಾಡಿ
ಅಕ್ಕರದಿಂದಲಿ ತಾಯ ಮುಖವನೀಕ್ಷಿಸುತಲಿ
ಗಕ್ಕನೆ ಸೆರಗ ಪಿಡಿದು ಮೊಲೆಯ ಕೊಡೆನ್ನುತ || ||೨||

ಕುರುಳು ಕೂದಲು ಅರಳೆಲೆ ಮಾಗಾಯಿ
ಕೊರಳಪದಕ ಹಾರ ಎಸೆಯುತಿರೆ
ಚರಣದಂದುಗೆ ಗೆಜ್ಜೆ ಘಲುಘಲುರೆನ್ನುತಲಿ
ಸಿರಿಯರಸ ಹಯವದನನೆನಿಪ ಮೋಹನಾಂಗ || ||೩||



ಅರ್ಥವಿವರಣೆ—

ನಚ್ಚಿ = ವಿಶ್ವಾಸವಿಟ್ಟು, ಮಿಕ್ಕುಮೀರಿದ = ಅಧಿಕ ಸಂಖ್ಯಾಕ ಪಾಪ, ಅಕ್ಕರದಿಂದಲಿ = ಪ್ರೇಮದಿಂದ, ಗಕ್ಕನೆ = ತಕ್ಷಣ. ಅರಳೆಲೆ =

ಆರಳೀ ಪತ್ರದ ಆಕಾರದಲ್ಲಿ ಮಾಡಿರುವ ಕಂಠಾಭರಣ. ಮಾಗಾಯಿ
ಹುಲಿಯುಗುರಿನ ಸರ. ಎಸೆಯುತಿರೆ = ಶೋಭಿಸುತ್ತಿರಲು.



## ೪೭೩

### (ಅಂಕಿತ-ಶ್ರೀಕೃಷ್ಣ)

**ರಾಗ-ಶ್ರೀರಾಗ** **ತ್ರಿಪುಟತಾಳ**

ರಂಗ ಬಂದ ಬೃಂದಾವನದಲಿ ನಿಂದ
ಕೊಳಲಿನ ಧ್ವನಿ ಬಹು ಚೆಂದ ॥ ॥ಪ॥

ನಂದಗೋಪಿಯರ ಕಂದ ಮುಕುಂದ
ಸುಂದರಿಯರ ಆನಂದ ಗೋವಿಂದ ॥ ॥ಅ॥

ಮಂದಗಮನೇರ ಕೂಡಿ ಸರಸವಾಡುತ
ಇಂದಿರೆಯರಸ ನಗುತ ಕೊಳಲೂದುತ
ಎಂದೆಂದಿಗೂ ತನ್ನ ನಂಬಿದ ಭಕ್ತರ
ಬಂದು ಪೊರೆವ ಗೋವಿಂದ ಮುಕುಂದ ॥ ॥೧॥

ಉದಧಿ ಸಂಚಾರ ಗುಣಗಂಭೀರ ನವನೀತ
ದಧಿಭಾಂಡಚೋರ ರುಗ್ಮಿಣಿ ಮನೋಹರ
ಮದನ ಗೋಪಾಲನು ಭಜಿಸುವ ಭಕುತರ
ಹೃದಯದೊಳಗೆ ನಿಂದು ಮುದವನು ಕೊಡುವ ॥ ॥೨॥

ಮಥುರೆಯಿಂದಲಿ ಬಂದ ಮಾವನ್ನ ಕೊಂದ
ಕಡೆಗೋಲ ನೇಣಕೈಲಿ ಪಿಡಿದ ದ್ವಾರಕಾವಾಸ

ಹಡಗಿನಿಂದಲಿ ಬಂದು ಉಡುಪಿಲಿ ನೆಲೆಸುತ
ಬಿಡದೆ ಪೂಜೆಗೊಂಬ ಒಡೆಯ ಶ್ರೀಕೃಷ್ಣ ॥ ॥೩॥



ಅರ್ಥವಿವರಣೆ

ಬೃಂದಾವನದಲಿ = ಗೋಕುಲದಲ್ಲಿ. ಮುಕುಂದ = ಮೋಕ್ಷಪ್ರದನು, ಸುಂದರಿಯರ = ಗೋಪಸ್ತ್ರೀಯರ, ಗೋವಿಂದ = ವೇದಪ್ರತಿಪಾದ್ಯನು, ಮಂದಗಮನೇರ = ಗಜಗಮನವುಳ್ಳ ಗೋಪಿಕಾಸ್ತ್ರೀಯರು. ಉದಧಿ ಸಂಚಾರ = ಸಮುದ್ರದಲ್ಲಿ ಸಂಚರಿಸುವ ಮತ್ಸ್ಯಾವತಾರ ರೂಪನಾದ ಶ್ರೀಹರಿ, (ಕ್ಷೀರಸಾಗರಶಯನ). ಭಾಂಡಚೋರ = ಬೆಣ್ಣೆ ಮೊಸರಿನಿಂದ ತುಂಬಿದ ಮಡಿಕೆಯನ್ನೇ ಕದ್ದ ಶ್ರೀಕೃಷ್ಣ, ಮದನ = ಕೋಟಿ ಮನ್ಮಥಲಾವಣ್ಯನು, ಮುದವನು = ಆನಂದವನ್ನು, ಮಾವನ್ನ ಕೊಂದ = ಸೋದರಮಾವನಾದ ಕಂಸನನ್ನು ಸಂಹರಿಸಿದ, ನೇಣ = ಹಗ್ಗ (ಉಡುಪಿ ಶ್ರೀ ಕೃಷ್ಣನು ತನ್ನ ಕೈಯಲ್ಲಿ ಮೊಸರನ್ನು ಕಡೆಯುವ ಕಡೆಗೋಲು ಮತ್ತು ಕಡೆಗೋಲಿನ ಹಗ್ಗವನ್ನು ಹಿಡಿದಿದ್ದಾನೆ). ಹಡಗಿನಿಂದಲಿ ಬಂದ = ಶ್ರೀಮನ್ಮಧ್ವಮುನಿಗಳು ಬಿರುಗಾಳಿಗೆ ಸಿಕ್ಕ ಹಡಗನ್ನು ರಕ್ಷಿಸಿ. ಅದರ ಯಜಮಾನನಿಂದ ಗೋಪೀಚಂದನದ ಗೆಡ್ಡೆಯನ್ನು ಪಡೆದು. ಅದರಲ್ಲಿದ್ದ ಶ್ರೀಕೃಷ್ಣನ ಪ್ರತಿಮೆಯನ್ನು ಉಡುಪಿಯಲ್ಲಿ ಸ್ಥಾಪಿಸಿದ ಪ್ರಸಂಗ.

## ೪೭೪

### (ಪುರಂದರವಿಠಲಾಂಕಿತ)

**ರಾಗ–ತೋಡಿ** **ಆದಿತಾಳ**

**ಬಂದಾ ನೋಡಿ–ಗೋವಿಂದ ಕೃಷ್ಣನು ॥ ॥ಪ॥**

ಬಂದ ಬಂದ ಆನಂದತೀರ್ಥಮು-
ನೀಂದ್ರವಂದ್ಯ ಹರಿ ನಂದಕಂದ ಮುಕುಂದನು || ||ಪ||

ಸರಸಿಜಾಕ್ಷ ಹರಿಯೋ-ಸರ್ವರ
ಪೊರೆವ ದಯಾನಿಧಿಯೋ ||
ಕರಿವರನ ಚಕ್ರದಿ ಉದ್ಧರಿಸಿದ
ಹರಿ ನಮ್ಮ ಪಾಲಿಪ ಪಾಲ್ಗಡಲೊಡೆಯನು || ||೧||

ಇಂದ್ರದೇವ ವಂದ್ಯ-ಇಷ್ಟರ
ನಿಂದು ಕಾಯ್ವ ನಿತ್ಯ ||
ಚಂದ್ರಕೋಟಿ ಲಾವಣ್ಯ ಮುಖದಲಿ
ಸುಂದರ ಅರಳೆಲೆ ಹಾರಗಳಿಂದಲೀ || ||೨||

ಚರಣಕಮಲ ಕಾಂತ-ಸರ್ವದಾ
ಮಾಳ್ಪುದು ದಯವಂತ ||
ಧರಧರ ಜನರಿಗೆ ಕರೆದು ವರವನೀವ
ಸರಸಿಜಾಕ್ಷ ನಮ್ಮ ಪುರಂದರವಿಠ್ಠಲನು || ||೩||



**ಅರ್ಥವಿವರಣೆ .-**

**ಆನಂದತೀರ್ಥಮುನೀಂದ್ರ ವಂದ್ಯ** = ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ನಾಮಕರಾದ ಶ್ರೀಮನ್ಮಧ್ವಮುನಿಗಳಿಂದ ವಂದಿತನಾದ, **ಕರಿವರನ** = ಮಡುವಿನಲ್ಲಿ ಸಿಕ್ಕಿದ್ದ ಗಜರಾಜನನ್ನು. **ಪಾಲ್ಗಡಲೊಡೆಯನು** = ಕ್ಷೀರಸಮುದ್ರ ಶಾಯಿಯಾದ ಶ್ರೀಮನ್ನಾರಾಯಣ (ಪಾಲು+ಕಡಲ+ಒಡೆಯ). **ಇಷ್ಟರ** = ತನ್ನ ಅಂತರಂಗಭಕ್ತರ, **ಅರಳೆಲೆ** = ಅಶ್ವತ್ಥಪತ್ರದ ಆಕಾರದಲ್ಲಿರುವ ಚಿನ್ನದ ದಳಗಳಿಂದ ಮಾಡಿದ ಕಂಠಾಭರಣ. **ಕಾಂತ** = ಶ್ರೀಹರಿಯುವಾದ ಕಮಲಗಳ ಪ್ರಕಾಶ (ಕಾಂತ-

ಎಂದರೆ, "ಕಾಂತ"-ಎಂದು ಅರ್ಥೈಯಿಸಬೇಕು. ಅಂತ್ಯಪ್ರಾಸಕ್ಕಾಗಿ). ಧರ ಧರೆ ಜನರಿಗೆ = ವಿಧವಿಧವಾದ ಸಾತ್ತ್ವಿಕ ಜನರನ್ನು



೪೭೫

(ಪ್ರಸನ್ನವೆಂಕಟಾಂಕಿತ)

**ರಾಗ-ಕನ್ನಡ ಕಾಂಬೋದಿ** **ಆದಿತಾಳ**

ಹಕ್ಕಿಯ ಹೆಗಲೇರಿ ಬಂದಾವಗೆ ನೋ-
ಡಕ್ಕ ಮನಸೋತೆ ನಾನವಗೆ ॥ ॥ಪ॥

ಸತ್ರಾಜಿತನ ಮಗಳೆತ್ತಿದ ಉ
ನ್ಮತ್ತ ನರಕನೊಡನೆ ಕಾದಿದ
ಮತ್ತೆ ಕೆಡಹಿದ ಅವನಂಗವ ಸತಿ
ಗಿತ್ತನು ತಾ ಆಲಿಂಗವ ॥ ॥೧॥

ಹದಿನಾರು ಸಾವಿರ ನಾರಿಯರ ಸೆರೆ
ಮುದದಿಂದ ಬಿಡಿಸಿ ಮನೋಹರ
ಅದಿತೀಯ ಕುಂಡಲ ಕಳಿಸಿದ ಹರ
ವಿಧಿ ಸುರ ನೃಪರನು ಸಲಹೀದ ॥ ॥೨॥

ಉತ್ತಮಾ ಪ್ರಾಗ್ಜ್ಯೋತಿಷ ಪುರವಾ ಭಗ-
ದತ್ತಗೆ ಕೊಟ್ಟ ವರಾಭಯವ
ಕರ್ತ ಕೃಷ್ಣಾರ್ಯನ ನಂಬೀದೆ ಶ್ರೀ-
ಮೂರ್ತಿಯ ಪಾದವ ಹೊಂದೀದೆ ॥ ॥೩॥

ನರಕಚತುರ್ದಶಿ ಪರ್ವದ ದಿವ
ಹರುಷಾದಿ ಪ್ರಕಟನಾದನು ದೇವ

ಶರಣಾಗತ ಜನವತ್ಸಲಾ ರಂಗ
ಪರಮಭಾಗವತರ ಪರಿಪಾಲಾ ॥ ॥೪॥

ಪೊಗಳಿ ಕೃಷ್ಣಯ್ಯನ ಮಹಿಮೆಯಾ ಮುಕ್ತಿ
ನಗರದ ಅರಸನ ಕೀರ್ತಿಯಾ
ಜಗದೀಶ ಪ್ರಸನ್ನವೆಂಕಟೇಶನು ಭಕ್ತ-
ರಘಪಾರಿ ರವಿಕೋಟಿಪ್ರಕಾಶನು ॥ ॥೫॥

❖

**ಅರ್ಥವಿವರಣೆ :—**

ಹಕ್ಕಿಯು ಹೆಗಲೇರಿ = ಗರುಡನ ಹೆಗಲಿನ ಮೇಲೆ ಕುಳಿತು ಸಂಚರಿಸುವ ಶ್ರೀಹರಿ. ಸತ್ರಾಜಿತನ = ಯದುವಂಶದ ನಿಮ್ನ ರಾಜನ ಮಗ, ಸೂರ್ಯನ ಪರಮಭಕ್ತ. ತಪಸ್ಸಿನಿಂದ ಸೂರ್ಯನನ್ನು ಒಲಿಸಿ, ಅವನಿಂದ ಸ್ಯಮಂತಕವೆಂಬ ರತ್ನವನ್ನು ಪಡೆದ, ಈತನ ಪುತ್ರಿಯೇ **ಸತ್ಯಭಾಮೆಯು. ನರಕನೊಡನೆ** = ವರಹಾವತಾರಿಯಾದ ವಿಷ್ಣುವಿನಿಂದ ಭೂದೇವಿಯಲ್ಲಿ ಜನಿಸಿದ ಭೂಪುತ್ರನಾದ ನರಕಾಸುರ. ಇವನಿಗೆ ಭೌಮಾಸುರನೆಂದೂ ಹೆಸರು. ಅವನ ರಾಜಧಾನಿ, ಪ್ರಾಗ್ಜ್ಯೋತಿಷಪುರ. **ಅದಿತಿಯ ಕುಂಡಲ** ಸೆಳೆಸಿದ = ನರಕಾಸುರನು ಇಂದ್ರನ ಶ್ವೇತಚ್ಛತ್ರವನ್ನು ಮತ್ತು ಅದಿತಿಯ ಕರ್ಣಕುಂಡಲಗಳನ್ನು ಅಪಹರಿಸಿದ್ದನು. ನರಕಾಸುರವಧೆಯ ನಂತರ, ಆ ವಸ್ತುಗಳನ್ನು ಇಂದ್ರನಿಗೆ ಮತ್ತು ಅದಿತಿಗೆ ಶ್ರೀಕೃಷ್ಣನು ಹಿಂದಿರುಗಿಸಿದ, **ಭಗದತ್ತಗೆ** = ನರಕಾಸುರನ ಪುತ್ರ. ಶ್ರೀಕೃಷ್ಣನು ನರಕಾಸುರನನ್ನು ಸಂಹರಿಸಿದ ತರುವಾಯ ಭಗದತ್ತನಿಗೆ ಪ್ರಾಗ್ಜ್ಯೋತಿಷಪುರದಲ್ಲಿ ಪಟ್ಟಾಭಿಷೇಕ ಮಾಡಿದನು, ಅವನಿಗೆ ಅಭಯಪ್ರದಾನಮಾಡಿ, ನರಕಾಸುರನ ವಶವಲ್ಲಿದ್ದ ವೈಷ್ಣವಾಸ್ತ್ರವನ್ನು ಕೊಟ್ಟನು, **ನರಕಚತುರ್ದಶಿ** =

ಶ್ರೀಕೃಷ್ಣನು ನರಕಾಸುರನನ್ನು ಸಂಹರಿಸಿದ ಮಂಗಳದಿನ. **ಮುಕ್ತಿನಗರದ** = ಮುಕ್ತಿಧಾಮವಾದ ವೈಕುಂಠಾಧಿಪತಿ. **ಅಘಹಾರಿ** = ಪಾಪಪರಿಹಾರಕ.

## ೪೭೬

### (ಅಂಕಿತ-ಮಹಿಪತಿ)

**ರಾಗ-ಯಮುನಕಲ್ಯಾಣಿ** **ತ್ರಿಪುಟತಾಳ**

**ಭಾಸುತ ಬಂದಾ ನೋಡಿ-ಭಾಸ್ಕರಕೋಟಿತೇಜಾ**
**ಲೇಸು ಲೇಸಾಯಿತೆನ್ನ ಮನದೊಳಗೆ ||** ||ಪ||

ಹೊಳೆಯುತ ಸುಳಿಯುತ-ಥಳ ಥಳಗೂಡುತ
ಒಲಿಯುತ ಬಂದಾ ನೋಡೀ-ಎನ್ನೊಳಗೆ || ||೧||

ಕರುಣಕವಚವ ತೊಟ್ಟು-ವರಮುನಿಗಳ ಪ್ರಾಣಾ
ಹರುಷ ಬೀರುತ ಬಂದಾ-ತ್ವರಿತದಿಗೆ || ||೨||

ದೀನದಯಾಳು ಎನ್ನಾ-ಅನಾಥಬಂಧು ಸ್ವಾಮಿ
ಸನಾಥಮಾಡ ಬಂದಾ-ಮಹೀಪತಿಗೆ || ||೩||

□

**ಅರ್ಥವಿವರಣೆ ,—**

**ಭಾಸುತಾ** = ಪ್ರಕಾಶಮಾನನಾಗಿ ಕಾಂತಿಯನ್ನು ಬೀರುತ್ತಾ ಬಂದ. **ಭಾಸ್ಕರಕೋಟಿ ತೇಜಾ** = ಕೋಟಿಸೂರ್ಯ ಪ್ರಕಾಶನು (ಇಲ್ಲಿ 'ಕೋಟಿ' ಎನ್ನುವುದಕ್ಕೆ ಅನಂತ-ಎಂದರ್ಥ). **ಲೇಸು ಲೇಸಾಯಿತು** = ನನ್ನ ಉದ್ಧಾರವಾಯಿತು, **ಸುಳಿಯುತ** = ಅಂತರ್ಚಕ್ಷುಗಳಿಗೆ ಗೋಚರಿಸುತ್ತಾ.

ವರಮುನಿಗಳ ಪ್ರಾಣಾ = ಶ್ರೇಷ್ಠರಾದ ಮುನಿಗಳಿಗೆ (ಬ್ರಹ್ಮಜ್ಞಾನಿಗಳಿಗೆ) ಮುಕ್ತಿ ಕೊಡುವವನು. ಸನಾಥ ಮಾಡಬಂದಾ = ಅಸ್ವತಂತ್ರರಾದ ಸಕಲ ಜೀವರೂ ಭಗವದಧೀನರು. ಪ್ರತಿಬಿಂಬರೂಪರಾದ ಜೀವರಿಗೆ ಬಿಂಬನೆನಿಸುವ ಶ್ರೀಹರಿಯೇ ನಾಥನು.



## ೪೭೭

## (ವಾಸುದೇವವಿಠ್ಠಲಾಂಕಿತ)

**ರಾಗ—ಮಧ್ಯಮಾವತಿ** ಆದಿತಾಳ

ಬಂದ ಕೃಷ್ಣ ಚಂದದಿಂದ-ಬಂದ ನೋಡೇ ಗೋಪ-
ವೃಂದದಿಂದಾನಂದಿಸುತ ಬಂದ ನೋಡೇ ॥ ಪಲ್ಲ ॥

ಗೋಪ ವೇಷ ನೀವ ಬಂದ ನೋಡೆ-ಸ್ವಾಮಿ
ದೇವತಾವಾದ್ಯಗಳಿಂದ ಬಂದ ನೋಡೆ ॥ ೧ ॥

ಪಾಪ ಲೋಪ ಗೋಪರೂಪ ಬಂದ ನೋಡೆ-ಸ್ವಾಮಿ
*ತಾಪಲೋಪಾಲಾಪಾಟೋಪಾ ಬಂದ ನೋಡೆ ॥ ೨ ॥

ನೂಪುರ ಸುಖ ಸೂಸುತ ಬಂದ ನೋಡೆ-ಸ್ವಾಮಿ
ವಾಸುದೇವವಿಠ್ಠಲ ತಾ ಬಂದ ನೋಡೆ ॥ ೩ ॥

(*ಪಾಠಾಂತರ: ತಾಪಲಾಪ ಕೋಪಲೇಪ)



**ಅರ್ಥವಿವರಣೆ :—**

ಈ ಕೃತಿಯು **ವಾಸುದೇವವಿಠ್ಠಲಾಂಕಿತ ಶ್ರೀವ್ಯಾಸತತ್ತ್ವಜ್ಞರಿಂದ (ಇಂಜಿಸ್ವಾಮಿಗಳು) ರಚಿತವಾದದ್ದು.**

ಚೆಂದದಿಂದ = ಮನೋಹರ ರೂಪದಿಂದ. ಗೋಪವೃಂದದಿಂದ = ಗೋಪಾಲಕರಿಂದ ಕೂಡಿಕೊಂಡು. ಆನಂದಿಸುತ = ತಾನು ಆನಂದ ಪಡುತ್ತಾ, ತದ್ವಾರಾ ಪ್ರತಿಬಿಂಬರಾದ ಗೋಪಾಲಕರಿಗೆ ಆನಂದಪ್ರದನಾಗಿ. ಗೋವ ಮೇವ ನೀವ = ಗೋವುಗಳಿಗೆ ಹುಲ್ಲನ್ನು ತಿನ್ನಿಸುವ, ಅಂದರೆ ಮೇವನ್ನು ಕೊಡುವ. ದೇವತಾವಾದ್ಯಗಳಿಂದ = ಆಕಾಶದಲ್ಲಿ ದೇವತೆ ಗಳು ಭೇರಿ ಮುಂತಾದ ವಾದ್ಯಗಳನ್ನು ಮೊಳಗಿಸುತ್ತಿರಲು. ಪಾಪ ಲೋಪ = ಶ್ರೀಕೃಷ್ಣನ ದರ್ಶನಮಾತ್ರದಿಂದ ಪಾಪಗಳು ಪರಿಹಾರ. ಗೋಪರೂಪ = ಗೋಪಾಲಕರ ವೇಷದಲ್ಲಿರುವ ಶ್ರೀಕೃಷ್ಣ. ತಾಪ ಲೋಪ ಆಲಾಪ ಆಟೋಪ = ಭಕ್ತರ ಎಲ್ಲಾ ದುಃಖಗಳನ್ನು (ತಾಪ) ಪರಿಹರಿಸುವಂತಹ (ಲೋಪ) ಸವಿಮಾತುಗಳನ್ನು (ಆಲಾಪ) ಆಡುವ ಸಂಭ್ರ ಮದ ನಡಗರದ ದೈವ ಶ್ರೀಕೃಷ್ಣ (ಆಟೋಪ). ಭೂಸುರ = ಜ್ಞಾನಿ ಗಳಾದ ವಿಪ್ರರಿಗೆ, ಸುಖ ಸೂಸುತ = ಸುಖದ ಉದ್ರೇಕವನ್ನು ಕೊಡುತ್ತಾ (ಶ್ರೀಕೃಷ್ಣನು ಗೋಬ್ರಾಹ್ಮಣಪ್ರಿಯನು, ಬ್ರಹ್ಮಣ್ಯದೇವನೆಂಬುದರ ಅರ್ಥ ವಿದು).



## ೪೭೮

### (ಅಂಕಿತ–ಶಂದೆಮುಹೀಪತಿ)

ರಾಗ–ಕಾಫಿ ತ್ರಿಪುಟತಾಳ

ಮಾವ ಪ್ರಹ್ಲಾದನಾಕ್ಷಣ
ಪಾಲಿಸಿದ ತನ್ನೊಡೆಯನ ಚರಣಕ ‖ ‖ಪ‖

ಇಂತು ನೆರೆದು ನಿಂದಿಹ ಸಮಯದಲೀ
ಸಂತತಾನಂದರೂಪದಲೀ ‖ ‖೧‖

ಮುಕ್ತರೊಡಗೂಡಿ ಸಾರೂಪ್ಯದಿಂದ
ಯುಕ್ತನಾಗಿಪಾಭರಣಗಳಿಂದ || ||೬||

ಮುಂದನೋಡದೆ ಬಂದ ಪೊಮ್ಮಾಗ ನಾ
ತಂದೆಮಹೀಪತಿ ಪ್ರಭು ಶರಣಾ || ||೭||



೪೭೯-

(ವಿಜಯವಿಠ್ಠಲಾಂಕಿತ)

ರಾಗ-ಆನಂದ ಭೈರವಿ ಆದಿತಾಳ

ಬಂದು ನಿಲ್ಲೋ ದಯಾನಿಧೆ || ||ಪ||

ಬಂದು ನಿಲ್ಲೊ ನಿನಗೊಂದಿಸುವೆನು ಗೋ-
ವಿಂದಾ ಗೋವಳರಾಯ ಸಂದೇಹಗೊಳಿಸದೆ || ||ಅಪ||

ಪದೋಪಕ ನಾನು ಸದಾ ನಿರ್ಮಲ ನೀನು
ಪದೋಪದೆಗೆ ಪೇಳುವ್ವದುಚಿತವೇನೊ || ||೧||

ಮನದೊಳು ಪೊಳೆದು ಚಿಂತನೆಗೆ ನೆಲೆಯಾಗಿ
ಘನಮಹಿಮನೆ ಮಧ್ವಮುನಿಮನಮಂದಿರ || ||೨||

ಕಡಗೋಲ ನೇಣ ಪಿಡಿದ ಪರಮಾನಂದ
ಉಡುಪಿಯ ಸಿರಿ ಕೃಷ್ಣ ವಿಜಯವಿಠ್ಠಲರೇಯ || ||೩||



**ಅರ್ಥವಿವರಣೆ :–**

ಗೋವಳರಾಯ = ಗೋಕುಲದಲ್ಲಿ ಗೋವುಗಳನ್ನು ಕಾಯ್ದ ಕೃಷ್ಣನೇ, ಸದೋಷಕ ನಾನು = ದೋಷ ಪೂರ್ಣನಾದ ಜೀವ ನಾನು. ಸದಾ ನಿರ್ಮಲ ನೀನು = ಅನಾದ್ಯನಂತಕಾಲದಿಂದ ನಿರ್ದೋಷಿ ಪರಮಾತ್ಮನು, ಪದೋಪದೆಗೆ= ಪುನಃ ಪುನಃ (ಮೇಲಿಂದ ಮೇಲೆ), ಪ್ರೊಳೆದು = ನಿನ್ನ ದರ್ಶನಭಾಗ್ಯ ನೀಡಿ, ಚಿಂತನೆಗೆ ನೆಲೆಯಾಗಿ = ಧ್ಯಾನಕ್ಕೆ ಸ್ಥಿರ ವಿಷಯನಾಗಿ, ನೇಣ=ಕಡಗೋಲಿನ ಹಗ್ಗ (ಮೊಸರು ಕಡೆಯುವ ಹಗ್ಗ) ನಿಜಮಾನಂದ= ನಿತ್ಯ ಆನಂದಪೂರ್ಣ.

❖

## ೪೮೦

### (ಅಂಕಿತ–ಹಯವದನ)

ದಾದ್ರೆ—

ರಾಜಬೀದಿಯೊಳಗಿಂದಾ—ಕಸ್ತೂರಿ ರಂಗಾ
ತೇಜಿಯೇರಿ ಮೆರೆದು ಬಂದಾ ॥ ॥ಪ॥

ಸುತ್ತಮುತ್ತಲು ಸಾವಿರಾರು ಸಾಲು ದೀವಿಗೆ
ಹತ್ತು ದಿಕ್ಕಲಿ ಬೆಳಗುತಿದ್ದ ಹಗಲು ಬತ್ತಿಯು
ವಿಸ್ತರದಿ ಭೂಸುರರು ಸುತ್ತುಗಟ್ಟಿ ನಿಂತಿರಲು
ಮತ್ತೆ ನಮ್ಮೊಳಿಂತು ತೇಜ ಮೆಲ್ಲನೆ ನಡೆಸುತ ಜಾಣ ॥ ॥೧॥

ಡೋಲು ಬಾಜಿ ಭೇರಿ ತಂಬೂರಿ ಮೊದಲಾದ
ನಾನಾ ವಾದ್ಯಾಂಗಗಳೆಲ್ಲಾ ಹೊಗಳಿ ಹೊಗಳಲು
ಗಾಜ [illegible]ಪುರದ ಮುಂದೆ ದಾಳಿಮಾಡುವಂತೆ ಸುತ್ತ
ಧ್ವಜ[illegible]ವನೆಬ್ಬಿಸಿ ವೈಯೊಳಿಯನಿಕ್ಕುತ ಜಾಣ ॥ ॥೨॥

ವೇದಶಾಸ್ತ್ರ ಪುರಾಣಂಗಳು ವಂದಿಸಿ ಪೊಗಳಲು
ಮೋದದಿಂದ ಗಾಯಕರು ಮೌರಿ ಪಾಡಲು
ಹಾದಿ ಬೀದಿಯಲ್ಲಿ ನಿಂತ ಭೂಸುರಜನರಿಗೆಲ್ಲ
ಆದರದಿಂದಿಕ್ಕಿ ಅಮೃತಾನ್ನವ ನಿಕ್ಕುತ ಜಾಣ ॥ ॥೩॥

ರಂಭೆ ಮೊದಲಾದ ಸುರರ ಮಾನಿಯರು
ತುಂಬುರನಾರದರು ಬಿಡದೆ ಕೂಡಿ ಪಾಡಲು
ಶಂಭುಮುಖ ನಿರ್ಜರಾನೀಕ ವರಾಕೆನುತ
ಅಂಬುಧಿ ಭವಾಬ್ಧಿಗಳ ಅಳಿವ ಶ್ರೀರಂಗನಾಥಾ ॥ ॥೪॥

ಹಚ್ಚ ನಗೆ ಸಾರು ಬೇಳೆ ಹಾಲು ಕೆನೆಗಳು
ಮುಚ್ಚಿ ತಂದ ಕೆನೆ ಮೊಸರು ಮೀಸಲು ಬೆಣ್ಣೆಯು
ಹಚ್ಚಿ ತುಪ್ಪ ಪಕ್ವವಾದ ಅತಿರಸ ಹುಗ್ಗಿಯನ್ನು
ಮೆಚ್ಚಿ ಉಂಡು ಪಾನಕ ನೀರುಮಜ್ಜಿಗೆಗಳ ಸವಿದು ಬೇಗ ॥ ॥೫॥

ಮುತ್ತಿನ ತುರಾಯಿ ಅಂಗಿ ಮುಂಡಾಸದಿ
ಕತ್ತಳಿಪ ತಾಳಿ ವಜ್ರ ತಾಳಿ ಬೌಕಳಿ
ಮುತ್ತಿನ ಕುಂಡಲನಿಟ್ಟು ಮೋಹಿಸುತ್ತ ಬೀದಿಯಲ್ಲಿ
ಕತ್ತಿಯ ಕೈಯಲ್ಲಿ ಪಿಡಿದು ಮತ್ತಲ್ಲಿ ವಿರಾಜಿಸುತ್ತ ॥ ॥೬॥

ಸಣ್ಣ ಮುತ್ತು ಕೆತ್ತಿಸಿದ ಸಕಲಾದಿಗಳ
ಹೊನ್ನ ಹೊಸ ಜಾಸ ಜಂಗುಳಿ ಹೊಳೆವ ಸೊಬಗಿನ
ಉನ್ನಂತ ಪರಾಯಣ ಉತ್ತಮ ರಾಜಾಶ್ವನೇರಿ
ಎನ್ನ ಹಯವದನ ರಂಗ ಎಲ್ಲರಿಗಿಷ್ಟಾರ್ಥ ಕೊಡುತ ॥ ॥೭॥

**ಅರ್ಥವಿವರಣೆ :—**

ಕೇಜಿ= ಕುದುರೆ (ಅಶ್ವವಾಹನವಾಗಿ). ನಮ್ಮೊಳಿಂತು = ನಮ್ಮ ಹೃನ್ಮಂದಿರದಲ್ಲಿ, ಪಂಚಾಂಕಗಳು = ಪಂಚವಾದ್ಯಗಳು. ವೈಯೊಳಿಯು= ವೈಭವದಿಂದ ಮೌರಿ= ಒಂದು ವಾದ್ಯವಿಶೇಷ. ನಿರ್ಜರಾನೀಕ = ದೇವತಾಸಮೂಹ. ಆತಿರಸ = ಸಿಹಿ ಖಾದ್ಯ. (ಗಾರಿಗೆ) ಮುಂಡಾಸದಿ= ರುಮಾಲು [ಶಿರವಸ್ತ್ರ]



## ೪೮೧

(ಗೋಪಾಲವಿಠ್ಠಲಾಂಕಿತ)

ರಾಗ-ಕಾಂಬೋದಿ ಝಂಪೆತಾಳ

ಬಂದ್ಯಾ ವಿಠಲ ಇಂದು ಬಡವನಲ್ಲಿ ॥ ॥ಪ॥

ವೃಂದಾವನದಲ್ಲಿ ಗೋವೃಂದಗಳ ಕಾಯಿದವನೆ ॥ ॥ಅ॥

ಸುಳಿಗುರುಳು ಮೇಲೆ ಅರಳೆ ಸಿರಿಕಿರೀಟ
ಎಳೆದಳಿರು ಚೂತ ಮಲ್ಲಿಗೆಯು ದೂರ್ವೆ
ಥಳಥಳಿಪ ಮುಖ ನಾಸ ನಯನ ಫಣೆಯಲಿ ತಿಲಕ
ಚಲಿಸುವ ಕರ್ಣಕುಂಡಲ ಪ್ರಭೆಯು ಶೋಭಿಸುತ್ತ ॥ ॥೧॥

ಕೊರಳಲ್ಲಿ ಸರಿಗೆ ಸರಪಳಿ ಪಚ್ಚೆಪದಕವು
ಪರಿಪರಿಯಹಾರ ಶ್ರೀತುಲಸಿಮಾಲೆ
ಸಿರಿಗಂಧಲೇಪ ಸಿರಿವತ್ಸ ಉರ
ವರಕಟಿಗೆ ಗಂಟೆ ಪರಿಪರಿಯ ಧಾಮಾವ ಸುತ್ತಿ ॥ ॥೨॥

ಮುಂಗಯ್ಯ ಕಡಗ ಸರಪಳಿ ತೋಳಭಾಪುರಿ
ಶೃಂಗಾರವಾದ ಗದೆ ಶಂಖ ಚಕ್ರ
ಅಂಗಯ್ಯ ಪದುಮ ಅಂಗುಲಿ ವೇಣು ಮೀಟುತ
ಹಿಂಗದೆ ಎನ್ನಂತರಂಗದ ಮನೆಗಿನ್ನು ॥ ॥೩॥

ಮಾಳಿಗೆ ಶ್ರೀನಿವಾಸಾರ್ಯರ ಮನೆಯಿಂದ
ಶೀಲಗುರು ವಿಜಯರಾಯರಿಗೆ ಒಲಿದು
ಮೇಲಾಗಿ ಬಹು ಪರಿಗಳಿಂದ ಪೂಜೆಯಗೊಂಡು
ಕೀಳುಮನುಜನ ಎನ್ನ ಪಾಲಿಸಲು ಬೇಕೆಂದು ॥ ॥೪॥

ಈಸುಬಗೆ ಪೂಜೆಯು ಎನ್ನಿಂದಲಾಗದು
ಲೇಶವಾದರು ಇಲ್ಲ ಎನಗೆ ಜ್ಞಾನ
ಶ್ರೀಶನೆ ನೀನಿಂತಲ್ಲಿ ಸಕಲುಂಟು
ಶ್ರೀ ಶ್ರೀನಿವಾಸ ಗೋಪಾಲವಿಠ್ಠಲ ವಿಜಯ ॥ ॥೫॥



ಅರ್ಥವಿವರಣೆ—

ತಮ್ಮ ಅಂತರಂಗದ ಮಂದಿರದಲ್ಲಿ ಸುಳಿದ ಗೋಪಾಲನ ದರ್ಶನ ಭಾಗ್ಯವನ್ನು ಪಡೆದ ಶ್ರೀಗೋಪಾಲದಾಸವರ್ಯರ ಕೃತಿ ಇದು. ಶ್ರೀಕೃಷ್ಣನ ವಿವಿಧ ಆಭರಣಗಳು, ಆಯುಧಗಳ ಸಮಗ್ರ ವಿವರಣೆ ಇಲ್ಲಿದೆ. ದೂರ್ವೆ= ದರ್ಭೆ. ಮುಂಗಯ್ಯ = ಹಸ್ತದ ಮುಂಭಾಗ. ಅಂಗುಲಿ ವೇಣು ಮೀಟುತ = ಬೆರಳಿನಿಂದ ಕೊಳಲನ್ನು ಒತ್ತುತ್ತಾ ವೇಣುನಾದ. ವಿಠ್ಠಲ ದೇವರು ಮಾಳಿಗೆ ಶ್ರೀನಿವಾಸಾಚಾರ್ಯರ ಮನೆಯಿಂದ ಶ್ರೀವಿಜಯರಾಯ ರಲ್ಲಿಗೆ ಬಂದು ಅವರಿಂದ ಪರಿಪರಿ ಅರ್ಚಿತನಾದ ಪ್ರಸಂಗ ವಿಶೇಷ. ಶ್ರೀ ವಿಜಯದಾಸಾರ್ಯರು ಮಾಡುವಂತಹ ಪೂಜೆ ನಾನು ಮಾಡಲಾರೆ ಎಂದು ದೈನ್ಯಭಾವದಿಂದ ತಮ್ಮ ಗುರುಭಕ್ತಿಯನ್ನು ಪ್ರದರ್ಶಿಸಿದ್ದಾರೆ.



## ೪೮೨

### (ಪ್ರಾಣೇಶವಿಠ್ಠಲಾಂಕಿತ)

ರಾಗ—ಸಾವೇರಿ ಆದಿತಾಳ

ಬಂದಾ- ಗೋವಿಂದಾ- ಮುಕುಂದಾ- ನಿತ್ಯಾನಂದ- ಬಂದ ॥ ॥ಪ॥

ಬಂದ ದುರಿತಗಳ ಪರಿಹರಿಸಲು ನಮ್ಮ
ಇಂದಿರೇಶ ಸ್ವಾಮಿ ಶ್ರೀ ವೆಂಕಟೇಶನು
ಬಂದನು ಭರದಿಂದ ಗರುಡವಾಹನನಾಗಿ
ಬಂದ- ಬಂದ ಭಕ್ತವೃಂದವ ನೋಡುತ ॥ ॥ಅ॥

ದುರುಳನಾದ ದುರ್ಯೋಧನ ಸಭೆಯೊಳು
ತರುಣಿ ದ್ರೌಪದಿ ಸೀರೆಯ ಸೆಳೆಸಲು
ಪರಮ ಕರುಣದಿಂದ ತರುಣಿಗಕ್ಷಯವಿತ್ತು
ದ್ವಾರಕಾಧಿಪತಿ ಶ್ರೀಪತಿ ಒಲಿಯುತ- ಬಂದಾ ॥ ॥೧॥

ಅರಗಿನಮನೆಯೊಳು ಪಾಂಡುಕುಮಾರರು
ಇರುತಿರೆ ಅವರಿಗೆ ಬಂದ ವಿಪತ್ತನು
ಪರಿಹಾರವ ಮಾಡಿ ದ್ರುಪದನ ಪುರಿಯೊಳು
ಪರಮ ಹರುಷದಿಂದ ಮದುವೆಯ ಮಾಡಿದವ-ಬಂದಾ ॥ ॥೨॥

ಗುಣನಿಧಿ ಪ್ರಾಣೇಶವಿಠ್ಠಲನು ಬಂದ
ಘನತರ ವಾದ್ಯವಿಶೇಷಗಳಿಂದ
ಝಣ ಝಣರೆನ್ನುವ ಗೆಜ್ಜೆನಾದಗಳಿಂದ
ತದ್ಧಿಮಿ ಧಿಮಿಕೆಂದು ಕುಣಿಯುತ—ಬಂದಾ ॥ ॥೩॥



ಅರ್ಥವಿವರಣೆ :–

ತರುಣಿಗಕ್ಷಯವಿತ್ತು = ದ್ರೌಪದಿಯು ಮೊರೆಯನ್ನು ಕೇಳಿ, ಶ್ರೀಕೃಷ್ಣನು ಅವಳಿಗೆ ಅಕ್ಷಯವಸ್ತ್ರಗಳನ್ನಿತ್ತು (ಅವಳುಟ್ಟಿದ್ದ ಸೀರೆಯೇ ಅಕ್ಷಯವಾಗಲೆಂದು ಸಂಕಲ್ಪಿಸಿದನು), ಅವಳ ಮಾನರಕ್ಷಣೆ ಮಾಡಿದ ಪ್ರಸಂಗ ವಿಶೇಷ. ಬಂದ ವಿಪತ್ತನು = ಅರಗಿನ ಮಂದಿರದಲ್ಲಿ ಪಾಂಡವರನ್ನು ಸುಡಬೇಕೆಂದು ದುರುಳ ದುರ್ಯೋಧನನು ದುಷ್ಟ ಸನ್ನಾಹ ಮಾಡಿರಲು ಶ್ರೀಕೃಷ್ಣನ ಪರಮಾನುಗ್ರಹದಿಂದ ಭೀಮಸೇನನು ತನ್ನ ಅಣ್ಣ, ತಮ್ಮಂದಿರು ಮತ್ತು ತಾಯಿಯನ್ನು ಹೆಗಲ ಮೇಲೆ ಹೊತ್ತು, ಗುಪ್ತದ್ವಾರದ ಮೂಲಕ ಹೊರಗೆ ಬಂದರು, ಇದರಿಂದ ಪಾಂಡವರಿಗೆ ಒದಗಿದ್ದ ವಿಪತ್ತಿನಿಂದ ರಕ್ಷಣೆ. ಘನತರ = ಅತ್ಯಂತ ಶ್ರೇಷ್ಠಗಳಾದ,



೪೮೩

(ಅಂಕಿತ—ಪ್ರಸನ್ನ)

ರಾಗ-ಕಾಂಬೋದಿ ಆದಿತಾಳ

ಬಂದ ಬಂದ ಮುಕುಂದನು
ಇಂದಿರೆಯೊಡನೆ ನಿಲಯಕೆ ‖ ‖ಪ‖

ವೃಂದಾವನಾಂಚನನು ಶರ-
ದೇಂದುವದನ ಮುನಿವೃಂದನುತ ಚರಿತ ‖ ‖ಅ‖

ಭೇರಿ ಗಜ ತುರುಗ ಪತಾಕ ತುತೂರಿ
ವರಭಕ್ತಿ ಚಾಮರ

ತಾಳ ಮೇಳ ಬಿರುದಾವಳಿ ಸಹಿತದಿ
ಪೌರವೀಥಿಯಲಿ ಮೆರೆಯುತ ಶೌರಿಯು || ||೧||

ಪಾರಿಜಾತ ಸುಜಾತಿ ಮಲ್ಲಿಕಾ
ಚಾರುಮಾಲತಿ ಸಾರ ತುಲಸೀ
ಹಾರವನರ್ಪಿಸಿ ನೀರದಾಭನಿಗೆ
ನಾರಿಜನರು ಆರತಿಯನು ಬೆಳಗಿರೆ || ||೨||

ವೇದಘೋಷ ಜಯಘೋಷ ಜನರ ಸಂ-
ತೋಷಧ್ವನಿಯು ತುಂಬಿತು ಗಗನ
ಯಾದವವಂಶ ಪ್ರಸನ್ನನು ಎಮ್ಮವ
ನಾದನಿಂದು ಹಿಂದಾಯಿತು ಜನುಮವು || ||೩||



**ಅರ್ಥವಿವರಣೆ :-**

**ನಿಲಯಕೆ**= ಹೃದಯವೆಂಬ ಅಂತರಂಗದ ಮನೆಗೆ, **ವೃಂದಾವನಾಂಚನನು**= ಗೋಕುಲಕ್ಕೇ ಭೂಷಣಪ್ರಾಯನಾದ ಶ್ರೀಕೃಷ್ಣ. **ಶರದೇಂದು ವದನ**= ಶರತ್ಕಾಲದ ಪೂರ್ಣ ಚಂದ್ರಮಂಡಲದಂತೆ ಮುಖವುಳ್ಳ, **ಮುನಿವೃಂದನುತಚರಿತ** = ಸಕಲ ತಪಸ್ವಿಗಳಿಂದ ಸಂಸ್ತುತ್ಯಮಾನನಾದ ಚರಿತ್ರೆಯುಳ್ಳವನು, **ಭೇರಿ**=ನಗಾರಿವಾದ್ಯ, **ಪತಾಕ**=ಧ್ವಜ ಇವೆಲ್ಲವೂ ರಾಜಮರ್ಯಾದಾಸೂಚಕವಾದ ಲಾಂಛನಗಳು, **ಪೌರವೀಥಿಯಲಿ**=ರಾಜಮಾರ್ಗದಲ್ಲಿ, **ನೀರದಾಭನಿಗೆ**=ನೀಲಮೇಘಶ್ಯಾಮನಿಗೆ (ನೀರದ-ಮೋಡ, ಆಭ-ಕಾಂತಿ, ನೀಲಮೇಘವರ್ಣದಂತೆ ಕಾಂತಿಸಂಪನ್ನನಾದ) **ಎಮ್ಮವನಾದನಿಂದು**= ನನಗೆ ಪರಮಾನುಗ್ರಹಮಾಡಿದ.



## ೪೬೪

(ತಂದೆವೆಂಕಟೇಶವಿಠ್ಠಲಾಂಕಿತ)

ರಾಗ-ಖಡಕು ಆದಿತಾಳ

ಬಂದಾ- ಬಂದಾ- ಹರಿ ಬಂದಾ- ಬಂದಾ
ಶ್ರೀಹರಿ ಬಂದಾ- ಬಂದಾ ॥ ॥ಪ॥

ಬಂದಾ- ಅದೋ ಬಂದ ರಥವನೇರಿ- ಆನಕ
ದುಂದುಭಿತನಯ ಮುರಾರೀ ॥ ॥ಅ॥

ಆನಂದದಿಂದ ಜಯಭೇರಿ- ತುತೂರಿ
ನಗಾರಿವಾಳಗೆ- ಕಡುತೇಜಪೊಳಗೆ
ಅನುರಾಗದೊಳಗೆ- ಶರಣೌಘ ಮುಳುಗೆ
ಮನಸಾಗಿ- ಮನಸಾಗಿ- ಶಿರದೂಗಿ
ಭಕ್ತಿ ಹೊನಲಾಗೀ-ಗಾನದಲಿ ಕೂಗೀ
ವಿನಯದಲಿ ಬಾಗಿ- ಜಯ ಜಯಾ ॥
ಭೋಗಿಪರ್ಯಂಕಾ- ಮೌಘಚರಿತ್ರ-ಸುರೌಘಶರಣ್ಯ-ದಯಾಘನರಾವ ಚಿ-
ದಾಗಸ ಭೇದಿಸೆ- ಸುರರನು ಮೋದಿಸೆ- ಹೃದಯವ ಶೋಧಿಸೆ ಬಂದಾ ॥
ಕುಂದಣದಂದಿಗೆ ದಂಘಣರೆನೆ ನಲವಿಂದ
ನಾಟ್ಯದೊಳಮಂದಸ್ಮಿತ ಮುಖದಿಂದ
ಮುಚ್ಚಿನ್ಮಂದಿರಕೊಲವಿಂದ ॥
ಹರಿ ಪಾಂಡುರಂಗ ಗೋವಿಂದಾ- ಜಯ ಪಾಂಡುರಂಗ ಗೋವಿಂದ ॥ ॥೧॥

ಅತ್ತನೋಡಿ ಧ್ವಜಸತ್ತಿಗೆ- ನಾಟವನೊತ್ತಿದೆ
ಥಳಥಳಿಸುತಿದೆ- ಕೌತುಕ ಬಿತ್ತಿದೆ- ಚಿತ್ರದ
ಭಿತ್ತಿಯೊಳೊತ್ತಿ ಮರುತ್ತ ಪತತ್ರತ ಕೆತ್ತ

ಪತಾಕೆಗಳತ್ತಿತ್ತ ಹಾರಿಯಲು
ಸುತ್ತ ಮಿಸುನಿಕಳಸೋತ್ತುಂಗಳ್ಹೊಳೆಯಲು
ಮುಂತ್ರಿಪ ಗುಷ್ಟ ಗೋತ್ರಲು ಬೆಳೆಯಲು
ಜಸ್ಥಿತಿ ಘೇಶಸವಿತ್ರರ ಪಳೆಯಲು
ದ್ಯುತಿ ಮುಕುರಮಣಿ ಕುಸುರಿಯು ತಳೆಯಲು-ಬಂದಾ ||

ಸ್ಯಂದನ ಗೋಪುರರ ಬಂಧುರವಾಗಿ-ಸ್ಥಂಭಶತಕಗಳನೊಂದಿ ಮೆರೆವ ನವರಂಗ

ನವರಂಗದೊಳಗೆ- ಬುಧ ಸಂಗದೊಳಗೆ
ಮನ ಕಂಗಳೊಳಗೆ- ಮಧ್ವಾಂಗದೊಳಗೆ

ಸಿರಿಯಂಗನೆ ಸಹಹೃದಯಂಗಮವಾಗಿರೆ- ಕಂಗೊಳಿಸುವ ಶ್ರೀದೇವ
ತ್ರೈಭುವದೊಡೆಯ ಸುರಜೀವ-ಪ್ರಪನ್ನರ ಸಂತತ ಕಾವ ॥

ಚಿತ್ತಕೆ ಬರೆ ಉತ್ಕೃತ್ತಸಂತೆ ಪರ
ವಿತ್ತು ತಪ್ಪ ಪುರುಷೋತ್ತಮ
ಭೃತ್ಯರ ಭೃತ್ಯನೆಂಬ ಬಿರುದೆತ್ತಿ

ಮೆರೆಯುತಿಪ ಚಿತ್ರಖಚಿತ ಪತ್ಸಾರೀ-ಸರ್ವೋತ್ತಮ ಮನುಜಾಕಾರೀ ॥ ॥೨॥

ಜೋಕೆ ತ್ರೈಮಾಯ ಪರಾತು-ಪ್ರಣಾಳಿಕೆ ಇಹುದು
ವಾಕುಸಂದಿಹುದು- ಸಾಕು ಬರಬಹುದು

ವಿನುತ ಪದ್ಮಾಕರನಿಲಯ ಉದ್ರೇಕದಿ ತುತಿಸಲು-ಪೂಕು ನುಗ್ಗಲಿನ
ಲೇಖಾನೀಕದಿ

ನಾಕುವದನ ಹರ- ಪಾಕಶಾಸನ- ಪರಾಕೆನ್ನಲು
ಕರುಣಾಕರನಂಘ್ರಿಗೆ ತಾಕಿಸಿ ಶಿರ ಶುಕ
ಶೌನಕ ಸನಕ ದಿವೌಕಸರೆಲ್ಲರು- ಮೂಕರಾಗಿ ದಾಸೀಕೃತರಾಗಿಲು
ಆ ಕುಬೇರ ರತ್ನಾಕರ ರಕ್ಕಸಪಾ ಕೃತಾಂತ ಮಿಕ್ಕಾದವರೆಲ್ಲ ವೆಯಿಕ್ಕದೆ
ಸೌಖ್ಯದ ಸಕ್ಕದೊಳಗಿರಲು- ನಕ್ಕು ನಲಿವ ಹರಿಭಕ್ತರೆಲ್ಲ

ವ್ಯೆಯಿಕ್ಕತ ನರ್ತನ ಮಾಡಿ– ದುರಿತಗಳ ದೂಡಿ
ಸುಕೃತವನು ಕೂಡಿ- ಜಕ್ತಿಯನೆ ಬೇಡಿ
ಬೊಬ್ಬಿರಿದು ಪಾಡಲಾಗ ದಯಮಾಡಿ- ದಯಮಾಡಿ ||
ನೋಕನೀಯ ಕರುಣಾಕರ ಭಕ್ತರ ಭೀಕರಕಂಜಿ ನಿರಾಕರಿಸದೆ
ತಾ ಬಂದ ನಗುತ- ಗುಣ ಬಂಧವಿಗತ– ಸುಖಸಾರ ಸ್ವಗತ (ಸ್ವರತ)
ನಿಃಶ್ವಾರನು ಬಗೆಯ್ಯುತರ್ಕ್ಯ ಅನಘ
ಅಖಿಲೇಶ ತಂದೆ ವೆಂಕಟೇಶವಿಠ್ಠಲನಸಾಧ್ಯ ಸರ್ವೇಶ || ||೩||

❖

# ೪೮೫

## (ಗುರುಜಯವಿಠ್ಠಲಾಂಕಿತ)

## ಪುರುಷರೂಪ ವರ್ಣನೆ

ರಾಗ—ಖಡಕು (ಲಾವಣಿವುಟ್ಟು) ಆದಿತಾಳ

ಬ್ರಹ್ಮಾಂಡಕೋಟಿಗೆ ದಾತಾ
ಹರಿ ಬಂದನು ಲೋಕ ವಿಖ್ಯಾತಾ || ||ಪ||

ಕಸ್ತೂರಿತಿಲಕಾಂಕಿತ ಫಾಲ-ಕೌಸ್ತುಭ ಪೀತಾಂಬರ ವನಮಾಲಾ
ಸುತ್ತ ಮೇಘಸ್ವರಚ್ಛದಿ ನೀಲ-ರತ್ನಖಚಿತ ಕಿರೀಟವಿ ಲೋಲ
ಚಿತ್ತಜಜನನಿ ಮುಖಾಬ್ಜ ಮರಾಳ– ದೈತ್ಯವರಾಳಿ ವಿಧ್ವಂಸ ಕರಾಳ
ಆ ಶಕ್ತಿಯಿಂದಲಿ ನೆನೆವರಿಗನುಕೂಲ-ಭಕ್ತಾಭೀಷ್ಟಪ್ರದ ಪರಿಪಾಲಾ ||
ಮುತ್ತುಗಳಿಂದ ಬಿಗಿದಿಪ ಶ್ವೇತಛತ್ರಿ
ಪ್ರಭೆ ಕಣ್ಗೊತ್ತೀಲು ಸೂಕ್ತರ ನ್ಯಸ್ತಾದಿತ್ಯ
ಉತ್ತಮ ಚಾಮರವೆತ್ತಿ ಬೀಸುತಿರೆ
ವೆತ್ತಿಲಿ ಕರಗಳ ಎತ್ತಿ ಮುಗಿಯುತಿರೆ

ಪ್ರಮಾಣೋತ್ತಮ- ಪರಿಸರ್ಪೋತ್ತಮ
ಜಗದುತ್ಪತ್ತಿ ಸ್ಥಿತಿ ಲಯ ಕರ್ತನೆಂಬ
ಯೋಗಿಗಳರಿವಿದ್ದರು ಎದೆ ಲವಲ್ಲಿ
ಕೇಳುತ ಬಾಗುತ್ತಲಿದ್ದರು ಮನದಿ ॥ ॥೭॥

ರಾಗ ರತ್ನಗಳ ಮುಕ್ತಾವಳಿ ಹಾರ- ಚೆಲುವಿಪ ಪರಿಮಳ ಗಂಧ ಕರ್ಪೂರ
ಕೆಂಗಾದ ನಾಮದಿಗೆ ಪಚ್ಚೆಯ ಉಪಹಾರ— ಅಗಣಿತ ರತ್ನಾನ್ವಿತಕೇಯೂರ
ಚೆಲುವಿನ ತುಳಸೀದಳ ಪರಿಹಾರ- ಘಮಘಮಿಸುವ ಕೆಂದಾವರೆ ಹಾರಾ
ದಿಗಳಲಿ ಭ್ರಮರಾವಳಿಗಳ ಝೇಂಕಾರ- ನಗೆಮೊಗದರಸನ ಶೃಂಗಾರ
ನಾಗಶಯನನ ಗುಣಗಂಭೀರ- ಆಭರಣಗಳಲಿ ಮೆರೆವ ಮುಖದ ಕಾಂತಿ
ಶೃಂಗಾರ ॥

ಕರಯುಗದಲಿ ಶಂಖ ಚಕ್ರಗಳನೇ ಪಿಡಿದಿಹ
ಜಗದೊಲ್ಲಭ ನಲಿವಿಂದ ॥
ನರಮೃಗಧರ ಮಾರ್ತಾಂಡರುಗಳು
ನೇತ್ರದ್ವಯಗಳರೆ ಮುನಿವೃಂದಾ— ಮತ್ತೆ ಪೋಗಿ ಪಾದಯುಗದಲ್ಲಿ
ಮೋಕ್ಷಗಳ ಪಡೆವರು ನೊಲವಿಂದ
ಬಹು ನಿಗಮಾದಿಗಳಿಗೆ ನಿಖಿರ
ಆಶ್ರಿತಯುಗ ಧರೆಯುಗತ ಜರಾಮರಣಗನು
ತನ್ನವರಿಂಗೆ ಅಘಟನೆನಿಸಿದ— ಸುಖಾಬ್ಧಿಯೊಳು
ಮೊಗಿಸುವ— ನಗಿಸುವ- ಚಿಗಿಸುವ
ಇಷ್ಟಾ ಧೊರೆ ಒಲಿವಾ- ನತಜನರಿಂಗೆ ನಯುನಾನಂದ ॥ ॥೮॥

ಪಳಿ ಪಳಿ ಅಮರಾಳಿಗಳೆನ್ನುತ- ಊಳಿಗದೊಳು ಸನಕಾದಿಗಳು ರಿಪುಪಾಲಕ
ಬಲಿ ಪ್ರಹ್ಲಾದಿ ಪ್ರಮುಖರು- ಕೋಲಾಹಲ ಧ್ವನಿಮಾಡುತಲಿರೆ
ಜೊಂಜಾಲದೀಪ ಜ್ವಾಲೆಗಳಿರುತಿರೆ- ಸುರಸೂಳೆಯರೆಲ್ಲರು
ವಿಕಾಸದಿ ಪುಷ್ಪದ ಮಾಲೆಗಳನ್ನ- ಶ್ರೀ ಲೋಲಗೆ ಪಿಡಿದರೆ
ನೀಳಾಳಕಿಯರು ನರ್ತನದಿಂದ- ಪುನ್ನಾಗವರಾಳಿಯು ಕೇಳಿಸುತಿರೆ
ನಾಗಾಳಿಗಳು ತಲೆ ತೂಗುತಲಿರೆ- ಸಮ್ಮೋಳದಿ ಮೆರೆದನು ಶೌರೀ ॥

ರಂಗನ ನೋಡಿದೆ- ದೇವೋತ್ತುಂಗನ ನೋಡಿದೆ
ಅಂಗಸಿಂಗ ಕಾಳಿಂಗಮರ್ದನನ
ಮಂಗಳಾಂಗ ಭವಭಂಗನ ನೋಡಿದೆ ||೨||

ದೇವನ ನೋಡಿದೆ- ಮುಕುತಿಯೀವನ ನೋಡಿದೆ
ಗೋವ ಕಾವ ಭೂದೇವವಂದಿತ ಬಲ-
ದೇವಾನುಜ ಹಯಗ್ರೀವನ ನೋಡಿದೆ || ||೩||

ಧೀರನ ನೋಡಿದೆ- ಜಗದ ಉದ್ಧಾರನ ನೋಡಿದೆ
ವೀರ ಶೂರ ಪರಾತ್ಪರ ತಾನ-
ಕ್ರೂರವರದ ಸಿರಿಧಾರನ ನೋಡಿದೆ || ||೪||

ಶ್ಯಾಮನ ನೋಡಿದೆ- ಬಲು ನಿಸ್ಸೀಮನ ನೋಡಿದೆ
ವಾಮನ ರಾಮನ ಕಾಮನ ಅಯ್ಯನ
ಸಾಮನ ಸೀಮನ ಸೋಮನ ನೋಡಿದೆ || ||೫||

ಬಾಲನ ನೋಡಿದೆ- ಲಕುಮೀ ವಿಲೋಲನ ನೋಡಿದೆ
ಶೀಲ ಶೂಲಧರಪಾಲ ಲೀಲ ಶಿಶು-
ಪಾಲಕಾಲ ವನಮಾಲನ ನೋಡಿದೆ || ||೬||

ಜಾಣನ ನೋಡಿದೆ- ಬಲು ವಿನೋದನ ನೋಡಿದ
ಗುಣಗಣ ಅಗಣಿತ ಪ್ರಾಣರ ಪ್ರಾಣನ
**ವೇಣುಗೋಪಾವಿಠ್ಠಲ** ಕಲ್ಯಾಣನ || ||೭||



**ಅರ್ಥ ವಿವರಣೆ :**

ಶ್ರೀ ವಿಜಯದಾಸಮರ್ಯರ ಶಿಷ್ಯರೂ, ಆದವಾನಿಯ ದಿವಾನರೂ ಆಗಿದ್ದ **ಶಂಗಮನಾಮದ ತಿಮ್ಮಣ್ಣ**ದಾಸರ ಕೃತಿ ಇದು. ಅವರ ಅಂಕಿತ- **ವೇಣುಗೋಪಾಲವಿಠ್ಠಲ.**

**ಸಾಷ್ಟಾಂಗವ ಮಾಡಿದೆ**= ಉರಸಾ ಶಿರಸಾ, ದೃಷ್ಟ್ಯಾ, ಮನಸಾ, ವಚಸಾ, ಪದ್ಭ್ಯಾಂ, ಕರಾಭ್ಯಾಂ ಚ ಜಾನುಭ್ಯಾಂ- ಎಂಬ ಎಂಟು ಅಂಗಗಳಿಂದ ಸಹಿತವಾದ ನಮಸ್ಕಾರಕ್ಕೆ ಸಾಷ್ಟಾಂಗನಮಸ್ಕಾರವೆಂದು ಹೆಸರು. **ಇಷ್ಟೀವ ನೀವ**= ಪರಮಪುರುಷಾರ್ಥರೂಪವಾದ ಮುಕ್ತಿಸುಖವನ್ನು ಕೊಡುವ (ಮುಕ್ತಿಪ್ರದನು) **ಶಿಷ್ಟನ**= ಸದ್ಗುಣಪರಿಪೂರ್ಣನನ್ನು, **ವರ**= ಶ್ರೇಷ್ಠನು. **ನಿರ್ದುಷ್ಟನು** = ದುಷ್ಟರ ನಾಶಕನು, **ಹೃಷ್ಟ ಪುಷ್ಟ ಸಂತುಷ್ಟನ** = ಪೂರ್ಣಾನಂದದಿಂದ ನಿತ್ಯತೃಪ್ತನಾದವನನ್ನು, **ಶಿಷ್ಟರ**= ಸಜ್ಜನರನ್ನು, **ಕಷ್ಟ**= ದುಃಖಕಾಲದಲ್ಲಿ, **ನಿವಿಷ್ಟನ**= ಎಡಬಿಡದಿರುವ ನಿತ್ಯಸಖನನ್ನು, **ದೇವೋತ್ತುಂಗನ** = ದೇವಶ್ರೇಷ್ಠನನ್ನು (ಉತ್ತುಂಗ-ಶ್ರೇಷ್ಠ- ಸರ್ವೋತ್ತಮ) **ಅಂಗಸಿಂಗ** = ಸಿಂಹಾಂಗರೂಪನಾದ ನರಸಿಂಹ (ಸಿಂಗ-ಸಿಂಹ ಅಂಗ-ಅವಯವ-ಶಿರಸ್ಸು, ಅಂದರೆ ಸಿಂಹಮುಖನು) **ಭವಭಂಗನ** = ಸಂಸಾರ ದುಃಖವನ್ನು ಪರಿಹರಿಸುವ, **ಗೋವ ಕಾವ** = ಗೋವುಗಳನ್ನು ಕಾಯುವ ಗೋಪಾಲ **ಭೂದೇವ ವಂದಿತ**= ಭೂಸುರರಾದ ಬ್ರಾಹ್ಮಣರಿಂದ ನಮ್ಯನು. **ಬಲದೇವಾನುಜ**= ಬಲರಾಮನ ತಮ್ಮನಾದ ಶ್ರೀಕೃಷ್ಣ, **ಪರಾತ್ಪರ**= ಪರನಾಮಕಳಾದ ಶ್ರೀ ಲಕ್ಷ್ಮೀದೇವಿಗಿಂತ ಉತ್ತಮೋತ್ತಮನಾದವನು, **ಅಕ್ರೂರವರದ**= ಅಕ್ರೂರನಿಗೆ ಅನುಗ್ರಹ ಮಾಡಿದ. **ಅಕ್ರೂರನು** ಯದುವಂಶದ ಶ್ವಫಲ್ಕನ ಪುತ್ರ, ಈತನ ಮಾತೆ ಗಾಂದಿನಿ. ಕಂಸಾಸುರನ ಅಷ್ಟಮಂತ್ರಿಗಳಲ್ಲಿ ಒಬ್ಬನು. ಆಹುಕನ ಪುತ್ರಿ ಸುತನುವೆಂಬುವಳು ಈತನ ಪತ್ನಿ. ಕಂಸನ ಆದೇಶದಂತೆ ಬಲರಾಮಕೃಷ್ಣರನ್ನು ಮಧುರಾಪಟ್ಟಣಕ್ಕೆ ಕರೆದೊಯ್ಯಲು ಗೋಕುಲಕ್ಕೆ ಬಂದು, ಅಲ್ಲಿ ಯಮುನಾ ನದಿಯ ಮರಳಿನಲ್ಲಿ ಮೂಡಿದ್ದ ಕೃಷ್ಣನ ಪಾದಚಿಹ್ನೆಗಳನ್ನು ನೋಡಿ, ಭಕ್ತ್ಯುದ್ರೇಕದಿಂದ ಹೊರಳಾಡಿದ ಶ್ರೀ ಕೃಷ್ಣನ ಭಕ್ತನು, **ಸಿರಿಧಾರನ**= ಶ್ರೀದೇವಿಯನ್ನು ವಕ್ಷದಲ್ಲಿ ಧರಿಸಿದ ಶ್ರೀಧರನಾಮಕನು, **ಶ್ಯಾಮನ** = ನೀಲವರ್ಣನು, **ನಿಸ್ಸೀಮನ**= ಬಲಧೀರ ಪುರುಷನನ್ನು. **ವಾಮನ**= ಸುಂದರರೂಪನು, (ವಾಮನಾವತಾರಿ ಶ್ರೀಹರಿ). **ರಾಮನ**= ಸರ್ವರಲ್ಲಿಯೂ ಕ್ರೀಡಿಸುವವನು (ಪರಶುರಾಮ ಹಾಗೂ ದಾಶರಥಿ ರಾಮನು) **ಕಾಮನ ಅಯ್ಯನ**= ಮನ್ಮಥ ಜನಕನಾದ ಶ್ರೀಕೃಷ್ಣ. **ಸಾಮನ**= ಸರ್ವಸಮನು (ಎಲ್ಲಾ ಜೀವರನ್ನು

ಅವರವರ ಯೋಗ್ಯತಾನುಸಾರ ನಡೆಯಿಸಿಕೊಳ್ಳುವವನು). **ಸೀಮನ**= ಎಲ್ಲವನ್ನು ಅತಿಕ್ರಮಿಸಿದವನು (ಸರ್ವಾತೀತನು) **ಸೋಮನ**=ನಿತ್ಯಮುಕ್ತನನ್ನು (ಸೋಮ - ಅಮೃತ - ಮುಕ್ತ) **ಲಕುಮಿವಿಲೋಲನ**=ಶ್ರೀ ಲಕ್ಷ್ಮಿಯಲ್ಲಿಯೇ ನಿತ್ಯ ಕ್ರೀಡಿಸುವವನು. **ಶೀಲ** = ಸದ್ಗುಣಾಢ್ಯ (ಸುಚಾರಿತ್ರ್ಯವುಳ್ಳವನು). **ಶೂಲಧರಸಾಲ** = ತ್ರಿಶೂಲಧಾರಿಯಾದ ರುದ್ರದೇವರ ರಕ್ಷಕ. **ಲೀಲ** = ಇಚ್ಛಾಮಾತ್ರದಿಂದ ನಿರಾಯಾಸವಾಗಿ ಜಗದ್ವ್ಯಾಪಾರಗಳ ಪ್ರವರ್ತಕ. **ಶಿಶುಪಾಲಕಾಲ** = ಶಿಶುಪಾಲನಿಗೆ ಮೃತ್ಯುಸ್ವರೂಪನಾದ ಶ್ರೀಕೃಷ್ಣ, **ವನಮಾಲನ** = ಶ್ರೇಷ್ಠ ಪುಷ್ಪಹಾರವನ್ನು ಧರಿಸಿರುವ, **ಜಾಣನ** = ಸರ್ವಜ್ಞನನ್ನು, **ಬಲು ವಿನೋದನ** = ನಿತ್ಯಾನಂದಪೂರ್ಣನನ್ನು, **ಅಗಣಿತಪ್ರಾಣ** = ವಿವಿಧಗುಣಗಳುಳ್ಳ ಅಸಂಖ್ಯಾತ ಜೀವರಾಶಿಗಳ **ಪ್ರಾಣನ** = ಬಿಂಬರೂಪೀ ಹರಿಯನ್ನು (ಅವರ ಚೇಷ್ಟಾದಾಯಕ ರೂಪ) **ಕಲ್ಯಾಣನ** = ದಿವ್ಯ ಮಂಗಳ ಮೂರ್ತಿಯನ್ನು.



## ೪೯೪

## (ಜಗನ್ನಾಥವಿಠ್ಠಲಾಂಕಿತ)

**ರಾಗ-ಪೂರ್ವಿ** **ತ್ರಿಪಿಡತಾಳ**

ಧನ್ಯನಾದೆ ವಿಠಲನ ಕಂಡು ಓಡಿತು ಅಘದ್ಹಿಂಡು ‖ ‖ಪ‖

ಧನ್ಯನಾದೆನೊ ಕಾಮನ್ನ ಪಿತನ ಲಾ -
ವಣ್ಯ ಮೂರುತಿಯ ಕಣ್ಣಲ್ಲಿ ಕಂಡು ‖ಅ‖

ದೇವವರೇಣ್ಯ ಸದಾ ವಿನೋದಿ ವೃಂ -
ದಾವನ ಸಂಚಾರ ಗೋವನ ಕಂಡು ‖ ‖೧‖

ಮಂಗಳಾಂಗ ಕಾಳಿಂಗಮಥನ ಮಾ -
ತಂಗವರವರದ ರಂಗನ ಕಂಡು ॥ ॥೨॥

ಹಾಟಕಾಂಬರ ಕಿರೀಟಿ ಸಾರಥಿ
ತಾಟಕಾರಿ ವೈರಾಟನ ಕಂಡು ॥ ॥೩॥

ಚಿಂತಿತಫಲದ ಕೃತಾಂತನಾತ್ಮ ಜಾ
ದ್ಯಂತರಹಿತ ನಿಶ್ಚಿಂತನ ಕಂಡು ॥ ॥೪॥

ಮಾತುಳಾಂತಕ ವಿಧಾತಪಿತ ಜಗ -
ನ್ನಾಥ ವಿಠಲ ವಿಖ್ಯಾತನ ಕಂಡು ॥ ॥೫॥

**ಅರ್ಥವಿವರಣೆ –**

**ಅಘದ್ದಿಂಡು** = ಪಾಪಗಳ ಸಮೂಹ. **ಕಾಮನ್ನ ಪಿತನ** = ಮನ್ಮಥನ ತಂದೆ, **ಲಾವಣ್ಯ ಮೂರುತಿಯು** = ಪರಮಸುಂದರಸ್ವರೂಪಿ, **ದೇವ ವರೇಣ್ಯ** = ದೇವದೇವೋತ್ತಮನು. **ಸದಾ ವಿನೋದಿ** = ನಿತ್ಯ ಲೀಲಾ ವಿನೋದಿಯು, **ವೃಂದಾವನ ಸಂಚಾರ** = ಗೋಕುಲದಲ್ಲಿ ಸಂಚರಿಸುತ್ತಿರುವ ಶ್ರೀಕೃಷ್ಣ. **ಗೋವನ** = ಗೋಪಾಲನನ್ನು. **ಮಂಗಳಾಂಗ** = ಶುಭಾಂಗ ಸ್ವರೂಪಿ, **ಕಾಳಿಂಗಮಥನ** = ಕಾಳಿಂಗ ಸರ್ಪವನ್ನು ಮೆಟ್ಟಿ ತುಳಿದ, **ಮಾತಂಗವರ ವರದನ** = ಗಜೇಂದ್ರನನ್ನು ಉದ್ಧರಿಸಿದವನು, **ಹಾಟಕಾಂಬರ** = ಪೀತಾಂಬರ (ಹಾಟಕ - ಚಿನ್ನ, ಅಂಬರ - ವಸ್ತ್ರ), **ಕಿರೀಟಿ ಸಾರಥಿ** = ಕಿರೀಟಿನಾಮಕನಾದ ಅರ್ಜುನನಿಗೆ ಸಾರಥಿಯಾದವನು (ಪಾರ್ಥ ಸಾರಥಿ) **ತಾಟಕಾರಿ** = ತಾಟಕಿಯನ್ನು ಕೊಂದ ಶ್ರೀರಾಮ, **ವೈರಾಟನ** = ವಿರಾಡ್ರೂಪಿ ಶ್ರೀ ಪರಮಾತ್ಮ. **ಚಿಂತಿತ ಫಲದ** = ಭಕ್ತರ ಮನೋಭೀಷ್ಟ ದಾಯಕ, **ಕೃತಾಂತನ** = ಲಯಕರ್ತನು, **ಆತ್ಮಜಾದ್ಯಂತ ರಹಿತ** = ತನಗೇ ಆದಿ. ಮಧ್ಯ, ಅಂತಗಳಿಲ್ಲದಿರುವ (ಆತ್ಮ - ಜ - ಆದಿ- ಅಂತರಹಿತ)

**ನಿಶ್ಚಿಂತನ** = ಯಾವ ಲೇಪವೂ ಇಲ್ಲದ ನಿರ್ವಿಕಾರರನನ್ನು (ಸದಾನಂದ ಭರಿತನು) **ಮಾತುಳಾಂತಕ** = ಸೋದರ ಮಾವನಾದ ಕಂಸನನ್ನು ಸಂಹರಿಸಿದ ಶ್ರೀಕೃಷ್ಣ (ಮಾತುಳ - ಸೋದರ ಮಾವ), **ವಿಧಾತಪಿತ** = ಬ್ರಹ್ಮನ ಜನಕ, **ವಿಖ್ಯಾತ** = ಪ್ರಸಿದ್ಧ ಪುರುಷ (ಸರ್ವೋತ್ತಮ).

## ೪೯೫

## (ಕಮಲೇಶವಿಠ್ಠಲಾಂಕಿತ)

**ರಾಗ-ಶಂಕರಾಭರಣ** **ರೂಪಕತಾಳ**

ಕಂಡು ಧನ್ಯನಾದೆ ಉಡುಪಿ ಕೃಷ್ಣನ – ನಾ ಕಣ್ಣಾರೆ ॥ ||ಪ||

ಕಂಡು ಧನ್ಯನಾದೆ ಬ್ರಹ್ಮಾಂಡ ಸಖಿಯೊಡೆದ ಹರಿಯು
ತಂಡ ತಂಡದಿ ಪೂಜೆಗೊಳುತ – ಪಾಂಡವರನೆ ಸಲಹಿದನ ॥ ||ಅ||

ಗೆಜ್ಜೆ ಕಾಲ್ಗಡಗನಿಟ್ಟು - ಮಜ್ಜಿಗೆಕಡಗೋಲ ಪಿಡಿದು
ಹೆಜ್ಜೆ ಪಂಕ್ತಿ ಊಟನುಂಡು - ಗುಜ್ಜು ವೇಷ ಧರಿಸಿದವನ ।। ||೧||

ಎಂಟುಮಠದ ಯತಿಗಳು ತನ್ನ ಬಂಟರೆಂದು ಪೂಜೆಗೊಳುತ
ಕಂಟಕ ಕಂಸಾದಿಗಳನೆ ದಂಟಿನಂದದಿ ಸೀಳಿದವನ ।। ||೨||

ಏಸು ಜನ್ಮದ ಸುಕೃತವೋ **ಕಮಲೇಶವಿಠಲರಾಯ** ತನ್ನ
ದಾಸಜನರಭೀಷ್ಟ ಸಲಿಸಿ ಕೂಸಿನಂದದಿ ಪೋಷಿಸುವನ ।। ||೩||

**ಅರ್ಥ ವಿವರಣೆ :**

ಕಮಲೇಶವಿಠ್ಠಲಾಂಕಿತ **ಸುರಪುರದ ಶ್ರೀ ಆನಂದದಾಸರು** ಉಡುಪಿ

ಕ್ಷೇತ್ರಸ್ಥ ಶ್ರೀಕೃಷ್ಣನ ವಿಗ್ರಹದರ್ಶನಗೈದು. ಧನ್ಯರಾದರು. ಸರ್ವಾಲಂಕಾರ ಭೂಷಿತನಾದ ಶ್ರೀಕೃಷ್ಣನ ಸ್ತೋತ್ರಪದವಿದು **ನಖದಿಯೊಡೆದ** = ಬಲಿಯಿಂದ ಶ್ರೀವಾಮನನು ಮೂರು ಪಾದ ಭೂಮಿಯನ್ನು ಬೇಡಿ. ತ್ರಿವಿಕ್ರಮನಾಗಿ ಬೆಳೆದ ಆಗ ತ್ರಿವಿಕ್ರಮನ ವಾಮಪಾದದ ಹೆಬ್ಬೆಟ್ಟಿನ ನಖಾಗ್ರವು ಬ್ರಹ್ಮಾಂಡದ ಹೊರಕವಚವನ್ನು ಸೀಳಿದಾಗ, ಆ ದ್ವಾರದ ಮೂಲಕ ಬಾಹ್ಯೋದಕವು ಅಪಾರ ತರಂಗಿಣಿಯಾಗಿ ಹರಿದಳು **ತಂಡತಂಡದಿ** = ವಿಧವಿಧವಾದ ಪೂಜಾ ಕೈಂಕರ್ಯಗಳನ್ನು ಪರ್ಯಾಯಸ್ಥ ಯತಿಪುಂಗವರಿಂದ ಸ್ವೀಕರಿಸುತ್ತ, **ಹೆಜ್ಜೆ ಪಂಕ್ತಿ** = ಚೌಕಿಯೂಟ, **ಗುಜ್ಜುವೇಷ** = ಕುಳ್ಳಗಿರುವ ರೂಪ (ಶ್ರೀಕೃಷ್ಣ ಚಿಕ್ಕ ಚೊಕ್ಕ ದಿವ್ಯ ಮಂಗಳ ಮೂರ್ತಿ) **ಬಂಟರೆಂದು** = ದಾಸರೆಂದು, **ಕಂಟಕ** = ಬಾಧಕರಾಗಿದ್ದ ಭಕ್ತರಿಗೆ ಮುಳ್ಳಿನಂತಿದ್ದ **ದಂಟನಂದದಿ** = ದಂಟನ್ನು ಸೀಳುವಂತೆ ಲೀಲಾಜಾಲವಾಗಿ ಸಂಹರಿಸಿ, **ಕೂಸಿನಂದದಿ** = ತಾಯಿಯು ತನ್ನ ಮಗುವನ್ನು ಮಾತೃವಾತ್ಸಲ್ಯದಿಂದ ಸಾಕುವಂತೆ.

❦

## ೪೯೬

(ಅಂಕಿತ ಶ್ಯಾಮಸುಂದರ)

ರಾಗ-ತಿಲಂಗ　　　　　　　　　　　　　　**ತ್ರಿಪುಡಿತಾಳ**

### (ಶ್ರೀಬಾಗಲವಾಡವೆಂಕಟೇಶ್ವರ ಸ್ತೋತ್ರ)

ನೋಡಿದೆ ವೆಂಕಟರಮಣನ - ದ್ವಾರ
ವಾಡ ಗ್ರಾಮದಿ ನಿಂತ ದೇವನ ।। ।।ಪ।।

ರೂಪಿಪ ದಾಸರಿಗೆ ನೀಡಲು ದರುಶನ
ಗೂಢಪ್ರಾರಾದ್ರಿಯಿಂ ಬಂದ ಮಹಾತ್ಮನ ।। ।।ಅ।।

ಈತನೆ ವೈಕುಂಠನಾಥನು – ನಿಜ
ಶಾತಕುಂಭೋದರ ತಾತನು
ಮಾತಂಗವರದಾತ ಶ್ವೇತವಾಹನ ಸೂತ
ಜಾತಿರಹಿತ ದನುಜಾತ ಕುಲಾಂತಕ ॥ ॥೧॥

ತೋಂಡಮಾನಗೊಲಿದಾತನ – ತನ್ನ
ತೋಂಡಜನಕೆ ಸುಖದಾತನ
ಅಂಡಜಾತಪ್ರಕಾಂಡ ವರೂಥ ಬ್ರ –
ಹ್ಮಾಂಡ ನಾಯಕ ಪಾಂಡವ ಪಾಲನ । ॥೨॥

ಇಂದುಧರಾಮರವಂದ್ಯನ ಶಾಮ
ಸುಂದರವಿಠಲನ ಮುಕುಂದನ
ಸಂದರುಶನ ಮಾತ್ರದಿ ಹಿಂದೆ ಮಾಡಿದ ದೋಷ
ವೃಂದವೆಲ್ಲವು ಇಂದು ಬೆಂದು ಹೋದಪ್ಪ ಘನ ॥ ॥೩॥

❀

**ಅರ್ಥ ವಿವರಣೆ ;**

**ದ್ವಾರವಾಡಗ್ರಾಮದಿ** = ಬಾಗಿಲುವಾಡವೆಂಬ ಗ್ರಾಮದಲ್ಲಿರುವ (ದ್ವಾರ–ಬಾಗಿಲು) **ರೂಢಿಪ ದಾಸರಿಗೆ** = ಈ ಭೂಮಿಯಲ್ಲಿ ಅವತರಿಸಿದ ದಾಸಜನಕ್ಕೆ. **ವೈಕುಂಠನಾಥನು** = ವೈಕುಂಠಾಧಿಪತಿ. **ಶಾತಕುಂಭೋದರ** = ಬ್ರಹ್ಮದೇವರು (ಶಾತಕುಂಭ - ಚಿನ್ನ ಉದರ–ಗರ್ಭ ಅಂದರೆ. ಹಿರಣ್ಯಗರ್ಭ ನಾಮಕರಾದ ಬ್ರಹ್ಮ) **ತಾತನು** = ಜನಕನು (ಬ್ರಹ್ಮಜನಕ) **ವರದ** = ಗಜೇಂದ್ರಪಾಲಕ, **ಶ್ವೇತವಾಹನಸೂತ** = ಪಾರ್ಥಸಾರಥಿ (ಅರ್ಜುನನ ದಶನಾಮಗಳಲ್ಲಿ "ಶ್ವೇತವಾಹನ" ಒಂದು) **ಜಾತರಹಿತ** = ಜನನ ಮರಣರಹಿತ, **ದನುಜಾತ ಕುಲಾಂತಕ** = ಕಶ್ಯಪ ಮುನಿಗಳ ಪತ್ನಿ. ದನು ಎಂಬುವಳಲ್ಲಿ ಜನಿಸಿದ ದಾನವರ ಕುಲಕ್ಕೆ ಮೃತ್ಯುಸ್ವರೂಪನು.

**ತೋಂಡಮಾನ** = ಆಕಾಶ ರಾಜನ ತಮ್ಮನಾದ ತೋಂಡಮಾನರಾಜನಿಗೆ ಒಲಿದಶ್ರೀ ಶ್ರೀನಿವಾಸ. **ತೊಂಡಜನಕೆ**=ಸೇವಕವೃಂದಕ್ಕೆ, **ಸುಖದಾತನ**= ಆನಂದಪ್ರದನ. **ಅಂಡಜಾತ**=ಪಕ್ಷಿಗಳು (ಅಂಡ-ಮೊಟ್ಟೆ) **ಪ್ರಕಾಂಡ** = ಪಕ್ಷಿಶ್ರೇಷ್ಠರಾದ ಗರುಡ ದೇವರನ್ನು. ವರೂಥ=ರಥವನ್ನಾಗಿ ಉಳ್ಳವನು. (ಗರುಡವಾಹನನು), ಇಂದುಧರಾಮರ = ಚಂದ್ರಶೇಖರನಾದ ರುದ್ರಾದಿ ದೇವತಾವರ್ಗ. ಘನ=ನಿಬಿಡೀಕೃತವಾದ ಪಾಪಗಳ ಪರಿಹಾರ.



## ೪೯೭

### (ಶ್ರೀಕರವಿಠಲಾಂಕಿತ)

**ರಾಗ-ಯಮುನ** **ಆದಿತಾಳ**

ಇಂದು ಕಂಡೆನಾ ಇಂದುಧರನುತ - ನಂದ ಕಂದ ಮುಕುಂದನಾ
ಮಂದರೋದ್ಧರ ಇಂದಿರಾವರ - ತಂದೆ ಉಡುಪಿಯ ಕೃಷ್ಣನ ||ಪ||

ಕಾವಲೊಳು ಪುಟ್ಟಿರುವಾ - ಆವಪಳ್ಳಿಲಿ ಬೆಳೆದನಾ
ಕಾವ ಗೋಪಾಲರಾಯನಾ - ದೇವಕೀತನುಜಾತನಾ || ||೧||

ಹಡಗದಲಿ ನಡತಂದನಾ - ಕಡಗೋಲ್ನೇಣ ಪಿಡಿದನಾ
ಕಡಲ ದಡದಲಿ ನಿಂದನಾ - ನಡುಮನೆಯ ಸುತನಿಗೊಲಿದನಾ || ||೨||

ಭಾಮೆ ರುಕ್ಮಿಣಿ ಕರಲದರ್ಚನೆ - ಪ್ರೇಮದಲಿ ಕೈಕೊಂಡನಾ
ಕಾಮನಯ್ಯ ಸುಧಾಮ ಸಖ- ಮಮ ಸ್ವಾಮಿ ಶ್ರೀಕರವಿಠ್ಠಲನಾ||೩||



**ಅರ್ಥವಿವರಣೆ :—**

ರಾಯಚೂರು ಜಿಲ್ಲೆಯ ಮಾನವಿ ತಾಲೂಕಿನ **ಕಲ್ಲೂರು** ಗ್ರಾಮಸ್ಥರಾದ **ಶ್ರೀಜಗನ್ನಾಥಾಚಾರ್ಯರ** ಕೃತಿ ಇದು. **ಶ್ರೀಕರವಿಠ್ಠಲ** ಎಂಬ ಅಂಕಿತನಾಮದಲ್ಲಿ ಅನೇಕ ಪದಗಳನ್ನು ರಚಿಸಿದ್ದಾರೆ. ಸಾಣೆಕಲ್ಲಿನಲ್ಲಿ ಒಡಮೂಡಿದ ಮಹಾಲಕ್ಷ್ಮೀದೇವಿಯ ಅರ್ಚಕಮನೆತನಕ್ಕೆ ಸೇರಿದವರು. **ಇಂದುಧರಿಸುತ** = ಚಂದ್ರಶೇಖರನಾದ ರುದ್ರನಿಂದ ಸ್ತುತ್ಯನಾದವನು. **ಇಂದಿರಾವರ** = ಶ್ರೀ ಲಕ್ಷ್ಮೀಪತಿ, **ಕಾವಲೊಳು** = ಸುರಂಗದಲ್ಲಿ (ಕಾವಲಿದ್ದ ಜೈಲಿನಲ್ಲಿ ಶ್ರೀಕೃಷ್ಣನ ಜನನ) **ಆವ ಪಳ್ಳಿಲಿ** = ಗೋಕುಲದಲ್ಲಿ (ಆವ–ಗೋವು ಪಳ್ಳಿ-ಹಳ್ಳಿ) **ಗೋವಳ ರಾಯನಾ** = ಗೋಪಾಲನ **ದೇವಕೀ ತನುಜಾತನಾ** = ದೇವಕಿಯ ಜಠರದಲ್ಲಿ ಪ್ರಾದುರ್ಭವಿಸಿದ. **ಹಡಗದಲಿ ನಡೆತಂದನಾ** = ಹಡಗಿನಲ್ಲಿದ್ದ ಗೋಪೀಚಂದನದಲ್ಲಿ ಶ್ರೀ ಮಧ್ವಮುನಿಗಳಿಗೆ ಶ್ರೀಕೃಷ್ಣ ಪ್ರತಿಮೆಯ ಪ್ರಾಪ್ತಿ. **ಕಡಲ ದಡದಲಿ** = ಸಮುದ್ರತೀರದಲ್ಲಿರುವ ಉಡುಪಿಯಲ್ಲಿ (ರಜತಪೀಠಪುರ) **ನಡುಮನೆಯ ಸುತನಿಗೆ** = ಮಧ್ಯಗೇಹ ಭಟ್ಟರ ಮನೆಯನ್ನು ಪಾವನ ಮಾಡಿದ ಗುರುಮಧ್ವರಿಗೆ ಒಲಿದ. **ಭಾಮೆ** = ಸತ್ಯಭಾಮೆ. **ಕರದಲರ್ಚನೆ** = ಸತ್ಯಭಾಮೆ ಮತ್ತು ರುಕ್ಮಿಣಿಯವರಿಂದ ಪೂಜಿಸಲ್ಪಟ್ಟ ಕೃಷ್ಣಪ್ರತಿಮಾ. **ಕಾಮನಯ್ಯ** = ಮನ್ಮಥಪಿತನಾದ ಶ್ರೀಕೃಷ್ಣ. **ಸುಧಾಮಸಖ** = ಕುಚೇಲನ ಮಿತ್ರ.



## ೪೯೮

## (ಅಂಕಿತ-ಪ್ರಸನ್ನಶ್ರೀನಿವಾಸ)

## ಶ್ರೀಕಾಂಡೋಣಿ ವೆಂಕಟರಮಣನ ಸ್ತೋತ್ರ

**ರಾಗ–ತೋಡಿ** | **ಮಿಶ್ರಛಾಪುತಾಳ**

ಧನ್ಯನಾದೆನು ಇಂದು ವೆಂಕಟನ ಕಂಡು
ಅನ್ಯರೊಬ್ಬರು ಇವಗೆ ಸರಿಪರರು ಇಲ್ಲ ॥ ॥ಪ॥

ಅಮರರಿಗು ಮನುಜರಿಗು ಸರ್ವ ಪ್ರಾಣಿಗಳಿಗು
ಸ್ವಾಮಿ ರಕ್ಷಕ ಸರ್ವಪ್ರೇರಕನು ದೇವ
ಅಮರಾವತಿ ಸರಿತತೀರಗಿರಿಯಲಿ ನಿಂತ
ಪ್ರೇಮದಿಂದಲಿ ಭಜಿಸೆ ಅಭಯ ವರವೀವ ॥೧॥

ಎನ್ನ ಕುಲದೇವನು ತಿರುಪತಿ ವೆಂಕಟನು
ತಾನೇವೆ ಭಕ್ತರಿಗೆ ಒಲಿದು ಒಂದಿಹನು
ಅನಂತಗುಣಪೂರ್ಣ ತನ್ನ ಸೇವಿಸುವರ
ಅನುಗಾಲ ರಕ್ಷಿಸುವ ಅನಿಮಿತ್ತಬಂಧು ॥೨॥

ಮಧ್ವಮುನಿ ಹೃತ್ಸದನ ದೇವದೇವೋತ್ತಮನು
ಮಧ್ವಮುನಿ ಗುರುಸ್ವಾಮಿ ವಿಧಿತಾತ ಶ್ರೀಶ
ಶುದ್ಧಕಾರುಣ್ಯನಿಧಿ ಪ್ರಸನ್ನ ಶ್ರೀನಿವಾಸ
ಉದ್ಧರಿಪ ಸಂಸ್ಮರಿಸೆ ಇಹ ಪರದಿ ಎಂದೂ ॥ ॥೩॥



**ಅರ್ಥವಿವರಣೆ :—**

**ಅಮರರಿಗು** = ದೇವತಾವರ್ಗಕ್ಕೂ **ಮನುಜರಿಗು** = ಮಾನವ ವೃಂದಕ್ಕೂ **ಸರ್ವಪ್ರಾಣಿಗಳಿಗು** = ಸಕಲ ಜೀವಜಂತುಗಳಿಗೂ, **ಅಮರಾವತಿ ಸರಿತತೀರ** = ದೇವಗಂಗೆ ಎನಿಪ ಸ್ವಾಮಿಪುಷ್ಕರಣೀ ತಟದಲ್ಲಿ, **ಗಿರಿಯಲಿ** = ಶೇಷಾಚಲದಲ್ಲಿ, **ಹೃತ್ಸದನ** = ಶ್ರೀ ಮನ್ಮಧ್ವಮುನಿಗಳ ಹೃದಯ ಮಂದಿರದಲ್ಲಿ **ವಿಧಿತಾತ** = ಬ್ರಹ್ಮನ ಜನಕ.



## ೪೯೯

(ಅಂಕಿತ-ಪ್ರಸನ್ನ)

ರಾಗ-ಖರಹರಪ್ರಿಯ **ಆದಿತಾಳ**

ನೋಡಿದೆನೋ-ಕೊಂಡಾಡಿದೆನೋ ॥ ॥ಪ॥

ಜೋಡಿಸಿ ಕರಗಳ-ಬೇಡಿದೆ ಕೃಷ್ಣನ ॥ ॥ಅ॥

ಮೂಡಲು ಸೂರ್ಯನು-ಹಿಮದ ಕಣಗಳಂತೆ
ಓಡಿತು ಮೋಹವು-ಕೂಡಿತು ಧೈರ್ಯವು
ನೋಡಲು ಕೃಷ್ಣನ-ಮಂಗಳಮೂರ್ತಿಯ
ಈಡೇರಿತು ಮನದಾಶೆಯು-ರಂಗನ ನೋಡಿದೆನೋ ॥ ॥೧॥

ಕಳೆಯಿತು ದುರಿತವು-ಬೆಳೆಯಿತು ಸುಕೃತವು
ಸೆಳೆದನು ಮನವನು-ತನ್ನಡಿಗಳಲಿ
ಬಳಿಯಲಿ ರುಕ್ಮಿಣೀ-ಭಾಮೆಯರೊಡಗೂಡಿ
ಕೊಳಲೂದುವ-ಮಂಗಳಕರ ದೃಶ್ಯವ ॥ ॥೨॥

ಉಕ್ಕಿತು ಹರ್ಷವು-ಪರಮ ದಯಾನಿಧಿ
ಸಕ್ಕನೆ ನೋಡುತ-ಕರುಣಾಪಾಂಗದಿ
ಭಕ್ತ ಪ್ರಸನ್ನನು-ತಕ್ಕವನೆಂದೆನ್ನ
ಅಕ್ಕರೆಯಿಂದಲಿ-ಕರೆಯುತಿರುವುದ ॥ ॥೩॥



**ಅರ್ಥವಿವರಣೆ :-**

**ಮೂಡಲು ಸೂರ್ಯನು** = ಪೂರ್ವದಿಗಂತದಲ್ಲಿ ಸೂರ್ಯನು ಉದಯಿಸಿದ ತಕ್ಷಣ. **ಹಿಮದಕಣಗಳಂತೆ** = ಮಂಜಿನ ಹನಿಗಳು ಹೇಗೆ ಕರಗಿ ಅದೃಶ್ಯವಾಗುವುವೋ, ಅದರಂತೆ ನನ್ನ ಮೋಹಗಳೆಲ್ಲವೂ ಪರಿಹಾರವಾಯಿತು ಆ ಮಂಗಳ ಮೂರ್ತಿಯ ದರ್ಶನ ಭಾಗ್ಯದಿಂದ (ಅಲಂಕಾರ), **ಈಡೇರಿತು** = ನನ್ನ ಮನಸ್ಸಿನ ಅಭಿಲಾಷೆಗಳು ನೆರವೇರಿದುವು. **ದುರಿತವು** = ಸತ್ಸಾಧನೆಗೆ ಪ್ರತಿಬಂಧಕ ಸಾಮಗ್ರಿಯಾಗಿದ್ದ ಪಾಪಗಳು ಪರಿಹಾರವಾದುವು. **ಸುಕೃತವು** = ಪುಣ್ಯಕಾರ್ಯಗಳು. **ಸೆಳೆದನು** = ಶ್ರೀಕೃಷ್ಣನು ನನ್ನ ಮನಸ್ಸನ್ನು ತನ್ನ ಪಾದಕಮಲಗಳೆಡೆಗೆ ಆಕರ್ಷಿಸಿದನು, **ಭಾಮೆ** = ಶ್ರೀಕೃಷ್ಣನ ಪತ್ನೀ ಸತ್ಯಭಾಮೆ, **ಕರುಣಾಪಾಂಗದಿ** = ದಯಾವೀಕ್ಷಣದಿಂದ, **ತಕ್ಕವನೆಂದೆನ್ನ** = ಯೋಗ್ಯನಾದ ತನ್ನ ಭಕ್ತನೆಂದು ಅನುಗ್ರಹಿಸಿ **ಅಕ್ಕರೆಯಿಂದಲಿ** = ಪ್ರೀತಿಯಿಂದ.



## ೫೦೦

**(ಗುರುಜಗನ್ನಾಥ ವಿಠ್ಠಲಾಂಕಿತ)**

**ರಾಗ-ಶ್ರೀರಾಗ** **ತ್ರಿಪುಟತಾಳ**

ಇಂದು ನೋಡಿದೆನಂದದಾಯಕ ಇಂದಿರಾರಮಣನಾ ॥ ॥ಪ॥

ಇಂದುಮೌಲ್ಯಮರೇಂದ್ರವಂದಿತ ಪಾದನಾ ॥ ॥೮॥

ವಾರಿಜಚರ-ಗಿರಿಧಾರಿ-ಸೂಕರ
ಕ್ರೂರರೂಪವ ತಾಳ್ದನಾ
ಘೋರ—ಜನನಿ ಶಿರಹಾರಿ— ವನಚರ
ನಾರಿಜನರಿಗೆ ಒಲಿದನಾ ॥ ॥೧॥

ನಾರಿವ್ರತ ಪರಿಹಾರ ಮಾಡಿ
ಹಯವನೇರಿ ಮೆರೆದನಾ
ಧಾರುಣಿಯೊಳು ಸಮೀರಗಿರಿವಾಸ
ವೀರಪುರದೊಳು ತೋರೋನಾ ॥ ॥೨॥

ವೀತಶೋಕ ವಿಧಾತಜನಕನ
ದೂತಜನ ಪರಿಪಾಲನಾ
ಖ್ಯಾತಮಹಿಮನಾ ದಾತ ಗುರುಜಗ
ನ್ನಾಥವಿಠ್ಠಲರಾಯನಾ ॥ ॥೩॥



**ಅರ್ಥವಿವರಣೆ —**

**ಆನಂದದಾಯಕ** = ಇಹದಲ್ಲಿ ಪರದಲ್ಲಿ ನಿತ್ಯಾನಂದರೂಪವಾದ ಮುಕ್ತಿಸುಖವನ್ನು ಕೊಡುವ, **ಇಂದು ಮೌಳ್ಯ** = ಚಂದ್ರಶೇಖರನಾದ ರುದ್ರ (ಇಂದು-ಚಂದ್ರನಕಲೆ. ಮೌಳ್ಯ-ಮೌಳಿಯಲ್ಲಿ ಧರಿಸಿದ). **ಅಮ ರೇಂದ್ರವಂದಿತ ಪಾದನಾ** = ಸುರಪತಿಯಾದ ಇಂದ್ರನಿಂದ ನಮ್ಯಪಾದನು. **ವಾರಿಚರ** = ಜಲಚರ ಜಂತುವಾದ ಮತ್ಸ್ಯ (ಮತ್ಸ್ಯಾವತಾರ) **ಗಿರಿ ಧಾರಿ** = ಮಂದರ ಗಿರಿಯನ್ನು ಹೊತ್ತಿದ ಕೂರ್ಮಾವತಾರಿ ಶ್ರೀಹರಿ, **ಸೂಕರ** = ವರಾಹರೂಪೀ, **ಕ್ರೂರ ರೂಪವ ತಾಳ್ದನಾ**= ಭೀಕರ ರೂಪ ವನ್ನು ತಾಳಿದ ನರಸಿಂಹದೇವರು. **ಘೋರ** = ಬಾಲಕನಾದ ವಾಮನ

(ಮಾಣವಕರೂಪ) **ಜನನಿ ಶಿರಹಾರಿ** = ತನ್ನ ತಾಯಿಯಾದ ರೇಣುಕಾದೇವಿಯನ್ನು ಕೊಡಲಿಯಿಂದ ಸಂಹರಿಸಿ ಅವಳನ್ನು ಬದುಕಿಸಿದ ಪರಶುರಾಮರೂಪ. **ವನಚರ** = ವನವಾಸಿಯಾದ ಶ್ರೀರಾಮಚಂದ್ರ. **ನಾರೀಜನರಿಗೆ ಒಲಿದನಾ** = ಗೋಪಿಕಾಸ್ತ್ರೀಯರನ್ನು ಅನುಗ್ರಹಿಸಿದ ಶ್ರೀಕೃಷ್ಣ. **ನಾರಿವ್ರತ ಪರಿಹಾರ ಮಾಡಿ** = ತ್ರಿಪುರಾಸುರರ ಪತ್ನಿಯರಲ್ಲಿ ಮನೋವೈಕಲ್ಯವನ್ನುಂಟು ಮಾಡಿ, ಅವರ ಪಾತಿವ್ರತ್ಯಭಂಗಗೊಳಿಸಿ, ತ್ರಿಪುರಾಸುರರ ಮರಣಕ್ಕೆ ಕಾರಣನಾದ ಬುದ್ಧನ ಮೋಹಕರೂಪ. **ಹಯವೇರಿ ಮೆರೆದನಾ** = ಲಕ್ಷ್ಮಿಯನ್ನೇ ಕುದುರೆಯ ವಾಹನವನ್ನಾಗಿ ಮಾಡಿಕೊಂಡು ದೈತ್ಯರ ಸಂಹಾರಕ್ಕೆ ಕಾರಣನಾದ ಕಲ್ಕಿರೂಪ. **ಸುವೀರಗಿರಿವಾಸ** = ಅಂಜನಾಚಲವಾಸ. **ವೀತಶೋಕ** = ಕ್ಲೇಶಾದಿಗಳಿಂದ ವಿದೂರನಾದ **ವಿಧಾತಜನಕ** = ಬ್ರಹ್ಮನ ತಂದೆ. **ದೂತಜನ** = ತನ್ನ ದಾಸವರ್ಗ.

□

## ೫೦೧

(ಅಂಕಿತ-ಭೀಮೇಶಕೃಷ್ಣ)

**ರಾಗ–**

ಕಂಡೆ ಕಂಡೆ ಸ್ವಾಮಿಯ ಕಂಡೆ || ||ಪ||

ಕಂಡೆ ನಾ ಬ್ರಹ್ಮಾಂಡದೊಡೆಯನ
ಪಾಂಡವರ ಪರಿಪಾಲಿಸುವವನ ಪ್ರ
ಚಂಡ ಅಸುರರ ಶಿರವ ಚಕ್ರದಿ
ಚಂಡನಾಡಿದ ಚೆಲುವ ಕೃಷ್ಣನ || ||ಅ||

ಪಾದನಖದಿ ಭಾಗೀರಥ್ಯುದಿಸಿದಳು
ವಿರಿಂಚಿಯು ನಾಭಿಕಮಲದಿ

ಈರೇಳು ಲೋಕಪಿಟ್ಟು ಉದರವೊ-
ಳಾದಿ ಮೂರುತಿ ಸಾರ್ವಭೌಮ ॥ ॥೦॥

ಎಳೆದುಳಸಿ ಶ್ರೀವತ್ಸ ಕೌಸ್ತುಭ ಅ-
ರಳು ಮಲ್ಲಿಗೆ ಹಾರ ಪದಕವು ಕೊ-
ರಳೊಳಗೆ ವೈಜಯಂತಿ ಮಾಲೆಯಂ-
ತ್ಹೊಳೆವೊ ಮಾಣಿಕಾಭರಣ ಭೂಷಿತ ॥ ॥೨॥

ಶೀಘ್ರದಲಿ ಜರೆಸುತನ ವಧೆ ಮಾ-
ಸ್ಯಜ್ಞದಲಿ ಶಿಶುಪಾಲರಂತಕ
ರುಕ್ಮಿಣೀಪತಿ ಧರ್ಮ ಭೀಮರಿಂ-
ದಗ್ರಪೂಜೆ ತಕ್ಕೊಂಡ ಕೃಷ್ಣನ ॥ ॥೩॥

ಕಂಕಣ ಕರದಲಿ ಶಂಖಚಕ್ರವು ಅರ-
ವಿಂದ ರೇಖವು ಚರಣದಲಿ
ಪಂಕಜಾಕ್ಷನ ಮುಖದ ಕಾಂತಿಯು
ಶಂಕೆಯಿಲ್ಲದ ಸೂರ್ಯರಂದದಿ ॥ ॥೪॥

ಎಂಟು ಮಂದ್ಯೆರಡೆಂಟು ಸಾವಿರ ಸತಿಯ-
ರಿಂದ ದ್ವಾರವತಿಯನಾಳಿದ
ಪತಿತಪಾವನ ಪಾರಿಜಾತವ ಸತಿಗೆ
ತಂದ ಶ್ರೀಪತಿಯ ಪಾದವ ॥ ॥೫॥

ನಳಿನಮುಖಿ ದ್ರೌಪದಿಯು ಕರೆಯಲು
ಸೆಳೆಯೆ ವಸ್ತ್ರ ಅಕ್ಷಯವ ಮಾಡಿಸಿ
ಖಳರ ಮರ್ದನ ಕರುಣಸಾಗರೆಂ-
ದಿಳೆಯೊಳಗೆ ಹೆಸರಾದ ಕೃಷ್ಣನ ॥ ॥೬॥

ಕಂಡೆನೀಗ ರಂಗನಾಥನ ಭೂ-
ಮಂಡಲದೊಳುದ್ದಂಡ ಮೂರುತಿ
ಹಿಂಡು ದೈವರ ತಂಡತಂಡದಿ
ಗುಂಡು ತುಂಡು ಮಾಡಿದ ಸ್ವಾಮಿಯ ! ||ಅ||

ಕಾಮಪಿತನ ಕೌಸ್ತುಭಹಾರನ ಕಸ್ತೂರಿ
ನಾಮನ ನೇಮದಿಂದ ಧರಿಸಿದಾತನ
ವಾಮಭಾಗ ಲಕ್ಷ್ಮೀಸಹಿತ ಹೇಮಮಂಟಪದೊಳಗೆ ಕುಳಿತು
ಕಾಮಿಸಿದ ಭಕ್ತರಿಗ ಕಾಮಿತಾರ್ಥ ಕೊಡುವ ಸ್ವಾಮಿಯ || ||೧||

ಗರುಡವಾಹನನೇರಿ ಗಗನದಿ ಚರಿಸುತ್ತ ಬಂದು
ಸರಸಿಯೊಳು ಕರಿಯ ಸಲಹಿದ
ಪರಮಭಕ್ತರ ಕಾವದೇವ ಕರುಣಾವಾರಿಧಿ ಕಮಲನಯನ
ಉರಗಶಯನ ಉದ್ಧಾರಿ ನಿನ್ನ ಮೊರೆಯಹೊಕ್ಕೆ ಕಾಯೊ ಎನ್ನ ||೨||

ಇಂದುಧರನ ಸಖನೆ ಕೇಳಯ್ಯ ಬಂದಂಥ ದುರಿತ
ಹಿಂದುಮಾಡಿ ಮುಂದೆ ಸಲಹಯ್ಯ
ತಂದೆ ಅಡಿಯ ಹೊಂದಿದೆನು ಇಂದು ಹೆಳವನಕಟ್ಟೆರಂಗ ಆ-
ನಂದಪಡಿಸೊ ರಾಮಲಿಂಗ ಹೊಂದಿದೆನು ನಿನ್ನ ಚರಣ || ||೩||

**ಅರ್ಥವಿವರಣೆ:—**

**ಉದ್ದಂಡ ಮೂರುತಿ** = ಸರ್ವೋತ್ಕೃಷ್ಟನಾದ ದೇವರು, **ಹಿಂಡು ದೈವರ** = ಕ್ಷುದ್ರದೇವತೆಗಳು. **ಕಾಮಪಿತನ** = ಮನ್ಮಥನ ತಂದೆ ಶ್ರೀಕೃಷ್ಣ. **ಕೌಸ್ತುಭ** = ಶ್ರೀಹರಿಯು ಕಂಠದಲ್ಲಿ ಧರಿಸಿರುವ ಪದಕ

ಬ್ರಹ್ಮದೇವರು ಈ ರೂಪದಲ್ಲಿ ಶ್ರೀಹರಿಯನ್ನು ಸೇವಿಸುತ್ತಿರುವರು. ನೇಮದಿಂದ = ಶಿಸ್ತಾಗಿ (ಮನೋಹರವಾಗಿ). ವಾಮಭಾಗ ಲಕ್ಷ್ಮೀಸಹಿತ= ಶ್ರೀಪರಮಾತ್ಮನ ಎಡಭಾಗದಲ್ಲಿ ವಕ್ಷದಲ್ಲಿ ಶ್ರೀವತ್ಸಲಾಂಛನನು. ಶ್ರೀವತ್ಸವೇ ಶ್ರೀಲಕ್ಷ್ಮೀ. ಹೇಮಮಂಟಪ = ಸುವರ್ಣಮಂಟಪ. ಕಾಮಿಸಿದ= ತನ್ನನ್ನು ಇಚ್ಛಿಸಿದ, ಉರಗಶಯನ = ಶೇಷಶಾಯಿ. ಇಂದುಧರನ ಸಖನೆ = ಚಂದ್ರಮೌಳಿಯಾದ ರುದ್ರನ ಮಿತ್ರನೇ (ರುದ್ರದೇವರು ಶ್ರೀಹರಿಯ ದ್ವಿತೀಯಾಂಗಭೂತರು).



## ೫೦೩

(ಅಂಕಿತ-ವೆಂಕಟೇಶ)

**ರಾಗ–ಸಾವೇರಿ** **ಆದಿತಾಳ**

ಕಂಡೆನಾ–ಬ್ರಹ್ಮಾಂಡದೊಡೆಯ–ಶ್ರೀವೆಂಕಟದೇವನ || ||ಪ||

ಕಂಡೆನಾ ಭಕುತರ ಹಿಂಡುಗಳೂರೆ
ಕೊಂಡಾಡುತಲಿರೆ-ಪದಪುಂಡರೀಕವ ನಾ || ||ಅ||

ತುಂಗಮಹಿಮ–ಸತ್ಸಂಗವಿತ್ತು-ಮನದಂತರವರಿ
ತಾಂಗೀರಸದಿ-ಮಂಗಳ ಪೌರ್ಣಿಮೆ ಭಾರ್ಗವಾಸರದಿ
ಭಾರ್ಗವಿಪತಿ ನಿನ್ನನುಗ್ರಹದೀ–ನಗದೊಡೆಯನೆ ಭಕ್ತರ
ರಘುಹರಿಸುತ–ಪನ್ನಗಗಿರಿಗೊಡೆಯ–ನಿನ್ನಯ ಗುಡಿಯನ್ನು
ಬಗೆ ಬಗೆ ಸ್ತುತಿಪರ ಹಿಂಡನ್ನು–ನಾ ಕಂಡೆನೋ ||
ಜಾಗುಮಾಡದೆ ಬಾಯಿ ಬೀಗವ ಕೈಕೊಂಡು
ಸಾಗಿ ಕಾಸಾರದಿ ಸ್ನಾನಮಾಡಿಕೊಂಡು
ಬಾಗಿ ವರಹಾದೇವರ ವಂದಿಸಿ
ಬೇಗದಿ ಹರಕೆ ಕೈಕೊಂಡಿಹ ದೇವನ || ||೧||

ಮುಕ್ತರೊಡೆಯಾ-ಪುರುಷೋತ್ತಮಾ-ನಿನ್ನಯಾ
ಭಕ್ತರ ವಿಪತ್ತುಗಳೆಲ್ಲ ಹರಿಸಿ-ಶಕ್ತ್ಯನುಸಾರ ತ್ವ-
ದ್ಭಕ್ತರೆಸಗುವ ಅತ್ಯಲ್ಪ ಭಕ್ತಿಯ ಸ್ವೀಕರಿಸೀ
ಭಕ್ತಿಯಿಂದ ಪ್ರಾಕಾರದಿ ಸುತ್ತಲು-ಹೊತ್ತ ಗಂಡದೀಪ ಸಾರುತಲೀ
ನಿತ್ಯನೂತನ ಎನ್ನ ಸ್ತುತಿಸುತಲೀ-ಮತ್ತೆ ಉರುಳುತಲೀ ॥

ಉತ್ತಮಗತಿಪ್ರದ-ವ್ಯಕ್ತನಹುದೂ ತ್ವ
ದ್ಭಕ್ತರ ಮನೋರಥ ಪೂರ್ತಿಮಾಡುವ
ಭಕ್ತವತ್ಸಲನೆಂಬ ಬಿರುದು ಪೊತ್ತ-ಸ
ರ್ವೋತ್ತಮ-ಶ್ರೀಪುರುಷೋತ್ತಮ-ನಿನ್ನನು ॥ ॥೨॥

ಬ್ರಹ್ಮಜನಕ-ಪರಬ್ರಹ್ಮನೇ-ನಿನ್ನಯ
ಸನ್ಮಹಿಮೆಯನಾ-ಬ್ರಹ್ಮನದೀ
ಒಮ್ಮೆಯಾದರು ಮನ್ಮನದಲಿ ನಿನ್ನಯ
ಸನ್ಮಂಗಳ ರೂಪವ ನಿಲ್ಲಿಸದೇ-ಸುಮ್ಮನೆ ಕುಳಿತು
ಇಮ್ಮನನಾಗಿರೆ-ಘಮ್ಮನೆ ಎನ್ನನು ಒಳಕೊಳ್ಳದೇ
ಕಣ್ಮನದೆದುರಿಲಿ ನೀ ನಿಂದೆ-ನೀನ್ನೆಯ ತಂದೇ-ಸನ್ಮುದದಿಂದೇ ॥

ಪಾಮರನೆಂದೆನ್ನ ಪ್ರೇಮದಿ ಕರುಣಿಸಿ
ಸನ್ಮಹಿಮೆಯ ತೋರ್ದೆ-ಜಗದೀಶಾ
ಕಾಮಿತ ಜನರ ಕಲ್ಪದ್ರುಮನು ನೀನೆಲೋ
ಈ ಮೇಲುಗಿರೀಶಾ-ಶ್ರೀವೆಂಕಟೇಶಾ-ನಿನ್ನ ॥ ॥೩॥



**ಅರ್ಥವಿವರಣೆ :-**

**ಉರೆ ಕೊಂಡಾಡುತಲಿರೆ** = ಅಧಿಕವಾಗಿ ಸ್ತೋತ್ರಮಾಡುತ್ತಿರಲಾಗಿ. **ಪದಪುಂಡರೀಕವ** = ಚರಣಾರವಿಂದಗಳನ್ನು, **ತುಂಗಮಹಿಮ** =

ನಮಸ್ಕರಿಸಿದ, **ದಾನವನ** =ರಾಕ್ಷಸನಾದ ವೃಷಭಾಸುರನ. **ಅಭಿದಾನದ**= ಹೆಸರಿನ, ಅಂದರೆ, ಅವನ ಅಪೇಕ್ಷೆಯಂತೆ. **ವೃಷಭಾಚಲವೆಂದು**= ಕೃತಯುಗದಲ್ಲಿ ಪ್ರಸಿದ್ಧವಾದ, **ಮಣಿಸಾನುವಿನೊಳು** = ಪರ್ವತಗಳ ಸಾಲಿನಲ್ಲಿ (ಶೇಷಾಚಲವು ಮೇರು ಪರ್ವತದ ಭಾಗ) **ಭೂನಮಿಸಿದ** = ಭೂದೇವಿಯಿಂದ ವಂದ್ಯನಾದ, **ದಾನವಹನ**= ಹಿರಣ್ಯಾಕ್ಷನನ್ನು ಸಂಹರಿಸಿದ ವರಹಾಮೂರ್ತಿಯನ್ನು **ದಾನವಕೇಳ್ದ** =ಭೂಮಿಯನ್ನು ದಾನವಾಗಿ ಬೇಡಿದ. **ಆ ನವನ**= ಆ ನಿತ್ಯ ನೂತನ ಮಹಿಮನನ್ನೂ (ನವನ-ನೂತನ). ಇಲ್ಲಿ ತನ್ನನ್ನೇ ಬೇಡಿದ ಲೀಲಾ ವಿನೋದಿ.

**ಅಕ್ಷಾರಿಯ** = ಅಕ್ಷ ಕುಮಾರನನ್ನು ಕೊಂದ ಆಂಜನೇಯನ **ಲಕ್ಷ್ಯನು**= ಧ್ಯೇಯವಸ್ತುವಾದ ಶ್ರೀ ರಾಮಚಂದ್ರ. **ವಿಗತಾಕ್ಷಿಯೊಳ**= ಜಾತ್ಯಂಧಳಾದ ಅಂಜನಾದೇವಿ. (ವಿಗತ-ಹೋಗಲ್ಪಟ್ಟ ಅಕ್ಷಿ-ನೇತ್ರವುಳ್ಳವಳು). **ಅತ್ಯಾಕ್ಷೆಗೆ** = ಅತ್ಯಂತವಾದ ಆಕಾಂಕ್ಷೆಗೆ, **ಒಲಿದು** = ಅನುಗ್ರಹಿಸಿ, **ಯಕ್ಷಾಧಿಪ**=ಯಕ್ಷರ ಅಧಿಪತಿಯಾದ ಕುಬೇರನು, **ನಿಕ್ಷೇಪದಿ**= ಸಾಲದರೂಪದಲ್ಲಿ ಕೊಟ್ಟ ದ್ರವ್ಯದಿಂದ, **ಮಾಸತಿ**= ಶ್ರೀ ಭೂದೇವಿಯರ ಸಗ್ರಹಿತನಾಗಿ. **ಸಾಕ್ಷಿ ಇಹನ** = ಪ್ರತ್ಯಕ್ಷನಾಗಿರುವ ಪದ್ಮಾವತೀರಮಣನನ್ನು ಕಂಡೇ.

**ವಾತಾಶನ** = ಶೇಷದೇವರು (ವಾತ-ಗಾಳಿಯನ್ನು ಅಶನ-ಆಹಾರವಾಗಿ ಸೇವಿಸುವ ಸರ್ಪ). **ವಾತೇಶನ** = ೪೯ ಮರುದ್ಗಣಗಳಿಗೆ ಪ್ರಭುವಾದ ಶ್ರೀ ವಾಯುದೇವರ, **ಭೂತಿಗೆ** = ಪ್ರತಿಭೆಗೆ, **ಮನಸೋತಿರೆ**= ಮನವು ಸೋಲುತ್ತಿರಲು, **ವಸುಧಾತಳದಲಿ** = ಈ ಭೂಮಿಯ ಮೇಲೆ **ಧಾತಳ** = ಬ್ರಹ್ಮನ ಪತ್ನೀ ಶ್ರೀ ಸರಸ್ವತಿಯು ಅಭಿಮಾನಿಯಾಗಿರುವ **ತಟಿ**= ಸ್ವಾಮಿ ಪುಷ್ಕರಣೀತೀರ್ಥದ ದಡದಲ್ಲಿರುವ (ಸ್ವಾಮಿ ಪುಷ್ಕರಣೀ ತೀರ್ಥವು ಸರಸ್ವತೀ ಅಭಿಮನ್ಯಮಾನವಾಗಿದೆ) **ಥಾಥಳಿಸುವ**=ಧಳಧಳಿಸುತ್ತಿರುವ, **ಧಾತಾನ್ನನ**= ಬ್ರಹ್ಮೋದನನನ್ನು (ಪ್ರಳಯ ಕಾಲದಲ್ಲಿ ಬ್ರಹ್ಮದೇವರನ್ನೇ ಆಹಾರವಾಗಿ ನುಂಗುವ ಶ್ರೀ ಹರಿ). ಈ ನುಡಿಯಲ್ಲಿ **ಅಂಜನಾಚಲದ** ಹೆಸರಿನ ಪ್ರಸಕ್ತಿ ಇದೆ.

**ಮಾಧವನ** -- ಕರ್ಮಭ್ರಷ್ಟನಾದ ಮಾಧವ ಬ್ರಾಹ್ಮಣನನ್ನು, **ರಮಾಧವ** = ಲಕ್ಷ್ಮೀಪತಿಯಾದ ಶ್ರೀ ಹರಿಯು, **ನರಮಾಧವನಾಗಿಸೆ** = ರಾಜನನ್ನಾಗಿ ಮಾಡಲು (ಮಾಧವ ಬ್ರಾಹ್ಮಣನೇ ಮುಂದಿನ ಜನ್ಮದಲ್ಲಿ ಆಕಾಶ ರಾಜನಾಗಿ ಹುಟ್ಟಿದನು). **ಧರೆ** = ಭೂಮಿಯನ್ನು. **ಕೋದಲು** = ನೇಗಿಲಿನಿಂದ ಸೀಳಲು, **ಪದ್ಮೋದಯಕಾಗಿ** = ಪದ್ಮದಲ್ಲಿ ಉದ್ಭೂತಳಾದ ಪದ್ಮಾವತಿಯ ಅಭ್ಯುದಯಕ್ಕಾಗಿ, **ಉದಯಗಿರಿ** = ಮೂಡಲಗಿರಿಯನ್ನು (ಪೂರ್ವಾಚಲ). **ವೇದಿಕೆಯವನ** = ರಂಗಭೂಮಿಯನ್ನಾಗಿಮಾಡಿಕೊಂಡ. ಇಲ್ಲಿ **ವೆಂಕಟಾಚಲ** ವೆಂದು ಹೆಸರು ಬರಲು ಕಾರಣವಾದ ಪ್ರಸಂಗವಿದೆ.

**ಭವ** = ರುದ್ರ ದೇವರು, (ಶುಕಾಚಾರ್ಯರು). **ತೋಯಜಭವ** = ಕಮಲೋದ್ಭವರಾದ ಬ್ರಹ್ಮದೇವರು, **ಮನಸಂಭವ** = ಶ್ರೀ ಹರಿಯ ಮನಸ್ಸಿನಿಂದ ಉತ್ಪನ್ನನಾದ ಮನ್ಮಥ. **ಭವಭಯಹರ** = ಸಂಸಾರ ಭಯವನ್ನು ಪರಿಹರಿಸುವ. **ಭಕ್ತರ ಹೃದ್ಭವನದೊಳು** = ಭಕ್ತರ ಹೃನ್ಮಂದಿರದಲ್ಲಿ, **ಉದ್ಭವನಹನ** = ಅಪರೋಕ್ಷದಲ್ಲಿ ಗೋಚರಿಸುವ ಶ್ರೀತಂದೆ ವೆಂಕಟೇಶವಿಠ್ಠಲನನ್ನು ಕಂಡೇ, [ಇಲ್ಲಿ **ಭವ**- ಎಂಬ ಶಬ್ದದ ಯಮಕ ಪ್ರಯೋಗವಿದೆ].

## ೫೦೫

## (ಗುರುಗೋವಿಂದವಿಠ್ಠಲಾಂಕಿತ)

**ರಾಗ—ಕಾಪಿ** **ಆದಿತಾಳ**

ಕಂಡೆ ಕಂಡೆನು ಕೃಷ್ಣ ನಿನ್ನಯ–ಭವ್ಯಭಾವದ ಮೂರ್ತಿಯ || ||ಪ||

ಪುಂಡರೀಕ ದಳಾಯತಾಕ್ಷನ–ಹಿಂಡುದೈವರ ಗಂಡನ || ||ಅ||

ಅರ್ಥವಿವರಣೆ :—

**ಹಿಂಡು ದೈವದ ಗಂಡನ** = ಸಕಲ ದೇವತಾವರ್ಗಕ್ಕೆ ಸ್ವಾಮಿಯಾದವನು. **ಪೈಜಣ** = ಕಿರುಗೆಜ್ಜೆಗಳಿಂದ ಕೂಡಿದ ಪಾದಾಭರಣ–ಅಂದುಗೆ. **ಅಕ್ಷಯಾಂಬರವಿತ್ತನ** = ದ್ರೌಪದಿಯು ಉಟ್ಟಿದ್ದ ಸೀರೆಯೇ ಅಕ್ಷಯವಾಗಲೆಂದು ವರವಿತ್ತ ಶ್ರೀಕೃಷ್ಣ. **ಜಿಷ್ಣುವಿಗೆ** = ಅರ್ಜುನನಿಗೆ ಮಿತ್ರನಾದ ಕೃಷ್ಣ (ಜಿಷ್ಣು–ಎಂಬುದು ಅರ್ಜುನನ ದಶನಾಮಗಳಲ್ಲಿ ಒಂದು). **ವಿಷ್ಟರಶ್ರವ** = ಶೇಷಶಾಯಿಯಾದ. **ಸರಸಿಜಾಸನಧಿಷ್ಠಿತ** = ಕಮಲಾಸನರಾದ ಬ್ರಹ್ಮದೇವರ ಅಂತರ್ಯಾಮಿಯಾದ. **ತ್ರಿವಳಿಯು** = ಉದರ ಮೇಲೆ ಇರುವ ಮೂರು ಗೆರೆಗಳು. **ರಜ್ಜುವ** = ಹಗ (ನೇಣು). **ಫಣಿವಿಭೂಷಣ ಸೇವಿತ** = ಸರ್ಪಾಲಂಕಾರನಾದ ರುದ್ರನಿಂದ ಸಂಸೇವ್ಯನಾದವನು **ಭುವನ ಮೋಹನ** = ಲೋಕಸುಂದರ ಮೂರ್ತಿ. **ಪವನನಯ್ಯ** = ವಾಯುದೇವರ ತಂದೆ. **ಮಧ್ವಸರಸಿಯ ತಟದಿ** = ಉಡುಪಿಯ ಶ್ರೀಕೃಷ್ಣ ಮಂದಿರದಲ್ಲಿರುವ ಶ್ರೀಮಧ್ವಸರೋವರ. **ಸುಷ್ಠು ಪೂಜಿತ** = ವಿಧ್ಯುಕ್ತವಾಗಿ ಪೂಜಿಗೊಳ್ಳುವ.



॥ ಶ್ರೀಃ ಹರಿಃ ಓಂ ॥

# ವಿಭಾಗ—೪

## ದಶಾವಾತಾರ ಸ್ತುತಿ ಪದಗಳು

## ಶ್ರೀ ಹರಿಯ ಪರವಾದ ಕೀರ್ತನೆಗಳ ಸಂಗ್ರಹ

ಭಜನಕೌಸ್ತುಭ

೫೦೬

# ಕೀರ್ತನೆ

(ಅಂಕಿತ- ಶ್ರೀಕೃಷ್ಣ)

**ರಾಗ-ಆನಂದಭೈರವಿ** **ಆದಿತಾಳ**

ತೋರೆ ಜಾಣೆ ತೋಯಜನಾಭನ
ಪದಪಾರಣಗಾಣೆ
ಮಾರನ ತಾಪವ ಸೈರಿಸಲಾರೆನೆ ||ಪ||

ನೀರೆ ನಿನಗೆ ಮುತ್ತಿನ್ಹಾರವ ಕೊಡುವೆನೆ ||ಅ||

ನೀರೊಳು ಮುಳುಗಿ ಮುಳುಗಾಡುತ ಬಂದು
ಮಥಿಸಿದ ಪಯೋನೀರು ಸಿಂಧು
ಧಾರುಣಿ ಚಿಮ್ಮುತ ಮೇಲಕೆ ತಂದು
ದನುಜನ್ನ ಕೊಂದು ||
ಮೂರು ಪಾದವ ಬೇಡುತ ನಿಂದು
ಮುನಿಕುಲವಳಿ ಬಂದು
ನಾರಿ ಬಿಟ್ಟು ಪರನಾರಿಯರಾಳಿದ
ತೋರೆ ರಮಣಿ ಹಯವೇರಪೊರೆದನ || ||೧||

ಕತ್ತಲೆಯೊಡನೆ (ತಾಮಸ ದೈತ್ಯ) ಕಾದಿದನು ಧೀರ
ಕಡೆದನು ಕೂಪಾರ
ಕುತ್ತಿ ಮಣ್ಣನಗೆದು ಮೆದ್ದನು ಬೇರ
ದಾನವ ಸಂಹಾರ ||
ಒತ್ತಿ ಬಲಿಯನು ಕಾಯ್ದನು ಶೂರಾ
ಕುಜನ ಕುಠಾರ

ಪಾಪಿ ಕಂಸನ ಕತ್ತರಿಸಿ ಗೋಕುಲದೊಳು
ಬತ್ತಲೆ ರಾವುತನಾಗಿ ಮೆರೆದನ ॥ ॥೫॥

ನಿಗಮ ಕದ್ದವನ ನೀಗಿದ ದಿಟ್ಟ
ನೆಗೆಹಿದ ಬೆಟ್ಟ
ಅಗಿದು ಮಣ್ಣನೆ ಜಠರದಲ್ಲಿಟ್ಟ
ಘುಡಿ ಘುಡಿಸುವ ಸಿಟ್ಟ ॥
ಜಗಕೆಲ್ಲ ನೋಡೆ ಎರಡಡಿಯಿಟ್ಟ
ಕೊಡಲಿಯ ಪೆಟ್ಟ
ಮೃಗವ ಕೆಡಹಿ ಕುಂತಿಮಗನೆ ಸಾರಥಿಯಾಗಿ
ಜಗವ ಮೋಹಿಸಿ ಹಯವೇರ್ದ **ಶ್ರೀ ಕೃಷ್ಣನ** ॥ ॥೬॥



ಶ್ರೀ ಮದ್ವ್ಯಾಸರಾಜಸಾರ್ವಭೌಮರಿಂದ ವಿರಚಿತವಾಗಿರುವ ಈ ಕೀರ್ತನೆಯಲ್ಲಿ ಪ್ರತಿನುಡಿಯಲ್ಲಿಯೂ ಶ್ರೀಹರಿಯ **ದಶಾವತಾರ ವರ್ಣನೆ** ಇದೆ.

**ತೋಯಜನಯನೆ** = ಕಮಲನೇತ್ರ [ತೋಯಜ - ನೀರಿನಲ್ಲಿ ಹುಟ್ಟಿದ ಕಮಲ ಪುಷ್ಪ]. **ಮದವಾರಣ ಗಮನೆ** = ಮದಿಸಿದ ಆನೆಯಂತೆ ಗಂಭೀರ ನಡಿಗೆಯುಳ್ಳ (ವಾರಣ-ಆನೆ. ಗಮನೆ-ಗಜಗಮನೆ). **ಮಾರನ ತಾಪವ** = ಮನ್ಮಥನ ಕಾಟವನ್ನು. **ನೀರೊಳು ಮುಳುಗಿ** = ಮತ್ಸ್ಯಾವತಾರ. **ಮಥಿಸಿದ** = ಕಡೆದ, **ಪಯನೀರು ಸಿಂಧು** = ಕ್ಷೀರ ಸಮುದ್ರ, ಕ್ಷೀರಸಮುದ್ರಮಥನ ಪ್ರಸಂಗ-ಕೂರ್ಮಾವತಾರ. **ಧಾರುಣಿ ಚಿಮ್ಮುತ** = ಭೂಮಿಯನ್ನು ತನ್ನ ಕೋರೆ ದಾಡೆಗಳಿಂದ ಎತ್ತಿ ತಂದ ವರಹಾವತಾರ. **ದನುಜನ್ನ ಕೊಂದು** = ದುರುಳನಾದ ಹಿರಣ್ಯಕಶಿಪು ಸಂಹಾರಕ ಶ್ರೀ ನರಸಿಂಹ. **ಮೂರುಪಾದವ** = ಬಲಿಚಕ್ರವರ್ತಿಯಿಂದ ಮೂರಡಿ ನೆಲ ಬೇಡಿದ ವಾಮನ ರೂಪ. **ಮುನಿಕುಲರಲಿ** = ಭೃಗುಋಷಿಗಳ ಕುಲೋದ್ಭವರಾದ ಜಮದಗ್ನಿ ಪುತ್ರ ಭಾರ್ಗವರಾಮ. **ನಾರಿಬಿಟ್ಟೆ** = ನೀತಿಯನ್ನು ಕಳೆದು

ಕೊಂದ ಶ್ರೀ ರಾಮಚಂದ್ರ. ಪರನಾರಳಿಯದ = ತ್ರಿಪುರಾಸುರರ ಪತ್ನಿಯರ ಪ್ರತಭಂಗಗೊಳಿಸಿದ ಬುದ್ಧ. ಹಾಗೂ ಗೋಪಿಕಾವಲ್ಲಭ ಶ್ರೀಕೃಷ್ಣ.

**ಕತ್ತಲಿಯೊಡನೆ** = ವೇದಗಳನ್ನು ಕದ್ದೊಯ್ದ ಸೋಮಕನೆಂಬ ದೈತ್ಯನನ್ನು (ಕತ್ತಲೆ-ತಮೋಯೋಗ್ಯ ದೈತ್ಯ) ಸಂಹರಿಸಿದ ಮತ್ಸ್ಯ. **ಕೂಪಾರ** = ಕ್ಷೀರಸಮುದ್ರ-ಕೂರ್ಮಾವತಾರ. **ಕುತ್ತಿ** = ನೆಲವನ್ನು ಕೋರೆದಾಡೆಗಳಿಂದ ಅಗೆದ ವರಾಹವತಾರ. **ದಾನವಸಂಹಾರ** = ಹಿರಣ್ಯಕಶಿಪುನಾಶಕ ಶ್ರೀ ನಾರಸಿಂಹ. **ಒತ್ತಿ ಬಲಿಯನು** = ಮೂರನೆಯ ಪಾದದಿಂದ ಬಲಿಯ ತಲೆಯನ್ನು ಒತ್ತಿ ಪಾತಾಳಕ್ಕೆ ತುಳಿದ ವಾಮನ. **ಕುಜನ ಕುಠಾರ** = ದುರುಳಕ್ಷತ್ರಿಯರ ಸಂಹಾರಕ ಪರಶುರಾಮ (ಕುಠಾರ-ಗಂಡುಗೊಡಲಿ). **ಹತ್ತುಶಿರನ** = ದಶಕಂಠನಾದ ರಾವಣಾರಿ ಶ್ರೀರಾಮ, **ಗೋಕುಲದೊಳು** = ನಂದಗೋಕುಲದಲ್ಲಿ ಬಾಲಲೀಲೆಗಳನ್ನಾಡಿದ ಶ್ರೀಕೃಷ್ಣ. **ಬತ್ತಲೆ** = ನಗ್ನನಾಗಿ ನಿಂತ ಮೋಹಕ ಬುದ್ಧ, **ರಾಹುತನಾಗಿ** = ಹಯವೇರ್ದ ಕಲ್ಕಿ.

**ನಿಗಮ ಕದ್ದವನ** = ವೇದಚೋರನನ್ನು ಸಂಹರಿಸಿದ ಮತ್ಸ್ಯಾವತಾರಿ ಶ್ರೀಹರಿ, **ನೆಗೆಹಿದ** = ಮಂದರ ಪರ್ವತವನ್ನು ತನ್ನ ಬೆನ್ನಿನ ಮೇಲೆ ಹೊತ್ತ ಕೂರ್ಮ. **ಅಗೆದುಮಣ್ಣಿನ** = ವರಹಾವತಾರ ಇಲ್ಲಿ. **ಮಣ್ಣಿಗೆ** = ಎಂಬ ಶಬ್ದವು ಅರ್ಥದ್ವಯದಲ್ಲಿ ಪ್ರಯೋಗವಾಗಿದೆ. (೧) ಮಣ್ಣನ್ನು ಅಗಿಯುವ ಪಾತಾಳಕ್ಕೆ ಹೋದ ವರಾಹ (೨) ಮಣ್ಣನ್ನು ಅಂದರೆ ಭೂದೇವಿಗೆ ತನ್ನ ಜಠರದಲ್ಲಿ ಅಂದರೆ **ಆಶ್ರಯಕೊಟ್ಟ** ವರಾಹರೂಪ **ಸಿಟ್ಟಿ** = ಘೋರಾಕೃತಿ ನರಸಿಂಹ. **ಎರಡಡಿಯಿಟ್ಟ** = ತನ್ನ ಎರಡು ಪಾದಗಳಿಂದ ಇಡೀ ಜಗತ್ತನ್ನೇ ಅಳೆದ ವಾಮನರೂಪ. **ಕೊಡಲಿಯ ಪೆತ್ತ** = ಗಂಡುಕೊಡಲಿ ಪೆತ್ತ ಪರಶುರಾಮ. **ಮೃಗನ ಕೆಡಹಿ** = ಕಪಿ ವೀರನಾದ ವಾಲಿಯನ್ನು ಸಂಹರಿಸಿದ ಶ್ರೀರಾಮಚಂದ್ರ, **ಕುಂತಿಮನೆಗೆ** = ಕುಂತೀ ಪುತ್ರನಾದ ಅರ್ಜುನನಿಗೆ ಸಾರಥಿಯಾದ ಶ್ರೀಕೃಷ್ಣ

(ಬಂಡಿ ಬೋವ). **ಜಗವ ಮೋಹಿಸಿ** = ಜಗನ್ಮೋಹಕ ಬುದ್ಧರೂಪ **ಹಯವದನ** = ಶ್ರೀಲಕ್ಷ್ಮಿಯನ್ನೇ ಕುದುರೆಯನ್ನಾಗಿ ಮಾಡಿಕೊಂಡ ಕಲ್ಕಿ.



## ೫೦೭

## ಕೀರ್ತನೆ

(ಅಂಕಿತ-ಹಯವದನ)

**ರಾಗ-ಮುಖಾರಿ** **ಆದಿತಾಳ**

ನಾರಾಯಣ ನಾರಾಯಣ
ನಾರಾಯಣ ನಾರಾಯಣ
ನಾರಾಯಣ ನರಹರಿಯೇ || ||ಪ||

ನಾರಾಯಣ ನರಹರಿಯೆ ಹಯವದನ
ಸ್ವಾಮಿ ನೀನೆನಗೆ ದಯವಾಗೋ || ||ಅ||

ನಿಗಮವ ಕದ್ದೊಯ್ದ ವಿಗಡ ದೈತ್ಯನ ಕೊಂದು
ಆಗಮವ ತಂದು ಅಜಗಿತ್ತೆ
ಆಗಮವ ತಂದು ಅಜಗಿತ್ತ ಹಯವದನ
ಆದಿಮೂರುತಿಯೆ ದಯವಾಗೋ || ||೧||

ಕೂರ್ಮಾವತಾರದಿ ಆ ಗಿರಿ ಎತ್ತಿದಿ
ಪ್ರೇಮದಿ ಸುರರಿಗೆ ಅಮೃತವ
ಪ್ರೇಮದಿ ಅಮೃತವಿಕ್ಕಿದ ಹಯವದನ
ಸ್ವಾಮಿ ನೀ ಎಮಗೆ ದಯವಾಗೋ || ||೨||

ಕ್ರೋಢರೂಪಿಲಿ ಬಂದು ನಾಶ ದೈತ್ಯನ ಕೊಂದು
ರೂಢಿಯ ನೆಗಹಿ ತಂದಿತ್ತೆ
ರೂಢಿಯ ನೆಗಹಿ ತಂದಿತ್ತ ಹಯವದನ
ಕ್ರೋಢ ನೀ ಎನಗೆ ದಯವಾಗೋ ॥ ॥೩॥

ಶಿಶುವ ಬಾಧಿಸುತಿಪ್ಪ ಕಶಿಪುವ ಸೀಳಿದೆ
ಕುಶಲದಿ ಕರುಳಮಾಲೆಯ
ಕುಶಲದಿಂ ಮಾಲೆಯ ಹಾಕಿದ ಹಯವದನ
ಬಿಸಜಾಕ್ಷ ಎನಗೆ ದಯವಾಗೋ ॥ ॥೪॥

ವಾಮನರೂಪಿಲಿ ಭೂಮಿ ಈರಡಿ ಮಾಡಿ
ವ್ಯೋಮಕ್ಕೆ ಚರಣವ ನೀಡಿದೆ
ವ್ಯೋಮಕ್ಕೆ ಚರಣವ ನೀಡಿದ ಹಯವದನ
ವಾಮನ ಎನಗೆ ದಯವಾಗೋ ॥ ॥೫॥

ಕೊಡಲಿಯ ಪಿಡಿದು ಕಡಿದೆ ದುಷ್ಟನೃಪರ
ಹಡೆದ ತಂದೆಯ ಮಾತು ಸಲಿಸಿದೆ
ಹಡೆದ ತಂದೆಯ ಮಾತು ಸಲಿಸಿದ ಹಯವದನ
ಒಡೆಯ ನೀ ಎನಗೆ ದಯವಾಗೋ ॥ ॥೬॥

ಸೀತೆಗೋಸ್ಕರ ಪೋಗಿ ಸೇತುವೆ ಕಟ್ಟಿದೆ
ಭೂತ ರಾವಣನ ಮಡುಹಿದೆ
ಭೂತ ರಾವಣನ ಮಡುಹಿದ ಹಯವದನ
ಖ್ಯಾತ ನೀನೆಮಗೆ ದಯವಾಗೋ ॥ ॥೭॥

ಗೊಲ್ಲರೊಡನೆ ಆಡಿ ಖುಲ್ಲ ಕಂಸನ ಕೊಂದೆ
ಮಲ್ಲರೊಡನೆ ಕಾದಿ ಮಡುಹಿದೆ
ಮಲ್ಲರೊಡನೆ ಕಾದಿ ಮಡುಹಿದ ಹಯವದನ
ವಲ್ಲಭ ನೀ ಎನಗೆ ದಯವಾಗೋ ॥ ॥೮॥

ತ್ರಿಪುರರ ಸತಿಯುಗುಪದೇಶವನಿಕ್ಕಿ
ತ್ರಿಪುರರನೆಲ್ಲ ಮಡುಹಿದೆ
ತ್ರಿಪುರರನೆಲ್ಲ ಮಡುಹಿದ ಹಯವದನ
ನಿಪುಣ ನೀ ಎಮಗೆ ದಯವಾಗೋ || ||೯||

ವಾಜಿಯನೇರಿ ರಾವುತವಾಗಿ ನೀ ಬಂದೆ
ಮೂಜ್ಜಗಕೆ ಕಲ್ಕಿ ಎನಿಸಿದೆ
ಮೂಜ್ಜಗಕೆ ಕಲ್ಕಿ ಎನಿಸಿದ ಹಯವದನ
ಭೋಜ ನೀ ಎನಗೆ ದಯವಾಗೋ || ||೧೦||

ವಾದಿರಾಜಗೊಲಿದು ಸ್ವಾದೆಪುರದಿ ನಿಂದು
ವೇದದ ಕಥೆಗಳ ನರುಹಿದೆ
ವೇದದ ಕಥೆಗಳ ನರುಹಿದೆ ಹಯವದನ
ವೇಲಾಪುರಿ ಚೆನ್ನ ದಯವಾಗೋ || ||೧೧||



**ಅರ್ಥವಿವರಣೆ .—**

**ನಿಗಮವ** = ವೇದರಾಶಿಗಳನ್ನು, **ವಿಗಡ** = ಕ್ರೂರನಾದ (ಪರಾಕ್ರಮಶಾಲಿ) **ದೈತ್ಯನ** = ವೇದಚೋರನಾದ ಸೋಮಕನೆಂಬ ದೈತ್ಯನನ್ನು ಮತ್ಸ್ಯರೂಪೀ ಶ್ರೀಹರಿಯು ಕೊಂದು, ವೇದಗಳನ್ನು ಬ್ರಹ್ಮನಿಗಿತ್ತನು. **ಆದಿಮೂರುತಿಯೆ** = ಆದಿದೈವ. **ಆ ಗಿರಿ** = ಮಂದರ ಪರ್ವತ. **ಅಮೃತವನಿಕ್ಕಿದೆ** = ಧನ್ವಂತ್ರೀರೂಪದಿಂದ ಅಮೃತಕಲಶವನ್ನು ಧರಿಸಿ, ಕೊನೆಯಲ್ಲಿ ಮೋಹಿನೀವೇಷ ತಾಳಿ ಅಮೃತವನ್ನು ದೇವತೆಗಳಿಗೆ ಹಂಚಿದನು, ಅಮೃತಪ್ರಾಪ್ತಿಗೆ ಕೂರ್ಮಾವತಾರವೇ ಮುಖ್ಯಕಾರಣವು. **ಕ್ರೋಢ** = ಹಂದಿ–ಶ್ರೀಹರಿಯ ಭೂವರಾಹರೂಪ, **ಮೂಢ ದೈತ್ಯನ**=

ಅಜ್ಞಾನದಿಂದ ದುರಂಹಕಾರಿಯಾಗಿದ್ದ ಹಿರಣ್ಯಾಕ್ಷನೆಂಬ ಅಸುರ, **ರೂಢಿಯು** = ಭೂಮಿಯನ್ನು **ನೆಗೆಹಿ** = ತನ್ನ ಕೋರೆದಾಡೆಗಳಿಂದ ಎತ್ತಿಕೊಂಡು. **ಘಾಢ** = ಸರ್ವೋತ್ತಮ ದೇವತಾ **ಶಿಶುವ** = ಬಾಲಕನಾದ ಪ್ರಹ್ಲಾದ. **ಕಶಿಪುವ** = ಹಿರಣ್ಯಕಶಿಪುವನ್ನು, **ಖಂಡಿಸಿ** = ಅವನ ಉದರವನ್ನು ನಖದಿಂದ ಬಗೆದು. **ಬಿಸಜಾಕ್ಷ** = ಕಮಲನೇತ್ರನಾದ ಶ್ರೀ ನರಸಿಂಹ,

**ಈರಡಿ**=ಎರಡು ಪಾದ (ಈರು+ಅಡಿ) **ವ್ಯೋಮಕ್ಕೆ**=ಆಕಾಶಕ್ಕೆ ಒಂದು ಪಾದದಿಂದ ಸಪ್ತ ಊರ್ಧ್ವ ಲೋಕಗಳನ್ನು ಮತ್ತೊಂದು ಪಾದದಿಂದ ಸಪ್ತ ಅಧೋಲೋಕಗಳನ್ನು ಅಳೆದ ತ್ರಿವಿಕ್ರಮರೂಪಿ ವಾಮನನು. **ಕೊಡಲಿಯು**=ಗಂಡುಗೊಡಲಿಯನ್ನು ಧರಿಸಿ ಭೂಪ್ರದಕ್ಷಿಣೆ ಮಾಡಿದ ಶ್ರೀ ಪರಶುರಾಮರೂಪ, **ಹಡೆದ ತಂದೆಯು**=ತನ್ನ ತಂದೆಯಾದ ಜಮದಗ್ನಿ ಋಷಿಗಳ ಮಾತನ್ನು ಸಲ್ಲಿಸಲು, ತಾಯಿಯಾದ ರೇಣುಕೆಯನ್ನು ಕಡಿದು, ಪುನಃ ಬದುಕಿಸಿದ ಧೀರ ಭಾರ್ಗವರಾಮ. **ಭೂತರಾವಣನ**=ಭಯಂಕರವಾದ ರಾವಣಾಸುರನನ್ನು **ಖುಲ್ಲ**=ದುರುಳನಾದ ಕಂಸಾಸುರ. **ಮಲ್ಲರೊಡನೆ** = ಕುಸ್ತಿಗೆ ಬಂದ ಚಾಣೂರ ಮತ್ತು ಮುಷ್ಟಿಕರೆಂಬ ಮಲ್ಲ ವೀರರನ್ನು, **ತ್ರಿಪುರರ ಸತಿಯರಿಗೆ** = ತ್ರಿಪುರಾಸುರರ ಪತ್ನಿಯರಿಗೆ ಮೋಹಕರೂಪತೋರಿ ಅವರಲ್ಲಿ ಚಾಂಚಲ್ಯವನ್ನುಂಟುಮಾಡಿದ ಬುದ್ಧರೂಪ, **ನಿಪುಣ** = ಜಾಣ **ವಾಜಿ** = ಕುದುರೆ ಶ್ರೀಲಕ್ಷ್ಮೀದೇವಿಯನ್ನೇ ಕುದುರೆಯನ್ನಾಗಿ ಮಾಡಿಕೊಂಡ ಧೀರ ಕಲ್ಕಿ. **ಮುಜ್ಜಗಕೆ** = ಸ್ವರ್ಗ ಮರ್ತ್ಯ-ಪಾತಾಳಗಳೆಂಬ ಲೋಕತ್ರಯಗಳಿಂದ ಯುಕ್ತವಾದ ಜಗತ್ತು. **ಭೋಜ** = ದೈತ್ಯರ ಸಂಹಾರಕ (ಅವರನ್ನು ಕಬಳಿಸುವವನು) **ಸ್ವಾದೆ ಪುರದಲ್ಲಿ** = ಸೋದಾಕ್ಷೇತ್ರದಲ್ಲಿ (ಶ್ರೀ ವಾದಿರಾಜರ ವೃಂದಾವನವಿರುವ ದಿವ್ಯ ಕ್ಷೇತ್ರ). **ವೇದದ ಕಥೆಗಳ ನರುಹಿದೆ** = ಶ್ರೀಹಯಗ್ರೀವರೂಪದಿಂದ ಶ್ರೀ ವಾದಿರಾಜರಿಗೆ ಪರಮಾನುಗ್ರಹಮಾಡಿದ ಪ್ರಸಂಗ.



# ೫೦೮

## (ಪುರಂದರವಿಠ್ಠಲಾಂಕಿತ)

**ರಾಗ–ಶಂಕರಾಭರಣ** **ಅಟ್ಟತಾಳ**

ಕೇಳಿದೇ ನಿನ್ನಯ ಸುದ್ದಿ ಕೇಳಿದೆ || ||ಪ||

ನಿರೊಳು ಮುಳುಗಿದೆಯಂತೆ-ದೊಡ್ಡ || ||ಅ||
ಭಾರಗಿರಿಯಾ ಪೊತ್ತೆಯಂತ ಗಡ್ಡೆ
ಬೇರು ಗೆಣಸು ಮೆದ್ದಯಂತೆ ||
ಮೂರೆಡರಿಯರಿದ ಪೋರನ ಮಾತಿಗೆ
ಘೋರ ದಾನವನ ಸಂಹಾರ ಮಾಡಿದೆಯಂತೆ || ||೧||

ನಾರಿಯೊಬ್ಬಳ ಪೆತ್ತೆಯಂತೆ-ಹೆತ್ತ
ನಾರಿಯಳನು ಕೊಯ್ದಯಂತೆ-ನಿನ್ನ
ನಾರಿಚೋರನ ಕೊಂದೆಯಂತೆ ||ಆಹಾ||
ಊರನಾರಿಯರಿಂದ ಬೈಸಿಕೊಳುತ ಪರ
ನಾರಿಯರಭಿಮಾನ ಗಾರುಮಾಡಿದೆಯೆಂದು || ||೨||

ತುರಗ ರಾವುತನಾದೆಯಂತೆ-ನಿನ್ನ
ಕರದಿ ಕಡೆಗೋಲು ನೇಣನಂತೆ-ನಿನಗೆ
ಸರಿ ಧರೆಯೊಳಗಿಲ್ಲವಂತೆ || ಆಹಾ||
ವರದ ಪುರಂದರವಿಠ್ಠಲ ನಿನ್ನಯ
ಪರಿಪರಿ ಮಹಿಮೆಯ ಹರುಷದಿಂದಲಿ ನಾ || ||೩||



**ಅರ್ಥ ವಿವರಣೆ:-**

**ಕೇಳಿದೆ** = ಪುರಾಣ ಇತಿಹಾಸ ಗ್ರಂಥಗಳಲ್ಲಿ ದಶವತಾರ ಪರವಾದ ನಿನ್ನ ಮಹಿಮೋಪೇತನಾದ ಕಥೆಗಳನ್ನು ಶ್ರವಣ ಮಾಡಿದ್ದೇನೆ. **ನೀರೊಳು** = ಸಮುದ್ರದಲ್ಲಿ ವಿಹರಿಸಿದ ಮತ್ಸ್ಯ. **ಭಾರಗಿರಿಯ** = ಭಾರವಾದ ಮಂದರ ಗಿರಿಯನ್ನು ಬೆನ್ನಿನ ಮೇಲೆ ಹೊತ್ತ ಕೂರ್ಮ, **ಗೆಣಸುನೊದ್ದೆಯಂತೆ** = ಭೂಮಿಯನ್ನು ತೋಡಿ ಬೇರು ಗೆಡ್ಡೆಗಳನ್ನು ತಿಂದ ವರಾಹರೂಪವು, **ಮೂರೆರಡರಿಯದ** = ಕಾಮಾದಿ ಅರಿಷಡ್ವರ್ಗಗಳಿಂದ ದೂರನಾಗಿದ್ದ ಭಾಗವತೋತ್ತಮ ಪ್ರಹ್ಲಾದ (ಮೂರೆರಡು = ೩ × ೨ = ೬). **ಪೋರನ** = ಬಾಲಕನಾದ ಪ್ರಹ್ಲಾದನನ್ನು ಅನುಗ್ರಹಿಸಿದ ನರಸಿಂಹಮೂರ್ತಿ (ಮೂತಿಗೆ-ಸತ್ಯವಿಧಾತುಂ ನಿಜಭೃತ್ಯ ಭಾಷಿತಮ್) **ನಾರಿಯೊಬ್ಬಳ** = ತ್ರಿವಿಕ್ರಮನ ಪಾದೋದ್ಭವೆಯಾದ ಗಂಗಾದೇವಿ. ವಾಮನರೂಪ. **ಹೆತ್ತನಾರಿಯಳ** = ತನ್ನನ್ನು ಹಡೆದ ರೇಣುಕಾ ದೇವಿಯನ್ನು ಗಂಡುಗೊಡಲಿಯಿಂದ ಕತ್ತರಿಸಿದ ಪರಶುರಾಮ. **ನಿನ್ನ ನಾರಿ ಚೋರನ** = ನಿನ್ನ ಪತ್ನಿಯಾದ ಸೀತೆಯನ್ನು ಕದ್ದ ರಾವಣಾಸುರನನ್ನು ಕೊಂದ ಶ್ರೀರಾಮ. **ಊರನಾರಿಯರಿಂದ** = ಬೆತ್ತಲೆ ನಿಂತು, ಮೋಹಿಸಿದ ಬುದ್ಧರೂಪ. **ಗಾರು ಮಾಡಿದೆ ಎಂದು** = ಗಾಸಿ, ಹಿಂಸೆ, ಅಂದರೆ ತ್ರಿಪುರರ ಪತ್ನಿಯರನ್ನು ಮೋಹಿಸಿ ಅವರ ಮನಸ್ಸಿನಲ್ಲಿ ವಿಕಾರವನ್ನುಂಟುಮಾಡಿದ ಬುದ್ಧ. **ತುರಗ** = ಲಕ್ಷ್ಮೀಯನ್ನೇ ಕುದುರೆಯನ್ನಾಗಿ ವಾಹನವಾಗಿ ಮಾಡಿಕೊಂಡ ಅಶ್ವಾರೋಹೀ ಕಲ್ಕಿರೂಪ **ಕಡಗೋಲು ನೇಣು** = ಉಡುಪಿಯ ಶ್ರೀಕೃಷ್ಣನರೂಪ ಕೈಯಲ್ಲಿ ಕಡಗೋಲು ಹಗ್ಗವನ್ನು ಹಿಡಿದಿರುವ ಸುಂದರರೂಪ. **ಸರಿಧರೆಯೊಳಗಿಲ್ಲ ವಂತೆ** = ನಿನಗೆ ಸಮರೂ ಅಧಿಕರೂ ಯಾರೂ ಇಲ್ಲದ ಸಮಾಭ್ಯಧಿಕ ಶ್ಯೂನನು. **ಪರಿಪರಿಮಹಿಮೆಯ** = ನಾನಾವಿಧವಾದ ಅಪಾರಮಹಾಮಹಿಮೆಗಳನ್ನು.



## ೫೦೯

## (ಶ್ರೀಕನಕದಾಸರಿಂದವಿರಚಿತ)

### ಜಾನಪದದ ಮಟ್ಟು

ದೇವಿ ನಮ್ಮ ದ್ಯಾವರು ಬಂದರು
ಬನ್ನಿರೆ ನೋಡ ಬನ್ನಿರೆ ॥ ॥ಪ॥

ಬನ್ನೀರೆ ನೋಡ ಬನ್ನಿರೆ
ನೋಡ ಬನ್ನಿರೆ ನೋಡ ಬನ್ನಿರೆ ॥ ॥ಅ॥

ಕೆಂಗಣ್ಣ ಮೀನನಾಗಿ ನಮ ರಂಗ
ಗುಂದಾಡಿ ಸೋಮನ ಕೊಂದಾನಕ್ಕಿ
ಗುಂಗಾಡಿಸೋಮನ ಕೊಂದು-ವೇದವ
ಬಂದಾರದೊಡಲದಿತ್ತಾನಕ್ಕಿ ॥ ॥೧॥

ದೊಡ್ಡ ಮಡುವಿನೊಳಗೆ ನಮ ರಂಗ
ಗುಡ್ಡವ ಹೊತುಕೊಂಡು ನಿಂತಾನಕ್ಕಿ
ಗುಡ್ಡವ ಹೊತುಕೊಂಡು ನಿಂತು ಸುರರನ್ನು
ದೊಡ್ಡವರನ್ನು ಮಾಡನಕ್ಕಿ ॥ ॥೨॥

ಚಿನ್ನ ಕಾಡಿನ ಹಂದಿಯಾಗಿ ನಮ ರಂಗ
ಚಿನ್ನದ ಕಣ್ಣನ ಕೊಂದಾನಕ್ಕಿ
ಚಿನ್ನದ ಕಣ್ಣನ ಕೊಂದು ಭೂಮಿಯ
ವನಜಸಂಭವದಿತಾನಕ್ಕಿ ॥ ॥೩॥

ಸಿಟ್ಟಲಿ ಸಿಂಹನಾದಿ ನಮ ರಂಗ
ಹೊಟ್ಟೆಯ ಕರುಳು ಬಗೆದಾನಕ್ಕಿ

ಹೊಟ್ಟೆಯ ಕರುಳ ಹಾರವಮಾಡಿ
ಪುಟ್ಟಗೆ ವರವ ಕೊಟ್ಟಾನ್ಮ್ರಿ ॥ ॥೪॥

ಹುಡುಗ ಹಾರುವನಾಗಿ ನಮ ರಂಗ
ಬೆಡಗಿಲಿ ಮುಗಿಲಿಗೆ ಬೆಳೆದಾನ್ಮ್ರಿ
ಬೆಡಗಿಲಿ ಮುಗಿಲಿಗೆ ಬೆಳೆದು ಬಲಿಯನ್ನು
ಅಡಿಯಿಂದ ಪಾತಾಳಕ್ಕೊತ್ತಾನ್ಮ್ರಿ ॥ ॥೫॥

ತಾಯ ಮಾತನ್ನು ಕೇಳಿ ಸಾಸಿರ ತೋಳನ
ಆವಿನ ಕಳ್ಳನ ಕೊಂದಾನ್ಮ್ರಿ
ಆವಿನ ಕಳ್ಳನ ಕೊಂದು ಭೂಮಿಯ
ಅವನೀಸುರರಿಗಿತ್ತಾನ್ಮ್ರಿ ॥ ॥೬॥

ಪಿಂಗಳ ಕಣ್ಣಿನ ಕೋಂಗಗಳಾ ಕೂಡಿ
ಭಂಗನೆ ಲಂಕೆಗೆ ಪೋದಾನ್ಮ್ರಿ
ಭಂಗನೆ ಲಂಕೆಗೆ ಪೋಗಿ ನಮ ರಂಗ
ಹೆಂಗಸು ಕಳ್ಳನ ಕೊಂದಾನ್ಮ್ರಿ ॥ ॥೭॥

ಕರಿಯಹೊಳೆಯಲ್ಲಿ ತುರುಗಳ ಕಾಯುತ್ತ
ಉರಗನ ಮಡುವ ಧುಮುಕಾನ್ಮ್ರಿ
ಉರಗನ ಹೆಡೆ ಮೇಲೆ ಹಾರಾರಿ ಕುಣಿವಾಗ
ನಾರೇರಿಗೊರವಾ ಕೊಟ್ಟಾನ್ಮ್ರಿ ॥ ॥೮॥

[ಬಿಂಕದ ಗೋವಳನಾಗಿ ನಮ ರಂಗ
ಡೊಂಕಿನ ಮುದುಕಿಯ ತಿದ್ದಾನ್ಮ್ರಿ
ಡೊಂಕಿನ ಮುದುಕಿಯ ತಿದ್ದಿ ಮಾವನ
ಬಿಂಕವನೆಲ್ಲ ಮುರಿದಾನ್ಮ್ರಿ ॥] ॥೮॥

ಭಂಡನಂದದಿ ಪುಂಡರೀಕಾಕ್ಷನು
ಕಂಡಕಂಡಲ್ಲಿಗೆ ತಿರುಗಾನ್ರೈ
ಕಂಡಕಂಡಲ್ಲಿಗೆ ತಿರುಗಿ ತ್ರಿಪುರರ
ಹೆಂಡಿರನೆಲ್ಲ ಕೆಡಿಸಾನ್ರೈ ॥ ॥೯॥

ಚೆಲುವ ಹೆಂಡತಿ ಕುದುರೆಯಮಾಡಿ
ಒಳ್ಳೆಯ ರಾವುತನಾದಾನ್ರೈ
ಒಳ್ಳೆಯ ರಾವುತನಾಗಿ ನಮ್ಮ ರಂಗ
ಡೊಳ್ಳ ಹೊಟ್ಟೆಯ ಮೇಲೊದ್ದಾನ್ರೈ ॥ ॥೧೦॥

ಡೋಲಿನ ಮೇಲ್ಕಯ್ಯ ಭರಮಪ್ಪ ಹಾಕ್ಯಾನು
ತಾಳವ ಶಿವನಪ್ಪ ತಟ್ಯಾನ್ರೈ
ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು
ಚೆಲುವ ಕನಕಪ್ಪ ಕುಣಿದಾನ್ರೈ ॥ ॥೧೧॥



**ಅರ್ಥವಿವರಣೆ :-**

ಇದೊಂದು ಜಾನಪದ ಕೀರ್ತನೆ. ಶ್ರೀ ಕನಕದಾಸವರ್ಯರು ಸಂಚಾರ ತ್ವೇನ ಒಂದು ಗ್ರಾಮಕ್ಕೆ ಹೋಗಿದ್ದರು. ಅಲ್ಲಿ ಮೂಢನಂಬಿಕೆಯುಳ್ಳ ಗ್ರಾಮಸ್ಥರು ಗ್ರಾಮದೇವತೆಯನ್ನು ತಮ್ಮ ತಲೆಯನ್ನು ಹೊತ್ತುಕೊಂಡು ಕ್ಷುದ್ರದೇವತೋಪಾಸನೆ ಮಾಡುತ್ತಿದ್ದರು. ಅದನ್ನು ಕಂಡು ದಾಸವರೇಣ್ಯರು ಅವರ ಭಾಷೆಯಲ್ಲಿಯೇ ಅವರ ಮನಸ್ಸಿಗೆ ನಾಟುವಂತೆ ಕ್ಷುದ್ರದೇವತೆಗಳ ಉಪಾಸನೆ ನರಕಾದ್ಯನರ್ಥಗಳಿಗೆ ಕಾರಣವಾಗುವುವೆಂದು ತಿಳಿಸಿ. ಮೇಲ್ಕಂಡ ದಶಾವತಾರ ಸ್ತೋತ್ರ ರೂಪವಾದ ಕೀರ್ತನೆಯನ್ನು ರಚಿಸಿ. ಗ್ರಾಮಸ್ಥರೊಡನೆ ಬೆರೆತು ತಾವೂ ನೃತ್ಯ ಮಾಡುತ್ತಾ ಅವರ ಮನಸ್ಸನ್ನು ರಂಜಿಸಿ ಮನೋಪರಿವರ್ತನೆ ಮಾಡಿ. ಶ್ರೀಹರಿ ದಾಸ ದೀಕ್ಷಾ ಧರ್ಮವನ್ನು ಅರುಹಿದರು.

**ದೇವಿ** = ಲಕ್ಷ್ಮೀ ದೇವಿಯರಿಗೆ ಸಂಬೋಧನೆ. **ದ್ಯಾವರು** = ಸರ್ವೋತ್ತಮನಾದ ಶ್ರೀಹರಿ (ಗ್ರಾಮ್ಯಭಾಷೆ). **ಕೆಂಗಣ್ಣು** = ಕೆಲವು ವರ್ಣದ ಕಣ್ಣು ಮತ್ಸ್ಯಾವತಾರೀ ಶ್ರೀಹರಿಯ ಕಣ್ಣುಗಳ ಬಣ್ಣದ ವರ್ಣನೆ. **ಗುಂಗಾಡಿ** = ಗುಂಗಾಡಿ ಎಂಬ ಸೊಳ್ಳೆಯಂತಿರುವ ಅತ್ಯಂತ ಚಿಕ್ಕ ಹುಳವು ನಮ್ಮ ಕಣ್ಣಿನ ಸುತ್ತಲೂ ಹಾರಾಡುತ್ತಾ, ನಮಗೆ ಹಿಂಸೆ ಕೊಡುವುದು. ಅದರಂತೆ ಪರಮ ಹಿಂಸಪ್ರದನಾದ. **ಸೋಮನ** = ವೇದಗಳನ್ನು ಅಪಹರಿಸಿದ ಸೋಮಕನೆಂಬ ದೈತ್ಯ. **ಕೊಂದಾನ್ಮ್ರಿ** = ಸಂಹರಿಸಿದನು. (ಇಲ್ಲಿ " ನ್ಮ್ರಿ "- ಎಂಬುದು ಜಾನಪದಶೈಲಿಯಲ್ಲಿ ಗ್ರಾಮ್ಯ ಭಾಷಾ ಪ್ರಯೋಗ). **ಬಂಗಾರದೊಡಲಗೆ** = ಹಿರಣ್ಯಗರ್ಭ ನಾಮಕರಾದ ಶ್ರೀ ಬ್ರಹ್ಮದೇವರಿಗೆ (ಬಂಗಾರ + ಒಡಲು = ಹಿರಣ್ಯಗರ್ಭ) **ಮಡುವಿನೊಳಗೆ** = ಆಳವಾದ ಕ್ಷೀರ ಸಮುದ್ರದಲ್ಲಿ. **ಗುಡ್ಡದ** = ಮಂದರಗಿರಿಯನ್ನು **ದೊಡ್ಡವರನ್ನು** = ಅಮೃತವನ್ನು ದೇವತೆಗಳಿಗೆ ಹಂಚಿ ಅವರನ್ನು ಅಮರರನ್ನಾಗಿ ಮಾಡಿದನು. **ಚಿನ್ನದ ಕಣ್ಣನ** = ಹಿರಣ್ಯಾಕ್ಷನನ್ನು (ಇಲ್ಲಿ ಗ್ರಾಮ್ಯ ಭಾಷೆಯಲ್ಲಿ ಪದಪ್ರಯೋಗದ ಚಮತ್ಕಾರವನ್ನು ಗಮನಿಸಿ) **ವನಜಸಂಭವಗೆ** = ಶ್ರೀ ಹರಿಯನಾಭೀಕಮಲೋದ್ಭವರಾದ ಶ್ರೀ ಬ್ರಹ್ಮದೇವರಿಗೆ. **ಪುಟ್ಟಗೆ** = ಬಾಲಕನಾದ ಪ್ರಹ್ಲಾದ. **ಹುಡುಗ ಹಾರುವ**= ಬ್ರಾಹ್ಮಣ ಬ್ರಹ್ಮಚಾರಿ. **ಬೆಡಗಿಲಿ** = ಅತ್ಯಾಶ್ಚರ್ಯಕರವಾಗಿ, **ಮುಗಿಲಿಗೆ** = ಆಕಾಶಕ್ಕೆ ಬೆಳೆದ ತ್ರಿವಿಕ್ರಮ ರೂಪ. **ಅಡಿಯಿಂದ** = ತನ್ನ ಪಾದದಿಂದ. **ತಾಯ ಮಾತನ್ನು** = ರೇಣುಕೆಯ ಮನಸ್ಸಿನಲ್ಲಿ ವಿಕಾರವನ್ನುಂಟು ಮಾಡಿದ. **ಸಾಸಿರ ತೋಳಿನ** = ಸಹಸ್ರ ಬಾಹುಗಳುಳ್ಳ ಕಾರ್ತವೀರ್ಯಾರ್ಜುನನನ್ನೂ. **ಆವಿನ ಕಳ್ಳನ**= ಒಮ್ಮೆ ಕಾರ್ತವೀರ್ಯಾರ್ಜುನನು ಜಮದಗ್ನಿಋಷಿಗಳ ಆಶ್ರಮಕ್ಕೆ ಬಂದು ಅವರಿಂದ ಔತಣವನ್ನು ಸ್ವೀಕರಿಸಿದನು. ಸಕಲ ಅತಿಥಿಗಳಿಗೆ ತೃಪ್ತಿ ಕೊಡುತ್ತಿದ್ದ ಹಸುವಿನ ಮಹಿಮೆ ಅವನಿಗೆ ತಿಳಿದು ಬಲಾತ್ಕಾರದಿಂದ ಕಪಿಲೆಯನ್ನು ಅಪಹರಿಸಿದನು ಈ ವಿಷಯವನ್ನು ತಿಳಿದ ಪರಶುರಾಮನು ಮಾಹಿಷ್ಮತಿನಗರಕ್ಕೆ ಹೋಗಿ ಕಾರ್ತವೀರ್ಯನ ಸಹಸ್ರ ತೋಳುಗಳನ್ನು ಕತ್ತರಿಸಿದನು. ದುಷ್ಟ ಕ್ಷತ್ರಿಯ

ಸಂಹಾರಕ್ಕಾಗಿ ದೇಶಸಂಚಾರಕ್ಕೆಗೊಂಡ ಭಾರ್ಗವರಾಮ. ಅವನಿಸುರರಿಗೆ = ದುರುಳ ಕ್ಷತ್ರಿಯರಿಂದ ಪಡೆದ ಭೂಮಿಯನ್ನೆಲ್ಲಾ ಉತ್ತಮರಾದ ಬ್ರಾಹಣ ರಿಗೆ ದಾನಮಾಡಿದನು. (ಅವನಿಸುರರು – ಭೂಸುರರು - ವಿಪ್ರೋತ್ತಮರು) **ಪಿಂಗಳ ಕಣ್ಣಿನ** = ಕಂದುವರ್ಣದ ಕಣ್ಣುಗಳುಳ್ಳ ಕಪಿಗಳ ಹಿಂಡು; **ಕೊಂಗಗಳಾ** = ಮಂಗಗಳ ಗುಂಪು. **ಛಂಗನೆ** = ಶೀಘ್ರವಾಗಿ, **ಹೆಂಗಸು ಕಳ್ಳನ** = ಸೀತಾಪಹರಣ ಮಾಡಿದ ನಾರೀಚೋರನಾದ ರಾವಣೇಶ್ವರ. **ಕರಿಯ ಹೊಳೆಯಲ್ಲಿ** = ಕಪ್ಪುವರ್ಣದ ಯಮುನಾನದಿಯ ಮಡುವಿನಲ್ಲಿ, **ಉರಗನ ಮಡುವ**= ಕಾಳಿಂಗನೆಂಬ ಭಯಂಕರ ಸರ್ಪವು ವಾಸಿಸುತ್ತಿದ್ದ ಆಳವಾದ ಮಡುವು, **ನಾರೇರಿಗೊರವ** = ಕಾಳಿಂಗನ ಪತ್ನಿಯರಾದ ನಾಗಕನ್ನಿಕೆಯರಿಗೆ ವರಪ್ರದಾನ ಮಾಡಿದ ಶ್ರೀ ಕೃಷ್ಣ **ಭಂಡನಂದದಿ** = ಯಾರಿಗೂ ಸೋಲದ ದಿಗಂಬರ ಸನ್ಯಾಸಿಯಾದ ಬುದ್ಧ ರೂಪೀ ಯತಿ. **ಚೆಲುವ ಹೆಂಡತಿ** = ಪರಮ ಸುಂದರಳಾದ ಲಕ್ಷ್ಮೀದೇವಿ ಯನ್ನು. **ರಾಹುತನಾಗಿ** = ಕುದುರೆಯನ್ನಾಗಿ ಮಾಡಿಕೊಂಡು ಅಶ್ವಾರೋ ಹಿಯಾದ ಕಲ್ಕಿ. **ಡೋಲಿನ ನೋಲ್ಕಯ್ಯ** = ಮೃದಂಗ ಬಾರಿಸುವವನು. **ಭೆರಮಪ್ಪ** = ಅಂದರೆ ಬ್ರಹ್ಮದೇವರು. **ತಾಳವ** = ರುದ್ರ ತಾಳ ದಾರೀ **ಹನುಮಪ್ಪ** = ವಾಯುದೇವರು ಕೀರ್ತನೆ ಪಾಡುತ್ತಾರೆ, **ಕನಕಪ್ಪ** = ಶ್ರೀಪರಮಾತ್ಮ ನೃತ್ಯ ಮಾಡುತ್ತಾನೆ ಅದರಂತೆ ಈ ಕನಕನೂ ಕುಣಿಯುವನು.



## ೫೧೦

### (ಅಂಕಿತ-ಮಹೀಪತಿ)

ರಾಗ–ಭೈರವಿ ಆದಿತಾಳ

ಬಂದವನಾರಯ್ಯ ನೀನು ॥ ॥ಪ॥

ಒಂದಿನ ರಾತ್ರಿಲಿ ನಂದನಂದನು
ಹೊರಗಿಂದಲಿ ಬರಲು
ಚಂದದಿ ರುಕ್ಮಿಣಿ ಮನದೊಳರಿತುನುಡಿ
ಎಂದಳು ಸರಸದಲಿ ಈಗ– ನೀನು ॥ ||ಅ||

ಇರುಳು ಮಧ್ಯದಲಿ ಧೀರತನದಲಿ
ಸಾರಿ ಸಾರಿ ಕದನೊತ್ತುತಲಿ
ಧ್ವನಿಯದೋರದೆ ಗುರುತವ ಮರೆಯಿಸಿ
ದ್ವಾರದಿ ಸುಳಿವವನು- ನೀನು ॥ ||೧||

ಅಡಿಯಿಡದವೆ ಮೈ ಅಡಗಿಸಿಕೊಂಡು
ಧೃಢದಲಿ ಅಬಲೆಯು ಕಂಡು
ಎಡಬಲನೋಡದೆ ಬಾಯ್ದೆರೆದು ಬೇಡುವ
ಪೊಡವಿಹಾರುವನೇನೋ–ನೀನು ॥ ||೨||

ಕೊರಳಗೊಯ್ಕನೋ ವನಚಾರಕನೋ
ತುರುಗಳ ಕಾಯ್ದವನೋ
ಮರುಳು ಮಾಡಿ ನಾರಿಯರ ರಕ್ಕಿಸಿ
ದುರುಳವಾಜಿಯನೇರಿದವನೋ-ನೀನು ॥ ||೩||

ಎಂದ ಮಾನಿನಿ ನುಡಿ ಬೆಡಗವ ಕೇಳಿ
ನಿಂದ ಹರುಷ ತಾಳಿ
ಬಂದೆನಾ ಗುರುಮಹಿಪತಿ ಪ್ರಭು ಎನಲೋಡಿ
ಬಂದೆರಗಿದಳೀಗ–ನೀನು ॥ ||೪||



**ಅರ್ಥ ವಿವರಣೆ :—**

ಕಾಖಂಡಕಿಯ ಶ್ರೀಮಹೀಪತಿದಾಸರಿಂದ ವಿರಚಿತ ಈ ಕೀರ್ತನೆಯಲ್ಲಿ ದಶವತಾರ ವಿನೋದ ವೈಶಿಷ್ಟ್ಯವಿದೆ.

ಒಂದು ದಿನ ರಾತ್ರಿಯಲ್ಲಿ ಬಂದ ಕೃಷ್ಣನನ್ನು ರುಕ್ಮಿಣಿಯು ಬಾಗಿಲು ತೆಗೆಯದೇ ಸತಾಯಿಸುತ್ತಾಳೆ, ನಿಂದಾಸ್ತುತಿಯ ರೂಪದಲ್ಲಿ ಶ್ರೀಹರಿಯ ದಶಾವತಾರವನ್ನು ವರ್ಣಿಸುತ್ತಾ ಪ್ರೇಮದ ಸಲ್ಲಾಪದಲ್ಲಿ ತೊಡಗುತ್ತಾಳೆ. ರಸಿಕರಾದ ಹರಿದಾಸರ ಭಕ್ತಿಭಾವವು ಇಲ್ಲಿ ಪ್ರತಿಬಿಂಬವಾಗಿದೆ.

**ಅಡಿಯಿಡದವನೆ** = ಮೀನಿಗೆ ಕಾಲುಗಳಿಲ್ಲ, ತನ್ನ ಕಿವಿರುಗಳನ್ನು ಅಲ್ಲಾಡಿಸುತ್ತಾ ನೀರಿನಲ್ಲಿ ಲೀಲಾಜಾಲವಾಗಿ ಸಂಚರಿಸುವುದು, **ಮೈ ಅಡಗಿಸಿಕೊಂಡು** = ತನ್ನ ಕಾಲುಗಳನ್ನು ಬೆನ್ನಿನ ಚಿಪ್ಪಿನಲ್ಲಿ ತೂರಿಸಿಕೊಂಡು, ಶರೀರವನ್ನು ಮುದುರಿಕೊಂಡಿರುವ ಕೂರ್ಮ, **ಅಬಲೆಯ ಕಂಡು**= ನಿಸ್ಸಾಹಕಳಾದ ಭೂದೇವಿಯನ್ನು ರಕ್ಷಿಸಿದ ವರಾಹರೂಪ. **ಎಡಬಲ ನೋಡದೆ** = ಶ್ರೀನರಸಿಂಹಾವತಾರ ಸಮಯದಲ್ಲಿ ದಿಕ್ಕುಗಳೆಲ್ಲಾ ಕಂಗೆಟ್ಟವು. ಅವನ ಅರ್ಭಟದ ಧ್ವನಿ ಬ್ರಹ್ಮಾಂಡವನ್ನೆಲ್ಲಾ ತುಂಬಿತು. **ಬಾಯ್ದೆರೆದು** = ಈ ಪದವು ನರಸಿಂಹನಿಗೂ ಮತ್ತು ವಾಮನಿಗೂ ಅನ್ವಯಿಸುವುದು. ಆಗಲವಾಗಿ ಬಾಯಿಯನ್ನು ತೆರೆದು ಕುಡಿನಾಲಿಗೆಯನ್ನು ಚಾಚಿದ ನರಸಿಂಹನ ಭೀಷಣಾಕೃತಿ, ವಟುವಾಗಿ ಬಂದ ವಾಮನ ಬಲಿಯನ್ನು ಬಾಯ್ದೆರೆದು ಯಾಚಿಸಿದ ಪ್ರಸಂಗ. **ಪ್ರೌಢವಿಹಾರುವನೇನೋ** = ಭೂಮಿಯನ್ನು ಮೀರಿ ಆಕಾಶಕ್ಕೆ ಬೆಳೆದ ತ್ರಿವಿಕ್ರಮರೂಪ. **ಕೊರಳಗೊಯ್ಕನೋ** = ಮಾತೃ ಶಿರಚ್ಛೇಧನ ಮಾಡಿದ ಶ್ರೀಪರಶುರಾಮನೇನು ನೀನು ? ಎನ್ನುತ್ತಾಳೆ ರುಕ್ಮಿಣಿ. **ವನಚಾರಕನೋ** = ಅಡವಿಸಂಚಾರಿಯಾದ ಶ್ರೀರಾಮಚಂದ್ರನೋ ? **ತುರುಗಳ ಕಾಯ್ದವನೋ** = ದನಗಳನ್ನು ಕಾಯುವ ಶ್ರೀಕೃಷ್ಣನೋ? **ಮರುಳು ಮಾಡಿ** = ತ್ರಿಪುರಾಸುರರ ಪತ್ನಿಯರ ವ್ರತ ಭಂಗಗೊಳಿಸಿದ ಬೆತ್ತಲೆಯ ಬುದ್ಧನೋ? **ದುರುಳವಾಜಿಯನ್ನೇರಿ** = ತುಂಟ ಕುದುರೆಯನ್ನು ಹತ್ತಿದ ಕಲ್ಕಿರೂಪನೋ? **ಎಂದ ಮಾನಿನಿ. .. ...** = ಈ ರೀತಿಯಲ್ಲಿ ಸರಸಸಲ್ಲಾಪಗಳಲ್ಲಿ ತೊಡಗಿದ್ದ ರುಕ್ಮಿಣಿಯ ವಿನೋದ ವಚನಗಳನ್ನು ಕೇಳಿ ಶ್ರೀಕೃಷ್ಣನು ಹರುಷತಾಳಿ ಕದವನ್ನು ತೆಗೆದು ಮಂದಿರವನ್ನು ಹೊಕ್ಕನು. ಆಗ ರುಕ್ಮಿಣಿಯು ಅವನ ಚರಣಾರವಿಂದಗಳಿಗೆ ಬಂದು ನಮಸ್ಕರಿಸಿದಳು. **(ಬಂದು ಎರಗಿದಳೀಗ)**

೫೧೧

(ವಿಜಯವಿಠ್ಠಲಾಂಕಿತ)

ರಾಗ-ಪೂರ್ವಿಕಲ್ಯಾಣಿ ಅಟ್ಟತಾಳ

ಕೂಗೆಲೋ ಮನುಜಾ ಕೂಗೆಲೋ ॥ ॥ಪ॥

ಸಾಗರಶಯನನೆ ಜಗಕೆ ದೈವವೆಂದು ॥ ॥ಅ॥

ಅಚ್ಯುತಾನಂತ ಗೋವಿಂದ ಮಾಧವ
ಸಚ್ಚಿದಾನಂದೈಕ ಸರ್ವೋತ್ತಮಾ
ಸಚ್ಚರಿತ ರಂಗ ನಾರಾಯಣ ವೇದ
ಬಚ್ಚಿಟ್ಟವನ ಕೊಂದ ಮತ್ಸ್ಯ ಮೂರುತಿಯೆಂದು॥ ॥೧॥

ನರಹರಿ ಮುಕುಂದ ನಾರಾಯಣ ರಂಗ
ಪರಮ ಪುರುಷ ಹರಿ ಹಯವದನಾ
ಸಿರಿಧರ ವಾಮನ ದಾಮೋದರ ಗಿರಿ
ಧರಿಸಿದ ಸುರಪಾಲ ಕೂರ್ಮಮೂರುತಿ ಎಂದು ॥ ॥೨॥

ಪುರುಷೋತ್ತಮ ಪುಣ್ಯಶ್ಲೋಕ ಪುಂಡರೀಕ
ವರದ ಅಪಾರ ಗುಣನಿಲಯಾ
ಮುರಮರ್ದನ ಮಂಜು ಭಾಷಣ ಕೇಶವ
ನಿರ್ಮಲ ದೇವ ಶ್ರೀ ವರಹ ಮೂರುತಿ ಎಂದು ॥ ॥೩॥

ನಿಗಮವಂದಿತ ವಾರಿಜನಾಭ ಅನಿರುದ್ಧ
ಅಘನಾಶನಾ ಅಪ್ರಾಕೃತ ಶರೀರಾ
ಸಗುಣ ಸಾಕಾರ ಜಗದತ್ಯಂತಭಿನ್ನ
ತ್ರಿಗುಣರಹಿತ ನರಮೃಗ ರೂಪನೆಂದು ॥೪॥

ವಟಪತ್ರಶಾಯೀ ಜಗದಂತರ್ಯಾಮಿ
ಕಟಕ ಮುತ್ತಿನ ಹಾರ ಕೌಸ್ತುಭವಿಹಾರ
ತಟಿತ್ಕೋಟಿನಿಭಕಾಯ ಪೀತಾಂಬರ ದೇವ
ನಿಟಿಲಲೋಚನ ಪಾಲ ವಟುಮೂರುತಿ ವಾಮನನೆಂದು ॥ ॥೫॥

ವಿಷ್ಣು ಸಂಕರುಷಣ ಮಧುಸೂದನ ಸಿರಿ
ಕೃಷ್ಣ ಪ್ರದ್ಯುಮ್ನ ಪ್ರಥಮ ದೈವವೇ
ಜಿಷ್ಣು ಸಾರಥಿ ರಾಮ ಅಜಿತ ಅಧೋಕ್ಷಜ
ಸೃಷ್ಟಿಗೊಡೆಯ ಭಾರ್ಗವಮೂರುತಿ ಎಂದು ॥ ॥೬॥

ಇಭರಾಜ ಪರಿಪಾಲ ಇಂದಿರೆಯರಸ
ನಭ ಗಂಗಾಜನಕ ಜನಾರ್ದನ
ವಿಭುವೆ ವಿಶ್ವರೂಪ ವಿಶ್ವನಾಟಕ
ಋಷಭ ದತ್ತಾತ್ರೇಯ ಶ್ರೀ ರಾಮಮೂರುತಿ ಎಂದು ॥ ॥೭॥

ವೈಕುಂಠ ವಾಮನ ವಾಸುದೇವ ರಂಗ
ಲೋಕೇಶ ನವನೀತಚೋರ ಜಾರಾ
ಗೋಕುಲವಾಸ ಗೋವಳರಾಯ ಶ್ರೀಧರ
ಏಕಮೇವ ಶ್ರೀಕೃಷ್ಣಮೂರುತಿ ಎಂದು ॥ ॥೮॥

ಹೃಷೀಕೇಶ ಪರಮಾತ್ಮ ಮುಕ್ತಾಮುಕ್ತಾಶ್ರಯ
ಅಸುರ ಭಂಜನ ತ್ರಿವಿಕ್ರಮ ಕಪಿಲ
ಕುಸುಮಶರನಯ್ಯ ಶಾರ್ಙ್ಗಧರ ಚಕ್ರ
ವಿಷಹರ ಧನ್ವಂತ್ರಿ ಬುದ್ಧಮೂರುತಿ ಎಂದು ॥ ॥೯॥

ಸರ್ವ ಮುಕ್ತ ಸರ್ವಾಭೀಷ್ಟಕ ಸರ್ವೇಶಾ
ಸರ್ವಮಂಗಳ ಸರ್ವಸಾರ ಭೋಕ್ತಾ

ಸರ್ವವ್ಯಾಪಕ ಸರ್ವ ಗುಣ ಪರಿಪೂರ್ಣನೆ
ಸರ್ವಮೂಲಾಧಾರ ಕಲ್ಕಿ ಮೂರುತಿ ಎಂದು ॥೧೦॥

ಈ ಪರಿ ಕೂಗಲು ಆಪತ್ತು ಪರಿಹಾರ
ಅಪಾರ ಜನ್ಮ ಬೆಂಬಿಡದೆಲೆ ಸಪ್ತ –
ದ್ವೀಪಾಧಿಪ ಸಮ್ಮ ವಿಜಯ ವಿಠಲರೇಯ
ಅಪವರ್ಗದಲ್ಲಿಟ್ಟು ಆನಂದ ಪಡಿಸುವ ॥ ॥೧೧॥



**ಅರ್ಥ ವಿವರಣೆ:—**

**ಕೂಗೆಲೋ ಮನುಜಾ** = ಭಕ್ತಿಭಾವದಿಂದ ಶ್ರೀಹರಿಯ ದಶಾವತಾರ ಮಹಿಮಾ ವಿಶೇಷಗಳನ್ನೂ ಉಚ್ಚ ಕಂಠದಿಂದ ಗಾಯನ ಮಾಡೆಂದು ತಿಳಿಸುತ್ತಾರೆ ಪರಮಜ್ಞಾನಿಗಳಾದ, ಶ್ರೀ ವಿಜಯದಾಸವರ್ಯರು. **ಸಾಗರ ಶಯನನೆ** = ಕ್ಷೀರ ಸಮುದ್ರದಲ್ಲಿ ಪವಡಿಸಿದ ಹರಿಯೇ. **ಜಗಕೆ ದೈವ ವೆಂದು** = ಜಗತ್ಸೃಷ್ಟ್ಯಾದಿಗಳಿಗೆ ಮೂಲ ಕಾರಣನಾದ ಸರ್ವೋತ್ತಮನಾದ ದೇವರೆಂದು.

**ಅಚ್ಯುತ** = ಚತುರ್ವಿಧನಾಶರಹಿತನು. **ಅನಂತ** = ಅಪಾರ ಗುಣ ಗಣಧಾತನು. (ಅಗಣಿತಮಹಿಮಾಸಂಪನ್ನನು,) **ಗೋವಿಂದ** = ವೇದಪ್ರತಿಪಾದ್ಯನು, **ಮಾಧವ** = ಇಂದಿರಾಪತಿಯು, **ಸಚ್ಚಿದಾನಂದ** = ಜ್ಞಾನನಂದಪರಿಪೂರ್ಣನು. **ಏಕ** = ಏಕಮೇವ ಅದ್ವಿತೀಯನು. (ಸಮಾಭ್ಯಧಿಕ ರಹಿತನು) **ಸರ್ವೋತ್ತಮಾ** = ಸರ್ವ ಪ್ರಕಾರಗಳಲ್ಲೂ ಉತ್ತಮೋತ್ತಮನು. **ಸಚ್ಚರಿತ** = ಶುಭಚಾರಿತ್ರ್ಯವುಳ್ಳವನು. **ರಂಗ** = ಜಗತ್ತಿನ ಕ್ರೀಡಾ ಪ್ರವರ್ತಕನು, **ನಾರಾಯಣ** = ದೋಷವಿದೂರನೂ ಅನಂತ ಕಲ್ಯಾಣಗುಣಗಣ ಪರಿಪೂರ್ಣನೂ ಆದ ಶ್ರೀ ಪರಮಾತ್ಮ, **ವೇದ ಬಚ್ಚಿಟ್ಟವನ ಕೊಂದ** = ಬ್ರಹ್ಮದೇವರಿಂದ ವೇದಗಳನ್ನು ಅಪಹರಿಸಿದ ಸೋಮಕನೆಂಬ ದಾನವನ್ನು ಸಂಹರಿಸಿದ **ಮತ್ಸ್ಯಾವತಾರಿ ಶ್ರೀಹರಿ,**

**ನರಹರಿ** = ಸರ್ವಜೀವದ ಬಿಂಬನಾದ ನಾರಸಿಂಹರೂಪೀ ಶ್ರೀ ಹರಿಯು, **ಮುಕುಂದ** = ಮೋಕ್ಷಪ್ರದನು. **ಪರಮ ಪುರುಷ** = ಪರ ನಾಮಕಳಾದ ಶ್ರೀ ಲಕ್ಷ್ಮೀದೇವಿಗಿಂತಲೂ ಅನಂತಾನಂತ ಕೋಟಿ ಗುಣಗಳಿಂದ ಉತ್ತಮೋತ್ತಮನಾದ ಶ್ರೀ ಪರಮಾತ್ಮ, **ಹರಿ** = ಸಜ್ಜನರ ಸರ್ವ ಪಾಪ ಪರಿಹಾರಕನು, **ಹಯವದನಾ** = ಜ್ಞಾನಸ್ವರೂಪನಾದ ಹಯಗ್ರೀವ ಮೂರುತಿ (ಬ್ರಹ್ಮನಿಗೆ ಈರೂಪದಿಂದ ವೇದಗಳ ಉಪದೇಶ ಪ್ರಪ್ರಥಮವಾಗಿ) **ಸಿರಿಧರ** = ನಿತ್ಯಾವಿಯೋಗಿನಿಯಾದ ಶ್ರೀ ಲಕ್ಷ್ಮೀಯನ್ನು ಸದಾ ತನ್ನ ವಕ್ಷ ಸ್ಥಳದಲ್ಲಿ ಧರಿಸಿರುವ ಶ್ರೀ ವತ್ಸಲಾಂಛನನು. **ವಾಮನ** = ಪರಮ ಸುಂದರ ಮೂರ್ತಿ ಉಪೇಂದ್ರನಾಮಕನು. **ದಾಮೋದರ** = ಯಶೋದೆ ಯಿಂದ ಸೊಂಟದಲ್ಲಿ ಹಗ್ಗವನ್ನು ಕಟ್ಟಿಸಿಕೊಂಡ ಲೀಲಾಮಾನುಷ ವಿಗ್ರಹ ಶ್ರೀ ಕೃಷ್ಣ, **ಗಿರಿ ಧರಿಸಿದ** = ಮಂದರ ಗಿರಿಯನ್ನು ತನ್ನ ಬೆನ್ನಿನ ಮೇಲೆಹೊತ್ತು ಕೊಂಡ **ಕೂರ್ಮ ಮೂರುತಿ** ಶ್ರೀಹರಿ. **ಸುರಪಾಲಾ** = ದೇವತೆಗಳಿಗೆ ಅಮೃತವನ್ನು ಹಂಚಿ ಅವರನ್ನು ರಕ್ಷಿಸಿದವನು.

**ಪುರುಷೋತ್ತಮ** = ಸರ್ವೋತ್ತಮನಾದ (ದೇವೋತ್ತಮ) **ಪುಣ್ಯ ಶ್ಲೋಕ** = ಸದಾ ಸ್ಮರಣೀಯನಾದ ಪುಣ್ಯ ಪುರುಷ, **ಪುಂಡರೀಕ ವರದ** = ಮಾತಾಪಿತೃ ಸೇವಾ ದುರಂಧರನಾದ ಪುಂಡರೀಕಗೆ ಒಲಿದು ಭೀಮಾನದಿಯ ತಟ ದಲ್ಲಿ ನಿಂತ ಭಕ್ತ ಪರಾಧೀನ ಶ್ರೀಪಾಂಡುರಂಗ. **ಅಪಾರ ಗುಣ ನಿಲಯ** = ಅಗಣಿತಗುಣಗಣಧಾಮ. **ಮುರ ಮರ್ದನ** = ಮುರಾ ಎಂಬ ಅಸುರ ನನ್ನು ಸಂಹರಿಸಿದ ಶ್ರೀಕೃಷ್ಣ, **ಮಂಜು ಭಾಷ** = ಕರ್ಣಾನಂದವಾದಿರು ವಂತೆ ಇಂಪಾದ ಮಾತುಗಳನಾಡುವ. **ಕೇಶವ** = ಬ್ರಹ್ಮರುದ್ರಾದಿ ನಿಯಾಮ (ಕ+ಈಶ+ವ= ಕ-ಬ್ರಹ್ಮದೇವರು, ಈಶ-ರುದ್ರದೇವರು, ವ-ವರ, ಅಂದರೆ ಇವರಿಗಿಂತ ಶ್ರೇಷ್ಠನು). **ನಿರ್ಮಲದೇವ** = ಪ್ರಾಕೃತಗುಣ ಸಂಬಂಧವಿಲ್ಲದ ಜಗದ್ವಿಲಕ್ಷಣನಾದ ಪರಮ ಪಾವನ ಮೂರ್ತಿ. **ಶ್ರೀವರಹಾವ ಕಾರಿ ಎಂದು ಕೂಗೆಲೋ ಮನುಜಾ. ನಿಗಮವಂದಿತ** = ವೇದಾಭಿಮಾನಿ ಗಳಾದ ಶ್ರೀ ಲಕ್ಷ್ಮೀದೇವಿಯಿಂದ ನಮ್ಯನಾದವನು (ವೇದಪ್ರತಿಪಾದ್ಯ ರೂಪನು). **ವಾರಿಜನಾಭ** = ತನ್ನ ನಾಭಿಯಲ್ಲಿ ಲಕ್ಷ್ಮ್ಯಾತ್ಮಕವಾದ ಸುವ

ರ್ಣಾತ್ಮಕ ಪದ್ಮವನ್ನು ಇಚ್ಛಾಮಾತ್ರದಿಂದ ಸೃಜಿಸಿದ ಶ್ರೀಪದ್ಮನಾಭರೂಪೀ. **ಅನಿರುದ್ಧ** = ಯಾವಪ್ರತಿರೋಧವೂ ಇಲ್ಲದವನು (ಸರ್ವತಂತ್ರಸ್ವತಂತ್ರನು) **ಅಘನಾಶನಾ** = ಭಕ್ತರ ಪಾಪಪರಿಹಾರಕನು. **ಅಪ್ರಾಕೃತಶರೀರಾ** = ಪ್ರಾಕೃತಗುಣಗಳ ಸಂಬಂಧವೇ ಇಲ್ಲದ ಅಪ್ರಾಕೃತ ಜ್ಞಾನಾನಂದಾದಿ ಅನಂತ ಗುಣಗಣ ಪರಿಪೂರ್ಣವಾದ ಶರೀರವುಳ್ಳವನು. **ಸಗುಣ** = ಜ್ಞಾನಾಂದಾದಿ ಅಪ್ರಾಕೃತಗುಣ ವಿಶಿಷ್ಟನು, **ಸಾಕಾರ** = ಆಕಾರವುಳ್ಳವನು (ಶೂನ್ಯನಲ್ಲ, ನಿರಾಕಾರನಲ್ಲ). **ಜಗದತ್ಯಂತಭಿನ್ನ** = ಸಮಸ್ತ ಜೀವ ಜಡರಾಶಿಗಳಿಂದ ಅತ್ಯಂತ ವಿಲಕ್ಷಣನು ಜಗದ್ವಿಲಕ್ಷಣ ಮೂರ್ತಿಯು **ತ್ರಿಗುಣರಹಿತ**– ಪ್ರಾಕೃತ ತ್ರಿಗುಣಗಳಿಂದ ಅತ್ಯಂತ ವಿದೂರನು. **ನರಮೃಗರೂಪ** = ಶ್ರೀನರಸಿಂಹಾವತಾರೀ ಹರಿಯೆಂದು ಕೂಗೆಲೋ ಮನುಜಾ.

**ವಟಪತ್ರಶಾಯಿ** = ಮಹಾ ಪ್ರಳಯಕಾಲದಲ್ಲಿ ಭೂದೇವಿಯು ವಟ ಪತ್ರದಲ್ಲಿರುತ್ತಾಳೆ. ಆದರ ಮೇಲೆ ಮಲಗಿ ಉಂಗುಟವನ್ನು ಮೆಲ್ಲುತ್ತಿರುವ ಮುಕುಂದನು, **ಜಗದಂತರ್ಯಾಮಿ** = ಜೀವರಲ್ಲಿ ಬಿಂಬರೂಪಗಳಿಂದಲೂ ಜಡಗಳಲ್ಲಿ ವ್ಯಾಪ್ತರೂಪಗಳಿಂದಲೂ ಇರುವ ಅಂತಸ್ಥರೂಪ, **ಕಟಕ** = ಹಸ್ತಾಭರಣ, **ಕೌಸ್ತುಭವಿಹಾರ** = ಕೌಸ್ತುಭ ಮಣಿಯನ್ನು ಧರಿಸಿರುವ ವನು. ಶ್ರೀಬ್ರಹ್ಮದೇವರು ಈ ಮಣಿಯರೂಪದಲ್ಲಿ ಶ್ರೀಪರಮಾತ್ಮನನ್ನು ಸೇವಿಸುತ್ತಿರುವರು. **ತಟಿತ್ಕೋಟಿಕಾಯ** = ಕೋಟಿಮಿಂಚಿನ ಪ್ರಕಾಶದಂತೆ ಕಾಂತಿಯುಕ್ತವಾದ ದೇಹವುಳ್ಳವನು (ತಟಿತ್–ಮಿಂಚು ಕಾಯ-ಶರೀರ) **ಪೀತಾಂಬರಧರ** = ಬಂಗಾರದ ವಸ್ತ್ರವನ್ನು ಧರಿಸಿರುವವನು, **ನಿಟಿಲ ಲೋಚನ ಪಾಲಾ** = ಫಾಲನೇತ್ರನಾದ ರುದ್ರದೇವರ ಸಂರಕ್ಷಕನು (ನಿಟಿಲ ನೇತ್ರ-ಫಾಲನೇತ್ರನಾದ ರುದ್ರ). **ವಟು ಮೂರುತಿ ಎಂದು** = ಬ್ರಹ್ಮ ಚಾರಿರೂಪದ ವಾಮನಾವತಾರೀ ಶ್ರೀಹರಿ.

**ವಿಷ್ಣು** = ಸರ್ವತ್ರವ್ಯಾಪಕನೂ, ಪರಿಪೂರ್ಣನೂ ಆದ ಶ್ರೀಪರಮಾತ್ಮ **ಸಂಕರ್ಷಣ** = ಪ್ರಳಯಕಾಲದಲ್ಲಿ ಸಮಸ್ತ ಜಗತ್ತನ್ನು ತನ್ನಕಡೆ ಸೆಳೆಯುವ ಲಯ ಕರ್ತನು, **ಮಧುಸೂದನ** = ಮಧು ಎಂಬ ದೈತ್ಯನನ್ನು ಸಂಹರಿಸಿದ

ವನು, ಪ್ರದ್ಯುಮ್ನ = ಪ್ರಕಾಶವಿಶಿಷ್ಟನಾದ ಶ್ರೀಪರಮಾತ್ಮ. ಪ್ರಥಮ ದೈವವೇ = ಏಕಮೇವ ಅದ್ವಿತೀಯನಾದ ಆದಿಮೂಲಸ್ವರೂಪಿಯು. ಜಿಷ್ಣುಸಾರಥಿ = ಪಾರ್ಥನ ಬಂಡಿಬೋವನಾದ ಶ್ರೀಕೃಷ್ಣ. ರಾಮ= ಸರ್ವಜೀವರಲ್ಲಿಯೂ ಕ್ರೀಡೆಯಾಡುವವನು. ಅಜಿತ = ಅಜೇಯನು (ಪರಾಜಯರಹಿತನು). ಅಧೋಕ್ಷಜ = ತನ್ನನ್ನು ಆಶ್ರಯ ಮಾಡಿದ ವರಿಗೆ ಎಂದೆಂದಿಗೂ ಅಧೋಗತಿ ಕೊಡದವನು. ಸೃಷ್ಟಿಗೊಡೆಯ= ಸೃಷ್ಟವಾದ ಜಗತ್ತಿಗೆ ಪ್ರಭುವು. ಭಾರ್ಗವ ಮೂರ್ತಿ ಎಂದು = ಭೃಗು ಕುಲೋತ್ಪನ್ನನಾದ ಪರಶುರಾಮನೆಂದು.

ಇಭರಾಜ ಪರಿಪಾಲ = ಮಡುವಿನಲ್ಲಿ ಸಿಕ್ಕಿದ್ದ ಗಜೇಂದ್ರನನ್ನು ಮೊಸಳೆಯಿಂದ ಸಂರಕ್ಷಿಸಿರುವವನು. ಇಂದಿರೆಯರಸ = ಶ್ರೀ ಲಕ್ಷ್ಮೀ ಪತಿಯು. ನಭಗಂಗಾಜನಕ = ಅಕಾಶಗಂಗೆಯನ್ನು ತನ್ನ ಪಾದನಖಾಗ್ರ ದಿಂದ ಅಭಿವ್ಯಕ್ತಮಾಡಿದ ಶ್ರೀತ್ರಿವಿಕ್ರಮನು. ಜನಾರ್ದನನೆ = ದುರ್ಜನರ ಸಂಹಾರಕ. ಸಂಸಾರ ಕ್ಲೇಶನಾಶಕ. ವಿಭು = ಆನಂದೈಶ್ವರ್ಯಾದಿ ಗುಣ ಭರಿತನಾದ ಪ್ರಭುವು. ವಿಶ್ವರೂಪ = ವಿರಾಡ್ರೂಪಿಯು, ವಿಶ್ವನಾಟಕ= ಜಗತ್ತೆಂಬ ನಾಟಕದ ಸೂತ್ರಧಾರಿಯು. ಋಷಭ = ಪ್ರಿಯವ್ರತರಾಜನ ಜ್ಯೇಷ್ಠಪುತ್ರನು. ಅಗ್ನೀಧ್ರನು = ಅವನ ಮಗನೇ, ನಾಭೀರಾಜನು ಅವನ ಪುತ್ರನಾಗಿ ಶ್ರೀಹರಿಯು ಋಷಭನಾಮದಿಂದ ಅವತರಿಸಿದನು, ದತ್ತಾತ್ರೇಯ = ಅತ್ರಿ-ಅನುಸೂಯರಲ್ಲಿ ಪ್ರಕಟನಾದ ಅತ್ರಿ ಋಷಿಗಳ ಪುತ್ರ ದತ್ತಾತ್ರೇಯರೂಪ. ವೈಕುಂಠ = ವೈಕುಂಠನಾಮಕನಾದ ಶ್ರೀಹರಿ. ವಾಮನ = ವಟುವೇಷಧಾರೀ ವಾಮನಮೂರ್ತಿ, ವಾಸು ದೇವ = ಸರ್ವತ್ರನಿವಾಸಿಯಾದ, ಶ್ರೀಹರಿ (ಮೋಕ್ಷಪ್ರದರೂಪ). ರಂಗ = ಸಕಲ ಜೀವರ ಹೃತ್ಪದ್ಮಸ್ಥಿತನು. ಲೋಕೇಶ = ಜಗತ್ಪ್ರಭು. ನವನೀತಚೋರ = ಬೆಣ್ಣೆಕಳ್ಳ ಶ್ರೀಕೃಷ್ಣ. ಜಾರಾ = ಗೋಪಿಕಾ ಸ್ತ್ರೀಯರ ಅಂಗಸಂಗಮಾಡಿದ ಶ್ರೀರಂಗ, ಗೋಕುಲವಾಸ = ನಂದ

ಗೋಕುಲವಾಸಿ ಶ್ರೀಕೃಷ್ಣ. **ಗೋವಳರಾಯ** = ಗೋಪಾಲ. **ಶ್ರೀಧರ**= ಶ್ರೀಲಕ್ಷ್ಮೀಧರನು, **ಏಕಮೇವ** = ಅವನೊಬ್ಬನೇ ಜಗದೇಕ ದೈವ ಸಮಾಭ್ಯಧಿಕಶೂನ್ಯನು (ಏಕಮೇವಾದ್ವಿತೀಯನು). **ಶ್ರೀಕೃಷ್ಣಾವತಾರೀ ಹರಿ ಎಂದು ಕೂಗೆಲೋ ಮನುಜಾ.**

**ಹೃಷಿಕೇಶ** = ಇಂದ್ರಿಯಾಭಿಮಾನಿ. **ಪರಮಾತ್ಮ**= ಪರನಾಮಕಳಾದ ಶ್ರೀಲಕ್ಷ್ಮಿಗಿಂತ ಉತ್ತಮೋತ್ತಮನಾದ ಸಕಲಚೇತನರ ಆತ್ಮಸ್ವರೂಪನು. **ಮುಕ್ತಾಮುಕ್ತಾಶ್ರಯ** = ಮುಕ್ತರಿಗೂ ಮತ್ತು ಮುಂದೆ ಮುಕ್ತರಾಗಲಿರುವವರಿಗೂ ಆಶ್ರಯ ಭೂತನು. **ಅಸುರ ಭಂಜನ** = ದೈತ್ಯಸಂಹಾರಿ. **ತ್ರಿವಿಕ್ರಮ** = ಮೂರುಲೋಕಗಳನ್ನು ಜಯಿಸಿದವನು (ಅಜೇಯರೂಪ). **ಕಪಿಲ** = ಕರ್ದಮ ಋಷಿಯಿಂದ ಸ್ವಾಯಂಭುವಮನು ಪುತ್ರಿಯಾದ ದೇವಹೂತಿಯಲ್ಲಿ ಪ್ರಕಟನಾದ ಶ್ರೀಹರಿಯ ಅವತಾರರೂಪ. ಕಪಿಲರೂಪದಿಂದ ದೇವಹೂತಿಗೆ ಸಾಂಖ್ಯಯೋಗೋಪದೇಶ. **ಕುಸುಮಶರನಯ್ಯ** = ಮನ್ಮಥನ ತಂದೆ (ಕುಸುಮಶರ-ಪುಷ್ಪಗಳನ್ನೇ ಬಾಣಗಳಾಗಿ ಉಳ್ಳ ಕಾಮ). **ಶಾರ್ಙಧರ** = ಶಾರ್ಙ ಎಂಬ ಧನುಸ್ಸನ್ನು ಧರಿಸಿರುವ ಶ್ರೀಮನ್ನಾರಾಯಣ. **ಚಕ್ರ** = ಸುದರ್ಶನವೆಂಬ ಚಕ್ರವನ್ನು ಧರಿಸಿದವನು, **ವಿಷಹರ** = ಅಮೃತಮಥನ ಕಾಲದಲ್ಲಿ ವಿಷದ ಬಾಧೆಯಿಂದ ಸುರಾಸುರನನ್ನು ರಕ್ಷಿಸಿದವನು. **ಧನ್ವಂತ್ರಿ** = ಅಮೃತವನ್ನು ತುಂಬಿದ ಸುವರ್ಣ ಕಳಸವನ್ನು ಹಿಡಿದು ಕ್ಷೀರಸಮುದ್ರದಿಂದ ಮೇಲೆದ್ದ ಧನ್ವಂತ್ರೀನಾಮಕನು. **ಅಂತಹ ಬೌದ್ಧಾವತಾರಿ ಶ್ರೀಹರಿ ಎಂದು ಕೂಗೆಲೋ ಮನುಜ.**

**ಸರ್ವಮುಕ್ತ, ಸರ್ವಾಭೀಷ್ಟಕ** = ಸರ್ವಮುಕ್ತರಿಗೆ ಸರ್ವಾಭಿಲಾಷೆಗಳನ್ನು ಸಲ್ಲಿಸುವ. **ಸರ್ವೇಶಾ** = ಸರ್ವ ಜಗತ್ತಿಗೂ ಒಡೆಯ ಹಾಗೂ ನಿಯಾಮಕನು. **ಸರ್ವಮಂಗಳ** = ನಿತ್ಯಮಂಗಳ ಮೂರ್ತಿ. **ಸರ್ವಸಾರ ಭೋಕ್ತಾ** = ಸರ್ವವಸ್ತುಗತ ರಸಗಳಲ್ಲಿರುವ ಸ್ವಾಖ್ಯರಸಭೋಕ್ತ, **ಸರ್ವವ್ಯಾಪಕ**= ಅಣುರೇಣುತೃಣ ಕಾಷ್ಠಾದಿಗಳಲ್ಲಿ ಪರಿಪೂರ್ಣ ವ್ಯಾಪ್ತನು. **ಸರ್ವಗುಣಪರಿಪೂರ್ಣನೆ** = ಅನಂತಕಲ್ಯಾಣ ಗುಣಗಣ ಪರಿಪೂರ್ಣನು,

**ಸರ್ವಮೂಲಾಧಾರ** = ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳಿಗೆ ಮೂಲ ಕಾರಣನು ಮತ್ತು ಆಧಾರನು. ಇಂತಹ **ಕಲ್ಕಿಮೂರ್ತಿ ಎಂದು ಕೂಗೆಲೋ ಮನಜಾ.**

**ಈ ಪರಿ ಕೂಗಲು** = ಈ ರೀತಿ ಶ್ರೀಹರಿಯ ದಶಾವಾತಾರ ಮಹಿಮೆಗಳನ್ನು ಅರಿತು ಸ್ತೋತ್ರಮಾಡಲು. **ಆಪತ್ತು ಪರಿಹಾರ** = ದುರಿತಗಳು ದೂರವಾಗುವುವು. **ಸಪ್ತದ್ವೀಪಾಧಿಪ** = ಜಂಬೂದ್ವೀಪ ಪ್ಲಕ್ಷ-ದ್ವೀಪ-ಶಾಲ್ಮಲೀ-ಕುಶ-ಕ್ರೌಂಚ-ಶಾಕ ಮತ್ತು ಪುಷ್ಕರ ಎಂಬ ಏಳು ದ್ವೀಪಗಳಿಂದ ಆವೃತವಾದ ಬ್ರಹ್ಮಾಂಡದ ಒಡೆಯ. **ಅಪವರ್ಗದಲಿ** = ಮೋಕ್ಷಸ್ಥಾನದಲ್ಲಿ.



## ೫೧೨

### (ಗೋಪಾಲವಿಠಲಾಂಕಿತ)

### ಉಗಾಭೋಗ- ನಿಂದಾಸ್ತುತಿ

ನೀರಿನಲಿ ನಿಂತು ನಿಡುಗುಪ್ಪು ನಾರುವಗೆ ಗಂ
ಬೂರ ಕಸ್ತೂರಿ ಲೇಪನದ ಮದವೋ

ಭಾರ ಬೆನ್ನಲಿ ಪೊತ್ತು ಕಾಲು ಕೈ ಮುದುರಿದಗೆ
ಧೀರ ಶೇಷಶಯನದ ಮದವೋ

ಮೋರೆಯಲಿ ನೆಲ ಕೆದರಿ ಬೇರುಗಳ ಮೆಲುವವಗೆ
ಸಾರ ಷಡ್ರಸ ಭೋಜನದ ಮದವೋ

ಕಾರು ಕರುಳನ್ನು ವನಮಾಲೆ ಹಾಕಿದವಗೆ
ಹಾರ ಪದಕಾದಿಗಳ ಹಾಕಿದ ಮದವೋ

ಮೂರಡಿಯ ಭೂದಾನವನ್ನು ಬೇಡಿದವಗೆ
ಸಾರಿದರಭೀಷ್ಟೆಗಳ ಕೊಡುವ ಮದವೋ
ಧಾರುಣಿಯನ್ನಿತ್ತು ಕುಳ್ಳಿರೆ ಸ್ಥಳವಿಲ್ಲದವಗೆ
ಈರೇಳು ಲೋಕಗಳನಾಳ್ವ ಮದವೋ
ನಾರಿಯನು ಬಿಟ್ಟು ವನವನವ ಸಂಚರಿಸಿದವಗೆ
ಮೂರು ಧಾಮದಿ ರಮೆಯ ಭೋಗದ ಮದವೋ
ಊರ ನಾರಿಯರಿಂದ ಬೈಸಿಕೊಂಬುವಗೆ
ವಾರಿಜಭವ ಸುರರ ವಂದನೆಯ ಮದವೋ
ಊರೆಲ್ಲ ನೋಡೆ ಬತ್ತಲೆಯಾಗಿ ನಿಂತವಗೆ
ಚಾರು ಪೀತಾಂಬರ ಉಡುವ ಮದವೋ
ಘೋರ ತುರಗವನೇರಿ ಹಾರಿಸ್ಯಾಡುವವಗೆ
ವೀರ ಸಿಂಹಾಸನದಿ ಕುಳಿತಿರುವ ಮದವೋ
ಬಾರದಲೆ ತಪ್ಪದೊ ಹಿಂದಣ ಭವಣೆಗಳು
ದೂರ ವಿಚಾರಿಸಿಕೊ ಮಾರಮಣನೆ
ಮೂರು ದಿನದರಸುತನ ಸ್ಥಿರವೆಂದು ನೀ ನೆಚ್ಚಿ
ಸೇರಿದವರನು ಬಿಡುವುದು ಧರ್ಮವೇನೋ
ಶ್ರೀ ರಂಗರಾಜ ಗೋಪಾಲವಿಠ್ಠಲರೇಯ
ಸಾರಿದವರನು ಪೊರೆದು ಕೀರುತಿಯ ಪಡೆಯೋ ದೇವ ||



**ಅರ್ಥ ವಿವರಣೆ .**

"ಭಕ್ತಿಯಲಿ ಭಾಗಣ್ಣ"- ನೆಂದು ಖ್ಯಾತರಾದ ಶ್ರೀ ಗೋಪಾಲದಾಸ ವರ್ಯರಿಂದ ರಚಿತವಾದ ಈ ಉಗಾಭೋಗದಲ್ಲಿ ನಿಂದಾಸ್ತುತಿ ರೂಪವಾದ ಶ್ರೀಹರಿಯ ದಶವಾತಾರ ಸ್ತೋತ್ರವಿದೆ,

**ನೀರಿನಲಿ**= ಸಮುದ್ರದಲ್ಲಿ, **ನಿಡುಗುಷ್ಟು**= ನಿಟ್ಟುಸಿರು ಬಿಡುತ್ತಾ **ಕರ್ಪೂರ**= (ಸುಗಂಧವಾದ ಪಚ್ಚ ಕರ್ಪೂರ) **ಕಾಲು ಕೈ ಮುರಿದವಗೆ**=

ಬೆಪ್ಪಿನಲ್ಲಿ ಕೈ ಕಾಲುಗಳನ್ನು ಹುದುಗಿಸಿಕೊಂಡ ಕೂರ್ಮರೂಪೀ. **ನೋರೆಯಲಿ**= ಚೂಪಾದ ಮೂತಿಯಿಂದ **ಕಾರುಕರುಳನ್ನು**= ರಕ್ತ ಸಿಕ್ತವಾದ ಹಿರಣ್ಯ ಕಶಿಪುವಿನ ಕರುಳನ್ನು, **ವನವಮಾಲೆ**= ತಾನು ಧರಿಸುವ ಪುಷ್ಪಮಾಲೆಯಂತೆ ಹಾಕಿಕೊಂಡ ವೀರನರಸಿಂಹ. **ಮೂರುಧಾಮದಿ**= ವೈಕುಂಠ- ಅನಂತಾಸನ ಶ್ವೇತಕ ದ್ವೀಪಗಳೆಂಬ ಮುಕ್ತಧಾಮಗಳು (ಈ ಮೂರೂ ಲಕ್ಷ್ಮ್ಯಾತ್ಮಕವೇ) **ವಾರಿಜಭವ**= ಕಮಲೋದ್ಭವರಾದ ಬ್ರಹ್ಮ ದೇವರು. **ಚಾರುಪೀತಾಂಬರ** = ನಯನಮನೋಹರವಾದ ಪೀತಾಂಬರ, **ಘೋರ ತುರಗವನ್ನೇರಿ**= ಲಕ್ಷ್ಮಿಯನ್ನು ಕುದುರೆಯನ್ನಾಗಿ ಮಾಡಿ ಕೊಂಡ ದುರುಳ ಸಂಹಾರಕನಾದ ಕಲ್ಕಿ. **ಹಿಂದಣ ಭವಣೆಗಳು**= ಯುಗ ಯುಗದಲ್ಲಿ ಧರ್ಮ ಸಂರಕ್ಷಣಾರ್ಥವಾಗಿ ನೀನು ಎತ್ತುವ ದಶಾವತಾರ ರೂಪ ಭವಣೆಗಳು, **ಮೂರು ದಿನದ ಅರಸುತನ** = ಇದೆಲ್ಲಾ ಕ್ಷಣಿಕವಾದದ್ದು ಆಯಾಯಾ ಯುಗಗಳಿಗೆ ಸಂಬಂಧಿಸಿದ್ದು ಎಂದು ಭಕ್ತಿಯಿಂದ ಮೂದಲಿಕೆ ಮಾತುಗಳನ್ನಾಡುತ್ತಾರೆ. ಈ ಉಗಾಭೋಗದಲ್ಲಿ (೧) ಶ್ರೀಹರಿಯ ಮತ್ಸ್ಯಾದಿ ಕಲ್ಕಿ ಪರ್ಯಂತ ದಶಾವತಾರಗಳಲ್ಲಿ ಬಂದಿದ್ದ ಪರಿಸ್ಥಿತಿ, ಸನ್ನಿ ವೇಶಗಳಿಗೂ ಆತನ ಮೂಲ ರೂಪದಲ್ಲಿ ಇರುವ ವೈಭವ ಪೂರ್ಣವಾದ ಪರಿ ಸ್ಥಿತಿಗಳಿಗೂ ಹೋಲಿಸಿ ನಿಂದಾರೂಪವಲ್ಲ ಅಣಕವಾಡಿದ್ದಾರೆ, ಇಂತಹ ನಿಂದಾಸ್ತುತಿಗಳು ಹರಿ ದಾಸ ಸಾಹಿತ್ಯದಲ್ಲಿ ಭಕ್ತಿ ಪೂರ್ಣವಾದ ಸ್ತುತಿಯಲ್ಲದೇ ಅನ್ಯಥ ಅಲ್ಲ. ಅನಂತ ಕಲ್ಯಾಣ ಗುಣ ಗಣ ಧಾಮನಾದ ಆ ಅಪ್ರಮೇಯನಿಗೆ ದೋಷವೆಲ್ಲಿಂದ ಬಂದೀತು ?



## ೫೧೧೩

(ವ್ಯಾಸವಿಠಲಾಂಕಿತ)

**ರಾಗ—ಮಧ್ಯಮಾವತಿ** **ಆದಿತಾಳ**

ತಿಳಿಯದೋ ನಿನ್ನಾಟ-ತಿರುಪತಿಯ ವೆಂಕಟ ॥ ॥ಪ॥

ಪೊಳೆವ ನೀರೊಳು ಗೆಲುವ ಮೋರೆಯು
ನೆಲವ ನೋಡುವ ಸುಳಿವ ಕಂಭದಿ ।
ಇಳೆಯುನಳೆಯುವ ಭಳಿರೆ ಭಾರ್ಗವ
ಖಳನ ಛೇದಿಸಿ ಕೊಳಲಧ್ವನಿಗೆ ॥
ನಳಿನ ಮುಖಿಯರ ನಾಚಿಸುವ ಬಲುಃ ಹಯ
ದಳದ ಬಹು ಹವಣಿಗಾರನೆ ॥ ॥೮॥

ಆರು ಬಲ್ಲರು ನಿಮ್ಮ-ಶ್ರೀಲಕುಮಿ ಮನಸಿಗೆ
ತೋರದಿಹ ಪರಬೊಮ್ಮ-ಉಳಿದವರು ಬಲ್ಲರೆ
ನೀರಜಾಸನ ಬೊಮ್ಮ-ಇದು ನಿನ್ನ ಮರ್ಮ ॥

ನೀರೊಳಗೆ ಮನೆ ಭಾರ ಬೆನ್ನಲಿ
ಕೋರೆದಾಡೆಯ ನಾರಸಿಂಹನೆ ।
ಧರೆಯ ಬೇಡಿದ ಧೀರಪುರುಷನೆ
ವಾರಿಬಂಧನ ಮಾರಜನಕನೆ ।
ನಾರಿಯರ ವ್ರತವಳಿದು ಕುದುರೆಯ
ನೇರಿ ಮೆರೆಯುವ ಸುಂದರಾಂಗನೆ ॥ ॥೧॥

ಸಕಲ ಮಾಯವಿದೇನು-ವ್ಯಕನವಾಯು
ಸಖನ ಸಲಹಿದೆ ನೀನು-ಭುಕುತಿಯಿಂದಲಿ
ತುತಿಪರಿಗೆ ಸುರಧೇನು-ಸುರಕಾಮಧೇನು ॥

ನಿಖಿಳ ವೇದೋದ್ಧಾರ ಗಿರಿಧರ
ಅಖಿಳ ಭೂಮಿಯ ತಂದ ನರಹರಿ ।
ಯುಕುತಿಯಲಿ ನೆಲನಳೆದ ಭಾರ್ಗವ
ಮುಕುತಿಗೋಸುಗ ಫಲವ ಸವಿದನೆ ।
ರುಕುಮನನುಜೆಯ ರಮಣ ಭೌದ್ಧನೆ
ಲಕುಮಿರಮಣನೆ ಕಲ್ಕಿರೂಪಿಯೆ ॥ ॥೨॥

ನಿನ್ನ ರೂಪಿನ ಲೀಲಾ-ನೋಡುವ ಜನಕೆ
ಕಣ್ಣು ಸಾಸಿರವಿಲ್ಲಾ-ನಾ ಪಾಡಿ ಪೊಗಳಲು
ಪನ್ನಗಾಧಿಪನಲ್ಲ ನೀನರಿಯದಿಲ್ಲ ||

ಕಣ್ಣು ಮುಚ್ಚದೆ ಬೆನ್ನು ತೋರಿವಿ
ಮಣ್ಣು ಕೆದರುವೆ ಚಿಣ್ಣಗೊಲಿದನೆ ।
ಸಣ್ಣವಾಮನ ಅಣ್ಣರಾಮನೆ
ಪುಣ್ಯಪುರುಷನೆ ಬನ್ನಬಡುಕನೆ ।
ಹೆಣ್ಣುಗಳ ವ್ರತ ಕೆಡಿಸಿ ತೇಜಿಯ
ಬೆನ್ನನೇರಿದ ವ್ಯಾಸವಿಠ್ಠಲ ॥ ||೩||



**ಅರ್ಥವಿವರಣೆ :—**

ಶ್ರೀ ವಿಜಯದಾಸವರ್ಯರ ಶಿಷ್ಯರಾದ ಪಂಗನಾಮದ ತಿಮ್ಮಣ್ಣ ದಾಸರ ಶಿಷ್ಯರು ವ್ಯಾಸವಿಠ್ಠಲಾಂಕಿತ ಶ್ರೀಕಲ್ಲೂರು ಸುಬ್ಬಣ್ಣಾಚಾರ್ಯರು. ದಶಾವತಾರಸ್ತುತಿರೂಪದಲ್ಲಿರುವ ಈ ಕೀರ್ತನೆಯಲ್ಲಿ ಪ್ರತಿ ನುಡಿಯಲ್ಲಿಯೂ ಶ್ರೀಹರಿಯ ದಶಾವತಾರದ ವರ್ಣನೆ ಇದೆ.

**ತಿಳಿಯದೋ ನಿನ್ನಾಟ** = ನಿನ್ನ ಅಪರಿಮಿತ ಮಹಾಮಹಿಮೆಗಳನ್ನು ಯಾರೂ ಸಾಕಲ್ಯೇನ ಅರಿಯರು, **ಪೊಳೆವ ನೀರೊಳು** = ಸಮುದ್ರದಲ್ಲಿ ಕಾಂತಿಯುಕ್ತನಾಗಿ ಸಂಚರಿಸುತ್ತಿರುವ ಮತ್ಸ್ಯರೂಪೀ ಶ್ರೀಹರಿ. **ಗೆಲುವ ನೋರೆಯ** = ಜಯವನ್ನು ಸೂಸುತ್ತಿರುವ ಕೂರ್ಮನ ಮುಖ. **ನೆಲವ ನೋಡುವ** = ಭೂಮಿಯಕಡೆ ಮುಂತಿಚಾಚಿರುವ ವರಾಹ, **ಸುಳಿವ ಕಂಭದಿ** = ಕಂಬದಿಂದ ಪ್ರತ್ಯಕ್ಷನಾದ ನರಸಿಂಹ, **ಇಳೆಯನಳೆಯುವ**= ಭೂಮಿಯನ್ನು ಅಳೆದ ವಾಮನ. **ಛಳಿರೆ ಭಾರ್ಗವ**=ಭೃಗುಕುಲೋತ್ಪನ್ನನಾದ ಪರಶುರಾಮನೇ ಶಹಭಾಸ್ ! **ಖಳನ ಛೇದಿಸಿ** = ರಾವಣಾಸುರನನ್ನು ಸೀಳಿದ ರಾಮಚಂದ್ರ. **ಕೊಳಲನೂದುವವನಿಗೆ** = ವೇಣುಗೋಪಾಲನಾದ

**ಶ್ರೀಕೃಷ್ಣ. ನಳಿನ ಮುಖಿಯರ ನಾಚಿಸುವ** = ಕಮಲಮುಖಿಯರಾದ ತ್ರಿಪುರರ ಪತ್ನಿಯರನ್ನು ಮೋಹಗೊಳಿಸಿದ ಬುದ್ಧ. **ಹಯದಳದ** = ಅಶ್ವಾರೋಹಿಯಾದ ಕಲ್ಕ್ಯವತಾರಿ.

**ಶ್ರೀಲಕುಮಿ...... . ಪರಬೊಮ್ಮ** = ಲಕ್ಷ್ಮೀದೇವಿಯೂ ಸಹ ಸಾಕಲ್ಯೇನ ತಿಳಿಯದ ಪರಿಪೂರ್ಣನಾದ ಪರಬ್ರಹ್ಮನು, **ನೀರಜಾಸನ ಬೊಮ್ಮ** = ಕಮಲ ಪೀಠನಾದ ಬ್ರಹ್ಮದೇವರು. **ಮರ್ಮ** = ಯಾರೂ ಅರಿಯದ ರಹಸ್ಯ. **ವಾರಿಬಂಧನ** = ದಕ್ಷಿಣ ಸಮುದ್ರಕ್ಕೆ ಸೇತುವೆ ಕಟ್ಟಿಸಿದ ಶ್ರೀರಾಮಚಂದ್ರ. **ಮಾರಜನಕನೆ** = ಮನ್ಮಥಾವತಾರಿಯಾದ ಪ್ರದ್ಯುಮ್ನನ ಜನಕನಾದ ಶ್ರೀಕೃಷ್ಣ. **ನಾರಿಯರ** = ತ್ರಿಪುರರ ಪತ್ನಿಯರ ಮನಸ್ಸನ್ನು ಮೋಹಗೊಳಿಸಿ ತನ್ಮೂಲಕ ಅವರ ಪಾತಿವ್ರತ್ಯ ಭಂಗಗೊಳಿಸಿದ ಬುದ್ಧ.

**ವೃಕನವಾಯು** = ವೃಕನಾಮಕ ಪರಮಾತ್ಮನನ್ನು ಜಠರಾಗ್ನಿಯಲ್ಲಿ ಹೊಂದಿರುವ "ವೃಕೋದರ"- ನಾಮಕ ಭೀಮಸೇನದೇವರು, **ಸಖನ** = ಭೀಮನ ತಮ್ಮನಾದ ಪಾರ್ಥನನ್ನು ಸಲಹಿದ ಶ್ರೀಕೃಷ್ಣ, (ಭೀಮಸೇನ ದೇವರ ಪ್ರಥಮಾವತಾರ ಹನುಮಂತ. ಹನುಮಂತನು ಅರ್ಜುನನ ಧ್ವಜದಲ್ಲಿ ಇದ್ದ ಕಾರಣ. ಪಾರ್ಥನು ಕಪಿಧ್ವಜನೆಂದೆನಿಸಿದ. ಶ್ರೀಹರಿವಾಯುಗಳ ಸನ್ನಿಧಾನ ವಿಶೇಷದಿಂದಲೇ ಪಾರ್ಥನಿಗೆ ಯಶಸ್ಸು-ಗೆಲವು). **ಸುರಧೇನು** = ದೇವತೆಗಳ ಆಕಳಾದ ಕಾಮಧೇನು. **ಗಿರಿಧರ** = ಮಂದರ ಪರ್ವತವನ್ನು ಹೊತ್ತ ಕೂರ್ಮ, **ಯುಕುತಿಯಲಿ** = ಉಪಾಯದಿಂದ (ಬಲಿಯಿಂದ ಮೂರಡಿ ದಾನವ ಬೇಡುವ ನೆಪದಲ್ಲಿ), **ಫಲವ ಸವಿದನೆ** = ಶಬರಿಯ ಭಕುತಿಗೆ ಮೆಚ್ಚಿ ಅವಳಿತ್ತ ಫಲಗಳನ್ನು ತಿಂದು ಅವಳಿಗೆ ಸದ್ಗತಿ ನೀಡಿದ ರಾಮಚಂದ್ರ. **ರುಕುಮನನುಜೆಯ ರಮಣ** = ರುಕ್ಮಿಯ ತಂಗಿ ರುಕ್ಮಿಣೀ ಪತಿಯಾದ ಶ್ರೀಕೃಷ್ಣ.

**ಪನ್ನಗಾಧಿಪ ನಲ್ಲ** = ನಾನು ಸರ್ಪಶ್ರೇಷ್ಠನಾದ ಶೇಷನಲ್ಲ, **ಕಣ್ಣು**

ಮುಚ್ಚದೆ = ಕಣ್ಣಿನ ರೆಪ್ಪೆಗಳಿಲ್ಲದ ಮತ್ಸ್ಯ. ಚಿಣ್ಣಗೊಲಿದನೇ = ಪ್ರಹ್ಲಾದ ವರದನಾದ ಶ್ರೀನರಸಿಂಹ. ಪುಣ್ಯಪುರುಷನೆ = ಉತ್ತಮ ಶ್ಲೋಕನಾದ ದಾಶರಥಿರಾಮ. ಬನ್ನಬಡುಕನೆ = ಸ್ತ್ರೀಲೋಲನಾದ ಶ್ರೀಕೃಷ್ಣ, ತೇಜಿಯು = ಲಕ್ಷ್ಮಿಯನ್ನೇ ಕುದುರೆಯನ್ನಾಗಿ ಮಾಡಿಕೊಂಡ, ಅಶ್ವಾರೋಹಿಯಾದ ಕಲ್ಕಿ,



## ೫೧೪

### (ಅಂಕಿತ-ಹೆಳವನಕಟ್ಟೆರಂಗ)

ರಾಗ–ಮೋಹನ ಅಟ್ಟತಾಳ

ಮೂರೂಜಗವಾ ಕುಣಿಸುವಂಥ–ಗಾರುಡಿಗ ಇವದಾರಕ್ಕ
ನಾರಾಯಣನಲ್ಲವೇನೆ ನಾರಿ ಕೇಳೆ ತಂಗೀ ॥ ॥ಪ॥

ವಾರಿಧಿಯೊಳಾಡುವ ವಿಚಾರ ಮಾಡೆ ಅಕ್ಕ
ಧೀರ ಬಲುಗಂಭೀರ ಮತ್ಸ್ಯಾವತಾರಕಾಣೆ ತಂಗೀ ॥ ॥೦॥

ಹತ್ತು ನಾಲ್ಕು ರತ್ನವ ತೆಗೆದ ಮತ್ತೆ ಇವದಾರಕ್ಕ
ರತ್ನ ಕುಂಚೆದ ಹೇಮಗಿರಿಯನೆತ್ತಿದ ಕೂರ್ಮ ಕಾಣೇ ತಂಗೀ ॥ ॥೨॥

ಧರಣಿಯು ಸುರುಳಿಸುತ್ತಿದಂಥ ಅರಸ ಇವದಾರಕ್ಕ
ಅರಿಯದ ಭಕ್ತರ ಮೋರೆ ನೋಡಿದ ವರಾಹ ಕಾಣೇ ತಂಗೀ ॥ ॥೩॥

ನಂಬಿದರೇ ಕಂಭದಿ ಬಂದಾ ಎಂಬೀ ಇವ ದಾರಕ್ಕ
ರಂಭೆ ಹೇಮದ ಬೊಂಬೆ ನರಸಿಂಗ ಕಾಣೇ ತಂಗೀ ॥ ॥೪॥

ಕದ್ದೂ ಅಡ್ಡ ಬಿದ್ದನ ಕಣ್ಣು ಇರಿದಾ ಇವ ದಾರಕ್ಕ
ಮುದ್ದೂ ಮುಖದ ಪ್ರಸನ್ನನಾದ ವಾಮನ ಕಾಣೇ ತಂಗೀ ॥ ॥೫॥

ಆ ಮಾತೃ ದ್ರೋಹವ ಮಾಡಿದ ಧೀರಾ ಇವ ದಾರಕ್ಕ
ಧೀಮಾ ಸಾರ್ವಭೌಮಾ ಪರಶುರಾಮ ಕಾಣೇ ತಂಗೀ || ||೬||

ಕಾಮಿನಿಯಾ ಪೋಗಿ ತಂದಾ ಭೀಮಾ ಇವ ದಾರಕ್ಕ
ಕಾಮಿತ ವರಗಳ ಕೊಡುವ ಶ್ರೀ ರಾಮಾ ಕಾಣೇ ತಂಗೀ || ||೭||

ಗೊಲ್ಲತಿಯರ ಗಲ್ಲವ ಪಿಡಿದಾ ಚೆಲುವಾ ಇವದಾರಕ್ಕ
ಬಲ್ಲಿದ ಮಲ್ಲರ ಮರ್ಧಿಸಿದಂಥ ಕಳ್ಳ ಕೃಷ್ಣ ಕಾಣೇ ತಂಗೀ ||೮||

ತ್ರಿಪುರದೊಳು ಚಪಲಾಕ್ಷಿಯರ ವಿಪರೀತವ ಮಾಡಿದನಕ್ಕ
ಅಪರಿಮಿತ ಮಹಿಮಾನಿವ ಚಪಲ ಬೌದ್ಧ ಕಾಣೇ ತಂಗೀ || ||೯||

ಕುದುರೇನೇರಿ ಎದುರಿಗೆ ಬರುವ ಚದುರಾ ಇವ ದಾರಕ್ಕ
* ಮಧುವನಿಕ್ಕದ ಮಧುರಾಪುರದ ಚದುರ ಕಲ್ಕೀತಂಗೀ ||೧೦||

ಇಂದು ವದನ ಮೂರುತಿ ಗೋವಿಂದಾ ಇವ ದಾರಕ್ಕ
ತುಂಗಾ ಹೊಳೆವನಕಟ್ಟೆ ರಂಗಾ ಕಾಣೇ ತಂಗೀ || ||೧೧||

(*ವಿದುರನ ಸಲಹಿದ-ಪಾಠಾಂತರ)



**ಅರ್ಥವಿವರಣೆ:-**

ಗಾರುಡಿಗೆ = ಗಾರುಡಿ ವಿದ್ಯೆ (ಮೋಡಿ) ಪ್ರದರ್ಶಿಸುವವನು. ವಾರಿಧಿಯೊಳು = ಸಮುದ್ರದಲ್ಲಿ. ಹತ್ತು ನಾಲ್ಕು ರತ್ನವ = ಸಮುದ್ರ. ಮಂಥನ ಕಾಲದಲ್ಲಿ ೧೪ ಶ್ರೇಷ್ಠ ವಸ್ತುಗಳು ಉತ್ಪತ್ತಿಯಾದವು. ರತ್ನ ತೆಕುಂಚದ ಹೇಮಗಿರಿಯ = ಸುವರ್ಣ ಪರ್ವತವಾದ ಮೇರು ಪರ್ವತಕ್ಕೆ ಪೂರ್ವ ಭಾಗದಲ್ಲಿ ಭೂಮಿಯನ್ನು ನಿಲ್ಲಿಸಿರುವ ಮಂದರಗಿರಿ, ಕದ್ದೂ ಅಡ್ಡ ಬಿದ್ದನ = ಬಲಿ ಚಕ್ರವರ್ತಿಯು ವಾಮನನಿಗೆ ಮೂರಡಿ ಭೂಮಿಯನ್ನು ದಾನ ಕೊಡುವ ಸಲುವಾಗಿ ಸಂಕಲ್ಪಿಸಿ ಕಮಂಡಲವಿನಿಂದ

ನೀರನ್ನು ಬಿಡುತ್ತಿರುವಾಗ ನೀರು ಹೊರಗೆ ಬರಂದಂತೆ ಶುಕ್ರಾಚಾರ್ಯರು ಸೂಕ್ಷ್ಮ ರೂಪದಿಂದ ಕಮಂಡಲುವಿನ ಜಲದ್ವಾರದ ಕಿಂಡಿಯನ್ನು ಮುಚ್ಚಿದರು, ಆಗ ವಾಮನನು ತನ್ನ ಕೈಯ್ಯಲ್ಲಿದ್ದ ಧರ್ಭೆಯಿಂದ ಚುಚ್ಚಿದಾಗ ಶುಕ್ರಾ ಚಾರ್ಯರ ಒಂದು ಕಣ್ಣು ಹೋಯಿತು, ಆ ಮಾತೃ ದ್ರೋಹವ =ಜಮದಗ್ನಿ ಋಷಿಗಳ ಆಜ್ಞಾ ಪ್ರಕಾರ ಪರಾಶುರಾಮನು ತನ್ನ ತಾಯಿ ರೇಣುಕೆಯ ಶಿರ ವನ್ನು ಛೇದಿಸಿದನು. ಬಲ್ಲಿದ ಮಲ್ಲರ = ಮದಿಸಿದ ಚಾಣೂರ ಮುಷ್ಟಿಕಾದಿ ಮಲ್ಲರನ್ನು ಕೊಂದ ಶ್ರೀಕೃಷ್ಣ, ಚಪಲಾಕ್ಷಿಯರ= ಚಂಚಲ ನೇತ್ರಯ ರಾದ ತ್ರಿಪುರಾಸುರರ ಪತ್ನಿಯರು.

## ೫೧೫

### (ಅಂಕಿತ-ಹೆಳವನಕಟ್ಟೆರಂಗ)

ಹೊನ್ನ ತಾ ಗುಬ್ಬಿ ಹೊನ್ನ ತಾ<br>ಚೆನ್ನ ಗೋಪಾಲನ ಚೆಲುವ ಕೃಷ್ಣನ ಕೈಗೆ ‖ ‖ಪ‖

ಆಗಮವನು ತಂದು ಅಜಗಿತ್ತ ಕೈಗೆ<br>ಸಾಗರವನೊತ್ತಿಕ್ಕಿ ಸುಧೆಯಿತ್ತ ಕೈಗೆ<br>ತೂಗಿ ನಡೆವ ಸ್ಥೂಲಕಾಯನ ಕೈಗೆ<br>ನಾಗಶಯನ ನರಸಿಂಹನ ಕೈಗೆ ‖೧‖

ಬಲಿಯ ದಾನವ ಬೇಡಿ ಬಂದಂಥ ಕೈಗೆ<br>ಛಲದಿಂದ ಕ್ಷತ್ರಿಯರ ಕೊಂದಂಥ ಕೈಗೆ<br>ಕಲಿ ವಿಭೀಷಣಗಭಯವಿತ್ತಂಥ ಕೈಗೆ<br>ಬಲುಗಿರಿಯ ಬೆರಳಲ್ಲಿ ಆತಂಥ ಕೈಗೆ ‖ ‖೨‖

ಪತಿವ್ರತೆಯರ ವ್ರತವಳಿದಂಥ ಕೈಗೆ<br>ಹಿತವಾಜಿಯನೇರಿ ದುರುಳಮರ್ದನ ಕೈಗೆ

ಸತಿ ಶಿರೋಮಣಿ ಲಕ್ಷ್ಮೀಕಾಂತನ ಕೈಗೆ
ಚತುರ ಹೆಳವನಕಟ್ಟೆ ರಂಗನ ಕೈಗೆ ||೩||

**ಅರ್ಥ ವಿವರಣೆ:—**

ಒಮ್ಮೆ ಶ್ರೀರಂಗನಾಥನ ದೇವಸ್ಥಾನದಲ್ಲಿ ಮೂಲಮೂರ್ತಿಯ ಕೈಯಲ್ಲಿ ಹಾಕಿದ್ದ ರತ್ನಖಚಿತ ಸ್ವರ್ಣ ಉಂಗರವು ಕಾಣಿಸಲಿಲ್ಲ. ಆಗ ಗ್ರಾಮಸ್ಥರೆಲ್ಲರೂ ದಿಗ್ಭ್ರಾಂತರಾದರು. ಆ ಸಮಯದಲ್ಲಿ ಹೆಳವನ ಕಟ್ಟೆ ಗಿರಿಯಮ್ಮನು ಭಾವಿಯ ಕಟ್ಟೆಯ ಮೇಲೆ ಕುಳಿತಿದ್ದ ಒಂದು ಗುಬ್ಬಿಯನ್ನು ಉದ್ದೇಶಿಸಿ, ಭಕ್ತ್ಯುದ್ರೇಕ ಭಾವದಿಂದ ಪರವಶಳಾಗಿ ಶ್ರೀರಂಗನಾಥನ ದಶಾವತಾರ ರೂಪವಾದ ಮೇಲ್ಕಂಡ ಕೀರ್ತನೆಯನ್ನು ಹಾಡಿದಳು. ಆಗ ಗುಬ್ಬಿಯು ಆ ಬಾವಿಯಲ್ಲಿ ಹಾರಿ ಉಂಗುರವನ್ನು ತನ್ನ ಕೊಕ್ಕಿನಿಂದ ಕಚ್ಚಿಕೊಂಡು, ಗಿರಿಯಮ್ಮನ ಕೈಯಲ್ಲಿ ಇಟ್ಟಿತಂತೆ. ಈ ಪ್ರಸಂಗ ವಿಶೇಷದಿಂದ ಗಿರಿಯಮ್ಮನ ಕೀರ್ತಿ ದಿಗಂತವಿಶ್ರಾಂತವಾಯಿತು.

**ಹೊನ್ನ ತಾ** = ಬಂಗಾರದ ಉಂಗುರವನ್ನು. **ಆಗಮವನು ತಂದ** = ವೇದಗಳನ್ನು ಅಪಹರಿಸಿದ ಸೋಮಕನೆಂಬ ದೈತ್ಯನನ್ನು ಸಂಹರಿಸಿ, ವೇದಗಳನ್ನು ಬ್ರಹ್ಮನಿಗೆ ಕೊಟ್ಟ ಮತ್ಸ್ಯ. **ಸಾಗರನೊತ್ತಿಕ್ಕಿ** = ಕ್ಷೀರಸಮುದ್ರದ ಗರ್ಭವನ್ನು ಹೊಕ್ಕು, ಕೂರ್ಮರೂಪದಿಂದ ಸಮುದ್ರಮಥನ ಕಾರ್ಯಕ್ಕೆ ಅನುಕೂಲವಾಗಿ, ಸುರರಿಗೆ ಸುಧೆಯನ್ನು ಹಂಚಿದನು. **ತೂಗಿ ನಡೆಯುವ** = ತನ್ನ ಸ್ಥೂಲದೇಹವನ್ನು ಹೊತ್ತುಕೊಂಡು. ತೂಗುತ್ತಾ ಸಂಚರಿಸುವ ವರಾಹ. **ನಾಗಶಯನ** = ಶೇಷಶಾಯಿಯಾದ ಶ್ರೀಹರಿ. **ಛಲದಿಂದ** = ಸಂಕಲ್ಪ ಪೂರ್ವಕವಾಗಿ. **ಕಲಿ** = ಇಲ್ಲಿ ವಿಭೀಷಣನನ್ನು "ಕಲಿ" ಎಂದು ಅರ್ಥೈಸಬಾರದು. "ಕಲಿ"-ಎಂದರೆ ಧೀರನಾದ ಎಂದರ್ಥ. **ಬಲುಗಿರಿಯ** = ನಿರಾಯಾಸವಾಗಿ ಗೋವರ್ಧನಗಿರಿಯನ್ನು ಕಿರುಬೆರಳಿನಲ್ಲಿ ಎತ್ತಿಹಿಡಿದ ಶ್ರೀಕೃಷ್ಣ.

೫೧೫

(ಜಗನ್ನಾಥವಿಠ್ಠಲಾಂಕಿತ)

ರಾಗ–ಸಾರಂಗ ಆದಿತಾಳ

ಇಂದು ನೋಡಿದೆ ನಂದತೀರ್ಥಮು –
ನೀಂದ್ರ ವಂದಿತ ಚರಣನಾ ॥ ॥ಪ॥

ವಂದಿಸುವ ಭಕುತರಿಗೆ ನಿತ್ಯಾ
ನಂದ ಫಲದ ಮುಕುಂದನಾ ॥ ॥ಅ॥

ತಮನ ವೈರಿಯ ಮಂದಾರಾಪ್ರಿಯು
ಕಮಠ ರೂಪದಿ ಪೊತ್ತನಾ
ಕಮಲಸಂಭವ ಭವ ಹಿರಣ್ಯಕ
ದಮನ ವಾಮನ ಮೂರ್ತಿಯಾ ॥ ॥೧॥

ಭೂಮಿಪರ ಸಂಹರಿಸಿ ದಶರಥ
ರಾಮನ ನಾಮದಿ ಮೆರೆದನಾ
ಸೋಮಪಾಧಿಪ ಸುತನಿಗೊಂದು ಸಂ –
ಗ್ರಾಮದೊಳು ರಕ್ಷಿಸಿದನಾ ॥ ॥೨॥

ಬುದ್ಧರೂಪದಿ ತ್ರಿಪುರ ಸತಿಯರ
ಬುದ್ಧಿ ಭೇದವ ಮಾಡ್ದನಾ
ಯುದ್ಧದಲಿ ಕಲಿ ಮುಖ್ಯ ದೈತ್ಯರ
ಗೆದ್ದ ದಾನವಿಲೋಲನ ॥ ॥೩॥

ದೇವಕಿ ವಸುದೇವ ತನಯನ
ದೇವ ಗಣ ಸಂಸೇವ್ಯನ

ಈ ವಸುಂಧರೆಯೊಳಗೆ ಮಧ್ವಸ-
ರೋವರ ನಿವಾಸನಾ ॥ ॥೪॥

ಘೋತ ವೇಷನ ವೀತಶೋಕನ
ಪೂತನಾದಿ ವಿಘಾತನ
ಮಾತರೀ ಶ್ವಪ್ರಿಯ ಗುರು ಜಗ
ನ್ನಾಥವಿಠ್ಠಲ ರಾಯನಾ ॥ ॥೫॥



**ಅರ್ಥವಿವರಣೆ :–**

ಶ್ರೀ ಜಗನ್ನಾಥದಾಸವರ್ಯರು ಸಂಚಾರತ್ವೇನ ಉಡುಪಿ ಕ್ಷೇತ್ರಕ್ಕೆ ಆಗಮಿಸಿದ್ದಾರೆ. ಅಲ್ಲಿ ಶ್ರೀ ಮನ್ಮಧ್ವಮುನಿ ಕರಾರ್ಚಿತ ಶ್ರೀ ಕೃಷ್ಣನ ಸಂದರ್ಶನ ಭಾಗ್ಯವನ್ನು ಹೊಂದಿ ಆಪರಾತ್ಪರನ ಮುಂದೆ ದಶವತಾರ ಸ್ತೋತ್ರ ರೂಪವಾದ ಈ ಕೀರ್ತನೆಯನ್ನು ಹಾಡಿದರು,

**ನಂದತೀರ್ಥ ಮುನೀಂದ್ರ ವಂದಿತ ಚರಣನ** = ಶ್ರೀ ಗುರು ಮಧ್ವರಿಂದ ಆರಾಧಿತ ಚರಣ ಸರೋಜನನ್ನು. **ನಿತ್ಯಾನಂದ ಫಲದ** = ನಿತ್ಯ ಸುಖರೂಪವಾದ ಮುಕ್ತಿಯ ಆನಂದವನ್ನು ಕೊಡುವ. **ಮುಕುಂದನಾ** = ಮೋಕ್ಷಪ್ರದನಾದ ಶ್ರೀಹರಿ. **ತಮನವೈರಿ** = ವೇದಚೋರನಾದ ತಮನೆಂಬ (ಸೋಮಕ) ದೈತ್ಯನನ್ನು ಕೊಂದ.

## ೫೧೬

## (ಜಗನ್ನಾಥವಿಠ್ಠಲಾಂಕಿತ)

## "ಶತ್ರುಘ್ನಸುವಾಲಿ"ಯಿಂದ ಆರಿಸಿದ "ದಶಾವತಾರ" ಸ್ತೋತ್ರ

ವೇದತತಿಗಳ ಕದ್ದೊಯ್ದವನ ಕೊಂದು ಪ್ರಳ-
ಯೋದಧಿಯೊಳಗೆ ಚರಿಸಿ-ಚರಿಸಿ ವೈವಸ್ವತನ
ಕಾಯ್ದ ಮಹಾಮಹಿಮ ದಯವಾಗೋ ॥ ॥೧॥

ಮಂದರಾದ್ರಿಯ ಧರಿಸಿ ಸಿಂಧು ಮಥನವ ಮಾಡಿ
ಬೃಂದಾರಕರಿಗೆ ಅಮೃತವ-ಅಮೃತವನುಣಿಸಿದ
ಇಂದಿರಾರಾಧ್ಯ ದಯವಾಗೋ ॥ ॥೨॥

ಸೋಮಪನ ನುಡಿ ಕೇಳಿ ಹೇಮಾಂಬಕನ ಕೊಂದಿ
ಭೂಮಿಯಾ ನೆಗಹಿದಿ ದಾಡಿಂದ-ದಾಡಿಂದ ನೆಗಹಿದ
ಸ್ವಾಮಿ ಭೂವರಹ ದಯವಾಗೋ ॥ ॥೩॥

ಕಂದ ಕರೆಯಲು ಕಂಬದಿಂದುದಿಸಿ ರಕ್ಷಿಸಿದಿ
ವಂದಿಸಿದ ಸುರರ ಸಲಹೀದಿ-ಸಲಹೀದಿ ನರಸಿಂಹ
ತಂದೆ ನೀನೆಮಗೆ ದಯವಾಗೋ ॥ ॥೪॥

ವೈರೋಚನಿಯ ಭೂಮಿ ಮೂರುಪಾದವ ಬೇಡಿ
ಈರಡಿಯೊಳಗಳೆದೆ ಭೂ ವ್ಯೋಮ-ಭೂ ವ್ಯೋಮವಳೆದೆ ಭಾ
ಗೀರಥಿಯ ಜನಕ ದಯವಾಗೋ ॥ ॥೫॥

ಕುವಲಯಾಧೀಶ್ವರರ ಬವರ ಮುಖದಲಿ ಕೊಂದೆ
ಅವನಿ ಭಾರವ ನೀನಿಳುಹಿದೇ-ಇಳುಹಿದಾ ಸ್ವಾಮಿ ಭಾ-
ರ್ಗವರಾಮ ಎಮಗೆ ದಯವಾಗೋ ॥ ॥೬॥

ಶತಧೃತಿಯ ನುಡಿಗೆ ದಶರಥನ ಗರ್ಭದಿ ಬಂದು
ದಿತಿಜರನು ಸವರಿ ಸುಜನರ-ಸುಜನರನು ಪೊರೆದ ರಘು
ಪತಿ ಎನಗೆ ದಯವಾಗೋ ॥ ॥೭॥

ವಸುದೇವ ದೇವಕೀ ಬಸುರೀಲಿ ಜನಿಸಿದಿ
ವಸುಧೆ ಭಾರವನು ಇಳುಹಿ ಪಾಂಡವರ ಪೋ-
ಷಿಸಿದಿ ಶ್ರೀಕೃಷ್ಣ ದಯವಾಗೋ ॥ ॥೮॥

ಜಿನನೆಂಬ ದನುಜ ಸಜ್ಜನ ಕರ್ಮವ ಮಾಡೇ
ಜನಿಸಿ ಅವರಲ್ಲಿ ದುರ್ಬುದ್ಧಿ-ದುರ್ಬುದ್ಧಿ ಕವಿಸಿದ
ವಿನುತ ಶ್ರೀ ಬುದ್ಧ ದಯವಾಗೋ ॥ ॥೯॥

ಕಲಿವ್ಯಾಪಾರ ವೆಗ್ಗಳವಾಗೆ ತಿಳಿದು ಶಂ-
ಭಲಿ ಎಂಬ ಪುರದಿ ದ್ವಿಜನಲ್ಲಿ-ದ್ವಿಜನಲ್ಲಿ ಜನಿಸುವ
ಕಲಿಮಲವ ಹರಿಸುವ ಕಲ್ಕಿ ದಯವಾಗೋ ॥ ॥೧೦॥

ಧಾರುಣಿಯಲ್ಲಿ ಹತ್ತವತಾರದಲಿ ಸುಜ-
ನರ ರಕ್ಷಿಸಿದೆ ಜಗನ್ನಾಥ-ಜಗನ್ನಾಥವಿಠ್ಠಲ ವು-
ದ್ಧಾರ ನಿನ್ನದೋ ಮಧುವೈರಿ ॥ ॥೧೧॥



**ಅರ್ಥವಿವರಣೆ :—**

**ವೇದತತಿಗಳ** = ಅನಂತಸಂಖ್ಯಾಕವಾದ ವೇದರಾಶಿಗಳನ್ನು. **ಕೊಂದು** = ವೇದಚೋರನಾದ ತಮ (ಸೋಮುಕ)ನೆಂಬ ದೈತ್ಯನನ್ನು ಸಂಹರಿಸಿ. **ವೈವಸ್ವತನ ಕಾಯ್ದು** = ವಿವಸ್ವಂತನೆಂಬ ಸೂರ್ಯನಿಂದ ತ್ವಷ್ಟ್ರುಲ ವಿನ ಪುತ್ರಿಯಾದ ಸಂಜ್ಞಾದೇವಿಯಲ್ಲಿ ಜನಿಸಿದವನು. ಮನ್ವಂತ ರಾಧಿಪತಿ ಪ್ರಸಕ್ತ ವಡೆಯುತ್ತಿರುವ ಮನ್ವಂತರ. ಅವನಿಗೆ ಒಲಿದು ಉದ್ಧರಿಸಿದ ಮತ್ಸ್ಯ

**ಮಥನವ** = ಕ್ಷೀರ ಸಮುದ್ರವನ್ನು ಕಡೆಯುವ ಕಾರ್ಯ. **ಬೃಂದಾರಕರಿಗೆ** = ದೇವತೆಗಳಿಗೆ, **ಇಂದಿರಾರಾಧ್ಯ** = ಲಕ್ಷ್ಮಿಯಿಂದ ಸಂಪೂಜಿತ **ಸೋಮಪ** = ಸೋಮರಸಪಾನಿಯಾದ ಇಂದ್ರ **ಹೇಮಾಂಬಕನ** = ಹಿರಣ್ಯಾಕ್ಷವನ್ನು (ಹೇಮ–ಚಿನ್ನ ಅಂಬಕ–ಕಣ್ಣು–ಅಕ್ಷ). **ದಾಡಿಂದ** = ಕೋರೆದಾಡೆಗಳಿಂದ **ವೈರೋಚನಿಯು** = ವಿರೋಚನನ ಮಗನಾದ ಬಲಿ ಚಕ್ರವರ್ತಿ (ಪ್ರಹ್ಲಾದನ ಪುತ್ರ ವಿರೋಚನ). **ಈರಡಿ** = ಎರಡು ಪಾದ, **ಭೂವ್ಯೋಮ** = ಒಂದಡಿಯಿಂದ ಭೂಮಿ (ಅಧೋ ಲೋಕಗಳು) ಇನ್ನೊಂದಡಿಯಿಂದ ಆಕಾಶ (ಊರ್ಧ್ವ ಲೋಕಗಳು). **ಕುವಲಯಾಧೀಶ್ವರರ** = ಭೂಮಂಡಲಾಧಿಪರಾದ ದುಷ್ಟ ಕ್ಷತ್ರಿಯರನ್ನು (ಕುವಲಯ– ಭೂಮಿ). **ಬವರ ಮುಖದಲ್ಲಿ** = ರಣರಂಗದಲ್ಲಿ. **ಅವನಿ ಭಾರವ** = ಭೂಭಾರವನ್ನು, **ಶತಧೃತಿ** = ಬ್ರಹನ **ದಿತಿಜರು** = ದೈತ್ಯರಾದ ರಾವಣ ಕುಂಭಕರ್ಣಾದಿಗಳನ್ನು, **ವೆಗ್ಗಳವಾಗೆ** = ಹೆಚ್ಚಲು, **ಶಂಫಲಿ** = ತಾಮ್ರ ಪರ್ಣಿಗಳ ತೀರದಲ್ಲಿರುವ ಒಂದು ಗ್ರಾಮ ಅಲ್ಲಿವಿಷ್ಣುಶಯನ ನೆಂಬುವನ ಧರ್ಮಪತ್ನಿ. **ಸುಮತಿ** = ಎಂಬಳಿಗೆ ಶ್ರೀಹರಿಯು ವಿಷ್ಣುಶಯನೆಂಬ ಹೆಸರಿನಿಂದ ಕಲ್ಕಿರೂಪಧರಿಸಿ ಶ್ರೀಲಕ್ಷ್ಮಿಯನ್ನು ಹಯವನ್ನಾಗಿ ಮಾಡಿಕೊಂಡು ಶ್ರೀವಾಯುದೇವನ್ನು ಖಡ್ಗವನ್ನಾಗಿಸಿ, ದುರುಳರನ್ನು (ಯವರನ್ನು ಸಂಹರಿಸಿದನು. **ಮಧುವೈರಿ** = ಮಧು ನಾಮಕ ದೈತ್ಯನಸಂಹಾರಿ,



೫೧೭

(ಪ್ರಾಣೇಶವಿಠಲಾಂಕಿತ)

# ಶ್ರೀಹರಿಯು ದಶಾವತಾರ ಮಾಡಿದ ದಿನಗಳವಿವರ

ರಾಗ–ಉದಯರಾಗ ವಾರ್ಧಿಕಪಟ್ಟದಿ

ವ್ಯಾಸೋಕ್ತಿಯನುಸರಿಸಿ ಹತ್ತು ಅವತಾರವನು
ಶ್ರೀಸನಾಡಿದ ಕ್ಲಪ್ತಿ ದಿನದ ಕ್ಲಪ್ತಿಯಂ ಬರೆವೆ ಸಂ–
ತೋಷದಿಂದ ಕೇಳ್ವು ದೆಲ್ಲರು ಪೊರೆವ ಹರಿಯು ಅಭಿಲಾಷೆ ಪೂರೈಸಿ
ಬಿಡವೇ || ||ಪ||

ಕೃತಯುಗ ಪ್ರಭವ ಮಧು ಶುದ್ಧ ಪ್ರತಿಪದ ಜಲಧಿ
ಸುತವಾರ ರೇವತೀ ವಿಷ್ಕಂಭ ಹಗಲು ಸಂ
ಯುತ ಹನ್ನೆರಡು ಘಳಿಗೆಗವತರಿಸಿ ಶ್ರೀಮತ್ಸ್ಯ ಹತವರಾಡಿ
ತಮನೆಂಬಾ ||

ಚತುರಾಸ್ಯ ವೈವಸ್ವತರಿಗೊಲಿದು ಮೆರೆದನೀ
ಕ್ಷಿತಿಯೊಳಗ ಮತ್ತಾ ಯುಗದಿ ಕೂರ್ಮ ರೂಪದಿಂ
ಚ್ಯುತರಹಿತನವತಾರ ಮಾಡಿ ಮಾಡಿದ ಕಾರ್ಯ
ಮತಿವಂತರಿಗೆ ಪೇಳೂವೇ|| ||೧||

ವಿಭವಾಬ್ಧ ಜ್ಯೇಷ್ಠ ಶುಕ್ಲ ದ್ವಿತೀಯ ಬುಧವಾರ
ಶುಭದ ರೋಹಿಣಿ ಶುಕ್ಲ ಧೃತಿಯೋಗ ದಿವದಲ್ಲಿ
ತ್ರಿಭುವನೇಶ್ವರ ನಾಲ್ಕು ಘಳಿಗೆ ನುದಿಸಿ ಅಮೃತ ಕ್ರತು
ಭುಜರಿಗುಣಿಸಿ ಕರುಣದಿಂ ||

ಅಭಯವಿತ್ತನ್ಯರನು ದಣಿಸಿ, ಧರಿಸಿದನು ಜಲ
ಜಭವಾಂಡ ಮಂದರಾದ್ರಿಯ ಬೆನ್ನಮ್ಯಾಲಿಂಥ
ಸುಭುಜಾಹ್ವನ ಚರಿತೆ ಸ್ಮರಿಸಿ ಕ್ಲೇಶಹ ಮತ್ತೆ
ನಭಗವಹನಾ ಯುಗದಲಿ || ||೨||

ಶುಕ್ಲ ಸಂವತ್ಸರದ ಶುಭಮಾಘಮಾಸದಲಿ
ಶುಕ್ಲ ಪಕ್ಷದ ಸಪ್ತಮಿ ಭಾನುವಾರದಲಿ
ಆಕ್ಲೇಶಪ್ರದ ಅಶ್ವಿನೀ ಸಾಧ್ಯಯೋಗದಲಿ
ಶುಕ್ಲ ಶೋಣಿತ ವಿದೂರ ||

ಶುಕ್ಲಾಂಬರ ಕಿಟಿರೂಪದಿಂದವತರಿಸಿ
ಹಕ್ಲಾಸುರ ಹಿರಣ್ಯಾಕನ ತರಿದು ತ್ವರ ತನ್ನ
ಒಕ್ಲಾದವರ ಪೊರದ ಹಗಲೆಂಟು ಘಳಿಗೆಯೊಳು
ಶುಕ್ಲಾಂಗ ಆ ಯುಗದಲಿ || ||೩||

ಅಂಗಿರಸವೆಂಬ ಸಂವತ್ಸರದ ವೈಶಾಖ
ತಿಂಗಳದಿ ಸಿತ ಪಕ್ಷ ಚತುರ್ದಶೀ ಶನಿವಾರ
ತುಂಗ ಸ್ವಾತಿ ಪರಿಘ ದಿವಾಷ್ಟ ವಿಂಶತಿ ಘಳಿಗೆ
ಗಾಂಗೇಯ ಗರ್ಭನೊರವೂ ||

ಸಂಘಟನವಾಗಲಾ ಸಮಯದೊಳು ಸ್ತಂಭದಿಂ
ಸಂಗರಹಿತ ಹರಿ ಘುಡಿ ಘುಡಿಸುತಲಿ ಉದಿಸಿ ನರ
ಸಿಂಗಾಹ್ವಯದಿ ಹೇಮಕಶ್ಯಪನ ತರಿದು
ತರಳಂಗೆ ಸನ್ಮುದವ ನಿತ್ತನೂ|| ||೪||

ತ್ರೇತಾಯುಗದಲದಿತಿ ದೇವಿ ಭಕುತಿಗೆ ಮೆಚ್ಚಿ
ಧಾತಾಬ್ಧ ಭಾದ್ರಪದ ಸಿತ ಪಕ್ಷ ದ್ವಾದಶೀ
ಖ್ಯಾತಿ ವಿಷ್ಣುಭ ಶುಕ್ರಧೃತಿ ಹತ್ತೈದು ಘಳಿಗೆ
ಪೋತಭಾವದಿ ದಿವದಲಿ||

ತಾಂ ತಾಳಿ ಅವತಾರವಂ ತ್ರಿವಿಕ್ರಮನಾಗಿ
ಭೂತಲಾಗಸವಳೆದು ವೈರೋಚನಿಯ ತುಳಿದು
ಪ್ರೀತಿ ಪಡಿಸುತ ಶಕ್ರನಂ ಸ್ವರ್ಗದಿಯ ಪಡೆದ
ಈತಗೆಣೆಯಾರೊ ಜಗದಿ|| ||೫||

ಆದೆ ಯುಗದಲ್ಲಿ ಪ್ರಮಾಧಿ ಎಂಬ ಸಂವತ್ಸರದಲ್ಲಿ ವೈಶಾಖ
ಶುದ್ಧ ತೃತೀಯ ಶುಕರ್ಮಯೋಗದಲಿ ರೋಹಿಣಿ
ಮಂದ ಹನ್ನೊಂದು ಘಟ ರಾತ್ರಿಯೊದಗುತಿರೆ ಭೂಮಿಗಳಾ॥
ವಧೆಗೆ ವಿಪ್ರರ ವೃಂದವನು ಪೋಷಣೆಯ ಮಾಡುವುದಕ್ಕೆ ಜ
ಮದಗ್ನಿಯಿಂದವತರಿಸಿ ರಾಮ ನಾಮದಲಿ ಪರಶು
ವ ಧರಿಸಿ ಈ ಧಾತ್ರಿಯೊಳು ಬಹು ಮೆರೆದ ಮತ್ತು ಆ ಯುಗದಲೀ॥ ॥೬॥

ತಾರಣೆಂಬಬ್ದ ಮಧುಮಾಸ ಶುಕ್ಲ ನವಮಿಯು
ಆರನೇ ತಾಸು ದಿನದಲಿ ಪುನರ್ವಸು ಚಂದ್ರ
ವಾರ ಶೂಲ ಎಂಬ ಯೋಗದಲಿ ದಶರಥ ನೃಪತಿ
ಹಾರೈಸುರದಕೆ ಒಲಿದೂ ॥
ಶ್ರೀ ರಾಮನಾಮದಿಂದವತರಿಸಿ ದೈತ್ಯ ಪರಿವಾರ
ರಾವಣನ ಸಂಹರಿಸಿ ವಿಭೀಷಣಗೊಲಿದು
ವಾರಿಜೋದ್ಭವ ಮುಖದಿಪೌಕನರಿಗಾನಂದ
ತೋರಿಸಿದ ಸೀತಾಪತಿ॥ ॥೭॥

ಮೂರನೇ ಯುಗ ವಿರೋಧಿ ಶ್ರಾವಣವದಿ ಅರ್ಧ
ರಾತ್ರಿಯೊಳಷ್ಟಮಿ ರೋಹಿಣೀ ವಜ್ರ ಬುಧ
ವಾರದಲಿ ಅಜನ ಚಿನ್ನಹಕೊಟ್ಟ ಕೃಷ್ಣಾವ
ತಾರವನು ತಾಳಿ ಧರೆಗೇ ॥
ಭಾರವಾಗಿದ್ದ ಕಂಸಾದಿ ಖಳವೃಂದ ಸಂ
ಹಾರವಂ ಗೈದು ಪಾಂಡವರ ಪೋಷಿಸಿ ವಿಪ್ರ
ಗೋರಕ್ಷಣೆಯ ಮಾಡಿ ಧರ್ಮವಂ ಸ್ಥಾಪಿಸಿದ
ಶ್ರೀರಮಣ ಮಧ್ವಸದನ ॥ ॥೮॥

ಕಲಿಖರಾಬ್ದಾಷಾಢ ದಶಮಿ ವಿಶಾಖ
ನಳಿನಸಖವಾರ ಶುಕ್ಲಾಹಯೋಗ ದಿವಾಷ್ಟ

ಘಳಿಗೆಯೊಳು ಜಿನನೆಂಬ ದೈತ್ಯವಲ್ಲವತರಿಸಿ
ಬಲು ದುರ್ಮತಿಯು ಪ್ರೇರಿಸಿ॥
ಕಳೆಗೆಡಿಸಿ ಬುದ್ಧವತಾರವೆಂದೆನಿಸಿ ಶಿವ
ಗೊಲಿದು ತ್ರಿಪುರವ ಕೆಡಿಸಿ ಸಜ್ಜನರ ಸಂಶಯುವ
ಕಳೆದ ಕರುಣಾಂಬುಧಿಯು ಮಹಿಮೆಯಿಂ
ತಿಳಿಯುಸದಳ ಮಾ ವಿಧಿಗೆ ಎಂದಿಗೂ ॥ ||೯||

ದನುಜಪತಿಯುಗ ದುರ್ಮುಖ ಮಾರ್ಗಶಿರ
ಶುದ್ಧ ಶನಿವಾರ ದ್ವಿತೀಯ ಪೂರ್ವಾಷಾಢ
ವೃದ್ಧಿ ಮೂರನೇ ಘಳಿಗೆ ದಿವದಿ ಕಲ್ಕ್ಯಾವತಾರದಿಂ
ಮ್ಲೇಂಛರನು ಸದೆದು ಭೂದಿವಿಜರಾ||
ಘನ ವೇದ ಪಡಿಸಿ ವಾಜಿಯನೇರಿ ಮೆರೆದಾಡಿ
ಅನಿಮಿಷರ ಕೈಯ್ಯ ಪೂ ಮಳೆಯಂಗರೆಸಿಕೊಂ
ಡನಘ ಬಲ್ಲವರಿಗೆಲ್ಲೆಲ್ಲೆ ಇರುತಿಹನು
ಪ್ರಣತಜನ ಕಾಮಧೇನೂ || ||೧೦||

ಈ ಪರಿಯುಲಚ್ಯುಯತನ ಅವತಾರ ಚರಿತೆ ಸಂ
ಕ್ಷೇಪದಿಂ ವಿರಚಿಸಿದೆ ಸದ್ಭಕ್ತಿಯಿಂದಿದನು
ಪಾಪಿಗಳಿಗ್ಹೇಳಿದಲೆ ಕಾಲತ್ರಯದಿ ಪಠಿಸಿ
ತಾಪತ್ರಯಗಳ ಕಳೆದು ॥
ಈ ಪೊಡವಿಯೊಳಗೆ ಬಹುಮಾನ ಮಾಡಿಸಿ ತಂದೆ
ಯೋಪಾದಿ ಕ್ಷಣ ಬಿಡದೆ ಸಲಹಿ ಪ್ರಾಂತಕೆ ತನ್ನ
ಆ ಪರಂಧಾಮ ವೈದಿಸುವನತಿಕರುಣಾಳು
ಶ್ರೀಪ್ರಾಣೇಶವಿಠ್ಠಲಾ ॥ ||೧೧||



**ಅರ್ಥ ವಿವರಣೆ:-**

ಈ ಭವ್ಯ ಕೀರ್ತನೆಯಲ್ಲಿ ಶ್ರೀ ಪ್ರಾಣೇಶದಾಸವರ್ಯರು ಶ್ರೀಹರಿಯು ಬ್ರಹ್ಮಾದಿದೇವತೆಗಳ ಪ್ರಾರ್ಥನೆಯನ್ನು ಲಾಲಿಸಿ, ದುಷ್ಟ ಶಿಕ್ಷಣ ಶಿಷ್ಟ ಪರಿಪಾಲನಾರ್ಥ, ಧರ್ಮ ಸಂಸ್ಥಾಪನಾರ್ಥ, ಯುಗಯುಗದಲ್ಲಿ ಎತ್ತಿದ ದಶಾವತಾರಗಳ ವಿವರಗಳನ್ನು ತಿಳಿಸುತ್ತಾರೆ. ಇದೊಂದು ಅಪೂರ್ವ ಕೀರ್ತನೆ.

**ವ್ಯಾಸೋಕ್ತಿಯನು** = ಶ್ರೀವೇದವ್ಯಾಸರು ಭಾಗವತಾದಿ ಪುರಾಣಗಳಲ್ಲಿ ಹೇಳಿರುವಂತೆ. **ಮಧು** = ಮಧು ಮಾಸ, ಅಂದರೆ ವಸಂತಋತುವಿನ ಚೈತ್ರ ಮಾಸ. **ಜಲಧಿಸುತವಾರ** = ಕ್ಷೀರಸಮುದ್ರದಲ್ಲಿ ಉತ್ಪನ್ನವಾದ ಚಂದ್ರ ಅಂದರೆ, ಸೋಮವಾರ. **ಚತುರಾಸ್ಯ** = ಚತುರ್ಮುಖ ಬ್ರಹ್ಮ ದೇವರು **ವೈವಸ್ವತ** = ವೈವಸ್ವತ ನಾಮಕ ಮನು. **ಚ್ಯುತಿರಹಿತ** = ನಿತ್ಯನೂ ಶಾಶ್ವತ ರೂಪಿಯೂ ಆದ ಅಚ್ಯುತನು. **ತ್ರಿಭುವನೇಶ್ವರ** = ಮೂರು ಲೋಕದ ಒಡೆಯ **ಕ್ರತುಭುಜರಿಗೆ** = ಇಂದ್ರಾದಿ ದೇವತಾ ವರ್ಗಕ್ಕೆ **ಅನ್ಯರನು** = ದೇವತೆಗಳಿಗೆ ಅನ್ಯರಾದ ದೈತ್ಯರನ್ನು. **ಸುಭುಜಾಕ್ಷವು** = ಸರ್ವಸಾರಭೋಕ್ತನಾದ ಶ್ರೀಪರಮಾತ್ಮ **ಕ್ಲೇಶಹ** = ದುಃಖನಾಶಕ, **ನಭಗವಹನ** = ಗರುಡ ವಾಹನನು (ನಭ- ಆಕಾಶದಲ್ಲಿ ಗ- ಸಂಚರಿಸುವ ಗರುಡ) **ಅಕ್ಲೇಶಪ್ರದ** = ಸುಖಪ್ರದ. **ಕಿಟಿರೂಪ** = ವರಾಹಾವತಾರ. **ಗಂಗೇಯಗರ್ಭ** = ಹಿರಣ್ಯ ಗರ್ಭ ನಾಮಕರಾದ ಬ್ರಹ್ಮದೇವರು



# ಶ್ರೀ ಹರಿಯ ದಶಾವತಾರಗಳ ವಿವರಗಳ ಪಟ್ಟಿನೋಟ

| ಕ್ರಮ ಸಂಖ್ಯೆ | ಅವತಾರ | ಯುಗ | ಸಂವತ್ಸರ | ಮಾಸ | ತಿಥಿ | ವಾರ / ನಕ್ಷತ್ರ | ಯೋಗ | ಘಳಿಗೆ | ವಿಶೇಷಾಂಶ |
|---|---|---|---|---|---|---|---|---|---|
| ೧ | ಮತ್ಸ್ಯ | ಕೃತ ಯುಗ | ಪ್ರಭವ | ಚೈತ್ರ | ಶುದ್ಧ ಪ್ರತಿಪದ | ಸೋಮ ವಾರ ರೇವತಿ | ವಿಷ್ಕಂಭ | ಹಗಲು ೧೨ ಘಳಿಗೆ | ವೇದಚೋರ ಸೋಮಕನ ಸಂಹಾರ |
| ೨ | ಕೂರ್ಮ | ಕೃತ ಯುಗ | ವಿಭವ | ಜ್ಯೇಷ್ಠ | ಶುದ್ಧ ದ್ವಿತೀಯ | ಬುಧ ವಾರ ರೋಹಿಣಿ | ಧೃತಿ | ಹಗಲು ೪ ಘಳಿಗೆ | ಮಂದರಾದ್ರಿಧರ ಅಮೃತವಿನಿಯೋಗ |
| ೩ | ವರಾಹ | ಕೃತ | ಶುಕ್ಲ | ಮಾಘ | ಶುದ್ಧ ಸಪ್ತಮಿ | ಭಾನು ವಾರ ಅಶ್ವಿನೀ | ಸಾಧ್ಯ | ಹಗಲು ೮ ಘಳಿಗೆ | ಹಿರಣ್ಯಾಕ್ಷನ ಸಂಹರ ಭೂ ಉದ್ಧಾರ. |
| ೪ | ನರಸಿಂಹ (ಸ್ತಂಭಜ) | ಕೃತ ಯುಗ | ಆಂಗೀರಸ | ವೈಶಾಖ | ಶುಕ್ಲ ಚತು ರ್ದಶೀ | ಶನಿವಾರ ಸ್ವಾತಿ | ಪರಿಘ | ದಿವಾ ೨೮ ಘಳಿಗೆ ಸಂಜೆ | ಹಿರಣ್ಯಕಶಿಪುವಿನ ಸಂಹಾರ ಪ್ರಹ್ಲಾದವರದ |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| ೫ | ವಾಮನ (ಅದಿತಿ-ಕಶ್ಯಪರ ಪುತ್ರನಾಗಿ | ತ್ರೇತಾ ಯುಗ | ಧಾತು | ಭಾದ್ರ ಪದ | ಶುಕ್ಲ ದ್ವಾದಶೀ | ಶುಕ್ರವಾರ ಅಭಿಜಿನ್ಮೂರ್ತ | ಧುತೀ | ದಿವಾ ೧೫ ಘಳಿಗೆ | ಬಲಿಯನ್ನು ಮೆಟ್ಟಿದ್ದು ತ್ರಿವಿಕ್ರಮರೂಪ ಗಂಗಾವತರಣ |
| ೬ | ಪರಶುರಾಮ (ಜಮದಗ್ನಿ ರೇಣುಕಾ ಪುತ್ರನಾಗಿ) | ತ್ರೇತಾ ಯುಗ | ಪ್ರಮಾಥಿ | ವೈಶಾಖ | ಶುಕ್ಲ ತೃತೀಯ | ಗುರುವಾರ ರೋಹಿಣಿ | ಸುಕರ್ಮ | ರಾತ್ರಿ ೧೧ ಘಳಿಗೆ | ಭೂಪ್ರದಕ್ಷಿಣೆ ದುಷ್ಟ ಕ್ಷತ್ರಿಯರ ನಾಶ |
| ೭ | ಶ್ರೀರಾಮ (ದಶರಥ-ಕೌಸಲ್ಯ ಪುತ್ರನಾಗಿ) | ತ್ರೇತಾ ಯುಗ | ತಾರಣ | ಚೈತ್ರ | ಶುದ್ಧ ನವಮೀ ಶ್ರೀರಾಮ ನವಮೀ) | ಸೋಮ ವಾರ ಪುನರ್ವಸು | ಶೂಲ | ದಿವಾ ೭ ಘಳಿಗೆ | ರಾವಣ ಕುಂಭಕ-ರ್ಣಾದಿಗಳಸಂಹಾರ ಆಂಜನೇಯವರದ |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| ೮ | ಶ್ರೀಕೃಷ್ಣ ವಸುದೇವ-ದೇವಕೀಯರ ಪುತ್ರನಾಗಿ) | ದ್ವಾಪರ ಯುಗ | ವಿರೋಧಿ | ಶ್ರಾವಣ | ಕೃಷ್ಣ ಅಷ್ಟಮೀ (ಶ್ರೀಕೃಷ್ಣ ಜನ್ಮಾಷ್ಟಮಿ | ಬುಧ ವಾರ ಪುನರ್ವಸು | ಸಿದ್ಧ | ಅರ್ಧ ರಾತ್ರಿ ಯಲ್ಲಿ | ಕಂಸಾದಿಗಳ ಸಂಹಾರ ಪಾರ್ಥಸಾರಥಿ ಗೀತಾಚಾರ್ಯ ವೃಕೋದರವರದ |
| ೯ | ಬುದ್ಧ (ಜಿನನಲ್ಲಿ | ಕಲಿ ಯುಗ | ಖರ | ಆಶಾಢ | ಶುದ್ಧ ದಶಮೀ | ಭಾನುವಾರ ಶಾಕ | ಶುಕ್ಲಾಹ | ದಿವಾ ೨ ಘಳಿಗೆ | ದೈತ್ಯಮೋಹಕರೂಪ ತ್ರಿಪುರಾಸುರರ ನಾಶಕ |
| ೧೦ | (ಕಲ್ಕಿ (ಶಂಭಲೀ ಪುರದಲ್ಲಿ ವಿಷ್ಣು ನಾಮಕನಾಗಿ) | ಕಲಿ ಯುಗ ದ ಅಂತ್ಯ | ದುರ್ಮು ಖಿ | ಮಾರ್ಗ ಶಿರ | ಶುದ್ಧ ದ್ವಿತೀಯ | ಶನಿವಾರ ಪೂರ್ವಾ ಷಾಢ | ವೃದ್ಧಿ | ದಿವಾ ೮ ಘಳಿಗೆ | ದುರುಳ ಯವನರ ಸಂಹಾರ, ಧರ್ಮ ಸಂಸ್ಥಾಪನಾ ಕಾರ್ಯ |

## ೫೧೮

(ಗುರುಜಗನ್ನಾಥವಿಠ್ಠಲಾಂಕಿತ)

ರಾಗ- ಶಂಕರಾಭರಣ ತ್ರಿಪುಟತಾಳ

ಆವ ರೂಪವ ನೋಡಿ ಮರುಳಾದೆ ಇಂಥ
ದೇವವರಗೆ ಹಾರ ನೀಡಿ|| ||ಪ||

ಸೇವಕ ಜನಗಳ ಸೇವೆಗೆ ದೊರೆಯದೆ
ಗೋವರ ಮುನಿ ಮಹಾ ದೈವನಾದವನಿಗೆ|| ||ಅ||

ವೇದ ಚೋರನ ಕೊಂದ ಶೂರಗೆ-ಭಾರ
ವಾದ ಗಿರಿಯ ಪೊತ್ತ ಧೀರಗೆ
ಮೇದಿನಿ ತಂದಿಹ ವೀರಗೆ- ಮಹ
ಆದಿ ದೈತ್ಯನ ಕೊಂದ ಕ್ರೂರಗೆ
ಬೋಧಗಾರ ಶುದ್ಧ ಕುಧರನುದ್ಧಾರಗೆ
ಭೂಧರ ವರಘೋರ ರೂಪನಾದವನಿಗೆ|| ||೧||

ಧರೆಯನಳೆದ ಆಳತೆಗಾರಗೆ- ತಾಯಿ
ಶಿರವ ತರಿದ ಮೋಸಗಾರಗೆ
ಶರಧಿಗಟ್ಟಿದ ಸೇತುಗಾರಗೆ- ಬಹು
ಹರದಿಯರಿಗೆ ವಿಟಗಾರಗೆ
ತಿರುಕ ರೂಪಗೆ ಪರಶುಧರ ವನಚರಗೆ
ಬಕಾಸುರ ವೈರಿಗೆ ಕಂಸಮರ್ದನನಿಗೆ || ||೨||

ಪೀತವಸನ ಬಂಡುಗಾರಗೆ- ಬಹು
ಪಾತಕರೊಳು ಪುಂಡಗಾರಗೆ
ನೀತ ಸತಿವ್ರತ ಹಾರಗೆ- ಖಳ
ಜಾತಿಜನರ ಸಂಹಾರಗೆ

ಮಾತುಗಾರಗೆ ಬಹು ಪ್ರೀತಿಗಾರಗೆ- ನಮ್ಮ
ಖ್ಯಾತ ಗುರುಜಗನ್ನಾಥವಿಠ್ಠಲಗೆ ॥ ॥೩॥



**ಅರ್ಥವಿವರಣೆ.-**

**ಮೇದಿನಿ**= ಭೂಮಿ (ಶ್ರೀ ವಿಷ್ಣುವು ಮಧುಕೈಟಭರನ್ನು ಸಂಹರಿಸಿದ ನಂತರ, ಅವರ ಮೃತ ಶರೀರಗತ ಮೇದಸ್ಸನ್ನು ಭೂಮಿಯ ಮೇಲೆಲ್ಲಾ ಹರಡಿದನು. ಇದರಿಂದ ಭೂಮಿಗೆ "ಮೇದಿನೀ" ಎಂಬ ಹೆಸರು ಬಂದಿತು. **ಆದಿದೈವ**= ಆದಿ ಹಿರಣ್ಯಾಕ್ಷ. ಪ್ರತಿ ನುಡಿಯ ಕೊನೆಯ ಎರಡು ಸಾಲುಗಳು ದಾಸವರ್ಯರು ಆ ಅವತಾರವಿಶೇಷಗಳನ್ನು ಪುನಃ ಸ್ತುತಿಸುತ್ತಾರೆ. **ಬೋಧಗಾರ** =ವೈತಸ್ವತ ಮನುವಿಗೆ ಉಪದೇಶಿಸಿದ ಮತ್ಸ್ಯ. **ಶುದ್ಧ**= ನಿರ್ದೋಷನಾದ ಕೂರ್ಮ **ಕುಧರರೆನು ಧರಿಸಿದ**= ಪರ್ವತವನ್ನು ಎತ್ತಿದ ಕೂರ್ಮ (ಕು-ಭೂಮಿ ಕುಧರ- ಭೂಮಿಯನ್ನು ಎತ್ತಿ ಹಿಡಿದಿರುವ ಪರ್ವತ) **ಭೂಧಾರ**= ಭೂಮಿಯನ್ನು ಮೇಲಕ್ಕೆ ಎತ್ತಿತಂದ ವರಾಹ. **ವರಘೋರರೂಪ**= ನರಸಿಂಹ. **ಅಳತೆಗಾರಗೆ** = ಈರಡಿಯಿಂದ ಜಗತ್ತನ್ನು ಅಳಿದವನಿಗೆ **ಶರಧಿಗಟ್ಟಿದ**= ದಕ್ಷಿಣ ಸಮುದ್ರಕ್ಕೆ

ಸೇತುವೆ ಕಟ್ಟಿದ, **ಸೇತುವೆಗಾರಗೆ**= ಸೇತುಮಾಧವನಾದ ಶ್ರೀರಾಮಚಂದ್ರ **ಹರದಿಯ**= ಪ್ರಾಯದ ಗೋಪಿಕಾಸ್ತ್ರೀಯರು **ಕಿರುಕರೂಪಗೆ**= ಬಲಿಯನ್ನು ಬೇಡಿದ ವಾಮನ. **ಪರಶುಧರ**= ಕೊಡಲಿ ಹಿಡಿದ ಪರಶುರಾಮ **ವಚನರ**= ಅರಣ್ಯದಲ್ಲಿ ತಿರುಗಿದ ಶ್ರೀರಾಮ **ಬಳಸುರ ವೈರಿಗೆ**= ಖರದೂಷಣಾದಿಗಳನ್ನು ಸಂಹರಿಸಿದ ಶ್ರೀರಾಮ ಚಂದ್ರ. **ಕಂಸಮರ್ದನ** = ಕೃಷ್ಣ (ಇಲ್ಲಿಯೂ ಪುನಃ ಸ್ತುತಿ ಇದೆ) **ವೀತ ವಸನ**= ಬಟ್ಟೆಯನ್ನು ಕಳಚಿ, ಬೆತ್ತಲೆ ನಿಂತಿದ್ದ **ಬಂಡಗಾರಗೆ**= ಭಂಢುತನ ದವನಿಗೆ **ಪಾತಕರೊಳು**= ತ್ರಿಪುರರ ಸತಿಯರ ಪಾತಿವ್ರತ್ರ್ಯ ಭಂಗ ಮಾಡಿದ ಬುದ್ಧ (ನೀತಸತಿ ವ್ರತ ಹಾರಗೆ) **ಖಳಜಾತ ಜನರ** = ದುರಳರಾದ ಯವನರೆಂಬ ದೈತ್ಯರನ್ನು ಸಂಹರಿಸಿಧ ಕಲ್ಕಿಗೆ,



## ೫೧೯

### (ಅಂಕಿತ- ಪದುಮನಾಭ)

[ಧಾಟಿ- "ಆಡಲುಪೋಗೋಣ ಬಾರೋ ರಂಗ"-ಎಂಬನಂತೆ]

ನೋಡಲುಪೋಗುವ ಬಾರೆ ಸಖಿ
ರೂಢಿಗೊಡೆಯಾ ಮದನನಯ್ಯನ|| ||ಪ||

ಕಾಲು ಇಲ್ಲದೆ ನಡೆದನಂತೆ- ವೇದಗಳನು ತಂದವನಂತೆ
ಕೂರ್ಮನಾಗಿ ಮೆರೆದನಂತೆ- ಭಾರ ಬೆನ್ನಲಿ ಪೊತ್ತನಂತೆ || ||೧||

ಕೋಲನಾಗಿ ಬಂದನಂತೆ- ಭೂಮಿ ಚೋರನ ಕೊಂದನಂತೆ
ಕಂಬದೊಳು ಕಂಡನಂತೆ-ನಾರಸಿಂಹ ಸ್ವಾಮಿಯಂತೆ || ||೨||

ಚೆಲುವ ರೂಪದ ಬಾಲನಂತೆ ಬಲಿಯು ದಾನವ ಬೇಡಿದನಂತೆ
ಪರಶು ಕೈಯಲ್ಲಿ ಪಿಡಿದನಂತೆ-ಕ್ಷತ್ರಿ ಕುಲವನಳಿದನಂತೆ|| ||೩||

ದಶರಥ ರಾಯನ ಕುವರನಂತೆ ದಶ ಶಿರದವನ ಕೊಲ್ಲಿದನಂತೆ
ಗೋವುಗಳನೆ ಕಾಯ್ದನಂತೆ- ಗೋಪಿ ಜನರ ಪ್ರಿಯನಂತೆ || ||೪||

ಬೆತ್ತಲೆಯಾಗಿ ನಿಂತನಂತೆ- ಮತ್ತೆ ಕುದುರೆ ಏರಿದನಂತೆ
ಭಕ್ತರಿಗಾಗಿ ಪದುಮನಾಭ- ಹತ್ತಾವತಾರ ವೆತ್ತಿದನಂತೆ || ||೫||



**ಅರ್ಥವಿವರಣೆ:-**

**ರೂಢಿಗೊಡೆಯ** = ಭೂರಮಣ (ರೂಢಿ-ಭೂಮಿ) **ಮದನನಯ್ಯ** = ಮನ್ಮಥನ ತಂದೆ **ಕಾಲು ಇಲ್ಲದೆ** = ಮೀನಿಗೆ ಕಾಲುಗಳಿಲ್ಲ (ಕಿವಿರುಗಳ ಚಲನೆ ಯಿಂದ ನೀರಿನಲ್ಲಿ ಸಂಡವುದು. **ಕೋಲನಾಗಿ** = ಹಂದಿಯರೂಪದಲ್ಲಿ

ಭೂಮಿ ಚೋರನ=ಭೂಮಿಯನ್ನು ಚಾಪೆಯಂತೆ ಸುರುಳಿಸುತ್ತಿ ಕದ್ದೊಯ್ದ ಹಿರಣ್ಯಾಕ್ಷ ಪರಶು=ಗಂಡು ಗೊಡಲಿ. ದಶಶಿರದವನ = ಹತ್ತುತಲೆಯುಳ್ಳ ರಾವಣೇಶ್ವರ.



## ೫೨೦

(ಶ್ಯಾಮಸುಂದರಾಂಕಿತ)

ರಾಗ-ದೇಶ ತ್ರಿಪುಟತಾಳ

ಕಂಬುಕಂಧರ ಸತತ ಬಿಡದೆ ರಕ್ಷಿ-
ಸಂಬುಜೋದ್ಭವನ ತಾತ ॥ ॥ಪ॥

ಜಂಭಾರಿ ವೈರಿ ಕುಲಾಂಬುಧಿ ಕುಂಭಜ
ಕುಂಭಿಣಿ ಸುರ ನಿಕರುಂಬ ಪೋಷಕ ದೇವ ॥ ॥ಅ॥

ನಳಿನಾಕ್ಷ ನರಕೇಸರಿ ನಂಬಿದೆ ನಿನ್ನ
ಹಲಧರಾನುಜ ಶೌರೀ ॥
ಇಳಿಜದಾಯಕ ಸಿರಿನಿಲಯ ನಿತ್ಯಾನಂದ
ಎಲರುಣಿ ವರಶಾಯಿ ಕಲುಷ ಸಂಹಾರಕ ॥
ಜಲಜರಿಪುವಿನ ತನಯನನುಜನ
ಕಲಹದೊಳು ಜೈಸಿದನ ತಾತನ
ಕುಲವಿರೋಧಿಯ ಧ್ವಜನ ಜನಕಗೆ
ಒಲಿದು ಬೆಂಬಲನಾದ ಕೇಶವ ॥ ॥೧॥

ನಿಗಮ ರಕ್ಷಕ ಕೂರ್ಮಕಿಟಿ ಮಾನವ
ಮೃಗವಟು ಪರಶುರಾಮ ॥

ಅಗಜೇಶಶರಕಾಲ ನಗಪತಿ ವರದನೆ
ಅಗಜರಾಜನ ಮ.ಗಳಿಗೋಸುಗ
ನಗುತ ಮದದಿಯುನಗಲಿ ಬಂದು
ಜಗವ ಪೊತ್ತನ ಏಗವ ಸಲಹಿದ
ತ್ರಿಗುಣವರ್ಜಿತ ಖಗವರೂಧನೆ ॥ ॥೨॥

ಮಂದರೋದ್ಧರ ವಿಶಾಲಮಹಿಮಾನಾದ
ಸಿಂಧೂರ ಪರಿಪಾಲ ॥
ಕಂದರ್ಪಪಿತ ಶಾಮಸುಂದರನಿಕಲನೆ
ವಂದಿಸುವೆನು ಎನ್ನ ಬಂಧನವ ಬಿಡಿಸಯ್ಯ ॥

ಗಂಧವಾಹನ ವೀಂದ್ರ ಫಣಿ ಶಿಪ
ಸಿಂಧುಜೋದ್ಭವ ಪತಿ ವಿರೋಧಿ ಪು
ರಂದರಾರ್ಯರ ವೃಂದವಂದಿತ
ನಂದಸುತ ಗೋವಿಂದ ಗೋಪತಿ ॥ ॥೩॥



**ಅರ್ಥವಿವರಣೆ** –

**ಕಂಬು ಕಂಧರ** = ಕಡೆದ ಶಂಖದಂತೆ ಕಂಠವುಳ್ಳ (ಕಂಬು-ಶಂಖ ಕಂ-ನೀರಿನಲ್ಲಿ ಉತ್ಪತ್ತಿಯಾದ ಶಂಖ). **ಅಂಬುಜೋದ್ಭವನ ತಾತ** = ಶ್ರೀಹರಿಯ ನಾಭೀಕಮಲೋದ್ಭವನಾದ ಬ್ರಹ್ಮದೇವರ ತಂದೆ. **ಜಂಭಾರಿ ವೈರಿ** = ಇಂದ್ರ ಶತ್ರುಗಳಾದ ದೈತ್ಯರ (ಜಂಭಾರಿ-ಇಂದ್ರ). **ಕುಲಾಂಬುಧಿ** = ವಂಶವೆಂಬ ಸಮುದ್ರಕ್ಕೆ **ಕುಂಭಜ** = ಕುಂಭದಲ್ಲಿ ಉತ್ಪನ್ನರಾದ ಅಗಸ್ತ್ಯರ ಸದೃಶನಾದ ಶ್ರೀಹರಿ. (ಅಗಸ್ತ್ಯರು ಸಮುದ್ರವನ್ನು ಏಕಾಪೋಶನರೂಪವಾಗಿ ಪಾನಮಾಡಿದರು. ಅಂತೆಯೇ ದೈತ್ಯಕುಲವೆಂಬ ಸಮುದ್ರಕ್ಕೆ ಅಗಸ್ತ್ಯ ಸದೃಶವಾಗಿದ್ದಾನೆ ಅಸುರಾರಿಯಾದ ಅಚ್ಯುತನು) **ಕುಂಭಿಣಿ ಸುರ** = ಭೂಸುರ **ನಿಕುರುಂಬ** = ಸಮೂಹವವನ್ನು

**ಪೋಷಕ**= ಸಂಕ್ಷಿಸುವ ಗೋಬ್ರಾಹ್ಮಣ ಪ್ರಿಯನಾದ ಬ್ರಹ್ಮಣ್ಯದೇವ **ನಳಿನಾಕ್ಷ**= ಕಮಲದಳದಂತೆ ವಿಸ್ತಾರವಾದ ಕಣ್ಣುಳ್ಳ **ನರಕೇಸರಿ**= ನರ ಸಿಂಹರೂಪೀ ಶ್ರೀಹರಿ **ಹಲಧರಾನುಜ**= ನೇಗಿಲನ್ನು ಆಯುಧವನ್ನಾಗಿ ಉಳ್ಳ ಬಲರಾಮನ ತಮ್ಮನಾದ ಶ್ರೀಕೃಷ್ಣ. **ಶೌರೀ**= ಶೂರಸೇನ ಮಹಾ ರಾಜನ ಕುಲದಲ್ಲಿ ಅವತರಿಸಿದ ಯದುಕುಲಲಲಾಮನಾದ ಶ್ರೀಕೃಷ್ಣ **ಇಳಿಜ ದಾಯಕ**= ಭೂ ಭೋಗಗಳನ್ನು ಕೊಡುವ **ಸಿರಿನಿಲಯ**= ಲಕ್ಷ್ಮಿ ಯನ್ನು ತನ್ನ ವಕ್ಷದಲ್ಲಿ ಧರಿಸಿರುವನು (ಸಿರಿ ವತ್ಸಾಂಕಿತ) **ನಿತ್ಯಾನಂದ**= ಅಪ್ರಾಕೃತ ಆನಂದಮಯನು, **ಎಲರುಣಿ ಶಾಯಿವರ**= ಶೇಷಶಯನ (ಎಲ ರುಣಿ= ಎಲರ್- ಎಂದರೆ ಗಾಳಿಯನ್ನೇ ಉಣಿ- ಆಹಾರವನ್ನಾಗಿ ಸೇವಿಸುವ ಸರ್ಪ. ಎಲರುಣಿವರ= ಸರ್ಪಶ್ರೇಷ್ಠನಾದ ಶೇಷ ದೇವರು) **ಕಲುಷ ಸಂಹಾರಕ**= ಪಾಪನಿವಾರಕ.

**ನಿಗಮರಕ್ಷಕ** = ವೇದಗಳನ್ನು ರಕ್ಷಿಸಿ ಬ್ರಹ್ಮನಿಗೆ ತಂದಿತ್ತ ಮತ್ಸ್ಯಾವ ತಾರಿ **ಕಿಟಿ**= ವರಾಹರೂಪ. **ಮಾನವ ಮೃಗ**= ನರಸಿಂಹ ರೂಪ (ಮಾನವ_ನರ, ಮೃಗ_ಸಿಂಹ) **ವಟು**= ಬ್ರಹ್ಮಚಾರಿ ವಾಮನ **ಅಗಜೇಶ**= ಪಾರ್ವತಿ ಪತಿ ರುದ್ರ (ಅಗ-ಪರ್ವತ ಅಗಜೆ= ಹಿಮವತ್ಪ ರ್ವತ ರಾಜನ ಕುವರಿ ಪಾರ್ವತೀ) **ಶರಕಾಲ**= ಶಿವ ಧನುಸ್ಸನ್ನು ಮುರಿದ ಶ್ರೀರಾಮಚಂದ್ರ **ಅಗಜ ರಾಜನ ಮಗಳ ಗೋಸುಗ**= ಅಶ್ವಪತಿ ರಾಜನ ಮಗಳಾದ ಕೈಕೇಯಿಯ ಮಾತನ್ನು ಪಾಲಿಸುವುದಕ್ಕಾಗಿ ವನವಾಸಿಯಾದ ಶ್ರೀ ರಾಮಚಂದ್ರ **ಗವವೊತ್ತನ** = ಗೋವರ್ಧನೋದ್ಧಾರಿ ಶ್ರೀಕೃಷ್ಣ **ನಗದಿ ನೆಲಸಿದ**= ವೃಕ್ಷ (ನಗ) ರೂಪದಲ್ಲಿ ನಿಂತ ಬುದ್ಧ (ಅಸುರರನ್ನು ಮೋಹಿಸಿ ವಂಚಿಸಿದ ಬಳಿಕ) **ತ್ರಿಗುಣ ವರ್ಜಿತ**= ಪ್ರಾಕೃತ ಗುಣವಿದೂರ **ಖಗವ ರೂಢನೆ**= ಗರುಡನನ್ನೇ ರಥವನ್ನಾಗಿ ಉಳ್ಳವನೇ (ಖಗ-ಆಕಾಶ ದಲ್ಲಿ ಸಂಚರಿಸುವ ಪಕ್ಷಿಗಳು ವರೂಢ-ತೇರು-ರಥ)

**ಸಿಂಧೂರ ಪರಿಪಾಲಕ** = ಗಜೇಂದ್ರ ರಕ್ಷಕ; **ಕಂದರ್ಪಪಿತ**= ಕಾಮನ ತಂದೆ ಶ್ರೀಕೃಷ್ಣ (ಪ್ರದ್ಯುಮ್ನಪಿತ) **ಬಂಧನ** = ಸಂಸಾರವೆಂಬ

ಕಟ್ಟು. ಗಂಧವಾಹನ= ಶ್ರೀವಾಯು ದೇವರು ವೀಂದ್ರ= ಪಕ್ಷಿಶ್ರೇಷ್ಠರಾದ ಗರುಡ ದೇವರು ಫಣಿಪತಿ= ಸರ್ಪಶ್ರೇಷ್ಠರಾದ ಶೇಷ ದೇವರು ಸಿಂಧುಜೋದ್ಭವೆಪತಿ=ಕ್ಷೀರ ಸಮುದ್ರದಲ್ಲಿ ಉತ್ಪನ್ನಳಾದ ಶ್ರೀಲಕ್ಷ್ಮೀರಮಣನಾದ ಶ್ರೀಹರಿ ವಿರೋಧಿ= ದೈತ್ಯರ ಶತ್ರು ನಂದಸುತ= ನಂದಗೋಪನ ಸಾಕುಮಗ ಶ್ರೀಕೃಷ್ಣ. ಗೋವಿಂದ=ವೇದ ಪ್ರತಿಪಾದ್ಯ. ಗೋಪತಿ= ಗೋಪಾಲ



೫೨೧

(ಶೇಷವಿಠಲಾಂಕಿತ)

**ರಾಗ–ಶಂಕರಾಭರಣ** **ಆದಿತಾಳ**

ಬಾ ಬಾ ರಾಘವ ಬಾ ವೀರ ರಾಘವ ॥ ॥ಪ॥

ಮತ್ಸ್ಯರೂಪವಾಗಿ ಹೆಚ್ಚಿದ ದೈತ್ಯನ
ಇಚ್ಛೆಯಿಂದಲಿ ಕೊಂದ ಅಚ್ಯುತರಾಯನೆ ॥ ॥೧॥

ಕೂರ್ಮರೂಪವಾಗಿ ಅಮರರಿಗೊಲಿದು ನೀ
ಕಾಮಜನಕ ಸುಪ್ರೇಮಾದಿ ಪೊರೆಯಲು ॥ ॥೨॥

ವರಹರೂಪನಾಗಿ ಧರಣಿಚೋರನ
ಶಿರವ ತರಿದು ನೀ ಜಗವ ಪೊರೆದ್ಯಂತೆ ॥ ॥೩॥

ತರಳನ ನುಡಿ ಕೇಳಿ ದುರುಳ ರಕ್ಕಸನ ॥೪॥
ಕರುಳ ತೆಗೆದು ಕೊರಳೊಳಗಿಟ್ಯಂತೆ

ಚೆಲುವತನದಿ ಪೋಗಿ ಬಲಿಯ ದಾನವ ಬೇಡಿ ॥೫॥
ಕಲುಷ ಹರಿಸಿ ಅವನ ಪಾತಾಳಕ್ಕೊತ್ತಿದ್ಯಂತೆ॥

ಕೊಡಲಿಯ ಪಿಡಿಯುತ ದುಗುಡ ರಾಯರುಗಳ ಸೊ
ಗಡು ಮುರಿದು ನೀ ಸಡಗರ ಪಟ್ಟಂತೆ|| ||೬||

ಸೀತೆ ಗೋಸ್ಕರ ಪೋಗಿ ಸೇತುವೆಯನೆ ಕಟ್ಟಿ
ಭೂತ ರಾವಣನ ಖ್ಯಾತಿಯಿಂದಲಿ ಕೊಂದ|| ||೭||

ವಾರಿಜಾಕ್ಷಿಯರ ನೀರಾಟದೊಳು ಪೊಕ್ಕು
ನೀರೆಯರ ಮನ ಅಪಹಾರ ಮಾಡಿದ ಕೃಷ್ಣ|| ||೮||

ಚಿತ್ತಜಪಿತ ನೀನು ಬೆತ್ತಲೆಯೊಳು ಬಂದು
ಉತ್ತಮ ಸ್ತ್ರೀಯರ ವ್ರತಗಳಳಿದ್ಯಂತೆ|| ||೯||

ಸುಂದರ ವಾಜಿಯ ಚಂದಾದಿಂದೇರುತ
ಮಂದಗಮನೆಯರ ನಂದವಳಿದ್ಯಂತೆ|| ||೧೦||

ದೋಷರಹಿತ ನಮ್ಮ ಶೇಷವಿಠ್ಠಲನೆ
ಬ್ಯಾಸರವಿಲ್ಲದೆ ಪೋಷಿಸಿ ಸಲಹಲು|| ||೧೧||

**ಅರ್ಥವಿವರಣೆ:-**

**ಹೆಚ್ಚಿದ ದೈತ್ಯನ** = ಕೊಬ್ಬಿದ ತಮನಾಮಕನಾದ ದೈತನನ್ನು, **ಧರಣಿ ಚೋರನ** = ಭೂಮಿಯನ್ನು ಕರೆದೊಯ್ದ ಹಿರಣ್ಯಾಕ್ಷ, **ತರಳನ** = ಪ್ರಹ್ಲಾದ ಬಾಲಕನ **ದುಗುಡರಾಯರುಗಳ** = ದುರುಳರಾದ ಕ್ಷತ್ರಿಯರನ್ನು **ಸೊಗಡು** = ಸೊಕ್ಕನ್ನು, **ನೀರಾಟದೊಳು** = ಜಲ ಕ್ರೀಡೆಯಲ್ಲಿ, **ನೀರೆಯರ** = ಗೋಪಸ್ತ್ರೀಯರ, **ಚಿತ್ತಜಪಿತ** = ಮನ್ಮಥನ ತಂದೆ, **ಉತ್ತಮಸ್ತ್ರೀಯರ** = ತ್ರಿಪುರಾಸುರರ ಪತಿವ್ರತಾ ಪತ್ನಿಯರು. **ಸುಂದರ ವಾಜಿಯ** = ಮನೋಹರವಾದ ಕುದುರೆಯನ್ನು (ಲಕ್ಷ್ಮಿಯೇ ಕಲ್ಕಿಯವಾಹನವಾದ ಕುದುರೆಯಾದಳು)

೫೨೨

(ಅಂಕಿತನಾಮ- ನಾಮಗಿರಿ ಶ್ರೀನೃಹರಿ)

**ರಾಗ–ಹುಸೇನಿ** **ಏಕತಾಳ**

ನೀರಜಾಕ್ಷೆರೆಲ್ಲ ಬಂದು-ಮಾರಜನಕಗೇ
ಆರತಿ ಎತ್ತಿರೇ ನಾರಿಮಣಿ- ಶ್ರೀ ರುಕ್ಮಿಣಿ ರಮಣಗೆ|| ||ಪ||

ವೇದವ ಕದ್ದ ಖಳನ-ಭೇದಿಸಿದವಗೆ
ಆದರದಿಂದ ಮಂದರವೆಂಬೋ-ಭೂಧರ ತಂದವಗೆ|| ||೧||

ಕುಂಭಿಣಿಯನ್ನು ಬಿಡದೆ-ತಂದ ಕುಂಭಿಣಿ ರಮಣಗೆ
ಕಂಭದಿ ಬಂದು ದನುಜ–ಡಿಂಬಜನ ಕಾಯ್ದ ನೃಹರಿಗೇ|| ||೨||

ಭೂಮಿ ಬೇಡಿದವನಿಗೆ–ದುಷ್ಟ ಭೂಮಿಪ ಹರಗೆ
ಕಾಮಿನಿ ಚೋರನ-ಶಿರವ ತರಿದ ಸ್ವಾಮಿ ರಾಮಗೆ|| ||೩||

ಪಾಂಡುಸುತರ ಸಲಹಿ–ಖಳರ ದಂಡಿಸಿದವಗೆ
ಚಂಡ ತ್ರಿಪುರರ ಹೆಂಡರ ವ್ರತವ- ಖಂಡನೆ ಮಾಳ್ಪಗೆ|| ||೪||

ತುರಗವೇರಿ ದುರುಳ ನೃಪರ ತರಿದ ಕಲ್ಕಿಗೆ
ವರದ ನಾಮಗಿರಿ ಶ್ರೀಹರಿಯ–ಚರಣ ಕಮಲಕೆ|| ||೫||



**ಅರ್ಥವಿವರಣೆ:-**

**ನೀರಜಾಕ್ಷೇರೆಲ್ಲ** – ಕಮಲದಳದಂತೆ ವಿಸ್ತಾರವಾದ ಕಣ್ಣುಳ್ಳ ಸ್ತ್ರೀಮಣಿಯರು, **ಮಾರಜನಕಗೇ** = ಮನ್ಮಥನ ತಂದೆಯಾದ, ಶ್ರೀಹರಿ. **ಖಳನ** = ವೇದಚೋರನಾದ ತಮ್ಮ (ಸೋಮಕ) ನೆಂಬ ದೈತ್ಯ. **ಭೂಧರ** = ಪರ್ವತ (ಮಂದರಗಿರಿ)

**ಕುಂಭಿಣಿ**=ಭೂಮಿ. **ಕುಂಭಿಣಿ ರಮಣಗೆ** = ಭೂರಮಣನಾದ ಶ್ರೀವರಾಹ ದೇವರು. **ದನುಜ ಡಿಂಬಜನ** = ದೈತ್ಯನಾದ ಹಿರಣ್ಯಕಶಪುವಿನ ತನುಜ ಪ್ರಹ್ಲಾದ [ಡಿಂಬ-ದೇಹ ಡಿಂಬಜ-ತನುಜ-(ಪುತ್ರ)] **ದುಷ್ಟ ಭೂಮಿಪ**= ದುರುಳರಾದ ಕ್ಷತ್ರಿಯರು. **ಕಾಮಿನಿ ಚೋರನ** = ಸೀತಾಪಹರಣ ಮಾಡಿದ ಸ್ತ್ರೀಚೋರನಾದ ರಾವಣೇಶ್ವರ. **ಚಂಡ**=ಪರಾಕ್ರಮ ಶಾಲಿಗಳಾದ (ತ್ರಿಪುರಾಸುರರು), **ಖಂಡನೆ**=ಪಾತಿವ್ರತ್ಯ ಭಂಗ ಮಾಡಿದ ಬುದ್ಧ.

❖

## ೫೨೩

(ಅಂಕಿತ-ಪ್ರಸನ್ನ)

**ರಾಗ-ಮೋಹನ ಕಲ್ಯಾಣಿ** **ಆದಿತಾಳ**

ಬಾಲ ಗೋಪಾಲನ ತೋರೆಲೆ ಲಲನೆ
ಲೀಲೆಗಳಲ್ಲಿ ಮುದದಿಂದ॥ ||ಪ||

ಕಾಲ ಕಳೆಯುತಿರೆ ಬಾಲೆಯರು ಕೇಳೆ
ಪೇಳದೆ ಅಗಲಿದನಮ್ಮ ಬಲು
ಲೋಲನಾಗಿಹ ನಿಮ್ಮವನಮ್ಮ ಎಮ್ಮ
ಮೇಲೆ ಅತಿ ಕಠಿಣ ನಮ್ಮ
ಕೀಳು ಮಾಡುವ ನಿವನಮ್ಮ ಕೋಪ
ಜ್ವಾಲೆಯಿಂದುರಿಯುವ ನಮ್ಮ-ಬಲು
ಬಾಲನಾಗಿಹನಿವನಮ್ಮ-ಗುಣ
ಶಾಲಿಮಾತೆಯ ಕೊಂದನಮ್ಮ-ಕಪಿ
ಜಾಲದೊಳತಿ ಪ್ರಿಯನಮ್ಮ-ಪರ

ಬಾಲೆಯೊಳತಿ ಪ್ರಿಯನಮ್ಮ- ಮಾಯಾ
ಜಾಲವ ಬೀಸುವನಮ್ಮ-ಒಲು
ಕೀಳಿನು ಮೇಲು ಮಾಡುವ ಇಂಥ|| ||೧||

ಸಾರಸಾಕ್ಷನ ವಿರಹವನು ಸೈರಿಸಲಾರೆವೇ
ಕರುಣದಲೀ ತೋರೇ ಕೋರುವೆವು ವಿನಯದಲಿ ಅವ
ನೀರೊಳಗಡಗಿದನೇನೇ-ದೊಡ್ಡ
ಮೇರು ಬುಡದಲಿಹನೇನ-ಅವ
ಚಾರು ಸೊಕರನಾಗಿಹನೆ-ಬಲು
ಭಾರಿ ಕಂಭದಲಿಹನೇನೆ-ವೇಷ
ಧಾರಿ ಬ್ರಹ್ಮಚಾರಿಯೇನೇ-ಕ್ಷಿತಿ
ಪಾರಿಯೆನಿಸಿ ತಿರುಗುವವನೇ-ಅವ
ಸೇರಿಹನೇ ಹನುಮನನು-ಅಯ್ಯೋ
ಜಾರ ಚೋರನಿಪನಮ್ಮ-ಮಾನ
ಮಿಾರಿ ಬೆತ್ತಲೆ ನಿಂತಿಹನೇ-ವಾಜಿ
ಏರುತ ಓಡುತಲಿಹನೇ-ಇಂಥ|| ||೨||

ವೇಣು ವಿನೋದದಿ ಕುಣಿಯುತ್ತಲಿ
ಕಾಣುವುದೆಂತು ಪ್ರಸನ್ನ ಮಾಧವನ
ಜಾಣೆ ಜಾಣೆಯರಲ್ಲದ ಎಮಗೆ ದಿವ್ಯ
ಮಿಾನ ರೂಪವ ತಾಳಿದನ-ಬಹು
ಪೀನ ಶರೀರ ಕಮಠನ-ಧರೆ
ಯಾನನದಲ್ಲಿ ಪೊತ್ತಿನ-ದುಷ್ಟ
ದಾನವನನು ಸಿಗಿದವನ-ಭೂಮಿ
ದಾನವ ಯಾಚಿಸಿದವನ-ಭೃಗು
ಮೌನಿಯೊಳವತರಿಸಿದನ-ಕಡು

ಕಾನನದೊಳು ತಿರುಗಿದನ-ಸವಿ
ವೇಣುಗಾನವ ಮಾಡುವನ-ಬಹು
ಮಾನಿನಿವ್ರತವಳಿದವನ-ಪ್ರಸ
ನ್ನಾನನ ತುರಗವಾಹನ-ಇಂಧ॥ ॥೩॥

**ಅರ್ಥವಿವರಣೆ:-**

ಒಮ್ಮೆ ಗೋಕುಲದಲ್ಲಿ ಶ್ರೀ ಕೃಷ್ಣನು ಗೋಪಿಕಾಸ್ತ್ರೀಯರ ವೃಂದ ದವರೊಡನೆ ವಿಹರಿಸುತ್ತಿರುವಾಗ ಅವರ ಭಕ್ತಿಯನ್ನು ಪರೀಕ್ಷಿಸುವ ಸಲು ವಾಗಿ ಹರಾತ್ಮನೆ ಮಾಯವಾದನು. ಶ್ರೀಕೃಷ್ಣನ ವಿರಹವ್ಯಥೆಯನ್ನು ತಾಳ ಲಾರದೇ ಗೋಪಿಯರು ಅವನ ಗುಣಗಾನದ. ದಶಾವತಾರ ಸುತ್ತಿ ರೂಪ ದಲ್ಲಿ ಮಾಡಿದ ಪ್ರಸಂಗವನ್ನು, ಶ್ರೀಮದ್ವ್ಯಾಸರಾಜ ಮಠಾಧೀಶರಾಗಿದ್ದ ಶ್ರೀ ಪ್ರಸನ್ನತೀರ್ಥ ಶ್ರೀ ಪಾದಂಗಳವರು ಮನೋಹರವಾದ ಶೈಲಿಯಲ್ಲಿ ಸ್ತುತಿಸಿದ್ದಾರೆ.

**ಲೋಲನಾಗಿಹ**= ಮತ್ಸ್ಯನಾಗಿ ಜಲವಿಹಾರ ಮಾಡುತ್ತಿರುವ. **ಅತಿ ಕಠಿಣನಮ್ಮ**= ಗಟ್ಟಿಯಾದ ಚಿಪ್ಪುಳ್ಳ ಆಮೆ (ಕೂರ್ಮಾವತಾರ) **ಕೀಳು ಮಾಡುವ**= ಸೂಕರ ಜನ್ಮ ನೀಚಯೋನಿ. **ಕೋಪಜ್ವಾಲೆ** = ಕ್ರೋಧ ದಿಂದ ಉರಿಯನ್ನು ಉಗುಳುತಾ ಆವಿರ್ಭಸಿದ ನರಸಿಂಹರೂಪ. **ಬಲುಬಾಲ ಮಾಣವಕ** (ಬಾಲವಟು ರೂಪ) **ಮಾತೆಯ**= ತನ್ನ ತಾಯಿ ರೇಣುಕಾದೇವಿ ಯನ್ನು ಕೊಡಲಿಯಿಂದ ಕತ್ತರಿಸಿದ. **ಕಪಿಜಾಲದೊಳು**= ಕಪಿಗಳ ಸಮೂಹ ದಲ್ಲಿ, **ಪರಬಾಲೆಯೊಳು** = ಗೋಪಿಕಾ ಸ್ತ್ರೀಯರಪ್ರೀತಿ ವಿಷಯನು. **ಮಾಯಾಜಾಲವ** = ದೈತ್ಯರ ಮೋಹನಾರ್ಥವಾಗಿ ಧರಿಸಿದ ಬುದ್ಧ ರೂಪ. **ಬಲುಕೀಳನು**= ಕಲಿಯುಗದ ಅಂತ್ಯದಲ್ಲಿ ವರ್ಣಸಾಂಕರ್ಯದಿಂದ ಉಚ್ಚನೀಚ ಭಾವವೇ ಹೋಯಿತು. ಆಗ ಧರ್ಮಸಂಸ್ಥಾಪನೆಗೋಸುಗ ಕಲ್ಕ್ಯವತಾರ,

**ಚಾರು ಸೂಕರ** = ಸುಂದರವಾದ ವರಾಹ ರೂಪ. **ಭಾರಿಕಂಭ ದಲಿಹ** = ಸಭಾಮಂದಿರದಲ್ಲಿದ್ದ ಬೃಹತ್ ಸ್ತಂಭ. **ವೇಷಧಾರಿ** = ವಟು ವೇಷಧಾರಿ ವಾಮನನು. **ಕ್ಷಿತಿಪಾರಿ** = ದುರುಳ ಕ್ಷತ್ರಿಯರ ಶತ್ರು (ಕ್ಷಿತಿಪ +ಅರಿ). **ವಾಜಿ ನಿರುತ** = ತುರಗವಾಹನವಾದ ಕಲ್ಕಿ.

**ವೇಣುವಿನೋದದಿ** = ಕೊಳಲನ್ನೂದುತ್ತಾ ಗೋಪಿಕಾಸ್ತ್ರೀಯರನ್ನೆಲ್ಲಾ ಸಂತೋಷಗೊಳಿಸಿದ ಶ್ರೀಕೃಷ್ಣ. **ಪೀನ ಶರೀರಕಮಠ** = ಉಬ್ಬಿದ ಶರೀರ ವುಳ್ಳ ಕೂರ್ಮ (ಪೀನ-ಉನ್ನತ-ಉಬ್ಬಿದ). **ಧರೆಯು ಆನನದಲಿ** = ಭೂಮಿ ಯನ್ನು ಕೋರೆದಾಡೆಗಳಿಂದ ಎತ್ತಿ ತಂದ ವರಾಹ (ಆನನ-ಮುಖಗತಕೋರೆ ದಾಡೆಗಳು). **ಭೃಗು ಮೌನಿಯೊಳು** = ಭೃಗು ಕುಲದಲ್ಲಿ ಅವತರಿಸಿದ ಭಾರ್ಗವರಾಮನು. **ಕಡು ಕಾನನದೊಳು** = ನಿಬಿಡವಾದ ಅರಣ್ಯದಲ್ಲಿ ಸಂಚರಿಸಿದ ಶ್ರೀರಾಮಚಂದ್ರ. **ಬಹು ಮಾನಿನಿವ್ರತವಳಿದವನ** = ಪತಿವ್ರತೆ ಯರಾದ ತ್ರಿಪುರಾಸುರರ ಪತ್ನಿಯರನ್ನು ಮೋಹಗೊಳಿಸಿ ವ್ರತಭಂಗಮಾಡಿದ ಬುದ್ಧ. **ಪ್ರಸನ್ನಾನನ** = ಪ್ರಸನ್ನವಾದ ಮುಖವುಳ್ಳ ಶ್ರೀಹರಿ.



## ೫೨೪

## (ಅಂಕಿತ-ಶ್ರೀನರಸಿಂಹ)

ರಾಗ- ಆದಿತಾಳ

ನೀನೇನು ಬಲ್ಲಿ ಮಹಿಮಾ- ನಿರುಪಮ ನಿರ್ಗುಣ ಮೂರುತಿಯ॥ ॥ಪ॥

ಮೀನ ಕಮಠ ಕ್ರೋಢನಾದ ನರಹರಿ ವಾಮನಾ॥ ॥ಅ॥

ತಾಯಿ ಶಿರವ ತರಿದನೊ ಮಲ-ತಾಯಿ ಹಟವ ಪೂರೈಸಿದನೊ<br>ತಾಯಿ ಸಹೋದರನನ್ನು ಮಡುಹಿದ-ಮಾಯಾಮೋಹನನಾ॥ ॥೧॥

ಮೂರುಪುರದ ನಾರಿಯರ ಸ್ಮರ-ನಾರಾಚಕ್ಕೆ ಗುರಿಯ ಮಾಡಿ
ಏರಿ ತುರಗ ಅಸುರನಿಕರ-ಸೂರೆಗೈದನಾ|| ||೨||

ತಾನೇ ಜಗವ ಸೃಜಿಸಿ ವಹಿಸಿ- ಮಾಣದೆ ಸಂಹರಿಸಿ ಪಾಪಾ
ಏನೂ ಅರಿಯದಂತೆ ನಲಿವ ಶ್ರೀನರಸಿಂಹನ ||೩||



**ಅರ್ಥವಿವರಣೆ:**

"ನರಸಿಂಹ"-ಅಂಕಿತವಿರುವ ಈ ಕೀರ್ತನೆಯ ಕರ್ತೃಗಳು ಯಾರೆಂಬುದು ತಿಳಿದಿಲ್ಲ. ನಮ್ಮ ಪೂರ್ವಿಕರ ಪುರಾತನ ವಹಿಗಳಲ್ಲಿ ಲಿಖಿತವಾಗಿದ್ದ ಕಾರಣ ಇಲ್ಲಿ ಸಂಗ್ರಹಿಸಲಾಗಿದೆ. **ನಿರುಪಮ** = ಅಸದೃಶ **ನಿರ್ಗುಣ** = ಪ್ರಾಕೃತ ತ್ರಿಗುಣಗಳಿಂದ ದೂರನು. **ಮೂರುತಿಯಾ** = ಪ್ರತೀಕವನ್ನು. **ಕಮಠ** = ಕೂರ್ಮ, **ಕ್ರೋಢ** = ವರಾಹ, **ಮಲತಾಯಿ ಹಟವ** = ತನ್ನ ಮಲತಾಯಿಯಾದ ಕೈಕೇಯಿಯ ಹಠರೂಪವಾದ ವಚನ ಪಾಲಿಸಲು ವನವಾಸಕೈಕೊಂಡ ಶ್ರೀರಾಮಚಂದ್ರ. **ತಾಯಿ ಸಹೋದರನನ್ನು** = ತನ್ನ ತಾಯಿ ದೇವಕಿಯ ಅಣ್ಣನಾದ ಕಂಸಾಸುರನನ್ನು (ಅಂದರೆ ತನ್ನ ಸೋದರಮಾವನನ್ನು) ಕೊಂದ ಶ್ರೀಕೃಷ್ಣ.

**ಮೂರು ಪುರದನಾರಿಯರ** = ತ್ರಿರಪುರಾಸುರರ ಹೆಂಡರನ್ನು **ಸ್ಮರನಾರಾಚಕ್ಕೆ** = ಮನ್ಮಥನ ಬಾಣಕ್ಕೆ (ನಾರಾಚ= ಬಾಣ) **ಅಸುರ ನಿಕರ** = ದುರುಳರ ಸಮೂಹ **ಸೂರೆಗೈದನಾ** = ಖಡ್ಗದಿಂದ ಸೀಳಿದ ಕಲ್ಕಿ. **ಮಾಣದೆ** = ತಡೆಯಿಲ್ಲದೆ (ಜಗತ್ತಿನ ಸೃಷ್ಟಿ-ಪಾಲನೆ (ವಹಿಸಿ) ಮತ್ತು ಸಂಹಾರ) **ಪಾಪಾ** = ತಾನೇನೂ ತಿಳಿಯದವನಂತೆ (ಅಗೋಚರನಾಗಿದ್ದು) **ನಲಿವ** = ಜಗದ್ವ್ಯಾಪಾರಗಳನ್ನು ಲೀಲೆಯಿಂದ ನಿರಾಯಾಸವಾಗಿ ಮಾಡುವ ವೈಭವ ಮೂರ್ತಿ.



೫೨೫

(ಅಂಕಿತಭೀಮೇಶಕೃಷ್ಣ)

ರಾಗ-ದೇಶ ತ್ರಿಪುಟತಾಳ

ಅಮ್ಮ ನೀ ಕರೆತಾರೆ ಅರವಿಂದನಯನ
ಒಮ್ಮ್ಯಾದರು ಬಾರ ನಮ್ಮನೆಗೆ
ಬ್ರಹನ ಪಡೆದನಗಮ್ಯ ಮಹಿಮನೆ ತಾ
ಕಾಮ್ಯಾರ್ಥ ಕರೆವ ಶ್ರೀರಮ್ಮೆರಮಣನ ॥ ॥ಪ॥

ಘನ ಉದಕದಿ ನೋಡೆ ಗ್ರಂಥ ಚೋರನ ಕೊಂದು
ವೇದವ ತಂದಜಗಿತ್ತು ಬರುವ್ಹೊನೊ
ಪಯೋಬ್ಧಿಯೊಳು ಸುಧೆ ಸುರಜನರಿಗೆ ನೀಡಿ
ಮೇರು ಮಂದರದಲಡಗಿಕೊಂಡಿಹನೋ ॥ ॥೧॥

ಭೂಮಿ ಬಗೆದು ನೋಡ್ದೇಮ್ಯಾಕ್ಷನಂತಕನಾಗಿ
ಕೋಡಿಂದಲಾ ಧರನೆತ್ತಿ ಬರುವ್ಹೊನೊ
ಉಗುರಿನಿಂದಲಿ ಉರ ಬಗೆದು ಕರುಳನ್ಹಾಕಿ
ಮೃಗರೂಪ ಧರಿಸಿ ಕಂಬದಲಿ ಬರುವ್ಹೊನೊ ॥ ॥೨॥

ಗೊತ್ತನ್ಹೇಳುವೆ ಈ ಜಗತ್ತು ಸಾಲದಲ್ಹೋಗಿ
ಒತ್ತಿ ಬಲಿಯ ಬಾಗಿಲ್ಹತ್ತಿಲಿರುವ್ಹೊನೊ
ಹೈಹಯ ಮೊದಲಾದ ಸರುವ ರಾಜರನೆಲ್ಲ ಗೆಲಿದು
ಕಾಮಧೇನು ಕೊಂಡುಬರುವನೋ ॥ ॥೩॥

ಒಬ್ಬ ಸತಿಯನಾಳಲಾರದೆ ಗರ್ಭಿಣಿಯ
ದಬ್ಬಿ ಕಾನಢಿಗೊಬ್ಬೆಲ್ಲಿರುವ್ಹೊನೊ

ತೋಷ್ಟ ಪುತ್ರಿಯರು ಮೇಲಷ್ಟಭಾರ್ಯರು
ಶತ ಪತ್ನೇರನಾಳದಿನ್ನೆತ್ತ ಪೋಗಿಹನೋ ॥ ॥೪॥

ಬತ್ತಲೆ ತಿರುಗವನಿತ್ತಬರುವನಾಗೆ
ವಸ್ತ್ರವ ಕೊಟ್ಟು ನಮ್ಮತ್ತಿಲೆ ಹರಿಯು
ಖಡ್ಗ ಪಿಡಿದು ಕಲಿಗಳ ಕೊಲ್ಲಲ್ಹೋಗುವ
ಬಿದ್ದು ಪಾದಾರವಿಂದಕ್ಕೆರಗಿ ಭೀಮೇಶಕೃಷ್ಣನ ॥ ॥೫॥



**ಅರ್ಥವಿವರಣೆ:-**

**ಅರವಿಂದನಯನ** = ಕಮಲದಳದಂತೆ ವಿಸ್ತಾರವಾದ ಕಣ್ಣುಳ್ಳವನು. **ಒವಗ್ಯಾದರು** = ಒಂದು ಸಾರಿಯಾದರೂ, **ಅಗಮ್ಯಮಹಿಮನೆ** = ಸಾಕಲ್ಯೇನ ಯಾರು ಅರಿಯದ ಅಪಾರ ಮಹಿಮನು. **ಕಾಮ್ಯಾರ್ಥ** = ಬೇಡಿದ ಅಭಿಲಾಷೆಗಳನ್ನು. **ಕರೆವ** = ನಲಿಸುವ, **ಘನ ಉದಕದಿ** = ಅಪಾರವಾದ ಸಮುದ್ರದ ಜಲಗರ್ಭದಲ್ಲಿ **ಗ್ರಂಥ ಚೋರನ** = ವೇದಗಳನ್ನು ಕದ್ದ ದೈತನನ್ನು **ಪಯೋಬ್ಧಿಯೊಳು** = ಕ್ಷೀರ ಸಮುದ್ರದಲ್ಲಿ **ಹೇಮಾಕ್ಷನಂತಕನಾಗಿ** = ಹಿರಣ್ಯಾಕ್ಷನನ್ನು ಸಂಹರಿಸಿದ ವರಾಹಮೂರ್ತಿ, **ಹೈಹಯ** = ಕಾರ್ತವೀರ್ಯಾರ್ಜುನಾದಿ ಕ್ಷತ್ರಿಯರು. **ಗರ್ಭಿಣಿಯ ಕಾನನದಿ ದಬ್ಬಿ** = ಗರ್ಭವತಿಯಾಗಿದ್ದ ಸೀತೆಯನ್ನು ಲಕ್ಷ್ಮಣನೊಡನೆ ಕಾಡಿಗೆ ಕಳುಹಿಸಿದ ಪ್ರಸಂಗ. **ತೋಷ್ಟಪುತ್ರಿಯರು** = ನರಕಾಸುರನು ಬಂಧನದಲ್ಲಿಟ್ಟಿದ್ದ ೧೬,೦೦೦ ಕನ್ಯೆಯರು. **ಮೇಲಷ್ಟಭಾರ್ಯರು** = ಶ್ರೀಕೃಷ್ಣನ ಅಷ್ಟಮಹಿಷಿಯರು (ರುಕ್ಮಿಣಿ, ಸತ್ಯಭಾಮೆ ಮತ್ತು ಜಾಂಬುವತ್ಯಾದಿ ಷಣ್ಮಹಿಷಿಯರು). **ಶತಪತ್ನೇರ** = ೧೦೦ ಮಂದಿ ಪತ್ನಿಯರು ಅಲ್ಲಿಗೆ ೧೬, ೧೦೮ ಪತ್ನಿಯರ ನಾಳಿದ ಶ್ರೀಕೃಷ್ಣ.



೫೨೭

(ಉರಗಾದ್ರಿವಾಸವಿಠ್ಠಲಾಂಕಿತ)

ಎಲ್ಲಿಗ್ಹೋಗುವೆಯೋ ಎಲೋ ಹರಿಯೋ-ಮನದಲ್ಲಿ
ನಿಲ್ಲೊಂದ್ಹರಗಳಿಗೆ ಹೇ ಧೊರೆಯೋ ॥ ॥ಪ॥

ವಾರಿವಿಹಾರದಿ ನಿಂದು-ಗಿರಿಭಾರ ತಳೆದುನೀಡಗಿದೆ ಅಂದೂ
ಧಾರುಣಿಯನೆ ಬಗೆದು ನಿಂದೂ-ಧೀರ ಪೋರನ ಮಾತಿಗೆ ಸಲಹಬೇಕೆಂದೂ ॥ ॥೧॥

ವರ ವಟುವೇಷವ ಧರಿಸೀ-ದುಷ್ಟ ನರಪರ ಕುಲಗೇಡಿಗನೆಂದಿನಿಸೀ
ನಾರಿಯನಟವಿಯೊಳರಸೀ-ಪುರರಿನಾರಿಯರ ಮನವನ್ನೇ ಅಪಹರಿಸೀ ॥ ॥೨॥

ವರವಸನವ ಬಿಟ್ಟು ನಿಂದೂ-ಘೋರ ತುರಗವನ್ನೇರಿ ಓಡಿದೆಯೊ ಮುಂದೂ
ಧೊರೆ ಶ್ರೀವೆಂಕಟೇಶನೆಂದೂ-ನೀನೆ ಉರಗಾದ್ರಿವಾಸವಿಠ್ಠಲ ದಯಾಸಿಂಧೂ ॥ ॥೩॥

**ಅರ್ಥವಿವರಣೆ.-**

**ಮನದಲ್ಲಿ ನಿಲ್ಲೊಂದರಘಳಿಗೇ** = ನನ್ನ ಮನಮಂದಿರದಲ್ಲಿ ಬಂದು ನೆಲೆಸು **ವಾರಿವಿಹಾರದಿ** = ಸಮುದ್ರಜಲಗರ್ಭದಲ್ಲಿ ವಿಹರಿಸುವ ಮತ್ಸ್ಯ. **ಗಿರಿಭಾರತಳೆದು** = ಮಂದರಗಿರಿಧರನಾದ ಕೂರ್ಮ. **ಧೀರ ಪೋರನ ಮಾತಿಗೆ** = ಭಾಗವತೋತ್ತಮನಾದ ಬಾಲ ಪ್ರಹ್ಲಾದನ ವಚನವನ್ನು ಸತ್ಯಗೊಳಿಸಲು. **(ಸತ್ಯಂ ವಿಧಾತುಂ ನಿಜಭೃತ್ಯ ಭಾಷಿತಂ) ವರವಟು ವೇಷವ** = ಮನೋಹರವಾದ ಬ್ರಹ್ಮಚಾರಿ ರೂಪಿಯಾದ ಶ್ರೀವಾಮನ. **ಕುಲಗೇಡಿಗ** = ದುಷ್ಟ ಕ್ಷತ್ರಿಯರ ಸಂಹಾರಕ ಭಾರ್ಗವರಾಮ, **ನಾರಿ**

ಯನು ಅಡವಿಯೊಳು ಅರಸೀ = ಸೀತೆಯನ್ನು ಕಾಡಿನಲ್ಲಿ ಹುಡುಕಿದ ಶ್ರೀರಾಮ. ಪುರನಾರಿಯರ = ಗೋಕುಲದ ಗೋಪಿಕಾಸ್ತ್ರೀಯರ ಮಾನವನ್ನು ಅಪಹರಿಸಿದ ಶ್ರೀಕೃಷ್ಣ. ವರವಸನವ ಬಿಟ್ಟು = ಬೆತ್ತಲೆಯಾಗಿ ನಿಂದ ಬುದ್ಧ. ತುರಗವನೇರಿ = ಅಶ್ವಾರೋಹಿಯಾದ ಕಲ್ಕಿ.



## ೫೨೭

### (ತಂದೆವೆಂಕಟೇಶವಿಠಲಾಂಕಿತ)

### (ಮಂಗಳಪದ)

ರಾಗ–ಖಮಾಚು ಆದಿತಾಳ

ಮಂಗಳ ಮಾವನಿತಾವರಗೇ – ಜಯ
ಮಂಗಳ ಮನ್ಮಥಕೋಟಿ ಸುಂದರಗೇ ॥ ॥ಪ॥

ಪಟುತರ ಪಾಠೀಣ ಕಮಠನಿಗೆ ಜಗ
ತ್ಕಟಹ ಉದ್ಧರಿಸಿದ ಕೋಲನಿಗೆ
ಪುಟನೆಗೆದರಿಯು ಉದ್ಧಟತನವಳಿದ
ಹಾಟಕಕಶ್ಯಪಹರ ವಟುವಾಮನನಿಗೇ ॥ ॥೧॥

ಕಲಿಮದ ಕಲಿತನೃಪಾಲಕಾಲನಿಗೆ
ವಿಲಸಿತಾಂಬರ ಮಣಿ ಕುಲಜನಿಗೆ
ಮಲೆತ ಮಾವನ ಕೊಂದೊಲಿಸಿ ಬಾಲೆಯರ
ಕೊಲಿಸಿದ ತ್ರಿಪುರರ ಕಲಿವಪುರಹರಗೇ ॥ ॥೨॥

ಧರೆಯೊಳು ಉರಗಾದ್ರಿವಾಸನಿಗೆ ಮ
ದ್ಗುರು ಹೃದಯಾಬ್ಜಾಧಿಷ್ಠಾತನಿಗೆ

ಮಾರುತಾಂತರ್ಗತ ತಂದೆವೆಂಕಟೇಶವಿಠಲಗೆ
ಸರುಭ ಕಾಮದ ಸರ್ವ ಸರ್ವೋತ್ತಮಗೆ ॥ ||೩||



**ಅರ್ಥವಿವರಣೆ:-**

**ಮಂಗಳಂ**=ಸಕಲ ವಿಘ್ನ ಪರಿಹಾರಕನಾದ ಆ ಸರ್ವೇಶನು ನಮಗೆ ಮಂಗಳವನ್ನುಂಟುಮಾಡಲಿ, **ಮಾವನಿತಾವರಗೇ**=ಪತ್ನಿಯಾದ ಲಕ್ಷ್ಮಿಗಿಂತ ಉತ್ತಮೋತ್ತಮನು (ಮಾ-ರಮಾ ವನಿತಾ-ಪತ್ನೀ, ವರ-ಉತ್ತಮೋತ್ತಮ-ಶ್ರೇಷ್ಠ) **ಪಟುತರ**=ನಿಂತಲ್ಲಿ ನಿಲ್ಲದೆ, ಸದಾ ಜಲದಲ್ಲಿ ವಿಹರಿಸುತ್ತಿರುವ, **ಪಾಠೀಣ**=ಮತ್ಸ್ಯಮೂರ್ತಿ, **ಕಮಠನಿಗೆ** = ಕೂರ್ಮನಿಗೆ, **ಜಗತ್ಕಟಿಹ**=ಸಮಗ್ರ ಭೂಮಿಯನ್ನು, **ಕೋಲನಿಗೆ** = ಮೇಲಕ್ಕೆ ಎತ್ತಿ ತಂದ ವರಹನಿಗೆ, **ಪುಟನೆಗೆದು**=ಕಂಭದಿಂದ ಸಿಗಿದು ಬಂದು, ಒಂದೇ ನೆಗೆತಕ್ಕೆ ಹಾರಿ. **ಅರಿಯ**—ಶತ್ರುವಾದ ಹಿರಣ್ಯಕಶಿಪುವಿನ, **ಉದ್ಧಟತನ ವಳಿದ**=ನಾನೇ ಈಶನೆಂದು ಬೀಗುತ್ತಿದ್ದ ಅವನ ಔದ್ಧತ್ಯವನ್ನು ಭಂಗಗೊಳಿಸಿ **ಹಾಟಕಕಶ್ಯಪಹರ**=ಹಿರಣ್ಯಕಶಿಪುವಿನ ಸಂಹಾರಕ ನರಸಿಂಹ (ಹಾಟಕ—ಚಿನ್ನ—ಹಿರಣ್ಯ). **ವಟು** = ಬ್ರಹ್ಮಚಾರಿಯಾದ ವಾಮನ. **ಕಲಿಮದ ಕಲಿತ**=ಕಲಿಯ ಆವೇಶದಿಂದ ಮದೋನ್ಮತ್ತರಾಗಿದ್ದ, **ನೃಪಾಲ ಕಾಲನಿಗೆ**=ದುಷ್ಟ ಕ್ಷತ್ರಿಯರ ಸಮೂಹಕ್ಕೆ ಮೃತ್ಯುಸ್ವರೂಪನಾದ ಪರಶುರಾಮ. **ವಿಲಸಿತಾಂಬರಮಣಿ ಕುಲಜನಿಗೆ**=ಸೂರ್ಯಕುಲಸಂಜಾತನಾದ ಶ್ರೀರಾಮಚಂದ್ರ, (ವಿಲಸಿತ — ಉದಯಿಸುತ್ತಿರುವ, ಅಂಬರಮಣಿ — ಆಕಾಶಕ್ಕೆ ಭೂಷಣಪ್ರಾಯನಾದ ಸೂರ್ಯ, ಕುಲಜನಿಗೆ—ಸೂರ್ಯವಂಶೋದ್ಭವ) **ಮಲೆತ** = ದರ್ಪದಿಂದ ಕೊಬ್ಬಿದ್ದ. **ಮಾವನ** =ಸೋದರಮಾವನಾದ ಕಂಸನನ್ನು, **ಬಾಲೆಯರ ಒಲಿಸಿ** = ತ್ರಿಪುರಾಸುರರ ಮಡದಿಯರನ್ನು ಮೋಹಗೊಳಿಸಿ, **ತ್ರಿಪುರರ ಕೊಲಿಸಿದ**=ಅವರ ಪಾತಿವ್ರತ್ಯ ಭಂಗದ್ವಾರಾ ತ್ರಿಪುರಾಸುರರನ್ನು ಸಂಹರಿಸಿ, **ಕಲಿವಪುರಹಗೆ** = ಕಲಿಯ ದೇಹವಿದಾ

ರಣಗೇ. **ಉರಗಾದ್ರಿವಾಸನಿಗೆ** = ಶೇಷಾಚಲಮಂದಿರನಾದ ಶ್ರೀನಿವಾಸನಿಗೆ **ಹೃದಯಾಬ್ಜ ಅಧಿಷ್ಠಿತನಿಗೆ** = ನಮ್ಮ ಗುರುಗಳ ಹೃತ್ಪದ್ಮದಲ್ಲಿ ನಿವಾಸಿಯಾಗಿರುವ, **ಮರುತಾಂತರ್ಗತ** = ವಾಯ್ವಂತರ್ಗತ (ಇಲ್ಲಿ ಅಸ್ಮದ್ಗುರುವಂತರ್ಗತ. ವಾಯ್ವಂತರ್ಗತ ಉಭಯ ಗುರುಗೋಳಕಗಳ ಚಿಂತನೆ), **ಸರುವ ಕಾಮದ** = ಸಜ್ಜನರ ಸಕಲಾಭೀಷ್ಟದಾಯಕನಿಗೆ, **ಸರ್ವ** = ಎಲ್ಲವೂ ಅವನೇ ಆದ (ಏಕಮೇವ ಅದ್ವಿತೀಯ) **ಸರ್ವೋತ್ತಮನಿಗೇ** = ಸರ್ವಶ್ರೇಷ್ಠನಾದ ಶ್ರೀಹರಿಗೆ.



## ೫೨೮

### (ಶ್ರೀಕೃಷ್ಣನಿರ್ಮಲಾಂಕಿತ)

ಹಂಸವಾಹನ ಪಿತನೆ- ಹಂಸಡಿಂಭಿಕ ವೈರಿ  
ಕಂಸಮರ್ದನ ಶೌರಿ—ಬಾ ಬಾ ॥ ॥ಪ॥

ಸಾಸಿರನಾಮದೊಡೆಯ ವಾಸವವಿನುತನೆ  
ಲೇಸಾಗಿ ಸ್ತುತಿಸುವೆ ಬಾ ಬಾ ॥ ॥ಅ॥

ವೇದವ ಕದ್ದಂಥ ಉದ್ದಂಡ ದೈತ್ಯನ  
ಮರ್ದಿಸಿ ವೇದವ ತಂದು ವೇಧನ ಸಲಹಿದ  
ಮುದ್ದು ಮೂರುತಿ ಮತ್ಸ್ಯನೆ ಬಾ ಬಾ ॥ ॥೧॥

ಸಿಂಧುವಿನೊಳಗಿದ್ದ ಮಂದರಗಿರಿಯನ್ನು  
ಒಂದು ಬೆನ್ನಲ್ಲಿ ಪೊತ್ತು  
ತಂದು ಪೀಯೂಷವ ಛಂದದಿ ಸಲಹಿದ **ಕೂರ್ಮಸ್ವರೂಪನೆ**  
ಬಾ ಬಾ ॥ ॥೨॥

ಕನಕನೇತ್ರನ ಕೊಂದು ಕಾಂತಿಯು ಹಿಡಿದೆತ್ತಿ
ಕನಕಗರ್ಭನಿಗೊಲಿದ ಕಾರುಣ್ಯನಿಧಿ ಚಂದ್ರ
ಕನಕವರ್ಣದ ಕ್ರೋಢ ಯಜ್ಞ ಸ್ವರೂಪನೆ ಬಾ ಬಾ ॥ ||೩||

ತಳರಸ ಮೊರೆ ಕೇಳಿ ದುರುಳನ ಕರುಳ ಬಗೆದು
ಕೊರಳೊಳು ಕರುಳ ಧರಿಸಿ ಸುರರನ್ನು ಪೊರೆದಂಥ
ಸರ್ವವ್ಯಾಪಿ ಕರುಣಿ ನಾರಸಿಂಹಮೂರ್ತಿ ಬಾ ಬಾ ॥ ||೪||

ಅನುಜನ ಪೊರೆಯಲು ತನುವನು ಮರೆಸಿಕೊಂಡು
ದಾನವ ಬೇಡುತ ಬಲಿಯನು ತುಳಿದು ಪೊರೆದ
ಘನ್ನ ಮಹಿಮ ವಟು ವಾಮನ ರೂಪಿಯೆ ಬಾ ಬಾ || ||೫||

ಕೊಡಲಿಯ ಪಿಡಿಯುತ ಒಡೆಯರ ತರಿದು
ಕಡಿದು ಮಾತೆಯ ಪಿತನ ನುಡಿಯನು ಸಲಿಸಿದ
ಚಂಡವಿಕ್ರಮ ಮಹಿಮ ಭಾರ್ಗವ ಮೂರುತಿ ಬಾ ಬಾ ॥ ||೬||

ಕಾಂತೆಯ ನೆಪದಿಂದ ಕದನವ ಹೂಡಿಕೊಂಡು
ಅಂತಕ ಸದನಕ್ಕೆ ಅರಿಗಳ ತಳ್ಳುತ
ಶಾಂತತೆ ಬೀರಿ ಪೊರೆದ ದಶರಥ ರಾಮನೆ ಬಾ ಬಾ || ||೭||

ಚೋರತನದಿ ಬಲು ಬೆಣ್ಣೆಯ ಮೆಲ್ಲುತ
ಜಾರತನದಿ ಋಷಿ ಸ್ತ್ರೀಯರಿಗೊಲಿದಂಥ
ಮಾರಜನಕ ಶ್ರೀ ರುಕ್ಮಿಣಿಪತಿ ಕೃಷ್ಣ ಬಾ ಬಾ ॥ ||೮||

ವೇದಗೋಚರ ವಿಶ್ವ ವೇದ ಬಾಹ್ಯರಿಗೆಲ್ಲ
ವೇದ ವಿರುದ್ಧವಾದ ವಾದಗಳ ತೋರಿ
ನಿಂದು ಬತ್ತಲೆ ಮೆರೆದ ಬೌದ್ಧ ಸ್ವರೂಪನೆ ಬಾ ಬಾ ॥ ||೯||

ಕಲಿಬಾಧೆ ಹೆಚ್ಚಾಗೆ ಕಲಿಯುಗ ಕೊನೆಯಲ್ಲಿ
ಮಲಿಲಾರ ಮರ್ದಿಸಿ ಉಳಿಸಲು ಧರ್ಮವ
ಚಲುವ ರಾಹುತನಾದ ಕಲ್ಕಿಸ್ವರೂಪನೆ ಬಾ ಬಾ ॥ ॥೧೦॥

ಸತ್ಯಸಂಕಲ್ಪನೆ ನಿತ್ಯಸ್ವರೂಪನೆ
ಉತ್ತಮ ನೀನೆಂದು ಒತ್ತೊತ್ತಿ ಪೊಗಳುವ
ಭೃತ್ಯನು ನಿನ್ನವನು ಕಣ್ಣೆತ್ತಿ ನೋಡುತ ಬಾ ಬಾ ॥ ॥೧೧॥

ಏಕರೂಪನೆ ನಿನ್ನನೇಕ ರೂಪಂಗಳ
ಸಾಕಲ್ಯದಿಂದಲಿ ಶ್ರೀಕಾಂತೆ ಅರಿಯಳು
ಕಾಕು ಮತಿಯು ನಾನು ಎಂತು ವರ್ಣಿಸಲಯ್ಯ ಬಾ ಬಾ ॥೧೨॥

ಪೂರ್ಣ ಸ್ವರೂಪನೆ ಪೂರ್ಣ ಗುಣಾಬ್ಧಿಯೆ
ಪೂರ್ಣಾನಂದನೆ ಪೂರ್ಣ ಸ್ವತಂತ್ರನೆ
ಪೂರ್ಣಬೋಧರ ಪೂರ್ಣ ಕರುಣಾವ ಬೀರಿ ಬಾ ಬಾ ॥ ॥೧೩॥

ಮಾತು ಮಾತಿಗೆ ನಿನ್ನ ನಾಮದ ಸ್ಮರಣೆಯು
ಇತ್ತು ಪಾಲಿಸು ಎನ್ನ ಮೃತ್ಯೋರ್ಮೃತ್ಯುವೇ ದೇವ
ಭಕ್ತಿ ಭಾಗ್ಯವನಿತ್ತು ಮನ್ನಿಸಿ ಸಲಹುತ ಬಾ ಬಾ ॥ ॥೧೪॥

ದೋಷ ದೂರನೆ ನಿನ್ನ ದಾಸನು ನಾನಯ್ಯ
ವಾಸವ ಜಯಮುನಿ ವಾತನೊಳ್ವಾಸಿವ
ಈಶ ಸಿರಿ ಕೃಷ್ಣವಿಠ್ಠಲ ರಾಯನೆ ಬೇಗ ಬಾ ಬಾ ಬಾ ॥ ॥೧೫॥



೫೨೯

(ಗುರುಗೋವಿಂದವಿಠ್ಠಲಾಂಕಿತ)

ರಾಗ-ಕಾಂಬೋದಿ ಝಂಪೆತಾಳ

ಏನೆಂದು ಕೊಂಡಾಡಿ ಸ್ತುತಿಸಲೋ ನಿನ್ನಾ ॥ ||ಪ||

ದಾನವಾಂತಕ ಕೃಷ್ಣ ಆನಂದ ಗುಣಪೂರ್ಣ || ||ಅ||

ಮತ್ಸರೂಪಿಯೆ ನಿನ್ನ ಉತ್ಸಹದಿ ಕರೆಯಲಾ
ಕುತ್ಸಿತನ ಸೊಲ್ಲ ನೀನೆತ್ತ ಕೇಳುವಿಯೋ
ಮತ್ಸ್ಯಕೇತನ ಜನಕ ಮತ್ಸರವ ಕಳೆಯಯ್ಯ
ಸಚ್ಚಿದಾದಂದತ್ಮ ಚಿತ್ಸುಖವಪ್ಪುವೇ || ||೧||

ಕೂರ್ಮ ರೂಪಿಯೆಂದು ಪೇರ್ಮೆಯಲಿ ಕರೆಯಲಾ
ಭರ್ಮಗರ್ಭನ ಪಿತನೆ ಗಿರಿಯ ಧರಿಸಿರುವೇ
ನಿರ್ಮಲಾತ್ಮನೆ ಎನಗೆ ನಿರ್ಮಮತೆ ನೀಡಯ್ಯ
ಊರ್ಮಿಳಾ ಪತಿ ಭ್ರಾತೃ ಪರಮ ಮಂಗಳನೇ ॥ ||೨||

ವರಹ ರೂಪಿಯೆ ನಿನ್ನ ಕರೆವುದು ಹೇಗಯ್ಯ
ಕೋರೆ ದಾಡಿಯ ಮೇಲೆ ಧರೆಯ ಧರಿಸಿರುವೇ
ವಾರೆ ನೋಟದಿ ಎನ್ನ ಪರಿಕಿಸೀ ಪೊರೆಯಯ್ಯ
ಧೀರ ಭೂವರಹ ವರಹ ವರ ಧರಣಿ ಪಾಲಾ ॥ ||೩||

ನಾರಸಿಂಹನೆ ನಾನು ಕರೆಯಲಾಪನೆ ನಿನ್ನ
ಘೋರ ರೂಪವ ನೋಡಿ ದೂರ ಸಾರುವರೋ
ವಾರಿಜಾಕ್ಷಿಯು ಬಂದು ಪೋರ ಪ್ರಹ್ಲಾದನ್ನ
ಚಾರು ತವ ಚರಣದಲಿ ಇರಿಸಬೇಕಾಯ್ತೋ ॥ ||೪||

ವಾಮನನೆ ಬಾರೋ ದಧಿವಾಮನನೆ ಬಾರೆಂದು
ಸಾಮ ಸನ್ನುತ ನಿನ್ನ ನಾಮಗಳ ನೆನೆಯಲಾ
ಭೂಮಿ ಬೇಡುವ ನೆವದಿ ಬಲಿಯ ಭೂಮಿಗೆ ತುಳಿದ
ಸೀಮೆ ಮೀರಿದ ಮಹಿಮಾ ಮರ್ಮವಿನ್ನೆಷ್ಟೋ || ||೫||

ಪರಶುರಾಮನೆ ನಿನ್ನ ಕರೆಯಲಾರೆನು ನಾನು
ದುರುಳ ಕ್ಷತ್ರಿಯರ ಶಿರಗಳನೆ ತರಿದೂ
ಭಾರಿ ಪರಶುವಿನಿಂದ ವರಮಾತೆ ಶಿರ ತರಿದೆ
ಸರಿ ಕಾಣೋ ಇದು ನಗೆ ಪರಮಪಾವನ್ನಾ || ||೬||

ರಾಮರೂಪಿಯೆ ನಿನ್ನ ಆಮಹಾ ಮಹಿಮೆಗಳ
ಸೀಮೆಗಾಣಳು ಲಕುಮಿ ಪಾಮರಗಳವೇ
ಆ ಮರ ಈ ಮರಾನೆಂದ ಆ ಪಾಮರನ ಪೊರೆದು
ಆ ಮಹಾತ್ಮನಗೈದ ಪರಿಯನ್ನ ಮಾಡೋ || ||೭||

ಕೃಷ್ಣಾ ಕೃಷ್ಣಾ ಎಂದು ಕರೆಯುವೆನೆ ನಾನಿನ್ನ
ಕಷ್ಟದೊಳು ಸಿಲುಕಿರುವೆ ಗಿರಿಯನೇ ಪೊತ್ತು
ವೃಷ್ಣಿಕುಲಸಂಪನ್ನ ಕೃಷ್ಣಮೂರುತಿ ನೀನೂ
ಇಷ್ಟಭಕುತರ ಮನೋಭೀಷ್ಟ ಸಲಿಸುವಿಯೋ || ||೮||

ಬುದ್ಧದೇವನೆ ಎನಗೆ ಸದ್ಬುದ್ಧಿ ಕೊಡು ಎಂದು
ಬುದ್ಧಿ ಪೂರ್ವಕವಾಗಿ ನಿನ್ನ ಕರೆಯಲಾ
ಬುದ್ಧಿಯಿಂದಲಿ ನೀ ಬೋಧಿಸಿದೆ ದುಶ್ಶಾಸ್ತ್ರ
ಭೌದ್ದ ನಿನ್ನನು ಪೊದ್ದ ಬುಧರ ಪಾಡೇನು || ||೯||

ಕಲ್ಕೀ ಕಲ್ಕೀ ಎಂದೆ ಕರೆಯಲಾಪೆನೆ ದೇವಾ
ಶುಲ್ಕ ಮೇಲಾಗಿಹುದು ಕಲಿಯುದೊಳು

ಉಲ್ಕಮುಖ ಮೊದಲಾದ ಕಲ್ಕಿರಾಜರು ನಿನ್ನ
ಕಲ್ಯಾಕೃತ್ಯ ಸತ್ಯ ತಪ ವ್ರತವ ಮಾಳ್ಪರು ಬಿಡದೆ ॥ ॥೧೧॥

ಸರ್ವರೂಪಾತ್ಮಕನೆ ಸರ್ವ ವ್ಯಾಪಕ ಸ್ವಾಮಿ
ಸರ್ವಜಿತು ಸರ್ವಾತ್ಮ ಸರ್ವೇಶವೇ
ಶರ್ವಾದಿ ವಂದ್ಯ ಗುರು ಗೋವಿಂದವಿಠಲ್ಯನ
ಗುರು ಹೃದಬಂರದಲ್ಲಿ ತೋರಿ ಪೊರೆಯನ್ನ ॥ ॥೧೧॥



**ಅರ್ಥವಿವರಣೆ:-**

**ಕುತ್ಸಿತನ** = ಕಾಕುಮತಿಯಾದ ಎನ್ನ, **ಸೊಲ್ಲ** = ಮಾತನ್ನು, **ಮತ್ಸ್ಯಕೇತನ ಜನಕ** = ಮನ್ಮಥನ ತಂದೆ (ಮತ್ಸ್ಯಕೇತನ-ಮೀನಿನ ಲಾಂಛನವನ್ನು ಹೊಂದಿರುವ ಕಾಮ). **ಹೇರ್ಯಯಲಿ** = ಹಿರಿಯತನದಲ್ಲಿ. **ಭೆರ್ಮಗರ್ಭನ ಪಿತನೆ** = "ಹಿರಣ್ಯ ಗರ್ಭ" ನಾಮಕರಾದ ಬ್ರಹ್ಮದೇವರ ತಂದೆ (ಭರ್ಮ- ಚಿನ್ನ- ಹಿರಣ್ಯ), **ಊರ್ಮಿಳಾಪತಿಭ್ರಾತೃ** = ಲಕ್ಷಣನ ಅಣ್ಣನಾದ ಶ್ರೀರಾಮ (ಊರ್ಮಿಳಾಪತಿ-ಊರ್ಮಿಳೆಯ ಪತಿ ಲಕ್ಷ್ಮಣ). **ಸಾಮಸನ್ನುತ** = ಸಾಮವೇದದಿಂದ ಸ್ತುತ್ಯನು. **ಪರಶುವಿನಿಂದ** = ಗಂಡುಗೊಡಲಿಯಿಂದ, **ಸೀಮೆಗಾಣಳು** = ಸಾಕಲ್ಯೇನ ಅರಿಯಳು. **ಆ ಮರಾ ಈ ಮರಾನೆಂದ** = ನಾರದರಿಂದ "ರಾಮ ಮಂತ್ರ" ಪಾರಾಯಣನಾದ ವಾಲ್ಮೀಕಿ. **ವೃಷ್ಣಿಕುಲ** = ಚಂದ್ರನ ವಂಶ ಲಲಾಮನಾದ ಶ್ರೀಕೃಷ್ಣ. **ಶುಲ್ಕ** = ಬೆಲೆ(ಮೌಲ್ಯ), **ಸರ್ವಜಿತು** = ಅಜೇಯನು, **ಶರ್ವಾದಿವಂದ್ಯ** = ರುದ್ರಾದ್ರಿಗಳಿಂದ ವಂದ್ಯನು. **ಗುರು ಹೃದಯದಲ್ಲಿ** = ಗುರುಗಳ ಹೃದಯಾಕಾಶದಲ್ಲಿ (ಗುರುಗೋಳಕ ದ್ವಾರಾ ಬಿಂಬೋಪಾಸನಾ ಕ್ರಮ).



೫೩೦

(ರಘುರಾಮವಿಠ್ಠಲಾಂಕಿತ)

ರಾಗಮಧ್ಯಮಾವತಿ ತ್ರಿಪುಟತಾಳ

ಲಕುಮೀ ನಾರಾಯಣ- ಜಯ ಲಕುಮೀ ನಾರಾಯಣ
ಲಕುಮೀ ನಾರಾಯಣ- ಜಯ ಲಕುಮೀ ನಾರಾಯಣ ॥ ॥ಪ॥

ಮತ್ಸ್ಯರೂಪವ ಧರಿಸಿ ನೀ ವೇದಂಗಳನು ಉದ್ಧರಿಸಿದೇ
ಕೂರ್ಮರೂಪದಿ ಧರಣಿಪೊತ್ತು ಪೊರೆದೆ ದೇವರ್ಗಂಗಳಾ ॥ ॥೧॥

ವರಹ ರೂಪದಿ ಖಳನ ಸೀಳಿ ಧರೆಗೆ ಹಿತವನು ತೋರಿದೆ
ದುರುಳ ದೈತ್ಯನ ಕರುಳ ಬಗೆದು ಪೊರೆದೆ ಭಕುತ ಪ್ರಹ್ಲಾದನಾ ॥ ॥೨॥

ಹರುಷದಿಂ ಪಾತಾಳ ಲೋಕದಿ ಬಲಿಯ ಬಾಗಿಲ ಕಾಯ್ದೇ
ದುಷ್ಟ ರಾಜರ ಸಂಹರಿಸಲು ಭಾರ್ಗವನ ರೂಪವ ತಾಳಿದೇ ॥ ॥೩॥

ಪಿತೃವಾಕ್ಯವ ಪಾಲಿಸಲು ನೀ ಕಾನನವನು ಸೇರಿದೇ
ಬಹು ತರದ ಭಕುತರನ್ನು ಸಲಹಲು ಕೃಷ್ಣರೂಪವ ತಾಳಿದೇ ॥ ॥೪॥

ಬುದ್ಧರೂಪವ ಧರಿಸಿ ಇಳೆಯೊಳು ಜಗದ ಮೋಹಕನೆಂದೆಸಿದೇ
ಕಲ್ಕಿರೂಪದಿ ತುರುಗವನೇರಿ ಯವನರ ಸಂಹರಿಸಿದೇ ॥ ॥೫॥

ಪತಿತ ಪಾವನ ಭವವಿಭಂಜನ ಗತಿಯು ನೀ ನೆನಗೆ ಪ್ರಭೂ
ಸತತ ನಿನ್ನನು ಪ್ರಾರ್ಥಿಸುವೆನ್ನೈ ಮತಿಯನಿತ್ತು ಸಲಹೊ ನೀ ॥ ॥೬॥

ಭವದ ಬಂಧನದಲಿ ಬಿದ್ದು ಬಹು ತರದಿ ನೊಂದಿರುವೆನೋ
ಭವತಾರಕ ಎನಗೆ ಇತ್ತು ಭವದ ಬಂಧವ ಬಿಡಿಸು ನೀ ॥ ॥೭॥

ಕಲಿಯ ಮಾಯೆಯು ಬಲೆಗೆ ಬಿದ್ದು ನೊಂದು ಚೀರಿಡುತಿರುವೆನೋ
ಕಲುಷರಹ ನೀ ದಯವ ಬೀರಿ ಕಲಿಯ ಬಾಧೆಯ ಬಿಡಿಸು ನೀ ॥ ॥೮॥

ಅನುದಿನವು ನಿನ್ನಯ ಭಜನೆಯನು ಮರೆಯದಂದದಿ
ಅರುಹಿ ನೀ ಪರಮಪುರುಷ ಪಾವನ ರಮಾಕಾಂತ ವಿಠ್ಠಲ
ಸಲಹೋ
ಲಕುಮೀ ನಾರಾಯಣ- ಜಯ ಲಕುಮೀ ನಾರಾಯಣ ॥ ॥೯॥



೫೩೧

(ರಮಾಕಾಂತವಿಠ್ಠಲಾಂಕಿತ)

**ಮಂಗಳಪದ**

ಜಯ ಮಂಗಳಂ ನಿತ್ಯ ಶುಭ ಮಂಗಳಂ ॥ ॥ಪ॥

ಸನ್ನುತ ಶ್ರೀಹರಿಗೆ ರನ್ನೆ ಸಿರಿಕಾಂತಗೆ
ಪನ್ನಗಾರಿ ಧ್ವಜ ಪಾವನ್ನ ವೆಂಕಟಗೇ
ಘನ್ನ ಶುಭ ಕಾಯ ಮುದ್ದು ಮೋಹನ್ನರಾ
ಹೃನ್ಮಂದಿರ ಸುಶೋಭಿತೆಗೆ ॥ ॥೧॥

ಆದಿಯಲಿ ಮತ್ಸ್ಯಾವತಾರನಾದವನಿಗೆ
ಮೋದದಿಂದಲಿ ಕೂರ್ಮ ವರಹ ನರಹರಿಗೆ
ಭೂದಾನವನೆ ಬೇಡ್ದ ಪರಶುಧರ ಶ್ರೀರಾಮ
ಯಾದವೇಂದ್ರ ಬೌದ್ಧ ಕಲ್ಕೀರೂಪನಿಗೇ ॥ ॥೨॥

ಸುಲಭದಲಿ ಭಕ್ತರಿಗೆ ಒಲಿವ ಬಲಿಮಥನನಿಗೆ
ಬಲವಂತ ಅನಿಲಭವ ಸುರವಂದ್ಯಗೆ
ಲಲನೆ ರುಕ್ಮಿಣಿಲೋಲ ಶ್ರೀರಮಾಕಾಂತವಿ-
ಠ್ಠಲ ಹರಿಗೆ ಕಮಲೇಶ ಚೆಲುವ ಮೂರುತಿಗೇ ॥೩॥

॥ ಮಂಗಳಂ ಜಯ ಮಂಗಳಂ ॥



ಅರ್ಥವಿವರಣೆ:-

**ಸನ್ನುತ** = ಸರ್ವಸುಜೀವರಿಂದಲೂ ಸಂಸ್ತೂತ್ಯಮಾನವಾದ, **ಪನ್ನಗಾರಿ ಧ್ವಜ** = ಗರುಡಧ್ವಜ (ಪನ್ನಗ-ಸರ್ಪ ಪನ್ನಗಾರಿ-ಸರ್ಪಗಳ ಶತ್ರು ಗರುಡ) **ಪಾವನ್ನ ವೆಂಕಟಗೇ** = ಸಜ್ಜನರ ಪಾಪ ಪರಿಹಾರಕನಾದ ಪವಿತ್ರ ಪರಮ ಮಂಗಳಮೂರ್ತಿ ಶ್ರೀವೇಂಕಟಚಲವಾಸನಾದ ಶ್ರೀನಿವಾಸನಿಗೆ **ಪರಶುಧರ** = ಕೊಡಲಿ ಹಿಡಿದ ಪರಶುರಾಮ, **ಬಲಿಮಥನನಿಗೆ** = ಬಲಿಯ ಮದ ಭಂಗ ಮಾಡಿ ಪಾತಾಳಕ್ಕೊತ್ತಿದ ವಾಮನ **ಬಲವಂತ** = ನಿಸ್ಸೀಮ ಪರಾಕ್ರಮ ಶಾಲಿ. **ಅನಿಲ ಭವ ಸುರವಂದ್ಯಗೆ** = ವಾಯು (ಬ್ರಹ್ಮರೂ ಗ್ರಾಹ್ಯ) ರುದ್ರಾದಿ ದೇವತಾವಂದ್ಯಗೆ. **ಕಮಲೇಶ** = ಕಮಲಾಪತಿ ಶ್ರೀಮನ್ನಾರಾಯಣ.



॥ ಶ್ರೀಃ ಹರಿಃ ಓಂ ॥

# ವಿಭಾಗ—೫

## ತಿರುಪತಿಯ ಶ್ರೀನಿವಾಸ ದೇವರ ಪರವಾದ ಕೀರ್ತನೆಗಳ ಸಂಗ್ರಹ

## ಶ್ರೀ ಹರಿಯ ಪರವಾದ ಕೀರ್ತನೆಗಳ ಸಂಗ್ರಹ

ಭಜನಕೌಸ್ತುಭ

## ೫೩೨

(ರಂಗವಿಠ್ಠಲಾಂಕಿತ)

ರಾಗ-ನಾದನಾಮಕ್ರಿಯೆ ಏಕತಾಳ

ಹರೇ ವೆಂಕಟಶೈಲವಲ್ಲಭ
ಪೊರೆಯ ಬೇಕೆನ್ನ ॥ ||ಪ||

ದುರಿತದೂರ ನೀನಲ್ಲದೆ ಧರೆಯೊಳು
ಪೊರೆವರ ನಾ ಕಾಣೆ ನಿನ್ನಾಣೆ || ||ಅ||

ಆರು ನಿನ್ನ ಹೊರತೆನ್ನ ಪೊರೆವರು
ನೀರಜಾಕ್ಷ ಹರಿಯೆ-ಅ
ಪಾರಮಹಿಮ ಪುರಾಣಪುರುಷ
ಘೋರ ದುರಿತಗಳ ದೂರ ಮಾಡಿಸೋ ॥ ||೧||

ಇಂದಿರೇಶ ಅರವಿಂದನಯನ ಎನ್ನ
ತಂದೆ ತಾಯಿ ನೀನೆ
ಹೊಂದಿದವರ ಅಘವೃಂದ ಕಳೆವ
ಮಂದರಾದ್ರಿಧರನೇ- ಶ್ರೀಧರನೇ ॥ ||೨||

ಮಂಗಳಾಂಗ ಮಹನೀಯ ಗುಣಾರ್ಣವ
ಗಂಗೋದಿತಪಾದ
ಅಂಗಜಪಿತ ಅಹಿರಾಜಶಯ್ಯ ಶ್ರೀ
ರಂಗವಿಠ್ಠಲ ಧೊರೆಯೇ-ಶ್ರೀಹರಿಯೇ ||೩||



## ೫೩೩

## (ಅಂಕಿತ-ಹಯವದನ)

ರಾಗ-ಯದುಕುಲಕಾಂಬೋದಿ ತ್ರಿಪುಟತಾಳ

ಸಾರಿದೆನೋ ನಾನಿನ್ನ-ವೆಂಕಟರನ್ನ ॥ ॥ಪ॥

ನೀರಜನಯನನೆ ನಿರ್ಮಲಗುಣ ಪೂರ್ಣ ॥ಅ॥

ಅನಾಥನು ನಾನು-ಎನಗೆ ಬಂಧುವು ನೀನು
ನಿನ್ನವನೆಂದು ನೋಡೋ-ನೀನಾಗಿ ದಯಮಾಡೋ ॥ ॥೧॥

ಎನ್ನ ಕುಂದುಗಳನ್ನು- ಎಣಿಸಲಾಗದೊ ದೇವ
ಪನ್ನಗಾದ್ರಿವಾಸ-ನೀನೇ ನಿರ್ದೋಷ ॥ ॥೨॥

ದೇಶ ದೇಶದವರ-ಪೊರೆವಂತೆ ಪೊರೆಯೆನ್ನ
ಶೇಷಾಚಲ ಘನ್ನ-ಶ್ರೀಶ ಹಯವದನ ॥ ॥೩॥

**ಅರ್ಥವಿವರಣೆ:-**

ಒಮ್ಮೆ ಶ್ರೀವಾದಿರಾಜಗುರುಸಾರ್ವಭೌಮರು ತಿರುಪತಿಯಾತ್ರೆ ಕೈಗೊಂಡು. ಬೆಟ್ಟವನ್ನು ಹತ್ತಬೇಕೆಂದಿರುವಲ್ಲಿ ಸಮಗ್ರ ಶೇಷಾಚಲವೇ ಅವರಿಗೆ ಅಖಂಡ ಸಾಲಿಗ್ರಾಮ ಶಿಲೆಯಂತೆ ಗೋಚರಿಸಿತು, ಆಗ ಶ್ರೀಮಚ್ಚರಣರು ಭಕ್ತಿಭಾವದಿಂದ ಮಂಡಿಯೂರುತ್ತಾ, ಆ ಭವ್ಯ ಪರ್ವತಾರೋಹಣಮಾಡಿ. ಆ ಸಪ್ತಗಿರಿವಾಸನ ದರ್ಶನ ಭಾಗ್ಯ ಪಡೆದರು, ಆ ಸಂದರ್ಭದಲ್ಲಿ ರಚಿಸಿದ ಕೀರ್ತನೆ ಇದು.



## ೫೩೪

### (ಪುರಂದರವಿಠ್ಠಲಾಂಕಿತ)

ರಾಗ-ಮಧ್ಯಮಾವತಿ ಅಟ್ಟತಾಳ

ಬಂದು ನಿಂದಿಹ ನೋಡಿ-ಭೂತಳದಿ ವೆಂಕಟ
ಇಂದಿರೆಯು ಒಡಗೂಡಿ-ಒಪ್ಪುವ ನಿರಂತರ
ಪೊಂದಿ ಭಜನೆಯು ಮಾಡಿ-ಆನಂದಗೂಡಿ ॥ ॥ಪ॥

ವಂದಿಸುತ ಮನದೊಳಗೆ ಇವನಡಿ
ದ್ವಂದ್ವ ಭಜಿಸಲು ಬಂದ ಭಯಹರ
ಇಂದುಧರ ಸುರವೃಂದನುತ ಗೋ-
ವಿಂದ ಘನದಯಾಸಿಂಧು ಶ್ರೀಹರಿ ॥ ॥ಅ॥

ದ್ವಾರದೆಡಬಲದಲ್ಲೀ-ಜಯವಿಜಯರಿಬ್ಬರು
ಸೇರಿ ಸೇವಿಪರಲ್ಲೀ-ಸನಕಾದಿನುತ ಶೃಂ-
ಗಾರನಿಧಿ ಅಂಗದಲ್ಲೀ-ಮುತ್ತಿನಲಿ ಶೋಭಿಪ
ಹಾರ ಪೊಂದಿಹುದಲ್ಲೀ-ವಿಸ್ತಾರದಲ್ಲೀ ॥
ವಾರವಾರಕೆ ಪೂಜೆಗೊಂಬುವ
ಹಾರ ಮಕುಟಾಭರಣ ಕುಂಡಲ
ಧಾರ ಭುಜ ಕೇಯೂರ ಭೂಷಿತ
ಮಾರಪಿತ ಗುಣ ಮೋಹನಾಂಗ ॥
ಚಾರುಪೀತಾಂಬರ ಕಟಿ-ಕರ
ವೀರ ಕಲ್ಹಾರಾದಿ ಪೂವಿನ
ಹಾರ ಕೊರಳೊಳು ಎಸೆವುತಿರೆ-ವದ-
ನಾರವಿಂದನು ನಗುತ ನಲಿಯುತ ॥ ॥೧॥

ಎಲ್ಲ ಭಕುತರಭೀಷ್ಟ-ಕೊಡುವುದಕೆ ತಾ ಕೈ
ವಲ್ಯ ಸ್ಥಾನವ ಬಿಟ್ಟ-ಶೇಷಾದ್ರಿ ಮಂದಿರ
ದಲ್ಲಿ ಲೋಲುಪ ದಿಟ್ಟ-ಸೌಭಾಗ್ಯನಿಧಿಗೆದು
ರಿಲ್ಲ ಭುಜಬಲ ಪುಷ್ಟ-ಕಸ್ತೂರಿ ಇಟ್ಟ ||

ಚೆಲ್ವ ಫಣೆಯಲಿ ಶೋಭಿಸುವ ಸಿರಿ-
ವಲ್ಲಭನ ಗುಣ ಪೊಗಳದಿಹ ಜಗ
ದಿಲ್ಲರೆದೆದಲ್ಲಣ ಪರಾಕ್ರಮ
ಮಲ್ಲಮರ್ದನ ಮಾತುಳಾರಿ ||

ಫಲ್ಗುಣನ ಸಖ ಪ್ರಕಟನಾಗಿಹ
ದುರ್ಲಭನು ಅಘದೂರ ಬಹು ಮಾಂ-
ಗಲ್ಯ ಹೃದಯನು ಸೃಷ್ಟಿಗೆ
ಉಲ್ಲಾಸ ಕೊಡುತಲಿ-ಚಂದದಿಂದಲಿ || ||೨||

ಪದಕ ಕೌಸ್ತುಭಧಾರ-ಸರಿಗೆಯ ಕಂಧರ
ಸುದರುಶನದರ ಧಾರ-ಸುಂದರ ಮನೋಹರ
ಪದಯುಗದಿ ನೂಪುರ-ಇಟ್ಟಿಹನು ಸನ್ಮುನಿ
ಹೃದಯಸ್ಥಿತ ಗಂಭೀರ-ಬಹುದಾನಶೂರ ||

ವಿಧಿಭವಾದ್ಯರ ಪೊರೆವದಾತನು
ತುದಿಮೊದಲು ಮಧ್ಯವು ವಿರಹಿತನು
ಉದುಭವಾದಿಗಳೀವ ಕರ್ತನು
ತ್ರಿದಶಪೂಜಿತ ತ್ರಿಭುವನನೇಶ ||

ಸದುವಿಲಾಸದಿ ಸ್ವಾಮಿತೀರ್ಥದಿ
ಉದಿಸುತಿರೆ ಸಿರಿಮಹಿಳೆ ಸಹಿತದಿ
ಪದುಮನಾಭ ಪುರಂದರವಿಠ್ಠಲ
ಮೆರೆಯುತ ಬ್ರಹ್ಮೋತ್ಸವದಿ ಪ್ರತಿವರುಷ || ||೩||



## ೫೩೫

(ಪುರಂದರವಿಠ್ಠಲಾಂಕಿತ)

ರಾಗ ಷಂತುವರಾಳಿ ಆದಿತಾಳ

ನಿನ್ನ ನೋಡಿ ಧನ್ಯನಾದೆನೋ- ಹೇ ಶ್ರೀನಿವಾಸ || ||ಪ||

ನಿನ್ನ ನೋಡಿ ಧನ್ಯನಾದೆ- ಎನ್ನ ಮನೋನಯನಕೀಗ
ಲಿನ್ನು ದಯಮಾಡು ಸುಪ್ರಸನ್ನ ಸ್ವಾಮಿ ಪಾಂಡುರಂಗ ||ಅ||

ಪಕ್ಷಿವಾಹನ ಲಕ್ಷ್ಮೀರಮಣ- ಲಕ್ಷ್ಮೀ ನಿನ್ನ ವಕ್ಷದಲ್ಲಿ
ರಕ್ಷ ಶಿಕ್ಷಣ ದಕ್ಷ ಪಾಂಡವ- ಪಕ್ಷ ರಕ್ಷ ಕಮಲಾಕ್ಷ || ||೧||

ದೇಶ ದೇಶ ತಿರುಗಿ ನಾನು— ಆಶಾಬದ್ಧನಾದೆ ಸ್ವಾಮಿ
ದಾಸನೆನಿಸಿ ಎನ್ನ ಜಗ-ದೀಶ ಕಾಯೋ ವಾಸುದೇವ || ||೨||

ಕಂತುಜನಕ ಕೇಳೋ ನೀ ನಿ-ರಂತರದಿ ನಿನ್ನಸೇವೆ
ಅಂತರಂಗದಿ ಪಾಲಿಸಯ್ಯ-ಹೊಂತಕಾರಿ ಪುರಂದರವಿಠ್ಠಲ || ||೩||



## ೫೩೬

(ಆದಿಕೇಶವಾಂಕಿತ)

ರಾಗ-ಷಂತುವರಾಳಿ ಅಟತಾಳ

ಬಂದೆವಯ್ಯ ಗೋವಿಂದಶೆಟ್ಟಿ- ನಿಮ್ಮ
ಹರಿವಾಣ ತೀರ್ಥ ಪ್ರಸಾದವುಂಟೆನಲಾಗಿ || ||ಪ||

ಅಪ್ಪವು ಅತಿರಸ ತುಪ್ಪ ಚಿನ್ನಿಪಾಲು
ಒಪ್ಪುವ ಸಕ್ಕರೆ ಯಾಲಕ್ಕಿಯು
ಅಪಭೂಪವಾದ ಕಜ್ಜಾಯ ರಾಸಿಗಳೆಲ್ಲ
ಛಪ್ಪನ್ನ ದೇಶಕ್ಕೆ ಮಾರುವ ಶೆಟ್ಟಿ ॥ ॥೧॥

ಒಡೆದ ಮಡಕೆಯಲ್ಲ ಅರೆದು ನಾಮವ ಮಾಡಿ
ಕೊಡುವೆ ನೀ ಕಾಸಿಗೆ ಒಂದೊಂದನು
ಒಡಲು ತುಂಬಿ ಮಿಕ್ಕ ಒಗರ ಮಾರಿಸಿ
ಒಡವೆಯ ಗಳಿಸುವ ಕಡುಲೋಭಿ ಶೆಟ್ಟಿ ॥ ॥೨॥

ಶೇಷಗಿರಿಯಲ್ಲಿ ವಾಸಮಾಡಿಕೊಂಡು
ದೇಶಕ್ಕೆ ಪ್ರಸಾದ ನಡೆಸುವ ಶೆಟ್ಟಿ
ಆಸೆಮಾಡಿ ಹಣಕಾಸುಗಳಿಪ ಆದಿ
ಕೇಶವ ನಾರಾಯಣ ತಿಮ್ಮಪ್ಪ ಶೆಟ್ಟಿ ॥ ॥೩॥



## ೫೩೭

## (ಅಂಕಿತ-ಪ್ರಸನ್ನವೆಂಕಟ)

ರಾಗ-ಪಾಡಿ ತ್ರಿವಿಡಿತಾಳ

ಶರಣು ಶರಣು ಹೇ ಪರಮ ಪುರುಷ
ಶರಣು ಭಯಂಕರ ಖಂಡನ
ಶರಣು ಶಿರಿವಿಧಿ ಮರುತ ಪೂಜಿತ
ಶರಣು ವೆಂಕಟಕ ನಾಯಕ ॥ ॥ಪ॥

ಭಾಸಿತ ತಟಿತ ಮಕರ ಕುಂಡಲ-ಭಾಸಕರ ಶಶಿಲೋಚನಾ
ಸಾಸಿರಾಶತ ವೇದವಂದಿತ- ಮಾನವಾರ್ಚಿತ ಪದಯುಗಾ
ದೇಶಕಾಲ ಸುವ್ಯಾಪ್ತಾಜಾಂಡ- ವಿಶೇಷಸ್ಥಿತಿ ಲಯಶೀಲನೇ
ತೋಷ ಮಂದಸುಹಾಸವದನನೆ-ಶೇಷಗಿರಿವಾಸ ನಮೋ ಹರೇ ॥
॥೧॥

ಶಂಖಚಕ್ರ ಗದೆ ಪದುಮ ವರ- ಕಂಕಣಾ ಕರರಾಜಿತ
ಕುಂಕುಮಾ ಮೃಗಮದ ತಿಲಕ ಘನಾ- ತಂಕ ಕುಂಭಿಮೃಗಾಧಿಪಾ
ಕಿಂಕರಾನತ ರಕ್ಷಕ ರಿಪು- ಶಂಖ ದೈತ್ಯ ವಿಶೀಕ್ಷಕ
ಪಂಕಜಾನನ ಗರುಡವಾಹನಾ- ಅಂಕಿತಾಖಿಳ ಭೂಷಣಾ ॥ ॥೨॥

ಜನನ ಮೃತ್ಯು ವಿದೂರ ಅಚ್ಯುತ— ಮುನಿ ಮನಾಲಯ ಮಾಧವಾ
ಕನಕನೇತ್ರ ವಿದಾರಿ ಸ್ತೋತ್ರ್ಯ— ಘನವಿಮಲಗುಣ ಪೂರ್ಣನೆ
ದನುಜ ನಿಕರಾಟವಿ ದಾವಾನಳ— ಸನಕ ಸನಂದನ ಸ್ತುತಿ ಪ್ರಿಯ
ಅನವರತ ವರಸ್ವಾಮಿ ಪುಷ್ಕರ— ಸನ್ನಿಭ ಪ್ರಸನ್ನವೆಂಕಟೇಶನಿಗೆ ॥
॥೩॥



## ೫೩೮

### (ಅಂಕಿತ-ಗುರುಮಹೀಪತಿ)

ರಾಗ—ಅಠಾಣ ತ್ರಿತಾಳ

ನಮೋ ನಮೋ ವೆಂಕಟೇಶ ॥ ॥ಪ॥

ವೈಕುಂಠಮಂದಿರ ಶೇಷಾಚಲದಲಿ
ಬೇಕೆಂದು ಮಾಡಿದೆ- ನೆಲೆವಾಸ- ನಮೋ ನಮೋ ॥ ॥೧॥

ಶ್ರೀದೇವಿ ಸಂಗಡ ಸ್ವಾಮಿ ಪುಷ್ಕರಣಿತೀರದಿ
ಮೋದದಿ ಕ್ರೀಡಿಸುವ ವಿಲಾಸ- ನಮೋ ನಮೋ ॥ ॥೨॥

ಗುರುಮಹೀಪತಿ ಪ್ರಭು ಚರಣ ನಂಬಿದವರ
ಧರೆಯೊಳು ಪೂರೈಸೋ ಮನದಾಶಾ—ನಮೋ ನಮೋ ॥ ॥೩॥



## ೫೩೯

(ವಿಜಯವಿಠ್ಠಲಾಂಕಿತ)

ರಾಗ- ಸೌರಾಷ್ಟ್ರ ಝಂಪೆತಾಳ

ಶರಣು ಶರಣು ಶರಣು ॥ ॥ಪ॥

ಶರಣು ಶ್ರೀ ವೈಕುಂಠನಾಮಕ ಶರಣು ಶ್ರೀ ಪುರುಷೋತ್ತಮ
ಶರಣು ಶ್ರೀಧರ ಗರುಡವಾಹನ ಶರಣು ವೇಂಕಟನಾಯಕ ॥ ॥ಪ॥

ಪರಮಪದ ಗೋವಿಂದ ಮಾಧವ ಪದುಮಯನಾಭ ಜನಾರ್ದನ
ಧರಣಿಧರ ಕರಿವರದ ವಾಮನ ವೈರಿಹರ ಬಲಿಭಂಜನ ॥೧॥

ಜಲಜನೇತ್ರ ಮುಕುಂದ ಮುರಹರ ಜ್ವಲಿತ ಚಕ್ರ ಗದಾಧರ
ಜಲಧಿಶಯನ ಉಪೇಂದ್ರ ಅಚ್ಯುತ ಶೈಲಧರ ನಾರಾಯಣ ॥ ॥೨॥

ಆದಿಯೋಗಿ ಮುನೀಂದ್ರ ವಂದಿತ ನಿಖಿಳ ಸುರಗಣ ಸೇವಿತ
ವೇದವೇದ್ಯ ವಿರಿಂಚಿ ಸನ್ನುತ ವಿಜಯವಿಠ್ಠಲ ನಮೋ ನಮೋ ॥೩॥



## ೫೪೦

(ವಿಜಯವಿಠ್ಠಲಾಂಕಿತ)

### ಉದಯರಾಗ

ರಾಗ–ಭೂಪಾಳಿ ಆದಿತಾಳ

ಭಕ್ತಜನ ಸಂರಕ್ಷಣ ॥ ॥ಪ॥

ಭಕ್ತಜನ ಸಂರಕ್ಷಣ ಭವದುರಿತ ಸಂಹಾರಿ
ಭಕ್ತರಾ ಸುರಧೇನು–ತರುವೆ ಚಿಂತಾಮಣಿಯೆ
ಭಕ್ತರಾಧೀನ ನೆಂಬುವ ಬಿರುದು ಅನುಗಾಲ ಪೊತ್ತ ತಿಮ್ಮಪ್ಪ ಏಳೋ॥ ॥ಅ॥

ಅಂಬರವು ತಾಂಬ್ರಮಯವಾಗೆ ಗರುಡಾಗ್ರಜನು
ಇಂಬಿಲ್ಲಿ ನತಲೆದೋರೆ ಕಿರಣಗಳು ಹರಹಿದವು
ಅಂಬುಜವಿರೋಧಿ ಕಳೆಗುಂದಿ ತಾರಾನಿಕರವಂಬರದಿ ರೂಹುಮಾಸೆ
ಕುಂಭಿಣಿಯ ಮುಸುಕಿರ್ದ ಕತ್ತಲೆ ಪರಿದುಪೋಗೆ
ಅಂಬುಜದಳಕ್ಕೆ ಮರಿ ದುಂಬಿಗಳು ಎರಗಿದುವು
ತಾಂಬ್ರಚೂಡವು ಧ್ವನಿಮಾಡಿ ಕೂಗಿತು ಶರಸಿಜಾಂಬಕ ಮಂಚದಿಂ
ದೇಳೋ ॥೧॥

ಉದಯ ಪರ್ವತಕೆ ರಥ ನೂಕಿದನು ಮಾರ್ತಾಂಡ
ಉದಧಿ ತೆರೆ ತಗ್ಗಿದುವು ಉರಗ ಪಡೆಯೆತ್ತಿದನು
ಗದಗದನೆ ನಡುಗಿ ದಾನವರು ಭಯದಿಂದ ಅಡಗಿದರು ದಶದಿಕ್ಕಿನೊಳಗೆ
ತ್ರಿದಶರಬ್ಬರಿಸೆ ಆನಕ ದುಂದುಭೀ ಶಂಖ
ಧಂ ಧಂ ಧಣಾ ಸರಿಗಮಪಧನೀ ಎಂದೆನುತ
ವದರುತ್ತ ಸಮವರ್ಷವನು ಸುರಿಸಿ ತುತಿಸಿದರು ಸದಮಲಾನಂದ ತಿಮ್ಮಾ॥೨॥

ನಾರಿಯರು ಬಂದು ಅಂಗಳ ಬಳಿದು ಗಂಧದಾ
ಸಾರಣೆಯದೆಳೆದು ಮುತ್ತಿನ ರಂಗವಾಲೆ ವಿ

ಸ್ವಾರದಿಂದಲಿ ಪಂಚವರ್ಣಿಗೆಯನಿಟ್ಟು ಹೊಸ ತೋರಣ ಮಕರ ಕನ್ನಡಿ
ದ್ವಾರದಲ್ಲಿ ಬಿಗಿದರ್ಧಿಯಲ್ಲಿ ಗೊಲ್ಲ ಕಟ್ಟಿಗೇ-
ಕಾರ ಪರಿವಾರದವರೆಲ್ಲ ವೊಪ್ಪುತಿದಾರೆ
ದ್ವಾರಕರು ಸಾರಿದರು ಭಟರು ಹೊಗಳಿದರು ಕಂಸಾರಿ ಕೋನೇರಿವಾಸ ||೩||

ನೃತ್ಯಗಾರರು ಬಂದು ತತ್ಥಿಗಿಣಿ ತತ್ಥೈವು
ತಿತ್ತಿರಿ ಮೃದಂಗ ಜೊತೆ ತಪ್ಪಸಂದದಿ ತಾಳ
ಭತ್ತೀಸ ರಾಗದಲಿ ಎತ್ತಿ ಧ್ವನಿ ತೋರುತ್ತ ನೃತ್ಯ ಪಾಡುತ್ತ ಕುಣಿಯೆ
ಮುತ್ತೈದೆಯರು ಮುತ್ತಿನಾರತಿ ಪಿಡಿದು
ಮಿತ್ರಭಾವದಿ ನಿಮ್ಮ ಅಡಿಗಳಿಗೆ ಹರಿವಾಣ
ಎತ್ತುವೆವು ಎಂದೆನುತ ಕಾದು ನಿಂದೈದಿ ನೋಡುತ್ತಾರೆ ಸರ್ವೇಶ ||೪||

ಕಾದೋದಕ ವಿಮಲ ಕರ್ಮೈಣ್ಣೆ ಕಸ್ತೂರಿ
ಸ್ವಾದು ಜವ್ವಾಜಿ ಚಂದನ ಗಂಧ ದ್ರವ್ಯಗಳ
ಆದರಿಸಿ ಪಿಡಿದ ದರ್ಪಣ ಹೇಮ ಗದ್ದುಗೆಯು ಪಾದುಕಾ-ಪಟ್ಟು ವಸನ
ಈ ಧರೆಯು ಮೇಲಿರ್ದ ಇಡಿಗ ತೊಡಿಗೆಯು ಕರ್ಪುರ-
ರಾದಿ ತಾಂಬೂಲ ನಿರ್ಮಲ ದಾದಿಯರು ಪಿಡಿದು
ಕಾದು ನಿಂದೈದಾರೆ ಹೊನ್ನ ಬಾಗಿಲ ಮುಂದೆ ಆದಿಹರಿ ಪರಮಪುರುಷ ||೫||

ದಂಡಿಗೆ ಶಂಖ ತಾಳ ತಂಬೂರಿ ಜಾಂಗಟೆಯು
ಗೊಂಡು ನಿನ್ನಯ ಪರಮ ಪ್ರೀತ್ಯರ್ಥ ದಾಸರು
ಹಿಂಡು ಹಿಂಡಾಗಿ ಸಮ್ಮೊಗವಾಗಿ ನಿಂದು ಬೊಮ್ಮಾಂಡ ಕಟಹ ಬಿಚ್ಚು ವಂತೆ

ತಂಡ ತಂಡದಿ ಗೆಜ್ಜೆ ಕಟ್ಟಿ ಅಭಿನಯ ತಿರುಹಿ
ಕೊಂಡಾಡೆ ಶಬ್ದ ಪ್ರತಿಶಬ್ದವಾಗುತಿದೆ ಭೂ
ಮಂಡಲಾದೊಳಗೆ ಈ ಸೊಬಗು ಬಲ್ಲವಾರು ಕುಂಡಲಿಗಿರಿವಾಸ
ತಿಮ್ಮಾ ॥೬॥

ಗೋತ್ರಾರಿ ಹರಿ ಧರ್ಮ ಪುಣ್ಯಜನಪನು ವರುಣ
ವೀತಿಹೋತ್ರಸ ಸಖನು ಯಕ್ಷೇಶ ಕೈಲಾಸ
ಪತಿ ಸೂರ್ಯ ಅತ್ರಿನಂದನರು ವಾಹನವೇರಿ ಚಿತ್ತದಲಿ ಮುಖ್ಯರಾದ
ಮೈತ್ರಾವರುಣಿ ಜಾಮದಗ್ನಿ ಕಶ್ಯಪ ವಿಶ್ವಾ-
ಮಿತ್ರ ಸನಕಾದಿಗಳು ನಾರದರೆ ಮೊದಲಾಗಿ
ಸ್ತೋತ್ರವನು ಮಾಡುತ್ತಲಿದ್ದಾರೆ ಲಕ್ಷ್ಮೀಕಳತ್ರ ಜಗದ್ಭರ್ತ ತಿಮ್ಮಾ ॥೭॥

ನಿಚ್ಚ ಏಳುವ ಸಮಯ ಮೀರಿತೋ ಇಂದೀಗ
ಎಚ್ಚರಿಕೆ ಪುಟ್ಟದೇ ಎಲೊ ದೇವ ಸಿರಿದೇವಿ
ಮೆಚ್ಚು ಗೊಳಿಸುತ ಬಿಗಿದಪ್ಪಿ ರತಿಕ್ರೀಡೆಯಲ್ಲಿ ಮೆಚ್ಚಿಸಿದ ಮಹಸರಸವೆ
ಮುಚ್ಚಿಟಿಯಿದೇಂ ನಿದ್ರೆ ತಿಳಿಯಲಾಗದೇ ಸ್ವಾಮಿ
ಕುಚ್ಛಿತನ ಸೊಲ್ಲು ಕರ್ಣಕೆ ಬೀಳದಾಯಿತೇ
ಹೆಚ್ಚಿನಾ ಪವವಿ ಮತ್ತೇನು ಬಂದಿತೋ ಕೇಣಿಸಚ್ಚಿದಾನಂದಾತ್ಮಕ ॥೮॥

ನಿದ್ರೆಗೆವೆ ಹಾಕದಿರೊ ನೀರೊಳಗೆ ನೀನಿರೊ ಉ
ಪದ್ರ ಭೂಮಿಗೆ ಕಳೆಯೊ ಕಶ್ಯಪನ ಸುತನಳಿಯೊ ಸ
ಮುದ್ರರಾಣಿಯ ಪಡೆಯೊ ರಾಯರಾಯರ ತಡೆಯೊ ಮುದ್ರೆ ಭೂಮಿಜೆಗೆ
ಕಳುಹೊ
ಅದ್ರಿಯನುದ್ಧರಿಸೊ ಮುಪ್ಪುರವ ಸಂಹರಿಸೊ ಕಲಿ-
ಕ್ಷುದ್ರ ಕಳೆ ನಿದ್ರೆ ಸಾಕೆಂದು ಶ್ರುತಿ ಸಾರುತಿವೆ
ಭದ್ರಮೂರ್ತಿ ವಿಜಯ ವಿಠಲ್ಮಲವೆಂಕಟ ಕಾದ್ರವೇಯ ಹಾಸಿಗೆಯಿಂದೇಳೂ
ವಳಯ್ಯ ಬೆಳಗಾಯಿತೂ ॥ ॥೯॥

## ೫೪೧

## (ಗೋಪಾಲವಿಠ್ಠಲಾಂಕಿತ)

ರಾಗ-ಬಿಲಹರಿ ಆದಿತಾಳ

ಪಾಲಿಸೈಯ್ಯ ಪವನಸೈಯ್ಯ
ಪಾಲವಾರಿಧಿ ಶಯ್ಯಾ-ವೆಂಕಟರಾಯಾ॥ ॥ಪ॥

ಕಾಲಕಾಲಕೆ ಹೃದಯಾಲಯದೊಳು ನಿನ್ನ
ಶೀಲ ಮೂರುತಿ ತೋರೋ ಮೇಲು ಕರುಣದಿ॥ ॥ಅ॥

ಶ್ರೀಶ ಸಂಸಾರವೆಂಬೋ ಸೂಸುವ ಶರಧಿಯೊಳು
ಈಸಲಾರನೋ ಹರಿಯೇ-ನಾ ಧೊರೆಯೇ
ದಾಸನೆಂತೆಂದವೇಲೆ ಘಾಸಿಗೊಳಿಸುವುದು
ಲೇಸು ನಿನಗಲ್ಲವೈಯ್ಯ-ಹೇ ಜೀಯಾ
ದೋಷ ರಾಶಿಗಳೆಲ್ಲ ನಾಶಮಾಡಿ ವಿ
ಶೇಷವಾದ ಜ್ಞಾನ ಲೇಸು ಭಕುತಿಯಿತ್ತು
ಆಸೆಯು ಬಿಡಿಸೆನ್ನ ಮೀಸಲ ಮನಮಾಡಿ
ನೀ ಸಲಹುವುದು ಶ್ರೀನಿವಾಸ ಕೃಪಾಳೋ ॥೧॥

ಮೂರು ಗುಣಗಳಿಂದ ಮೂರು ತಾಪಗಳಿಂದ
ಮೂರು ಅವಸ್ಥೆಯಿಂದ ಮುಕುಂದ
ಮೂರು ಐದರಿಂದ ಮೂರು ಏಳರಿಂದ
ಮೂರಾರು ದಾರಿಗಾಣದೆ ಮೂರಾದೆ॥
ಮೂರು ಹಿಡಿಸಿ ಮೇಲೆ ಮೂನೆರಡೋಡಿಸಿ
ಮೂರು ಮೂರು ಭಕ್ತಿ ಮೂರು ಕಾಲಕೆ ಇತ್ತು
ಮೂರು ರೂಪನಾಗಿ ಮೂರು ಲೋಕವನೆಲ್ಲ
ಮೂರು ಮಾಡಿದ ಬಿಂಬಮೂರುತಿ ವಿಠ್ಠ॥ ॥೨॥

ಕರುಣಾಸಾಗರ ನಿನ್ನ ಸ್ಮರಣೆ ಮಾತ್ರದಿ ಸಕಲ
ದುರಿತ ಪರಿಹಾರವೆಂದು-ನಾ ಬಂದು
ಮರೆಹೊಕ್ಕ ಮೇಲಿನ್ನು ಪೊರೆಯ ಬೇಕಲ್ಲದೆ
ಜರಿದು ಬಿಸಾಡುವರೇ-ಮುರಾರೇ||

ಮರುತಾಂತರ್ಗತ **ಗೋಪಾಲವಿಠ್ಠಲ** ಈ
ಶರೀರವೆ ನಿನ್ನಯ ಚರಣ ಕೊಪ್ಪಿಸಿದೆನೋ
ಸರಿಬಂದದ್ದು ಮಾಡು ಬಿರುದು ನಿನ್ನದು ದೇವ
ಪರಮ ದಯಾನಿಧೆ ಉರಗಾದ್ರಿವಾಸ|| ||೩||



ಅರ್ಥವಿವರಣೆ.—

**ಪವನಸಯ್ಯ** = ಶ್ರೀವಾಯು ದೇವರ ಜನಕವಾದ ಶ್ರೀಹರಿ. **ಪಾಲ ವಾರಿಧಿಶಯ್ಯಾ** = ಕ್ಷೀರಸಾಗರ ಶಯನ (ಪಾಲ-ಹಾಲು ವಾರಿಧಿ-ಸಮುದ್ರ ಅಂದರೆ ಕ್ಷೀರ ಸಮುದ್ರ) **ಕಾಲಕಾಲಕೆ** = ಸಮಯೋಚಿತವಾಗಿ **ಹೃದಯಾಲಯದೊಳು** = ಹೃನ್ಮಂದಿರದಲ್ಲಿ **ಶೀಲವಮೂರುತಿ** = ಶುದ್ಧವಾದ ಅಪ್ರಾಕೃತ ಚಿದಾನಂದಾತ್ಮಕ ಸ್ವರೂಪವನ್ನು **ನೋಲು ಕರುಣದಿ** = ಅತಿ ಶಯವಾದ ದಯದಿಂದ (ಏನಂ ಮೋಚಯಾಮಿ ಎಂಬ ನಿನ್ನ ಸಂಕಲ್ಪಾನು ಸಾರ ನೀನೇ ಪ್ರಸನ್ನನಾಗಬೇಕು. ನನ್ನ ಸಾಧನೆಯು ಅಪ್ರಯೋಜಕವೆಂ ದರ್ಥ) **ಶ್ರೀಶ** = ಲಕ್ಷ್ಮೀಪತಿಯೇ, **ಸೂಸುವ** = ತುಂಬಿ ಪ್ರವಹಿಸು ತ್ತಿರುವ (ಮೋಹ ಕ್ಲೇಶಾದಿಗಳಿಂದ ತುಂಬಿರುವ ಈ ಸಂಸಾರಸಮುದ್ರ ದಲ್ಲಿ) **ಘಾಸಿಗೊಳಿಸುವುದಂ** = ದುಃಖ ಪಡಿಸುವುದು. **ಲೇಸು** = ನಿನಗೆ ಯೋಗ್ಯವಲ್ಲ (ಉಚಿತವಲ್ಲ) **ಜೀಯಾ** = ಪ್ರಭುವೇ **ವಿಶೇಷವಾದ ಜ್ಞಾನ** = ಭಗವತ್ಸಂಬಂಧವಾದ ವಿಶೇಷವಾದ ಜ್ಞಾನವನ್ನು **ಮಿಸಲ ಮನ ಮಾಡಿ** = ನನ್ನ ಮನಸ್ಸನ್ನು ಅತ್ತಿತ್ತ ಹೋಗದಂತೆ ನಿನ್ನಲ್ಲಿಯೇ ಇರುವಂತೆ ಮಾಡಿ.

**ಮೂರು ಗುಣಗಳಿಂದ**= ಸತ್ವ, ರಜ, ತಮ - ಎಂಬ ಗುಣತ್ರಯಗಳಿಂದ **ಮೂರು ತಾಪಗಳಿಂದ** = ಆದಿದೈವಿಕ ಆಧಿಭೌತಿಕ, ಆಧ್ಯಾತ್ಮಿಕ ಎಂಬ ಮೂರು ತಾಪಗಳಿಂದ, **ಮೂರು ಅವಸ್ಥೆಯಿಂದ** = ಜಾಗ್ರದಾವಸ್ಥೆ, ಸ್ವಪ್ನಾವಸ್ಥೆ ಮತ್ತು ಸುಷುಪ್ತ್ಯವಸ್ಥೆ ಎಂಬ ಅವಸ್ಥಾತ್ರಯಗಳಿಂದ, **ಮುಕುಂದ** = ಮುಕ್ತಿಪ್ರದನೇ, **ಮೂರು ಐದರಿಂದ** = ಮೂರು + ಐದು = ಎಂಟು ಅಂದರೆ ಅಷ್ಟಮದಗಳಿಂದ **ಮೂರು ಏಳರಿಂದ**= ಮೂರು + ಏಳು = ಹತ್ತು ಅಂದರೆ ಪಂಚಜ್ಞಾನೇಂದ್ರಿಯಗಳು ಮತ್ತು ಪಂಚ ಕರ್ಮೇಂದ್ರಿಯಗಳು ಸೇರಿ ದಶೇಂದ್ರಿಯಗಳು **ಮೂರಾರು ದಾರಿ ಗಾಣದೆ**= ಮೂರು + ಆರು = ಒಂಭತ್ತು ಅಂದರೆ ಶ್ರವಣ, ಕೀರ್ತನೆ ಸ್ಮರಣ, ಪಾದಸೇವನ, ಅರ್ಚನೆ, ವಂದನೆ, ದಾಸ್ಯ, ಸಖ್ಯ ಮತ್ತು ಆತ್ಮಸಮರ್ಪಣೆ- ಎಂಬ ನವವಿಧಭಕ್ತಿಗಳ ಮಾರ್ಗವನ್ನು ಕಾಣದೆ, **ಮೂರಾದೆ**= ಭೂ ಸ್ವರ್ಗ, ನರಕವೆಂಬ ತ್ರಿಪಥಗಳಲ್ಲಿ ಸುತ್ತುತ್ತಿರುವೆನು. **ಮೂರು ಹಿಡಿಸಿ**= ಜ್ಞಾನ, ಭಕ್ತಿ, ವೈರಾಗ್ಯಗಳಲ್ಲಿ ಮನಸ್ಸನ್ನು ತೊಡಗಿಸಿ. **ಮೂರೆರಡೊಡಿಸಿ** = 3 × 2= 6 ಅಂದರೆ ಕಾಮ, ಕ್ರೋಧ ಲೋಭ ಮೋಹ. ಮದ ಮತ್ತು ಮತ್ಸರಗಳೆಂಬ ಅರಿಷಡ್ವರ್ಗಗಳನ್ನು ದೂರಮಾಡಿ **ಮೂರು ಮೂರು ಭಕ್ತಿ**= 3 × 3= 9 ಅಂದರೆ, ನವವಿಧಭಕ್ತಿಗಳನ್ನು, **ಮೂರು ಕಾಲಕೆ ಇತ್ತು**= ಭೂತ. ವರ್ತಮಾನ ಮತ್ತು ಭವಿಷ್ಯತ್ಕಾಲ ರೂಪವಾದ ತ್ರಿಕಾಲಗಳಲ್ಲಿ (ಪ್ರಾತಃ ಕಾಲ, ಮಧ್ಯಾಹ್ನ ಕಾಲ ಸಾಯಂಕಾಲಗಳಲ್ಲಿ) ಕೊಟ್ಟು **ಮೂರು ರೂಪನಾಗಿ**= ವಿಶ್ವ, ತೈಜಸ ಮತ್ತು ಪ್ರಾಜ್ಞ ಎಂಬ ರೂಪತ್ರಯಗಳಿಂದ, **ಮೂರು ಲೋಕವನ್ನೆಲ್ಲ** = ಸ್ವರ್ಗ. ಮರ್ತ್ಯ, ಪಾತಾಳಗಳೆಂಬ ಲೋಕತ್ರಯಗಳೆಲ್ಲವನ್ನೂ, **ಮೂರು ಮಾಡಿದ**= ಸೃಷ್ಟಿ ಸ್ಥಿತಿ ಲಯ ಎಂಬ ಮೂರು ಕಾರ್ಯಗಳನ್ನು ಮಾಡುವ (ಜಾಗ್ರದಾವಸ್ಥೆ, ಸ್ವಪ್ನಾವಸ್ಥೆ, ಸುಷುಪ್ತ್ಯವಸ್ಥೆ) **ಬಿಂಬ ಮೂರುತಿ ವಿಶ್ವ** = ಇಲ್ಲಿ ಶ್ರೀಗೋಪಾಲದಾಸರು ಗಣೇಶಾಂಶರು ಎಂದು ಪ್ರಸಿದ್ಧಿ. ಗಣಪತಿಯ ಬಿಂಬ **ವಿಶ್ವಂಭರನು** ಈ ಪದಪ್ರಯೋಗದಿಂದ ದಾಸವರ್ಯರು ತಾವು ಗಣೇಶಾಂಶರೆಂದು ಸೂಚ್ಯವಾಗಿ ತೋರಿಸಿದ್ದಾರೆ. **ಜರಿದು ಬಿಸಾಡುವರೆ** =

ಸ್ವೀಕರಿಸದೆ ತಿರಸ್ಕರಿಸುವರೇ? ಸರಿಬಂದದ್ದು ಮಾಡು = ನಿನ್ನ ಸಂಕಲ್ಪ ವಿದ್ದಂತೆ ಮಾಡು. ಬಿರುದು ನಿನ್ನದು ದೇವ = ಶರಣಾಗತ ವತ್ಸಲನೆಂಬ ಬಿರುದು ನಿನಗಿದೆ ! ಉರಗಾದ್ರಿವಾಸ = ಶೇಷಾಚಲ ನಿವಾಸಿಯಾದ ಶ್ರೀನಿವಾಸನೇ.



## ೫೪೨

## ಶ್ರೀವೆಂಕಟೇಶ ಪಾರಿಜಾತ

### (ಗುರುಗೋಪಾಲವಿಠ್ಠಲಾಂಕಿತ)

**ರಾಗ-ನಾದನಾಮಕ್ರಿಯೆ (ಪರಜು) ಅಟ್ಟತಾಳ**

**ಶ್ಲೋಕ**

ಶ್ರೀಮಾನ್ ಶೇಷಧರಾಧರಾಧಿಪ ಸದಾ ಶ್ರೀಮಾನ್ ಸುಸೌಖ್ಯಪ್ರದಾ|
ಶ್ರೀಮಾಯಾ ಜಯ ಶಾಂತಿ ಕಾಂತ ಸ್ವರತಾ ಶ್ರೀವಿಷ್ಣು ಸಿದ್ಧೇಶ್ವರಾ||
ಶ್ರೀಮತ್ಪದ್ಮಜ ಪಾರ್ವತೀಶವಿನುತಾ ಶ್ರೀಪಾದಪದ್ಮದ್ವಯಾ|
ಸ್ವಾಮಿನ್ ದೇಹಿ ಸದಾ ತ್ವದೀಯ ಭಜನಂ ಶ್ರೀಕಾಂತ ಪಾಹಿಮಾಮ್ ||

**ಪದ**

ಹಾಟಕಮುಖರೀ ಸರಿತ್ತೀರ-ಕೃತಮಂದಿರ- ವೈಕುಂಠಾಗಾರ
ಕೋಟಿ ಮನ್ಮಥ ಚಂದ್ರ ಭಾಸ್ಕರ-ದ್ಯುತಿ ತಿರಸ್ಕಾರ-ಶ್ರೀತ ಮೋಹನಾಕಾರ
ಕೂಟಸ್ಥ ಅಖಿಳಲೋಕಾಧಾರ—ಸಂತತ ಪರಾತ್ಪರ— ಮನೋಹರಾ
ಕೈಟಭಮುಖ ಖಳ ಜಲಧರ- ಚಂಡಸಮೀರ - ದೀನ ಜನ ಮಂದಾರ||೧||

**ಶ್ಲೋಕ**

ದೇಶಾಕಾಲ ಗುಣ ಅತೀತ ಅನಘಾ ದೇವೇಂದ್ರ ಸಂಸೇವಿತಾ|
ದಾಶಾರ್ಹ ದಶರೂಪ ರೂಪ ಅಜಿತಾ ದಾಮೋದರಾ ಮಾಧವಾ||

ಕಾಳೀಜಾಧವ ಚಿತ್ತಚಕೋರ ಉಡುಪಾ ಕಾಳೀ ಫಣಾಮರ್ಧನಾ|
ಶ್ರೀಶಾಗೀಶ ಅಹೀಶ ಪೂಜ್ಯ ವಿನುತಾ ಶ್ರೀವಿಷ್ಣು ನೀ ಪಾಲಿನೋ||

**ಪದ**

ವಟುವೇಷ ಧರಿಸಿ ವಿಪ್ರರವೃಂದಾ- ವಂಚಿಸಿ ನಿಂದಾ-ಸನ್ನುತ ಮುನಿವೃಂದಾ
ನಟನೆ ಮಾಡುತ ಕುಂಡದೊಳಗಿಂದ-ನಲಿಯುತ ಬಂದಾ- ಹವಿರ್ಭೋಕ್ತಾನಂದ
ವಟದೆಲೆಯೊಳು ಮಲಗಿದ ನಂದ- ನಂದನಕಂದ- ಮೂಲ ಕಾರಣ ಗೋವಿಂದ
ಕುಟಿಲ ಕಟುಮತಿ ಖಳಕುಲ ಕೊಂದ— ಧೀರ ಮುಚುಕುಂದ — ವರದನೆ
ಗೋವಿಂದ ||೨||

**ಶ್ಲೋಕ**

ನಿತ್ಯಾನಂದ ಮಹೋದಧೇ ನಿರುಪಮಾ ನಿರ್ದೋಷ ಜ್ಞಾನಾತ್ಮಕಾ|
ಸತ್ಯಾವಲ್ಲಭ ಸಾತ್ವತಾಂಕುಲಪತೇ ಸಾಯುಜ್ಯ ಸಾರೂಪ್ಯದಾ||
ಸೂತ್ರಾಧಾರಕ ಹೃದ್ಗುಹಾಲಯಾ ಸದಾ ಸುಷುಪ್ತಿ ಜಾಗ್ರತ್ತದಾ|
ಸತ್ಯೈಶ್ವರ್ಯ ಬಲಾದಿ ಸರ್ವಭರಿತಾ ಸರ್ವಾಪರೋಕ್ಷೀ ಸದಾ||

**ಪದ**

ವರಾಭಯ ಚಕ್ರಧರ-ಧರ ಚತುಷ್ಟಯಕರ - ಉರಪೀನ ವಿಸ್ತಾರ
ಸರಿಗೆ ಪದಕವೊಪ್ಪೆ-ಕಂಧರ ಕರಕುಂಡಲರ-ಪ್ರೋಲ್ವ ಕೇಯೂರಾ
ಬೆರಳಲ್ಲಿ ಮಾಣಿಕ್ಯದುಂಗರ- ತೋಳ ಬಂಧುರ- ಸಾಲಿಗ್ರಾಮದ ಹಾರ
ಸಿರಿವತ್ಸಾಂಕಿತ ನಾಭಿಗಂಭೀರ-ಜಗದೋದ್ಧಾರ- ಸರ್ವಭುವನಾಧಾರ ||೩||

**ಶ್ಲೋಕ**

ಲಕ್ಷ್ಮೀವಕ್ಷ ಸುಕುಂಕುಮಾಂಕಿತ ಪದಾ ಲಕ್ಷ್ಮೀವಿಲಾಸಾಸ್ಪದಾ|
ಲಕ್ಷ್ಮೀ ಬಾಹು ಲತಾಶ್ರಯಾ ಭುಜಯುಗಾ ಲಕ್ಷ್ಮ್ಯಾಸದಾಲಿಂಗಿತಾ||
ಲಕ್ಷ್ಮೀ ಅಕ್ಷ ಸುಪದ್ಮ ಪದ್ಮಿನಿ ಪ್ರಿಯಾ ಲಕ್ಷ್ಮೀ ಮನೋನಾಯಕಾ|
ಲಕ್ಷ್ಮೀಚಿತ್ತ ಚಕೋರ ಪೂರ್ಣ ಉಡುಪಾ ಲಕ್ಷ್ಮೀಶ ತ್ವಂ ಪಾಹಿ
ಮಾಂ||

ಪದ

ಸುಖಮಯ ವಿಜ್ಞಾನ ಮಂದರಧರ-ಧರಾಮನೋಹರ-ನರಮೃಗಾಕಾರ
ನಖದಿಂದ ಬ್ರಹ್ಮಾಂಡ ಖರ್ಪರ-ಭೇದಿಸಿದ ಧೀರ ರಾಜಕುಲಘ್ನ ಈರ-
ಮುಖವ ಕಾಯ್ದ ಮಹನ್ನೃಪವರ ಗೋಪಿಜನ- ಜಾರ-ನಾನಾ ಲೀಲಾವತಾರ
ಮುಖಜ ವರದ ಮುಪ್ಪುರಹರ-ನುತ ಮುನಿವರ-ಕಲ್ಕಿ ದೀನ ಮಂದಾರ ॥೪॥

ಶ್ಲೋಕ

ರಂಗಾನಂಗಪಿತಾ ರಮೋತ್ತಮ ಗುಣ ರಾಜೀವ ಫುಲ್ಲೇಕ್ಷಣಾ।
ಗಾಂಗೇಯಾಂಬರ ಹಾರ ನೂಪುರ ಲಸತ್ ಕಾಂಚೀಲತಾ ಶೋಭಿತಾ ॥
ಸಂಗೀತ ಪ್ರಿಯ ಸಾರ ಸನ್ಮುನಿ ಜನಸಂಗಾ ಅಸಂಗಾ ಅಜಾ।
ಗಂಗಾತಾತ ವಿಹಂಗನಃಧಗಮನಾ ಶೃಂಗಾರ ಸಾರಾತ್ಮಕಾ॥

ಪದ

ಸಟಿಯಿಲ್ಲದೆ ನಿನ್ನ ಪಾದವ-ಭಜಿಪರ ಭವಸಿಂಧುವಿನ ಪ್ರವಾಹವ
ಕಟಿಯಲ್ಲಿ ಕರವಿಟ್ಟು ತೋರುವ-ಭಕ್ತ ಕೈರವ-ಸೋಮಾ ಸೋಪಾನನಿಸುವ
ತಟಿತಕೋಟಿ ಪ್ರಭಾವಧಿಃ ಕರಿಸುವ-ಮುದ್ದು ವೈಕುಂಠ ಕಂದೇವ
ಸ್ಫುಟಿತ ಹಾಟಕ ಮಣಿ ಕಟಕವ-ಹಾರಪದಕ ನಿಟ್ಟು ಮೆರೆವ-ಶ್ರೀದೇವ ॥೫॥

ಶ್ಲೋಕ

ನಾನಾ ಜನ್ಮದಿ ಕಾಯವಾಚ ಮನಸಾ ಎನ್ನಿಂದಲೀ ಮಹಾಳ್ಪುದಾ।
ಜ್ಞಾನಾಜ್ಞಾನ ಕೃತಾಖಿಳ ಕ್ರಿಯೆಗಳಾ ನಿನ್ನಿಂದ ಪ್ರೀತ್ಯಾಗಲೀ॥
ನಾನಾ ದ್ರವ್ಯದಿ ಕಾರ್ಯರೂಪ ಗುಣದೀ ಸರ್ವತ್ರ ಬಿಂಬಕ್ರಿಯಾ।
ಜ್ಞಾನ ಮಾತುರವಿತ್ತು ನೀನೆ ಪೊರೆಯೊ ಪ್ರಾಣೇಶ ನಾರಾಯಣಾ ॥

ಪದ

ವಿಶ್ವ ತೈಜಸ ಪ್ರಾಜ್ಞ ತುರ್ಯಾತ್ಮಾ-ಅಂತರಾತುಮಾ-ಪರಮಾತ್ಮ-
ಜ್ಞಾನಾತ್ಮ
ವಿಶ್ವತೋಮುಖ ಗುಣಗಣ ಧಾಮ-ಸಂತತ ಸಾಮ-ವಂದ್ಯನೆ ಸಾರ್ವಭೌಮ

ವಿಶ್ವನಾಟಕ ಋಗ್ಯಜುಸ್ಸಾಮ- ಆಗಮಸ್ತೋಮ- ಪ್ರತಿಪಾದ್ಯ ತ್ರಿಧಾಮ
ವಿಶ್ವಾಸದಿಂದಲಿ ತವನಾಮ- ಭಜನೆಯ ಕಾಮ- ಎನಗೀಯೊ
ಶ್ರೀರಾಮ ||೬||

ಶ್ಲೋಕ

ಮಂದಹಾಸ ಮುಖೇಂದು ಸಂದರುಶನಾದಿಂದಾವ ಚೆಂದಪ್ಪುದೋ ||
ಒಂದೇ ವಂದನ ಮಾಡಲಾಕ್ಷಣ ಸುಖಸಂದೋಹ ಸಂದಪ್ಪುದೋ ||
ನಿಂದೂ ಅರ್ಚಿಸಿ ಸ್ತೋತ್ರ ಮಾಳ್ಪನಾ ಮಹಾನಂದವನೂ ಬಲ್ಲನೋ|
ತಂದೇ ನಿನ್ನಯ ಸುಂದರಾಂಘ್ರಿ ಸತತಾ ಪೊಂದಿಪ್ಪುದೇ ಪಾಲಿಸೋ ||

ಪದ

ಮಾಡಲರಿಯೆನು- ಸಾದನವನು- ದುಷ್ಟಚಿತ್ತನು- ಪಾಪಕರ್ಮಾದಿ ರತನು-
ಬೇಡುವೆ- ಬಹುವಿಧ ಸುಖವನು-ಆಶಾಬದ್ಧನು- ಇದಕೆ- ಗತಿಯೇನು-
ಬೇಡಿದುದೆಲ್ಲಕೊಡುವೆ ನೀನು-ಎಂದು ಬಂದೆನು-ಆಶ್ರಿತ ಸುರಧೇನು-
ಬೇಡದಂದದಿ ಮಾಳ್ಪ ಧೊರೆ ನೀನು-ಇದೇ ವಂಬನು - ನೀಡ ಬಹು -
ದೈವ ನೀನು||೭||

ಶ್ಲೋಕ

ಅನ್ಯಾವಾರ್ತೆಗೆ ಪೋಗಲಿಸದೆ ಮನಾ ನಿನ್ನಂಘ್ರಿಯೋಳ್ ನಿಲ್ಲಿಸೋ
ನಿನ್ನಾವಾರ್ತೆಯ ಕೇಳಿಸೈಯು ಕಿವಿಗೇ ನಿನ್ನನ್ನೇ ಕೊಂಡಾಡಿಸೋ |
ನಿನ್ನಾಮೂರ್ತಿಯ ತೋರಿಸೈಯು ಮನಕೇ ನಿನ್ನರ್ಚನೆ ಮಾಡಿಸೋ |
ನಿನ್ನತ್ತಾಗಲಿ ಸರ್ವ ಇಂದ್ರಿಯಗಳ್ ನಿನ್ನಾಳ್ಗಳೋಳ್ ಕೂಡಿಸೋ ||

ಪದ

ಭಜಿಪ ಜನರ ಭಾಗ್ಯೋದಯಾ-ಭಾಗವತ ಧ್ಯೇಯ-ಶುಭಗುಣ ನಿಲಯ
ವಿಜಯ ಸಾರಥಿ ವೀತಾಖಿಳ ಹೇಯ - ವಿನರ್ಜಿತಮಾಯಾ-ವಿಪ್ರಗೋಸುರ
-ಪ್ರಿಯಾ

ಶ್ರೀ ಜಗದೀಶನೆ ಅಪ್ರಾಕೃತಕಾಯಾ - ಕವಿಜನಗೇಯಾ - ವೆಂಕಟಗಿರಿರಾಯಾ
ನಿಜ ಗುರುಗೋಪಾಲವಿಠ್ಠಲಯ್ಯ - ನಮೋ ನಮೋ - ಜೀಯಾ ಬೇಗ
ಪಿಡಿಎನ್ನ ಕೈಯಾ ||೮||

❋



(ಜಗನ್ನಾಥವಿಠ್ಠಲಾಂಕಿತ)

ರಾಗ-ತೋಡಿ ಆಟತಾಳ

ಸ್ತುತಿಸಬಲ್ಲನೆ ನಾ ನಿನ್ನ ವೇಂಕಟರನ್ನ || ||ಪ||

ಸ್ತುತಿಸಬಲ್ಲನೆ ಲಕ್ಷ್ಮೀಪತಿ ನಿನ್ನ ಬ್ರಹ್ಮ ಪಾ-
ರ್ವತಿಪತಿಗಳ ಪಡೆದತುಳ ಮಹಿಮೆಗಳ ||ಅ||

ನಮಿಪ ಜನರ ಕಲ್ಪದ್ರುಮ ದುಷ್ಟ ದಾನವ
ದಮನ ದಿವಿಜ ಕುಲೋತ್ತಮ ಲಕ್ಷ್ಮೀಪವನಾದಿ
ಸುಮನಸಾರ್ಚಿತ ಪಾದ ಕಮಲಯುಗ್ಮನೆ ಅನು
ಪಮ ರೂಪ ಲಾವಣ್ಯ ಕಮನೀಯ ಕಾಯ ಹೃ
ತ್ತಿಮಿರ ಭಾಸ್ಕರ ಶ್ರೀ ಭೂರಮಣ ಸರ್ವಗ ಸದಾ
ಗಮವೇದ್ಯ ವೇದವ್ಯಾಸ-ಕಪಿಲ ದತ್ತ
ಕಮಲಾಪ್ತ ಕೋಟಿ ಭಾಸ-ತ್ವದ್ಭೃತ್ಯರ
ಸಮುದಾಯ—ಕೀಯೋ ಲೇಸ-ಆನತಬಂಧು
ಸುಮುಖ ಶುಭನೆಂದಾನಮಿಪೆ ಎನ್ನರಸ || ||೧||

ಘನಮಹಿಮನೆ ಬೃಂದಾವನವಾಸಿ ಸ್ವಪ್ರಿಯೋ-
ಜನವಿವರ್ಜಿತ ಗೋವರ್ಧನಧಾರ ಗೋಪೀ-

ಜನ ಮನೋರಂಜನ ಜನಕಜಾರಮಣ ಪ್ರೊ-
ತನಿ ಪ್ರಾಣಕಾಂತಕ ವೇದವಿನುತ ಶ್ರೀವತ್ಸಲಾಂ-
ಛನವಕ್ಷ ಕೌಸ್ತುಭಮಣಿ ವೈಜಯಂತಿ ಸ-
ದ್ವನ ಮಾಲಾನ್ವಿತ ಕಂಧರ-ಸತತ ನಿಷ್ಕಿಂ-
ಚನ ಭಕ್ತಜನಮಂದಾರ-ಸತ್ಕಲ್ಯಾಣ-
ಗುಣಜ್ಞಾನಾತ್ಮಕ ಶರೀರ-ವಂದಿಸುವೆ ಮ-
ನ್ಮನದೊಳು ನೆಲೆಸು ಕರುಣಾಪಾರಾವಾರ ॥ ॥೨॥

ಕಲಿಮುಖ ದೈತ್ಯ ಗಂಟಲಗಾಣ ಗುರುತಮ
ಬಲಿ ಬಂಧ ಮೋಚಕ ಸುಲಭ ಚಿತ್ಸುಖದಾಯಿ
ಫಲಚತುಷ್ಟಯ ನಾಮ ಫಲಸಾರಭೋಕ್ತೃ ಶಂ-
ಫಲಿಪುರವಾಸಿ ಬೆಂಬಲನಾಗಿ ಭಕ್ತರ
ಸಲಹುವ ಕರುಣೆ ಬಾಂಬೊಳೆಯ ಜನಕ ಲಕ್ಷ್ಮೀ—
ನಿಲಯ ನಿರ್ಗತದುರಿತ-ಮನ್ಮನದ ಚಂ-
ಚಲವ ಬಿಡಿಸೊ ನಿರುತ-ಬೇಡಿಕೊಂಬೆ
ತಲೆಬಾಗಿ ಸರ್ವಗತ-ನೀನಹುದೆಂದು
ತಿಳಿಸು ತೀವ್ರದಿ ಮುಪ್ಪೊಳಲುರಿಗನ ತಾತ ॥ ॥೩॥

ಉದಿತ ಭಾಸ್ಕರನಂತೆ ಸುದತೇರಿಂದೊಡಗೂಡಿ
ಉದರನಾಮಕ ನೀನು ಉದರದೊಳಿದ್ದನ್ನ
ಉದಕಗಳಿಗೆ ನಿತ್ಯಾಸ್ಪದನಾಗಿ ಜೀವರ
ಹೃದಯದೊಳಿರುತಿಪ್ಪ ಸದಸದ್ವಿಲಕ್ಷಣ
ವಿಧಿಭವ ಶಕ್ರಾದಿ ತ್ರಿದಶವಂದಿತ ಪಾದ
ಬದಿಗನಾಗಿರಲು ಪಾಪ-ಕರ್ಮಗಳು ಬಂ
ದೊದಗುವುವೇನೋ ಶ್ರೀಪ—ಪರಿಹರಿಸೋ ನೀ
ಬಾಧಜನರಂತಸ್ತಾಪ-ಬಿಡಿಸಿ ನಿತ್ಯ
ಭಿಧುರದಂದದಿ ಪೊಳೆಯೊ ದೋಷ ನಿರ್ಲೇಪ ॥ ॥೪॥

ಕವಿಭಿರೀಡಿತ ಪುಣ್ಯಶ್ರವಣ ಕೀರ್ತನ ಮತ್ಸ್ಯಾ-
ದ್ಯವತಾರಂತರ್ಯಾಮಿ ಪ್ರವಿವಿಕ್ತ ಭುಗ್ವಿಭು
ಭವವಧಿವಹು ಪೋತ ಪವನತ್ರಯ್ಯಾಹ್ವಯ
ಶಿವರೂಪಿ ಶಿವದ ಭೂರ್ಭುವ ಸ್ವಸ್ಥ ಸ್ವವಶ ಭಾ-
ರ್ಗವ ನಿನ್ನೊಳಿಪ್ಪ ದಾನವನ ಸಂಹರಿಸುವ

ನೆವನದಿ ದಾಶರಥಿ-ಸಂಗಡ ಯುದ್ಧ
ತವಕದಿ ಮಾಡಿ ಭೀತಿ-ಬಟ್ಟವನಂತೆ
ಅವನಿಗೆ ತೋರ್ದ ರೀತಿ-ವರ್ಣಿಸಲಿನ್ನು
ಪವನ ಮುಖ್ಯಾದ್ಯರಿಗವಶ ನಿನ್ನಯ ಖ್ಯಾತಿ॥ ॥೫॥

ಗತಶೋಕ ಗಾಯತ್ರಿಪ್ರತಿಪಾದ್ಯ ತತ್ವಾಧಿ-
ಪತಿಗಳೆನಿಸುವ ದೇವತೆಗಳೊಳಿದ್ದು ಮಾ-
ರುತನಿಂದಲೊಡಗೂಡಿ ಪ್ರತಿದೇಹದಲಿ ಯೋ-
ಗ್ಯತೆಯನರಿತು ಕರ್ಮಗತಿಗಳ ನೀವೆ ಸಾಂ-
ಪ್ರತ ಬೇಡಿಕೊಂಬೆ ಅನತರ ಸಂತೈಸೆಂದು

ಪ್ರಥಮಾಂಗಪ್ರಿಯಸತ್ತಮ-ಸೌಭಾಗ್ಯ ಸಂ-
ಭೃತಸಾರ ಸರ್ವೋತ್ತಮ-ನೀನೆ ಪಾಂಡು-
ಸುತರಾದ ಧರ್ಮ ಭೀಮ-ಪಾರ್ಥರ ಕಾಯ್ದ
ಪ್ರತಿಗಾಣೆ ನಿನಗೆ ಸಾತತ ಪರಂಧಾಮ ॥ ॥೬॥

ಆಪದ್ಬಾಂಧವ ಬಹುರೂಪ ರುಕ್ಮಿಣೀಶ
ತಾಪಸಜನ ಹೃತ್ತಾಪ ಪರಿಹರ ಧರ್ಮ-
ಸ್ಥಾಪಕ ಸ್ಥವಿರ ನಿರ್ಲೇಪ ಗುಣತ್ರಯ-
ವ್ಯಾಪಕ ಸುಖಧರ್ಮಪ್ರಾಪಕ ಸುಜನಲೋ-
ಕೋಪಕಾರಕ ಧರ್ಮಯೂಪ ಊರ್ಧ್ವಗ ನಿರ್ಗು-

ಣೋಪಾಸಕರ ಸಲಹ-ಲೋಸುಗದಿ ಸ-
ಮೀಪದಲ್ಲಿರು ಶ್ರೀ ಸಹ-ದುರ್ಜನರ ಸ-

ಲ್ಲಾಪದಿ ಬಹ ಕಲಹ-ಮಾಣಿಸೋ ಭವ-
ಕೂಪಾರನಾವಿಕ ಭೂಪತಿವರದ|| ||೭||

ಬಿಸಜಸಂಭವನ ನಿರ್ಮಿಸಿ ನಾಭಿಕಮಲದಿ
ಸ್ವಶರೀರದೊಳು ಸುಮನಸರ ಪಡೆದು ನಿನ್ನ
ಪೆಸರಿಟ್ಟು ಅವರವರೊಳಾದೊಡಾದಿ ತೋ-
ರಿಸಿದೆ ನೀ ಸ್ವತಂತ್ರ ಅಸಮಾನನಿಸಿಕೊಂಡು
ಬಸುರೊಳಗಿಟ್ಟು ಪೊಂಬಸುರಾದಿಸುರರ ಪಾ-
ಲಿಸುವಿ ನೀ ಪ್ರತಿ ಕಲ್ಪದಿ-ನರಕಸ್ವರ್ಗ
ವಸುಮತಿಯ ಲೋಕದಿ-ವಾಸಿಸುವ ರ-
ಕ್ಕಸರ ಅಂಧಂತಮದಿ-ದಣಿಸುತಿಪ್ಪೆ
ಪ್ರಸವಿತನಾಮ ವಂದಿಸುವೆ ಪ್ರಮೋದಿ|| ||೮||

ಪಣೆಗಣ್ಣನ್ವರದಿಂದಗ್ರಣಿಯಾದ ದುಷ್ಟರಾ-
ವಣನ ಬಾಹುಬಲ ಗಣಿಸದೆ ಶಿನಿತಮಾ-
ರ್ಗಣದಿ ಸದೆದು ವಿಭೀಷಣಗೆ ನೀ ಲಂಕಾ ಪ-
ಟ್ಟಣ ಭೋಗ ತತ್ಕಾಲ ಉಣಲಿತ್ತೆ ಭಕುತಗೆ
ಪ್ರಣತಕಾಮದನೆಂಬ ಗುಣ ನಿನ್ನಲ್ಲಿದ್ದ ಕಾ-
ರಣದಿ ಪ್ರಾರ್ಥಿಸುವೆ ನಿನ್ನ-ದಾಸರೊಳು
ಗಣಿಸೊ ನೀದಯದಿ ಎನ್ನ-ತಪ್ಪುಗಳನು
ಎಣಿಸಲಾಗದು ಪ್ರಸನ್ನ-ಪಾಲಕನೆ ಕುಂ-
ಭಿಣಿಸುರರನು ಕಾಯೊ ಕ್ಷಣಕ ಲಕ್ಷ್ಮಣನಣ್ಣ|| ||೯||

ಶಫರ ಕೂರ್ಮ ಕ್ರೋಢಪುರುಷ ಓರಣ್ಯಕ-
ಶಿಪುವಿನ ಸೀಳ್ದ ಕಾಶ್ಯಪಿಯಾಚಕನೆ ದುಷ್ಟ-
ನೃಪರ ಸಂಹರಿಸಿದೆ ಕಪಿವರ ಪೂಜಿತ
ದ್ರುಪದಾತ್ಮಜೆಯ ಕಾಯ್ದ ತ್ರಿಪುರಾರಿ ಕಲಿಮುಖ-
ರುಪಟಳವ ಬಿಡಿಸಿದೆ ಕೃಪಣವತ್ಸಲ ಕಲ್ಕಿ

ಅಪವರ್ಗಪ್ರದ ಅಮುಕ್ತ-ರೂಪಾತ್ಮಕ
ಸುಫಲ ಚಿತ್ಸುಖಭರಿತ-ತ್ರೈಲೋಕ್ಯಾದಿ
ಪ್ರಮಿತುಪಾಯನೆ ನಿರುತ-ಪ್ರಾರ್ಥಿಸುವೆ ನಿ-
ನ್ನ ಪರೋಕ್ಷವಿತ್ತು ಪಾಲಿಪುದೆನ್ನ ಸ್ವರತ ॥ ॥೧೦॥

ವಟಪತ್ರಶಯನ ವೆಂಕಟಗಿರಿನಿಲಯ ನಿ-
ಷ್ಕುಟಿಲ ದುರ್ವಿಷಯಲಂಪಟರ ಸದೆದು ನಿನ್ನ
ಭಟಜನರಿಗೆ ಧರ್ಮಘಟಕನಾಗುವೆ ನಿತ್ಯ
ವಟುರೂಪಿ ಯುಟಪಾದಾಂಗುಟದಿಂದಬ್ಜಜಾಂಡ-
ಕಟಹ ಭೇದಿಸಿ ದೇವಕಟನಿಯ ಪಡೆದು ಧೂ-
ರ್ಜಟಿ ತಲೆಯೊಳು ಧರಿಸಿ-ಸಾಸಿರನಾಮ
ಪಠಿಸುತ್ತ ನತಿಪರಿಸು-ಕುಣಿದನೆಂದು-
ತ್ಕಟದಿ ಕೈಗಳ ಬಾರಿಸಿ-ಜಗನ್ನಾಥ
ವಿಠ್ಠಲ ಸರ್ವೋತ್ತಮ ದಿಟವೆಂದುದ್ಘಟಿಸಿ ॥ ॥೧೧॥

— ೧೧ —

**ಅರ್ಥವಿವರಣೆ.—**

**ತುತಿಸಬಲ್ಲೆನೆ ನಾ ನಿನ್ನ** = ಅಪಾರಮಹಿಮಾಸಂಪನ್ನನಾದ ನಿನ್ನನ್ನು ಪೂರ್ಣವಾಗಿ ಸ್ತೋತ್ರಮಾಡಲು ನಾನೆಂದಿಗಾದರೂ ಸಮರ್ಥನೇ ? (ರಮಾಬ್ರಹ್ಮಾದಿಗಳಿಗೇ ಸಾಕಲ್ಯೇನ ತಿಳಿಯಲು ಸಾಧ್ಯವಿಲ್ಲ) **ವೆಂಕಟರನ್ನ** = ಹೇ ವೆಂಕಟನಾಥ ! (ರನ್ನ-ಸರ್ವೋತ್ತಮ ಶ್ರೇಷ್ಠ) **ಬ್ರಹ್ಮ ಪಾರ್ವತಿಪತಿಗಳ ಪಡೆದ** = ಚತುರ್ಮುಖ ಬ್ರಹ್ಮದೇವರು. ಪಾರ್ವತೀರಮಣರಾದ ರುದ್ರ ಇತ್ಯಾದಿ ದೇವತೆಗಳನ್ನು ಸೃಷ್ಟಿಸಿದ. **ಅತುಳ ಮಹಿಮೆಗಳ** = ಅಪಾರ ಮಹಿಮಾತಿಶಯಗಳನ್ನು.

**ಕಲ್ಪದ್ರುಮ** = ಶರಣಾಗತ ಜನರ ಕಲ್ಪವೃಕ್ಷಸದೃಶನೇ (ದ್ರುಮ-ವೃಕ್ಷ) **ದುಷ್ಟ ದಾನವ ದಮನ** = ದುರುಳರಾದ ದೈತ್ಯರನ್ನು ನಿಗ್ರಹಿಸುವವನು. **ದಿವಿಜ ಕುಲೋತ್ತಮ** = ದೇವತಾಗಣದಲ್ಲಿ ಶ್ರೇಷ್ಠನು (ದಿವಿಜ-ಸ್ವರ್ಗವಾಸಿಗಳಾದ ದೇವತೆಗಳು) **ಲಕ್ಷ್ಮೀಶಪವನಾದಿ ಸುಮನಸಾರ್ಚಿತ ಪಾದಕಮಲಯುಗ್ಮನೆ** = ಶ್ರೀಲಕ್ಷ್ಮೀದೇವಿ, ಶ್ರೀವಾಯುದೇವರು (ಪವನ) ಇವರೇ ಆದಿಯಾಗಿ ಸಮಸ್ತದೇವತೆಗಳಿಂದ [ಸುಮನಸ] ಪೂಜಿತ ಪಾದಪದ್ಮವುಳ್ಳವನು **ಅನುಪಮ** = ಅಸದೃಶಪಾದ, **ರೂಪಲಾವಣ್ಯ** ಸೌಂದರ್ಯಯುತನು **ಕಮನೀಯಕಾಯ** = ಮನೋಹರವಾದ ದೇಹವುಳ್ಳ (ಮಂಗಳಾಕಾರನು) **ಹೃತ್ತಿಮಿರ ಭಾಸ್ಕರ** = ಹೃದಯದಲ್ಲಿರುವ [ಮನಸ್ಸು] ಅಜ್ಞಾನವೆಂಬ ಕತ್ತಲೆಯನ್ನು ಪರಿಹರಿಸುವ ಸೂರ್ಯನಂತಿರುವ ಹೃತ್—ಮನಸ್ಸು ತಿಮಿರ–ಕತ್ತಲೆ) **ಶ್ರೀರಮಣ** = ಶ್ರೀಭೂದೇವಿಯರ ಪತಿಯಾದವ (ಎಡಬಲದಲ್ಲಿರುವ) **ಸರ್ವಗ** = ಸರ್ವತ್ರ ವ್ಯಾಪ್ತನಾದವ. (ಗ-ಪ್ರದೇಶ). **ಸದಾಗಮ ವೇದ್ಯ** = ಸಚ್ಛಾಸ್ತ್ರಗಳಿಂದ ತಿಳಿಯಲ್ಪಡುವವನು **ವೇದವ್ಯಾಸ** = ಪರಾಶರ ಸತ್ಯವತೀ ಸೂನುವಾದ ಶ್ರೀ ಬಾದರಾಯಣರು **ಕಪಿಲ** = ದೇವಹೂತಿ ಪುತ್ರನಾದ ಕಪಿಲಾವತಾರಿ ಶ್ರೀಹರಿ. **ದತ್ತ** = ಅತ್ರಿಪುತ್ರನಾದ ದತ್ತಾತ್ರೇಯರೂಪಿ ಶ್ರೀ ಹರಿ, **ಕುಮುದಾಪ್ತಕೋಟಿಭಾಸ** = ಕೋಟಿಚಂದ್ರರ ಪ್ರಕಾಶವುಳ್ಳವ (ಕುಮುದಾಪ್ತ = ಕುಮುದ ಪುಷ್ಪಗಳಿಗೆ ಆಪ್ತನಾದವನು ಚಂದ್ರ) **ತ್ವತ್ಭೃತ್ಯರ** = ನಿನ್ನದಾಸವರ್ಗದವರ **ಸಮುದಾಯಕ್ಕೆ ಈಯೋ** = ಸುಖವನ್ನು ಕೊಡುವವನಾಗು. **ಅನತಬಂಧು** = ನಮಸ್ಕರಿಸಿ ಶರಣಾಗತರಾಗಿ ಬಂದವನಿಗೆ ಬಂಧುವಾದ. **ಸುಮುಖ** = ಪ್ರಸನ್ನವದನನಾದ **ಸುಲಭನು ಎಂದು ಅನವಿುಸೆ** = ಭಕ್ತ ಜನರಿಗೆ ಸುಲಭವಾಗಿ ಲಭ್ಯನು ನೀನೆಂದು ತಿಳಿದು, ನಿನಗೆ ನಮಸ್ಕರಿಸುತ್ತಿದ್ದೇನೆ, **ಎನ್ನರಸ** = ನಮ್ಮೆಲ್ಲರ ಪ್ರಭುವೇ.

**ಘನಮಹಿಮನೆ** = ಮಹಾಮಹಿಮಸಂಪನ್ನನೇ. **ಬೃಂದಾವನವಾಸಿ** = ಗೋಕುಲ ಸಂಚಾರಿ, **ಸ್ವಪ್ರಯೋಜನ ವಿವರ್ಜಿತ** = ತನಗೇ

ಇತರರ್ಯಾರಿಂದಲೂ ಪ್ರಯೋಜನವಿಲ್ಲದ (ಶ್ರೀ ಪರಮಾತ್ಮನಿಗೆ ಯಾರಿಂದಲೂ ಯಾವ ವಿಧವಾದ ಪ್ರಯೋಜನವಿಲ್ಲ. ಸಕಲರಿಗೂ ಅವನು ಪ್ರಯೋಜನ ಕಾರಿಯು) **ಗೋವರ್ಧನ ಧಾರಿ** = ಗೋವರ್ಧನ ಪರ್ವತವನ್ನು ಎತ್ತಿದ ಶ್ರೀ ಕೃಷ್ಣ. **ಗೋಗೋಪೀ ಜನ** = ಗೋವುಗಳು ಗೋಪಿಕಾಸ್ತ್ರೀಯರು ಸಕಲ ಗೋಪಾಲರ **ಮನೋರಂಜನ** = ಮನಸ್ಸನ್ನು ಆನಂದಪಡಿಸಿದವನೇ **ಜನಕಜಾರಮಣ** = ಜನಕರಾಜನ ಪುತ್ರಿಯಾದ ಸೀತಾದೇವಿಯ ಪತಿಯೇ **ಪೂತನಿ ಪ್ರಾಣಾಂತಕ** = ಪೂತನಿಯ ಪ್ರಾಣವನ್ನು ಕೊನೆಗಾಣಿಸಿದವನೇ, **ವೇದವಿನುತ** = ಅನಂತ ವೇದರಾಶಿಗಳಿಂದ ಸಂಸ್ತುತ್ಯಮಾನನೇ **ಶ್ರೀವತ್ಸ ಲಾಂಛನ ವಕ್ಷ** = ಲಕ್ಷ್ಮಿಯೇ ಶ್ರೀ ವತ್ಸವೆಂಬ ಲಾಂಛನದಿಂದ ಶ್ರೀಹರಿಯ ವಕ್ಷಸ್ಥಳದಲ್ಲಿದ್ದಾಳೆ. **ಕೌಸ್ತುಭಮಣಿ** = ಬ್ರಹ್ಮನಿಂದ ಅರ್ಪಿತವಾದ ಕೌಸ್ತುಭ ರತ್ನ, **ವೈಜಯಂತಿ** = ವೈಜಯಂತಿ ಎಂಬ ಶುಭನಾಮವುಳ್ಳ **ಸದ್ವನಮಾಲಾನ್ವಿತಕಂಧರ** = ವನಮಾಲೆಯನ್ನು ಕಂಠದಲ್ಲಿ ಧರಿಸಿದವನೇ **ಸತತ** = ಯಾವಾಗಲೂ, **ನಿಷ್ಕಿಂಚನ ಭಕ್ತಜನಮಂದಾರ** = ದೇವತಾ ವರ್ಗವೆಂಬ ಭಕ್ತರಿಗೆ (ಐಹಿಕಸಂಪತ್ತಿನಿಂದ ರಹಿತರಾಗಿ ಶ್ರೀಹರಿಯಲ್ಲೇ ಆಸಕ್ತ ಮನಸರಾದ ಭಗವದ್ಭಕ್ತರು ನಿಷ್ಕಿಂಚನರು) ಕಲ್ಪವೃಕ್ಷ ಸದೃಶನೇ, **ಸತ್ಕಲ್ಯಾಣ ಗುಣ ಜ್ಞಾನಾತ್ಮಕ ಶರೀರ** = ಅನಂತಕಲ್ಯಾಣ ಗುಣಗಣ ಪರಿಪೂರ್ಣವಾದ ಶರೀರವುಳ್ಳವನೇ (ಜ್ಞಾನಸ್ವರೂಪನೇ) **ವಂದಿಸುವೆ** = ನಿನಗೆ ಸಾಷ್ಟಾಂಗ ಪೂರ್ವಕ ನಮಸ್ಕಾರ ಮಾಡುತ್ತೇನೆ. **ಕರುಣಾ ಪಾರಾವಾರ** = ಎಲೈ ದಯಾಸಾಗರನೇ, = **ಮನ್ಮನದೊಳು ನೆಲೆಸು** = ನನ್ನ ಮನೋ ಮಂದಿರದಲ್ಲಿ ನೆಲೆಗೊಳ್ಳು.

**ಕಲಿಮುಖ**=ಕಲಿಯೇ ಮೊದಲಾದ, **ದೈತ್ಯ ಗಂಟಲಗಾಣಾ** = ದೈತ್ಯರ ಕತ್ತನ್ನು ಹಿಚುಕುವವನೇ (ವಿನಾಶಕ) **ಗುರುತಮ** = ಬ್ರಹ್ಮಾದಿಗಳಿಗೂ ಜ್ಞಾನೋಪದೇಶಕನಾದ ಗುರು ಶ್ರೇಷ್ಠನು **ಬಲಿ ಬಂಧಮೋಚಕ** = ಬಲಿಯ ಸಂಸಾರ ಬಂಧವನ್ನು ಬಿಡಿಸಿ ಉದ್ಧರಿಸಿದವನೇ (ಬಲಿಯನ್ನು ವರುಣಪಾಶದಿಂದ ಬಿಡಿಸಿದ ಶ್ರೀವಾಮನ ರೂಪಿ] **ಸುಲಭ**= ಭಕ್ತರಿಗೆ ಸುಲಭ ಪ್ರಾಪ್ಯನೇ **ಚಿತ್ಸುಖದಾಯಿ**= ಸ್ವರೂಪಾನಂದ ಪ್ರದನೇ (ಮುಕ್ತಿ ದಾತನೇ) **ಫಲಚತುಷ್ಟಯನಾಮ**= ಧರ್ಮ, ಅರ್ಥ, ಕಾಮ ಮತ್ತು

ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಪ್ರದನೇ ಮತ್ತು ತದ್ವ್ಯಾಖ್ಯನೇ **ಫಲಸಾರಭೋಕ್ತ** - ಸುಖಪೂರ್ಣನಾದರೂ, ಆಯಾಯ ವಸ್ತುಗತ ಶುಭ ರಸ (ಸ್ವಾಖ್ಯ) ಸ್ವೀಕಾರದಿಂದ, ಜೀವರಿಗೆ ಭೋಗಪ್ರದನೇ. **ಶಂಫಲಿ ಪುರವಾಸಿ** = **ಶಂಬಲ** ಎಂಬ ಹೆಸರಿನ ಗ್ರಾಮದಲ್ಲಿ ಕಲ್ಕಿರೂಪದಿಂದ ಅವತರಿಸುವವನೇ. **ಬೆಂಬಲನಾಗಿ** = ಪರಮಾಪ್ತನಾಗಿದ್ದು ಕೊಂಡು **ಭಕ್ತರ ಸಲಹುವ ಕರುಣಿ** = ನಿನ್ನ ಭಕ್ತಜನರನ್ನು ಸದಾ ಸಂರಕ್ಷಿಸುತ್ತಿರುವ ದಯಾವಂತನೇ. **ಬಾಂಬೊಳೆಯ ಜನಕ** = ಗಂಗಾಪಿತನೇ (ಬಾನಿನ ಹೊಳೆ = ಬಾಂಬೊಳೆ. ಆಕಾಶಗಂಗೆಯಾದ ಶ್ರೀಹರಿಯ ಪಾದೋದ್ಭವೆ ಗಂಗಾ), **ಲಕ್ಷ್ಮೀನಿಲಯ** = ಲಕ್ಷ್ಮಿಗೆ ಸದಾ ತನ್ನ ವಕ್ಷಸ್ಥಳದಲ್ಲಿ ಆಶ್ರಯ ನೀಡಿರುವವನೇ. **ನಿರ್ಗತದುರಿತ** = ದೋಷವಿದೂರನೇ. **ನಿರುತ** = ಯಾವಾಗಲೂ **ಮನಸ್ಸಿನ ಚಂಚಲ ಬಿಡಿಸೋ** = ನನ್ನ ಮನಸ್ಸಿನ ಚಾಂಚಲ್ಯವನ್ನು (ಅಸ್ಥಿರತೆ) ಪರಿಹರಿಸು. **ಬೇಡಿಕೊಂಬೆ ತಲೆಬಾಗಿ** = ಶಿರಸಾ ನಮಸ್ಕರಿಸಿ, ನಿನ್ನನ್ನು ಪ್ರಾರ್ಥಿಸುತ್ತೇನೆ. **ಸರ್ವಗತ** = ಸರ್ವತ್ರ ವ್ಯಾಪ್ತನಾಗಿದ್ದೀಯೆ. **ನೀನಹುದೆಂದು ತಿಳಿಸು** = ಎಂಬ ಜ್ಞಾನವನ್ನು ಅನುಗ್ರಹಿಸು. **ತೀವರದಿ** = ಶೀಘ್ರದಲ್ಲಿ. **ಮುಪ್ಪೊಳಲುರಿಗನ ತಾತ** = ರುದ್ರದೇವರ ತಾತನೇ (ಮುಪ್ಪೊಲುರಿಗನ = ಫಲದಲ್ಲಿ ಉರಿಗಣ್ಣನ್ನು, ಅಗ್ನಿ ನೇತ್ರವನ್ನು ಹೊಂದಿರುವ ತ್ರಿನೇತ್ರನಾದ ರುದ್ರ).

**ಉದಿತ ಭಾಸ್ಕರನಂತೆ** = ಆಗತಾನೇ ಉದಯಿಸುತ್ತಿರುವ ಸೂರ್ಯನಂತೆ (ಬಾಲಸೂರ್ಯ). **ಸುದತೀರಿಂದೊಡಗೂಡಿ** = ತನ್ನ ಪತ್ನಿಯರಿಂದ ಸಹಿತನಾಗಿ (ಶ್ರೀ ಭೂದೇವಿ ಸಮೇತ). **ಉದರನಾಮಕ** = ವಾಸುದೇವ ನಾಮಕ ಪುರುಷರೂಪೀ ಶ್ರೀಪರಮಾತ್ಮನನ್ನು ಶ್ರೀವಾಯುದೇವರು ಉತ್ಕೃಷ್ಟ ರೀತಿಯಲ್ಲಿ ಸ್ತುತಿಸಿದರು. ಚತುರ್ಮುಖ ಬ್ರಹ್ಮದೇವರ ವಿರಾಟ ದೇಹವನ್ನು ಪಾದಗಳ ಮೇಲ್ಭಾಗದಿಂದ ಶ್ರೀಪರಮಾತ್ಮನು ವಾಯ್ವಾದಿ ತತ್ವಾಭಿಮಾನಿದೇವತೆಗಳಿಂದ ಸಹಿತವಾಗಿ ಪ್ರವೇಶಿಸಿದ ಕಾರಣ. **ಉದರ**

ನಾಮಕನಾದನು **ಉದರದೊಳಿದ್ದ ಅನ್ನ ಉದಕಗಳಿಗೆ**= ಮಾನವರ ಉದರವನ್ನು ಪ್ರವೇಶಿಸುವ ಅನ್ನ ಮತ್ತು ಉದಕಗಳಿಗೆ ಅವಕಾಶಪ್ರದ ನಾಗಿ, **ಜೀವರ ಹೃದಯದೊಳಿಪ್ಪ**= ಜೀವರ ಹೃತ್ಕಮಲದಲ್ಲಿ ನಿವಾಸಿ ಯಾಗಿದ್ದೀಯೆ. **ಸದಸದ್ವಿಲಕ್ಷಣ**= ಕಾರ್ಯ ಕಾರಣ ವಸ್ತುಗಳಿಂದ ಅತ್ಯಂತ ಭಿನ್ನನಾದ (ಸತ್+ಅಸತ್+ವಿಲಕ್ಷಣ) **ವಿಧಿಭವಶಕ್ರಾದಿತ್ರಿದಶ ವಂದಿತಪಾದ**= ಬ್ರಹ್ಮ, ರುದ್ರ, ಇಂದ್ರಾದಿ ದೇವತೆಗಳಿಂದ ನಮಸ್ಕೃತ ವಾದ ಪಾದವುಳ್ಳವನೇ, **ಬದಿಗನಾಗಿರಲು**= ಜೀವರಿಗೆ ಪರಮಾಪ್ತ ನಾಗಿರುತ್ತಿರಲು (ಜೀವರನ್ನು ಎಡಬಿಡದ ಬಿಂಬರೂಪೀ) **ಪಾಪಕರ್ಮ ಗಳು**= ದುಷ್ಟಕರ್ಮಗಳು. **ಬಂದು ಒದಗುವೆನೋ**= ಸಜ್ಜನರಿಗೆ ಲೇಪವಾಗುವುವೇ? **ಶ್ರೀಪ**= ಲಕ್ಷ್ಮೀಪತಿಯೇ, **ಬುಧಜನರ ಅಂತ ಸ್ತಾಪ**= ಜ್ಞಾನಿಗಳ ಅಂತರಂಗದ ತಾಪವನ್ನು (ಮನಸ್ಸಿನ ಕ್ಲೇಶವನ್ನು) **ಬಿಡಿಸಿ**= ನೀನು ಪರಿಹರಿಸಿ, **ಭಿದುರದಂದದಿ**= ಮಿಂಚಿನ ಕಾಂತಿಯಂತೆ, **ಪೊಳೆ**= ಹೃತ್ಪದ್ಮದಲ್ಲಿ ಹೊಳೆಯುವವನಾಗು. **ದೋಷನಿರ್ಲೇಪ**= ದೋಷಗಳ ಸ್ಪರ್ಶಲವಲೇಶವಿಲ್ಲದಿರುವ.

**ಕವಿಭಿರೀಡಿತ**= ಜ್ಞಾನಿಗಳಿಂದ ಸಂಸ್ತುತ್ಯನಾದವನೇ (ಕವಿಭಿ — ಜ್ಞಾನಿಗಳಿಂದ. ಈಡಿತ–ಸ್ತುತ್ಯ) **ಪುಣ್ಯಶ್ರವಣಕೀರ್ತನ**= ಮಂಗಳ ಪ್ರದವಾದ ಶ್ರವಣ ಕೀರ್ತನಗಳುಳ್ಳವನೇ (ಶ್ರೀ ಹರಿಯ ಮಹಿಮೆಗಳನ್ನು ಸ್ತೋತ್ರ ಮಾಡುವುದರಿಂದ, ಕೇಳುವುದರಿಂದ ಶುಭಪ್ರದವು). **ಮತ್ಸ್ಯಾದ್ಯವತಾರ** = ಮತ್ಸ್ಯಾದಿ ಅನೇಕ ಅವತಾರಗಳನ್ನು ಎತ್ತಿದವನೇ. **ಅಂತರ್ಯಾಮಿ**= ಸರ್ವಜೀವರಲ್ಲಿ ಇದ್ದು ನಿಯಾಮಕ ಮಾಡುವವನೇ, **ಪ್ರವಿವಿಕ್ತ ಭುಕ್**= ಸರ್ವವಸ್ತುಗತ ಸ್ವಾಖ್ಯರಸವನ್ನು ಭೋಗಿಸುವವನು. (**ಸ್ವಪ್ನಾವಸ್ಥಾಪ್ರೇರಕನಾದ ತೈಜಸನು ಭೋಗಿಸುವ ರಸವು ಪ್ರವಿವಿಕ್ತ** ವೆನಿಸುವುದು). **ವಿಭು**= ವ್ಯಾಪ್ತನಾದ ಸ್ವಾಮಿಯೇ, **ಭವವನಧಿಯ**= ಸಂಸಾರವೆಂಬ ಸಮುದ್ರಕ್ಕೆ **ಪೋತ**= ನಾವೆಯಂತಿರುವವನೇ (ಸಂಸಾರ ಸಮುದ್ರವನ್ನು ದಾಟಿಸುವವನೇ) **ಸವನತ್ರಯಾಹ್ವಯ**= ಮೂರು ಕಾಲಗಳಲ್ಲಿ ಮಾಡುವ ಹೋಮಗಳ ಹೆಸರುಳ್ಳವನೇ (ಪ್ರಾತಃ, ಮಧ್ಯಾಹ್ನ

ಸಾಯಂಕಾಲತ್ರಯೋಚಿತನಾದ ಕರ್ಮಾಧಿಪತಿಯೇ) **ಶಿವರೂಪಿ** = ರುದ್ರಾಂತರ್ಯಾಮಿಯಾದವ (**ಬ್ರಹ್ಮಣಿ ಬ್ರಹ್ಮರೂಪೋऽಸೌ ಶಿವ ರೂಪೀ ಶಿವೇಸ್ಥಿತಃ**) **ಶಿವದ** = ಮಂಗಳಪ್ರದನೇ (ಶಿವ–ಮಂಗಳ, ಶುಭ) **ಭೂಭುರ್ವಸ್ವಸ್ಥ** = ಭೂಃ, ಭುವಃ, ಸ್ವಃ– ಎಂಬ ವ್ಯಾಹೃತಿ ತ್ರಯಗಳಲ್ಲಿರುವ ತನ್ನಾಮಕನಾದ ಶ್ರೀಹರಿಯೇ (ಗಾಯತ್ರೀ ಪ್ರತಿಪಾದ್ಯ ರೂಪ). **ಸ್ವವಶ** = ಸರ್ವತಂತ್ರಸ್ವತಂತ್ರನೇ (ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡಿರುವವನೇ) **ಭಾರ್ಗವ** = ಭೃಗುಕುಲೋತ್ಪನ್ನನಾದ ಶ್ರೀಪರಶುರಾಮ. **ನಿನ್ನೊಳಿಪ್ಪ** = ವರಬಲದಿಂದ ನಿನ್ನ ದೇಹದಲ್ಲಿ ಆಶ್ರಯವನ್ನು ಪಡೆದಿದ್ದ **ದಾನವನ** = ಅತುಲನೆಂಬ ದೈತ್ಯನನ್ನು **ಸಂಹರಿಸುವ ನೆವದಿ** = ಕೊಲ್ಲುವ ನೆಪದಿಂದ **ಧಾಶರಥಿ ಸಂಗಡ** = ಧಶರಥನ ಪುತ್ರನಾದ ಶ್ರೀರಾಮಚಂದ್ರನೊಡನೆ, **ಯುದ್ಧ ತವಕದಿ ಮಾಡಿ** = ಯುದ್ಧವನ್ನು ಆತುರದಿಂದ ಮಾಡಿ, **ಭೀತಿಬಟ್ಟವನಂತೆ** = ಶ್ರೀರಾಮನಿಗೆ ನೀನು ಹೆದರಿದವನಂತೆ **ತೋರ್ದ ರೀತಿ** = ನಟಿಸಿದ ವಿಡಂಬನೆಯು **ಪವನಮುಖಾದ್ಯರಿಗವಶ** = ವಾಯ್ವಾದಿದೇವತೆಗಳಿಗೆ ವರ್ಣಿಸಲು ಸಾಧ್ಯವಿಲ್ಲ. **ನಿನ್ನಯ ಖ್ಯಾತಿ** = ಹೇ ಪರಶುರಾಮರೂಪೀ ಶ್ರೀಹರಿಯೇ, ನಿನ್ನಯ ಕೀರ್ತಿ ಮಹಿಮೆಗಳು. **ಗತಶೋಕ** = ದುಃಖಾದಿ ದೋಷರಹಿತ (ಆನಂದಪರಿಪೂರ್ಣ). **ಗಾಯತ್ರಿಪ್ರತಿಪಾದ್ಯ** = ೨೪ ಅಕ್ಷರಗಳಿಂದ ಯುಕ್ತವಾದ ತ್ರಿಪಾದ ಸಹಿತವಾದ ಗಾಯತ್ರೀ ಮಂತ್ರದಿಂದ ಪ್ರತಿಪಾದ್ಯನಾದ, **ತತ್ವಾಧಿಪತಿಗಳೆನಿಸುವ** = ಚತುರ್ವಿಂಶತಿತತ್ತ್ವಗಳಿಗೆ ಅಭಿಮಾನಿಗಳಾದ, **ದೇವತೆಗಳೊಳಿದ್ದು** = ದೇವತೆಗಳಲ್ಲಿ ಅಂತರ್ಯಾಮಿ ರೂಪದಿಂದ ಸ್ಥಿತನಾಗಿದ್ದು. **ಮಾರುತನಿಂದೊಡಗೂಡಿ** = ಶ್ರೀ ಮುಖ್ಯಪ್ರಾಣದೇವರ ಸಹಿತನಾಗಿದ್ದು, **ಪ್ರತಿದೇಹದಲಿ** = ಪ್ರತಿ ಯೊಬ್ಬ ಜೀವರ ಸ್ಥೂಲದೇಹದಲ್ಲಿ **ಯೋಗ್ಯತೆಯನ್ನರಿತು** = ಆಯಾಯ ಜೀವರ ಸ್ವರೂಪಯೋಗ್ಯತೆಯನ್ನು ತಿಳಿದು, **ಕರ್ಮಗತಿಗಳ** = ಸಕಲ ಕರ್ಮಜನ್ಯಫಲಗಳನ್ನು. **ಈವೆ** = ಜೀವರ ಅನುಭೋಗಕ್ಕೆ ತಂದು ಕೊಡುವೆ. **ಸಾಂಪ್ರತ** = ಈಗ, **ಅನತರ** = ನಿನಗೆ ಶರಣಾಗತರಾದ

ಜನರನ್ನು, **ಸಂತೈಸೆಂದು** = ಸಂರಕ್ಷಿಸಬೇಕೆಂದು **ಬೇಡಿಕೊಂಬೆ** = ಪ್ರಾರ್ಥಿಸುತ್ತೇನೆ. **ಪ್ರಥಮಾಂಗ** = ಶ್ರೀಹರಿಗೆ ಮುಖ್ಯಪ್ರತೀಕರೂಪ ರಾದ ಶ್ರೀ ವಾಯುದೇವರಿಗೆ **ಪ್ರಿಯಸತ್ತಮ** = ಅತ್ಯಂತ ಪ್ರಿಯನಾದ, **ಸೌಭಾಗ್ಯ** = ಮಂಗಳಕರವಾದ **ಸಂಭೃತ** = ಪೂರ್ಣನಾದ, **ಸಾರ** = ಸಾರ ಭೂತನಾದವನೇ (ಮಂಗಳ ಪರಿಪೂರ್ಣಸ್ವರೂಪನು). **ಸರ್ವೋತ್ತಮ** = ಸರ್ವಪ್ರಕಾರಗಳಲ್ಲಿ ಉತ್ತಮೋತ್ತಮನಾದ ಪರಾತ್ಪರನು. **ಪಾಂಡು ಸುತರಾದ** = ಪಾಂಡುವಿನ ಮಕ್ಕಳಾದ. **ಧರ್ಮಭೀಮಪಾರ್ಥರ** - ಮಾದ್ರಿ ಧರ್ಮರಾಯ, ಭೀಮಸೇನ, ಅರ್ಜುನರನ್ನು (ಅಂತೆಯೇ ಸುತರಾದ ನಕುಲ ಸಹದೇವರೂ ಗ್ರಾಹ್ಯರು) ಸಂರಕ್ಷಿಸಿದೆ. **ನಿನಗೆ ಪ್ರತಿಗಾಣೆ** = ನಿನಗೆ ಸರಿಯಾದವರನ್ನು ಯಾರನ್ನೂ ನಾ ಕಾಣೆ (ಸಮಾಭ್ಯಧಿಕ ಶೂನ್ಯನು) **ಸಂತತ ಪರಂಧಾಮಾ** = ಶ್ರೇಷ್ಠವಾದ ವೈಕುಂಠ–ಅನಂತಾಸನ –ಶ್ವೇತದ್ವೀಪಗಳೆಂಬ ಮುಕ್ತಿ ಧಾಮತ್ರಯಗಳ ಅಧಿಪತಿಯೇ, **ಆಪದ್ಬಾಂಧವ** = ಆಪತ್ತಿನಲ್ಲಿ ಭಕ್ತರನ್ನು ಸಂರಕ್ಷಿಸುವವನು. **ಬಹುರೂಪ** = ಅನಂತಾ ನಂತ ರೂಪಗಳುಳ್ಳವನು. **ರುಕ್ಮಿಣೀಶ** = ರುಕ್ಮಿಣೀರಮಣ ಶ್ರೀಕೃಷ್ಣ. **ತಾಪಸಿ ಜನ ಹೃತ್ತಾಪಾಪಹರ** = ತಪಸ್ವಿಗಳ ಮನಸ್ಸಿನ ತಾಪವನ್ನು ಪರಿ ಹರಿಸುವ (ಹೃತ್‌ತಾಪ–ಮನಸ್ಸಿನ ದುಃಖ) **ಧರ್ಮಸ್ಥಾಪಕ** = ಕಾಲ ಕಾಲಕ್ಕೆ ಅವತರಿಸಿ. ಧರ್ಮವನ್ನು ಸಂಸ್ಥಾಪನೆ ಮಾಡುವ ಧರ್ಮಸ್ವರೂಪಿ, **ಸ್ಥವಿರ** = ಜಗತ್ತಿಗೆ ಹಿರಿಯನಾದವನು (ಪುರಾತನಪುರುಷ) **ನಿರ್ಲೇಪ ಗುಣತ್ರಯ** = ಸತ್ವಾದಿ ಪ್ರಾಕೃತ ಗುಣತ್ರಯಗಳಿಂದ ವಿದೂರನಾಗಿರುವ (ಪ್ರಾಕೃತಜನ್ಯ ಗುಣತ್ರಯಗಳಲ್ಲಿದ್ದು, ಸೃಷ್ಟ್ಯಾದಿ ಜಗದ್ವ್ಯಾಪಾರಗಳನ್ನು ಮಾಡುತ್ತಿದ್ದರೂ ಆ ಗುಣಗಳ ಲೇಪ ಅವನಿಗಿಲ್ಲ). **ವ್ಯಾಪಕ** = ಸರ್ವತ್ರ ಅಂತರ್ಬಹಿಶ್ಚ ವ್ಯಾಪಕನಾಗಿರುವ, **ಸುಖಧರ್ಮಪ್ರಾಪಕ** = ಸುಖಪ್ರದವಾದ ಗುಣಗಳನ್ನು ಜೀವರಿಗೆ ಕೊಡುವವನು (ಹೊಂದಿಸು ವವನು), **ಸುಜನಲೋಕೋಪಕಾರಕ** = ಸಜ್ಜನರಿಗೆ ಉಪಕಾರಿ. **ಧರ್ಮಯೂಪ** = ಧರ್ಮಸ್ಥಾಪನೆಗೆ ಧ್ವಜಸ್ತಂಭನದೃಶನಾದ, **ಊರ್ಧ್ವಗ** - ಮೇಲಿನ ಲೋಕಗಳಲ್ಲಿ ವ್ಯಾಪಿಸಿರುವ, **ನಿರ್ಗುಣೋಪಾಸ**

**ಕರ**=ಶ್ರೀಹರಿಯು ಪ್ರಾಕೃತಗುಣಶೂನ್ಯನೆಂದು ಉಪಾಸಿಸುವರನ್ನು (ಆ ಉಪಾಸನಾ ಬಲದಿಂದ. ತಾವೂ ತ್ರಿಗುಣಾತೀತರಾಗಿರುವ ಜೀವನ್ಮುಕ್ತಜೀವರನ್ನು) **ಸಲಹಲೋಸುಗದಿ**=ಸಂರಕ್ಷಿಸುವ ಉದ್ದೇಶಾರ್ಥವಾಗಿ, **ಶ್ರೀಸಹ** =ಲಕ್ಷ್ಮೀಸಹಿತನಾಗಿ, **ಸಮೀಪದಲ್ಲಿರು**=ಅವರ ಸಮೀಪದಲ್ಲಿರುವವನಾಗು (ಆಪ್ತನಾಗಿ ಎಡಬಿಡದೆ ಇರು), **ದುರ್ಜನರ**=ದುಷ್ಟ ಜನರ ಸಹವಾಸದಿಂದ, **ಸಲ್ಲಾಪದಿ**=ಅವರೊಡನೆ ಉಂಟಾಗುವ ವಿರೋಧಗಳನ್ನು **ಬಹ ಕಲಹ**=ತಜ್ಜನ್ಯ ಜಗಳವನ್ನು **ಮಣಿಸೋ**=ಪರಿಹರಿಸು (ದುಷ್ಟ ಜನರ ಸಹವಾಸದಿಂದ ದೂರವಿರಿಸು) **ಭವಕೂಪಾರೆ ನಾವಿಕ**=ಸಂಸಾರವೆಂಬ ಸಮುದ್ರವನ್ನು ದಾಟಿಸುವ ನಾವಿಕನೇ (ಕೂಪಾರ–ಆಳವಾದ ದುಸ್ತರವಾದ ಸಾಗರ). **ಭೂಪತಿವರಹ**=ಧರಾದೇವಿಯ ಪತಿಯಾದ ವರಾಹಮೂರ್ತಿಯೇ

**ಬಿಸಜಸಂಭವನ**=ಬ್ರಹ್ಮದೇವನನ್ನು (ಬಿಸಜ=ಕಮಲ–ಬಿಸಜಸಂಭವ–ನಾಭೀಕಮಲೋದ್ಭವರಾದ ಶ್ರೀಬ್ರಹ್ಮದೇವರು) **ನಾಭಿಕಮಲದಿ**= ಶ್ರೀಪದ್ಮನಾಭೀರೂಪೀ ಶ್ರೀಹರಿಯು ತನ್ನ ಹೊಕ್ಕಳಿನ ಸುವರ್ಣಾತ್ಮಕವಾದ ಕಮಲದಲ್ಲಿ, **ನಿರ್ಮಿಸಿ**=ತನ್ನ ಇಚ್ಛಾನುಸಾರ ಉತ್ಪತ್ತಿಮಾಡಿ (ಅಭಿವ್ಯಕ್ತಿಗೊಳಿಸಿ). **ಸ್ವಶರೀರದೊಳು**=ತನ್ನ ಪುರುಷನಾಮಕ ವಿರಾಟ್ ದೇಹದಿಂದ **ಸುಮನಸರ** = ದೇವತೆಗಳನ್ನು **ಪಡೆದು**=ಅಂಗಗಳ ದ್ವಾರಾ ಸೃಷ್ಟಿಗೆ ತಂದು, **ನಿನ್ನ ಪೆಸರಿಟ್ಟು**=ಸರ್ವ ಶಬ್ದವಾಚ್ಯನಾದ ಶ್ರೀ ಪರಮಾತ್ಮನು ತನ್ನದೇ ಆದ ರುದ್ರ ಇಂದ್ರ ಇತ್ಯಾದಿ ಹಸರುಗಳನ್ನು ಅವರಿಗೆ ಇಟ್ಟು, **ಅವರವರ ವಶನಾದೋಪಾದಿ**=ಆಯಾಯ ದೇವತೆಗಳ ವಶನಾದವರಂತೆ ನಟಿಸಿ, **ನೀ ಸ್ವತಂತ್ರ**=ನೀನು ಸರ್ವತಂತ್ರಸ್ವತಂತ್ರನೆಂದು, **ಅಸಮವೆನಿಸಿಕೊಂಡು**=ಸಮಾಭ್ಯಧಿಕ ಶೂನ್ಯನೆಂದು ಖ್ಯಾತನಾಮನಾಗಿ **ಬಸುರೊಳಗಿಟ್ಟು**= ಪ್ರಳಯಕಾಲದಲ್ಲಿ ಸರ್ವ ಚರಾಚರಾತ್ಮಕವಾದ ಜಗತ್ತನ್ನು ತನ್ನ ಉದರದೊಳಗೆ ಇಟ್ಟುಕೊಂಡು, **ಪೊಂಬಸುರಾದಿಸುರರ**= ಹಿರಣ್ಯಗರ್ಭನೇ ಮೊದಲಾದ ದೇವತಾವರ್ಗವನ್ನು (ಪೊನ್ನು+ಬಸಿರು= ಪೊಂಬಸುರ= ಹಿರಣ್ಯಗರ್ಭನಾಮಕರಾದ ಬ್ರಹ್ಮದೇವರು), ಪ್ರತಿ

**ಕಲ್ಪದಿ** = ಪ್ರತಿಕಲ್ಪದಲ್ಲಿಯು, **ಪಾಲಿಸುವಿ** = ಸಂರಕ್ಷಣೆ ಮಾಡುತ್ತೀಯೆ, **ನರಕ ಸ್ವರ್ಗ ವಸುಮತಿಯು ಲೋಕದಿ** = ನರಕಲೋಕ, ಸ್ವರ್ಗಲೋಕ ಮತ್ತು ಭೂಲೋಕ (ವಸುಮತಿ) ಗಳೆಂಬ ಲೋಕತ್ರಯಗಳಲ್ಲಿ, **ವಾಸಿಸುವ ರಕ್ಕಸರ** = ಆಯಾಯ ಲೋಕಗಳಲ್ಲಿ ತಮ್ಮ ಕರ್ಮಾನುಸಾರವಾಗಿ ವಾಸಿಸುತ್ತಿರುವ ತಮೋಯೋಗ್ಯರಾದ ದೈತ್ಯರನ್ನು, **ಅಂಧಂತಮದಿ** = ನಿತ್ಯ ದುಃಖ ಭೋಗ ರೂಪವಾದ ಅಂಧತಮಸ್ಸಿನಲ್ಲಿ, **ದಣಿಸುತಿಪ್ಪ** = ನಿತ್ಯ ದುಃಖವನ್ನು ಅವರಿಗೆ ಉಣಿಸುವೆ. **ಪ್ರಸವಿತನಾಮ** = ಜಗತ್ತನ್ನು ಪ್ರಸವಿಸುವವನು (ಪ್ರಸವಿತಾ) ಎಂಬ ಹೆಸರಿನಿಂದ ವೇದಾದಿಗಳಲ್ಲಿ ಪ್ರಸಿದ್ಧನಾದವನು. **ಪ್ರಮೋದಿ** = ಆನಂದ ಪರಿಪೂರ್ಣಸ್ವರೂಪಿಯಾದ ನಿನಗೆ, **ವಂದಿಸುವೆ** = ನಮಸ್ಕರಿಸುತ್ತೇನೆ.

**ಪಣೆಗಣ್ಣನ ವರದಿಂದ** = ಹಣೆಯಲ್ಲಿ ಕಣ್ಣುಳ್ಳ ರುದ್ರದೇವರ ವರದಿಂದ (ಪಣೆ + ಕಣ್ಣು - ಪಣೆಗಣ್ಣು–ಹಣೆಯಲ್ಲಿ ಅಗ್ನಿ ನೇತ್ರವುಳ್ಳ ಫಾಲನೇತ್ರನು) **ಅಗ್ರಣಿಯಾದ** - ಅಜೇಯನೂ ಅವಧ್ಯನೂ ಆದ, **ದುಷ್ಟ ರಾವಣನ** – ದುರುಳನಾದ ರಾವಣಾಸುರನ **ಬಾಹುಬಲ** – ಭುಜ ಪರಾಕ್ರಮವನ್ನು, **ಗಣಿಸದೆ** ಲೆಕ್ಕಿಸದೆ, **ನಿಶಿತಮಾರ್ಗಣದಿ** ಹರಿತವಾದ ಬಾಣದಿಂದ (ಮಾರ್ಗಣ–ಬಾಣ). **ಸದೆದು** = ಸಂಹರಿಸಿ, **ವಿಭೀಷಣಗೆ** ನಿನಗೆ ಶರಣು ಬಂದ ಭಕ್ತ ವಿಭೀಷಣನಿಗೆ, **ಲಂಕಾಪಟ್ಟಣ ಭೋಗ** - ಲಂಕಾಪಟ್ಟಣದಲ್ಲಿ ರಾಜ್ಯಾಭಿಷೇಕವನ್ನು, **ತತ್ಕಾಲ ಉಣಲಿತ್ತೆ** = ಸ್ವಲ್ಪಕಾಲ ಭೋಗಿಸಲು ಅನುಗ್ರಹಿಸಿದೆ. **ಭಕುತಗೆ** = ಭಕ್ತ ಜನರಿಗೆ, **ಪ್ರಣತ ಕಾಮದ** - ಶರಣಾಗತರಿಗೆ ಇಷ್ಟಾರ್ಥಗಳನ್ನು ಕೊಡುವವನು. **ಎಂಬ ಗುಣ ನಿನ್ನಲ್ಲಿದ್ದ ಕಾರಣದಿ** ಎಂಬ ಉದಾತ್ತ ಗುಣ ನಿನ್ನಲ್ಲಿದ್ದ ಕಾರಣದಿಂದ, **ಪ್ರಾರ್ಥಿಸುವೆ** = ನಿನ್ನನ್ನು ಈ ರೀತಿ ಪ್ರಾರ್ಥಿಸುತ್ತೇನೆ– **ನಿನ್ನ ದಾಸರೊಳು** = ನಿನ್ನ ಭಕ್ತ ಜನರ ವರ್ಗದಲ್ಲಿ **ನೀ ದಯದಿ ಗಣಿಸೋ** - ನೀನು ಕಾರುಣ್ಯದಿಂದ ನನ್ನನ್ನು ಸೇರಿಸಿಕೋ (ಒಬ್ಬನು ಎಂದು ಎಣಿಸು) **ಎನ್ನ ತಪ್ಪುಗಳನು ಎಣಿಸಲಾಗದು** = ನನ್ನ ಅಪರಾಧಗಳನ್ನು ಗಣನೆಗೆ ತಾರದಿರು. **ಪ್ರಪನ್ನ ಪಾಲಕನೇ** =

ಶರಣಾಗತ ರಕ್ಷಕನೇ, **ಕುಂಭಿಣಿ ಸುರರನು** = ಬ್ರಾಹ್ಮಣರನ್ನು (ಕುಂಭಿಣಿ –ಭೂಮಿ, ಸುರ–ದೇವತೆಗಳು. ಭೂಸುರರಾದ ವಿಪ್ರವೃಂದ) **ಕ್ಷಣಶ** = ಪ್ರತಿ ಕ್ಷಣದಲ್ಲಿ (ಸದಾ), **ಕಾಯೋ ಲಕ್ಷ್ಮಣನಣ್ಣ** = ಲಕ್ಷ್ಮಣಾಗ್ರಜನಾದ ಶ್ರೀರಾಮನೇ, ಕಾಪಾಡು.

**ಶಫರ** = ಮತ್ಸ್ಯ, **ಕೂರ್ಮ** = ಆಮೆ, **ಕ್ರೋಢವಪುಷ** = ವರಾಹ ರೂಪಿಯೇ (ಕ್ರೋಢ–ಹಂದಿ, ವಪುಷ–ದೇಹವುಳ್ಳವನೇ), **ಹಿರಣ್ಯ ಕಶಿಪುವಿನ ಸೀಳ್ದೆ** = ಹಿರಣ್ಯಕಶಿಪುವಿನ ಉದರವನ್ನು ಬಗೆದ ನರಸಿಂಹ. **ಕಾಶ್ಯಪಿಯಾಚಕನೆ** = ಭೂದಾನವನ್ನು ಬೇಡಿದ ಹೇ ವಾಮನ (ಕಾಶ್ಯಪಿ–ಭೂಮಿ), **ದುಷ್ಟನೃಪರ ಸಂಹರಿಸಿದೆ** = ದುರುಳರಾದ ಕ್ಷತ್ರಿಯರನ್ನು ಸಂಹರಿಸಿದ ಹೇ ಭಾರ್ಗವ ರಾಮ!, **ಕಪಿವರ ಪೂಜಿತ** = ಕಪಿ ಶ್ರೇಷ್ಠ ರಾದ ಶ್ರೀಮದಾಂಜನೇಯನಿಂದ ಸೇವಿತ ಶ್ರೀರಾಮಚಂದ್ರ, **ದ್ರುಪದಾತ್ಮಜೆಯ ಕಾಯ್ದೆ** = ದ್ರುಪದ ರಾಜನ ಪುತ್ರಿಯಾದ ದ್ರೌಪದಿಯನ್ನು ಮಾನ ಸಂರಕ್ಷಣೆ ಮಾಡಿ ಕಾಯ್ದ ಶ್ರೀ ಕೃಷ್ಣ. **ತ್ರಿಪುರಾರಿ** = ರುದ್ರನ ಬಾಣದಲ್ಲಿ ಆವಿಷ್ಟನಾಗಿದ್ದು, ತ್ರಿಪುರಾಸುರರನ್ನು ಸೋಲಿಸಿದ ಶ್ರೀ ವಿಷ್ಣು. ತ್ರಿಪುರರ ಪತ್ನಿಯರನ್ನು ಮೋಹಿಸಿ, ತದ್ವಾರಾ ಅವರ ಪಾತಿವ್ರತ್ಯಭಂಗ ಮಾಡಿ, ತ್ರಿಪುರರ ನಾಶಕ್ಕೆ ಕಾರಣನಾದ ಬುದ್ಧ. **ಕಲಿಮುಖರ** = ಕಲಿಯೇ ಮೊದಲಾದ ದೈತ್ಯರ, **ಉಪಟಳ ಬಿಡಿಸಿದೆ** = ಹಿಂಸೆಯನ್ನು ನಿವಾರಿಸಿದ ಕಲ್ಕಿ ರೂಪೀ ಶ್ರೀಹರಿ. **ಕೃಪಣ ವತ್ಸಲ ಕಲ್ಕಿ** = ದೀನ ದಯಾಳುವಾದ ಕಲ್ಕಿ ರೂಪನೇ! **ಅಪವರ್ಗಪ್ರದ** = ಮುಕ್ತಿ ಪ್ರದ. **ಅಮಿತರೂಪಾತ್ಮಕ** = ಅನಂತಾನಂತರೂಪಗಳುಳ್ಳ, **ಸುಫಲ** = ಶುಭ ಫಲಸ್ವರೂಪನು. **ಚಿತ್ಸುಖ ಭರಿತ** = ಪೂರ್ಣ ಆನಂದ ಸ್ವರೂಪನೇ, **ತ್ರೈಲೋಕ್ಯಾದಿ** = ಸ್ವರ್ಗ– ಮರ್ತ್ಯ– ಪಾತಾಳಗಳೆಂಬ ಮೂರು ಲೋಕಗಳೇ ಆದಿಯಾಗಿ, ಸಮಸ್ತಜೀವ ವರ್ಗ. **ಪ್ರಪಿತಾಮಹನೆ** = ಬ್ರಹ್ಮ ಜನಕನಾದ (ಪಿತಾಮಹ– ಜಗತ್ತಿಗೆ ಪಿತಾಮಹನಾದ ಬ್ರಹ್ಮ). **ನಿರುತ ಪ್ರಾರ್ಥಿಸುವೆ** = ಸರ್ವದಾ ನಿನ್ನನ್ನು ಪ್ರಾರ್ಥಿಸುತ್ತೇನೆ. **ನಿನ್ನ ಪರೋಕ್ಷವಿತ್ತು** = ನಿನ್ನ

ಅಪರೋಕ್ಷರೂಪವಾದ ದರ್ಶನಭಾಗ್ಯವನ್ನು ಕರುಣಿಸು **ಸ್ವರತ** = ಸ್ವರಮಣ ನಾದ ನೀನು (ಸ್ವರೂಪಾನಂದಪೂರ್ಣನು), **ಎಮ್ಮ ಪಾಲಿಪುದು** ನಮ್ಮನ್ನು ಸಂರಕ್ಷಿಸುವವನಾಗು.

**ವಟಪತ್ರಶಯನ** = ಪ್ರಳಯಕಾಲದಲ್ಲಿ ಆಲದೆಲೆಯ ಮೇಲೆ ಮಲಗಿರುವ ಶಿಶುರೂಪೀ ಮೂಲ ಕಾರಣನೇ (ಶ್ರೀದೇವಿಯು ಪ್ರಳಯೋದಕ ರೂಪದಲ್ಲಿಯೂ, ಭೂದೇವಿಯು ವಟಪತ್ರರೂಪದಲ್ಲಿಯೂ, ದುರ್ಗಾದೇವಿಯು ಸುತ್ತಲೂ ಆವರಿಸಿರುವ ಅಂಧಕಾರ ರೂಪದಲ್ಲಿಯೂ ಇದ್ದು, ಶ್ರೀಹರಿಯನ್ನು ಎಡಬಿಡದೆ ಸೇವಿಸುತ್ತಿರುವಳು). **ವೆಂಕಟಗಿರಿ ನಿಲಯ** = ವೆಂಕಟಾಚಲನಿವಾಸಿಯಾದ ಶ್ರೀಶ್ರೀನಿವಾಸನೇ **ನಿಷ್ಕುಟಿಲ** – ವಂಚಕತ್ವಾದಿ ದೋಷವಿದೂರ. (ಕುಟಿಲ ಗುಣವಿದೂರನು), **ದುರ್ವಿಷಯ ಲಂಪಟರ** - ಸದಾ ದುರ್ವಿಷಯಾಸಕ್ತರಾಗಿರುವ ತಪೋ ಯೋಗ್ಯರನ್ನು, **ಸದೆದು** ನಿಗ್ರಹಿಸಿ, **ನಿನ್ನ ಭಟಜನರಿಗೆ** = ನಿನ್ನ ದಾಸ ಜನರಿಗೆ, **ಧರ್ಮ ಘಟಕನಾಗುವೆ** – ಪುಣ್ಯಸಾಧನೆಗೆ ಸಹಾಯಕನಾಗುತ್ತೀಯೆ. **ವಟುರೂಪಿ** ಬ್ರಹ್ಮಚಾರಿ ವೇಷಧಾರಿಯಾದ ವಾಮನ ದೇವರು **ಎಟಪಾದಾಂಗುಟದಿಂದ** – ತ್ರಿವಿಕ್ರಮನಾಗಿ ಬೆಳೆದಾಗ, ಅವನ ಎಡಗಾಲಿನ ಹೆಬ್ಬೆಟ್ಟಿನ ಉಗುರಿನ ತುದಿಯಿಂದ, **ಅಬ್ಜಜಾಂಡಕಟಹ ಭೇಧಿಸಿ** – ಬ್ರಹ್ಮಾಂಡದ ಹೊರಚಿಪ್ಪು ಸೀಳಿ, (ಅಬ್ಜ–ಕಮಲ ಅಬ್ಜಜ– ಶ್ರೀ ಹರಿಯ ನಾಭೀಕಮಲೋದ್ಭವರಾದ ಬ್ರಹ್ಮದೇವರು). **ದೇವ ತಟನಿಯ ಪಡೆದು** = ದೇವನದಿಯಾದ ಗಂಗೆಯನ್ನು ಪಡೆದು, (ತಟನಿ– ನದಿ, ಗಂಗೆಯು ಶ್ರೀ ಹರಿಯ ಪಾದೋದ್ಭವೆ). **ಧೂರ್ಜಟಿ** ರುದ್ರದೇವರು (ಧೂಮ್ರ ವರ್ಣದ ಜಟೆಯುಳ್ಳ), **ತಲೆಯೊಳು ಧರಿಸಿ** = ಗಂಗೆಯನ್ನು ತನ್ನ ತಲೆಯ ಜಟೆಯಲ್ಲಿ ಧರಿಸಿ ಗಂಗಾಧರನೆನಿಸಿಕೊಂಡನು. **ಸಾಸಿರನಾಮ ಪಠಿಸುತ** = ವಿಷ್ಣುಸಹಸ್ರನಾಮವನ್ನು ಉಚ್ಚರಿಸುತ್ತ, **ಸತಿವೆರಸಿ** = ಪತ್ನಿಯಾದ ಪಾರ್ವತೀಸಹಿತನಾಗಿ, **ಕುಣಿದನೆಂದು** – ಭಕ್ತಿಯಿಂದ ನೃತ್ಯ ಮಾಡಿದನೆಂದು, **ಉತ್ಕಟದಿ** – ಉತ್ಕಂಠದಿಂದ,

**ಕೈಗಳ ಬಾರಿಸಿ** -- ಚಪ್ಪಾಳಿಕ್ಕುತ **ಜಗನ್ನಾಥವಿಠ್ಠಲ ಸರ್ವೋತ್ತಮ ದಿಟನೆಂದು** -- ಶ್ರೀ ವಿಷ್ಣುವೇ ಸರ್ವೋತ್ತಮನು ಇರುವವನೆಂದು **ಉಗ್ಗ ಡಿಸಿ** = ಪದೇ ಪದೇ ಹೊಗಳುತ್ತ.



## ಕೀರ್ತನೆ - ೫೪೪

### (ಪ್ರಾಣೇಶವಿಠ್ಠಲಾಂಕಿತ)

**ರಾಗ– ಮಧ್ಯಮಾವತಿ.** **ಆದಿತಾಳ.**

ಶರಣು ಹೊಕ್ಕೆನೋ ನಿನ್ನ–ಜಾತರೂಪಾಂಗದ
ವರದ ಕೈಪಿಡಿಯೆನ್ನ–ಪರಮೇಷ್ಠಿ ವಂದಿತ
ಚರಣ ಸುರಶಿರೋರನ್ನ–ಸುಖಪೂರ್ಣ ||ಪ||

ಉರಗಪರ್ವತನಿಲಯ ಭಕುತರ ಕರೆದು
ವರಗಳ ಕೊಡುವ ವೆಂಕಟ ಗರುಡವಾಹನ
ಲಕ್ಷ್ಮೀಪತೆ ಮಂಧರಧರಾಧರ ದೇವ–ಶರಣು ||ಅ||

ಕಾಮಿತಾರ್ಥದ ರಂಗ–ಮಧ್ವಮುನಿಪೂಜಿತ
ರಾಮ ಭವ ಭಯಭಂಗ–ದಶರೂಪಿ ಶರಧಿಜಾ
ಪ್ರೇಮ ಸುಜನರ ಸಂಗ–ಕೊಡು ಎಂದೆಂದಿಗೂ
ತಾಮಸರಿಪು ಕುರಂಗಾ ಅಂಕಸಖ ಸಾಂಗ ||

ಹೇಮಗರ್ಭನ ನಾಭೀಕಮಲದಿ ನೀ ಮುದದಿ ಪಡೆದಿ
ಚರಾಚರ ನೇಮದಿಂದಲಿ ಸೃಜಿಸ ಪೇಳಿದ
ಸ್ವಾಮಿ ನೀ ಸರ್ವರೊಳು ವ್ಯಾಪಿಸಿ–ಭೂಮಿಯೊಳು ಸಾತ್ವಿಕರು
ರಾಜಸ ತಾಮಸರ ನಿರ್ಮಾಣ ಮಾಡಿ ಸುಧಾಮಸಖಗತಿ
ದುರ್ಗತಿಗಳನು ॥

ಈ ಮರಳು ಜನರಿಗೀಯುತ ನೀ ಮಡಿವಂತನು ಎನಿಸುವೆಲಾ ಸು
ತ್ರಾಮಜವರದ ಬಲು ಸೋಜಿಗವೊ ಇದು
ವ್ಯೋಮನದೀಪದ ನೀ ಮಾಡಿದ ಮರ್ಯಾದೆಯೋ–
ಮರಳ್ಯೊಬ್ಬರು ಹೇಳುವರುಂಟೇ ॥೧॥

ಪುಂಡರೀಕದಳಾಕ್ಷ–ತನ್ಮಾತ್ರಾದೂರ
ಪಾಂಡುರಂಗಘ ಕಕ್ಷ–ಗಾಂಗೇಯು ಗೀತ
ಪಾಂಡುನಂದನ ಪಕ್ಷ– ದರ ಚಕ್ರಪಾಣಿ
ಪುಂಡಕೌರವ ಶಿಕ್ಷ–ಶ್ರೀವತ್ಸವಕ್ಷ ॥
ಕುಂಡಲೀಶಶಯನ ವಿದುರಸಖ ಮಾ
ಮಾರ್ತಾಂಡಕೋಟಿಪ್ರಕಾಶ ಹರಿ ಉ–
ದ್ದಂಡ ಮಹಿಮನೆ ಕಂಡ ಕೆಂಡವ
ರಂಡೆಲೆದು ಯನ್ನ ಶರೀರವು
ಬೆಂಡು ಆಯಿತು ಕಾಣೆ ಕಾಯ್ವರ–
ಜಾಡೋಂದರ ನಿನ್ನುಳಿದು ಓರ್ವರ
ದಂಡಿಸದೆ ಬರುತಿರ್ಪ ಜನ್ಮವ
ಖಂಡಿಸಿ ನಿನ್ನ ನಾಮ ಉಣಸೋ ॥
ಮಂಡೋದರಿ ವಲ್ಲಭ–ಶಕಟ ಪ್ರ
ಚಂಡ ಮುರಾದಿ ಖಳಕುಲಾಂತಕ

ದಂಡಾತ್ಮಜರಕ್ಷಕ ಹರಿ ಮೋ–
ಷಾಂಡಜ ಸಂಹರ ಕರುಣದಿ ನೋಡೋ ॥ ॥೨॥

ಧರಣಿಯೊಳಗಿನ ರಾಯರೆಂಬುವರು ವೇಷ ಕಾ
ಪುರುಷನಿಗೆ ಬಹುದ್ರವ್ಯ–ವಿತ್ತ್ರಿನ್ನು ವೇಷವ
ತರಲಿಗೊಡರೆಲೊ ದೇಹ–ಬಹು ತಾಳಿ ಬಂದೆನೋ
ಕರುಣವಿಲ್ಲವೆ ಜೀಯಾ–ಸಾಕಿನ್ನು ನಿನ್ನ ಮಾಯಾ ॥
ವರನೆ ಆಟವು ಮಾತ್ರ ಹಣ ಕೊಡದಿರೋ
ನಾ ಬಲ್ಲೆನೋ ಕುಡಿದ ಸ್ತನ–ಪಯ
ಶರಧಿ ದ್ವಿಗುಣವು ಎನ್ನ ಅಸ್ಥಿಯು
ಗಿರಿಗೆ ದ್ವಿಗುಣವಾಗಿಹ್ಯವೋ ಇಂತೀ
ಕರೆಕರೆಯು ನಾನಾರಿಗುಸುರಲಿ
ಸುರಪತಿ ಪ್ರಾಣೇಶವಿಠ್ಠಲ ತರುಣಿ
ಸುತ ಧನ ಪಶು ಎಂಬುವ ಈ ಪರಮ
ಮೋಹದ ಮಡುವಿನೋಳ್ಬಿದ್ದು ಹರಿ ನಿನ್ನೊಂದಿನ
ಸ್ಮರಿಸಲಿಲ್ಲವೋ ನೀನರಿಯಾ–ನಿಂತ್ಯಲ್ಲವೋ
ಪರತರ ಕರಿವರದ ಮ್ಯಾಲೆನರಿದದು
ಮಾಡುವದರಿ ಕರಿಷಂಡ ಮೃಗೇಂದ್ರ ಪರಾಕು ॥ಶರಣು॥ ॥೩॥



### ೫೪೫

### (ಅಂಕಿತ ಹೆಳವನಕಟ್ಟೆ ರಂಗ)

ಭಕ್ತರ ಬನ್ನ ಪರಾಕು–ಭಾಗ್ಯದ ನಿಧಿಯೆ ॥ ॥ಪ॥

ನಿನ್ನ ನಂಬಿದೆ ನೀರಜಾಕ್ಷ ಪರಾಕು
ನಿನ್ನ ರಕ್ಷೆಯ ಒಲುಮೆ ಬೇಕು ಪರಾಕು ।।
ಅನ್ಯರ ಸಂಗವನೊಲ್ಲೆ ಪರಾಕು
ಎನ್ನಪೇಕ್ಷೆಯ ಸಲಿಸೊ ಪರಾಕು ॥ ॥೧॥

ಶೇಷಶಯನ ಶ್ರೀನಿವಾಸ ಪರಾಕು
ಸಾಸಿರ ನಾಮದ ಒಡೆಯ ಪರಾಕು
ದೋಷ ದುರಿತ ಹರ ಸ್ವಾಮಿ ಪರಾಕು
ಭಾಷೆ ಪಾಲಿಸುವುದೆನ್ನ ವಾಸುದೇವ ಪರಾಕು॥ ॥೨॥

ರತಿಪತಿಪಿತ ರಮಾಧವನೆ ಪರಾಕು
ಅತಿರೂಪ ಎನ್ನಯ್ಯನೆ ಪರಾಕು
ಹಿತ ವಿರಹಿತರ ಕಾಯೊ ಪರಾಕು ॥೩॥
ಕರ್ತು ಹೆಳವನಕಟ್ಟೆರಂಗ ಪರಾಕು॥



### ೫೪೬

### (ಅಂಕಿತ–ಭೀಮೇಶಕೃಷ್ಣ)

**ರಾಗ–ಮೋಹನ** **ಆದಿತಾಳ**

ಅಪ್ಪ ವೆಂಕೋಬನ ನೇತ್ರದಲಿ ನೋಡಿ ॥ಪ॥
ಪವಿತ್ರಳಾದೆನೋ ಇಂದಿಗೆ॥

ತಪ್ಪುಗಳೆಲ್ಲ ನಿನಗರ್ಪಿಸುವೆ ನಾನೀಗ ॥ಅ॥
ಒಪ್ಪಿಕೋ ಬೇಕೋ ತಿಮ್ಮಪ್ಪ ಕರುಣಾನಿಧಿಯೆ ।ಅ॥

ಹೆದರದೆ ಭೃಗು ಋಷಿಯು ಒದೆಯೆ ಪಾದಗಳಿಂದ
ಎದೆಯ ಮೇಲಿರುವ ಲಕ್ಷ್ಮೀ
ಕದನ ಮಾಡುತಲೆ ಕೊಲ್ಹಾಪುರಕೆ ನಡೆತರಲು॥
ಒದಗಿ ವೈಕುಂಠ ಬಿಟ್ಟು
ಯದುನಾಥ ಯಾರಿಲ್ಲದಂತೆ ಗುಡ್ಡವ ಸೇರೆ
ಇದು ನಿನಗೆ ಸದನವಾಯಿತೋ ದೇವ॥ ॥೧॥

ಹುತ್ತದೊಳಡಗಿ ನೀ ಗುಪ್ತದಿಂದಿರುತಿರಲು
ಉತ್ತಮ ಗೋವು ಬಂದು
ನಿತ್ಯದಲಿ ಕ್ಷೀರವನು ಕರೆಯೆ ಗೋವಳನಿಂದ
ನೆತ್ತಿಯನೊಡೆಸಿಕೊಂಡು
ಸಿಟ್ಟಿನಿಂದಲಿ ಚೋಳರಾಯಗೆ ಶಾಪವನು
ಕೊಟ್ಟು ಕಿರೀಟವನು ಇಟ್ಟು ಮೆರೆಯುವ ದೇವ॥ ॥೨॥

ಮಾಯಾರಮಣನೆ ನಿನ್ನ ಗಾಯಗೌಷದಧಕ್ಕೋಕಿ
ಭೂರಮಣ ಸ್ವರಾಹನಿಂದ
ನೂರು ಪಾದ ಭೂಮಿ ಕೊಟ್ಟರೆ ಸಾಕೆಂದು–
ಪಾಯದಿಂದನ್ವ್ಯಾಪಿಸಿ
ತಾಯಿ ಬಕುಳಾದೇವಿಯಿಂದ ಪೂ
ಜೆಯ ಗೊಂಬೊ ಶ್ರೀಯರಸನಿನಗೆ ಸರಿಯೆ ದೇವ॥ ॥೩॥

ನಾಟಕಕಾರಿ ಕಿರಾತರೂಪವ ಧರಿಸಿ
ಬೇಟೆಗೆನುತಲಿ ಪೋಗಲು
ತೋಟದಲ್ಲಿ ಚೆಲ್ವ ಪದ್ಮಾವತಿಯ ಕಡೆಗಣ್ಣ॥

ನೋಟದಲಿ ಮನ ಸೋಲಿಸಿ
ಬೂಟಕತನದಿ ಜಗಳಾಟವನ್ನು ಮಾಡಿ
ಪಾಟುಬಟ್ಟು ಕಲ್ಲೇಟು ತಿಂದೆಯೋ ದೇವ॥ ॥೪॥

ಗಡಗಡನೆ ನಡುಗುತಲಿ ಕುದುರೆಯನು ಕಳಕೊಂಡು
ಪದ್ಮಾವತಿ ವಾರ್ತೆಯನ್ನು ಬಳಿಯ
ಲಿದ್ದ ಬಕುಳಮಾಲಿಕೆಗೆ ಬೋಧಿಸಿ ಕಳಿ॥
ಸಿದಾಕಾಶದಲ್ಲಿ ಚದುರ ಮಾತಿನ
ಚಪಲ ಕೊರವಂಜಿ ನೀನಾಗಿ ಕಣಿಯ
ಹೇಳಲು ಎಲ್ಲಿ ಕಲಿತೆಯೋ ಮಹದೇವ॥ ॥೫॥

ಬಂಧು ಬಳಗವ ಕೂಡಿ ಭಾರಿ ಸಾಲವ ಮಾಡಿ
ಕೊಂಡು ಕರಿವೀರದಿಂದೆ
ಅಂಡಲೆದು ಕರೆಸಿ ಕಾಣುತಲಿ ಲಕ್ಷ್ಮಿಯನಪ್ಪಿ
ಕೊಂಡು ಪರಮ್ಪುರುಷದಿಂದ
ಮುಂದಗಮನೆಯು ನಿನ್ನ ಮಾತು ಲಾಲಿಸಿ ಮಾಡಿ
ಕೊಂಡೆ ಪದ್ಮಾವತಿಯ ಅಂದೆಯೊ ಎಲೆ ದೇವ ॥ ॥೬॥

ಆಕಾಶರಾಜ ಅನೇಕ ಹರುಷದಿ ಮಾಡೆ
ತಾ ಕನ್ಯಾದಾನವನ್ನು
ಹಾಕಿದ ರತ್ನಮಾಣಿಕ್ಯದ ಕಿರೀಟವನು ॥
ಬೇಕಾದಾಭರಣ ಭಾಗ್ಯ
ಸಾಕಾಗದೇನೊ ಬಡವರ ಕಾಡಿ ಬೇಡುವುದು
ಶ್ರೀಕಾಂತ ನಿನಗೆ ಸರಿಯೆ ದೇವ ॥ ॥೭॥

ಹೇಮಗೋಪುರದಿ ವಿಮಾನಶ್ರೀನಿವಾಸ
ದೇವರನು ನೋಡಿ ನಮಿಸಿ
ಕಾಮಿಸಿ ಕಂಡೆ ಹೊನ್ನೊಸ್ತಿಲು ಗರುಡ ॥

ಗಂಬದ ಸುತ್ತ ಪ್ರಕಾರವೊ
ಸ್ವಾಮಿ ಪುಷ್ಕರಣಿಯಲಿ ಸ್ನಾನ ಪಾನವ ಮಾಡಿ
ನೋಡಿದೆನು ನಿನ್ನ ಭಕುತರ ದೇವ ॥ ॥೮॥

ಪನ್ನಗಾದ್ರಿ ವೆಂಕಟನ್ನ ರಥ ಶೃಂಗಾರ
ವರ್ಣಿಸಲಳವೆ ನಮಗೆ
ಕಣ್ಣಾರೆ ಕಂಡೆ ಗರುಡೋತ್ಸವದಲಂಕಾರ ॥
ಇನ್ನೆಲ್ಲು ಕಾಣೆ ಜಗದಿ
ಅನ್ನಪೂರ್ಣೆಯು ನೋಡೆ ಅಧಿಕ ಗಂಟೆಯು ನಾದ
ಎನ್ನ ಕಿವಿಗಾನಂದವೊ ದೇವ ॥ ॥೯॥

ಪಾದದಲೊಪ್ಪೋ ಪಾಗಡ ರುಳಿ ಕಿರುಗೆಜ್ಜೆ
ಮೇಲಲೆವೊ ಪೀತಾಂಬರ
ನೀಲಮಾಣಿಕದ ಉಡಿದಾರವೋ ವೈಜಯಂತಿ
ಮಾಲೆ ಶ್ರೀವತ್ಸದ್ವಾರ
ಮೇಲಾದ ಸರಿಗೆ ಸರ ಪದಕವೊ ಕಮಲ–
ದಳಾಯತಾಕ್ಷನ ನೋಡಿದೆ ದೇವ ॥ ॥೧೦॥

ಕರಗಳಲ್ಲಿಟ್ಟು ಕಂಕಣ ಕಡಗ ಭುಜಕೀರ್ತಿ
ವರ ಶಂಖ ಚಕ್ರಧಾರಿ
ಗಿರಿಯ ಭೂವೈಕುಂಠವೆಂದು ತೋರುತ ನಿಂತ ॥
ಶಿರದಿ ಕಿರೀಟ ಧರಿಸಿ
ಬಿಳಿಯ ತ್ರಿನಾಮ ಭೀಮೇಶ ಕೃಷ್ಣನ ಮುಖದಿ
ಹೊಳೆವ ಮೂರ್ತಿಯು ನೋಡಿ–ಹೇ ದೇವ ॥ ॥೧೧॥



## ೫೪೩

## (ಅಂಕಿತ–ಪ್ರಸನ್ನ ಶ್ರೀನಿವಾಸ)

## ಪ್ರಸನ್ನ ಶ್ರೀನಿವಾಸ ಕಲ್ಯಾಣ

**ರಾಗ–ಶಂಕರಾಭರಣ** **ಆದಿತಾಳ**

ಜಯ ಜಯ ಜಯ ಶ್ರೀನಿವಾಸ
ಜಯಾ ಶಾಂತಿ ಕೃತಿ ಮಾಯಾ ಪ್ರೀಶ
ಭಯ ಬಂಧ ಮೋಚಕ ಜೀಯಾ ||ಆಹಾ||
ಸುಂದರ ಚಿನ್ಮಯಾನಂದ ಜ್ಞಾನಾತ್ಮನೇ
ಮಂದಜಭವ ಸುರವೃಂದ ಸಂಸೇವ್ಯ || ||ಪ||

ಸುರಸರಿತ ತೀರದಿಂದ
ಸುರಮುನಿ ಭೃಗು ಬಂದು ನಿನ್ನ
ಪರಸಮರಹಿತನೆಂದರಿತ ||ಆಹಾ||
ಸಿರಿಯು ನಿನ್ನ ಭಾವವನುಸರಿಸಿ ಬೇಗ
ಕರವೀರಪುರ ಪೋಗೆ ಗಿರಿಪುತ್ತ್ರಪೊಕ್ಕೆಯೋ
||ಜಯ ಜಯ|| ||೧||

ಮೇರುಸುತನೆ ಹಾಟಕಾದ್ರಿ
ವೀರಭಕುತ ವೃಷಭಾದ್ರಿ
ಕೀರುತಿ ಇತ್ತಿತಂಜನೆಗೆ ||ಆಹಾ||
ಸರಿಸೃಪಾವರಿಸಿದ ಸೌರಭ್ಯ ಗಿರಿಯಿದು
ವರವೇಂಕಟಾದ್ರಿಯು ಹರಿತು ವಿಪ್ರನ ಪಾಪ || ||೨||

ನೀನಿದ್ದ ಸ್ಥಳವೇ ವೈಕುಂಠ
ನಿನಗಾರು ಸಮರುಂಟೇ ಶ್ರೀಶ
ದೀನ ಸುಜನರಿಗೆ ನೆಂಟ ||ಆಹಾ||

ಧೇನು ಪಾಲ್ಗರೆಯುಲು ಪಾಲಕ ಹೊಡೆಯುಲು
ದೀನರಕ್ಷಕ ನೀನು ಶಿರಸಿತ್ತು ಪೊರೆದೆಯೋ ॥ ॥೩॥

ಏಳು ತಾಳೆಯ ಉದ್ದ ರಕ್ತ
ತಾಳಲಾರದೆ ಬಿದ್ದ ಗೋಪ
ಚೋಳರಾಯುಗೆ ಕೊಟ್ಟ ಶಾಪ ॥ಆಹಾ॥
ಪೇಳಬಲ್ಲೆನೆ ನಿನ್ನ ಅತಿಶಯ ಲೀಲೆಯ
ಶೀಲ ಸುರರಗುರು ಚಿಕಿತ್ಸೆಯನ್ನೈದಿದೆ ॥ ॥೪॥

ಸ್ವಗತಭೇದವಿಲ್ಲದಂಥ
ಸ್ವಚ್ಛ ಚಿತ್ಸುಖಮಯನಂತ
ಸ್ವಾನಿರ್ವಾಹಕ ವಿಶೇಷ ॥ಆಹಾ॥
ಶ್ವೇತವರಾಹನ ಸಂವಾದದಿಂದಲಿ
ಸ್ವೀಕರಿಸಿದೀ ಸ್ಥಳ ಮೊದಲು ಪೂಜೆಯ ಕೊಟ್ಟು ॥ ॥೫॥

ಸರಸ್ವತೀ ಸ್ವಾಮಿಪುಷ್ಕರಣಿ
ಸುರಮುನಿ ನರರಿಗೆ ಸ್ನಾನ
ವರಸುಖಮಾರ್ಗ ಸೋಪಾನ ॥ಆಹಾ॥
ಸುರತಟಿನ್ಯಾದಿ ಸುತೀರ್ಥಗಳೆಲ್ಲವು ॥ ॥೬॥
ಸರಿತವಾಗಿರುತವೆ ಈ ಸ್ವಾಮಿತೀರ್ಥದಿ ॥

ಆದಿಕಾರಣ ನಿನ್ನ ಲೀಲಾ
ಮೋದ ಸಂಭ್ರಮವನ್ನು ನೋಡೆ
ಕಾದುಕೊಂಡಿಹರು ಕೋವಿದರು ॥ಆಹಾ॥
ಸಾಧು ಸಂಭಾವಿತ ಬಕುಳಾದೇವಿಯುಗ್ಗೈದ
ಸ್ವಾದ ಭೋಜ್ಯವನುಂಬ ನಿತ್ಯಸಂತೃಪ್ತ ॥ ॥೭॥

ಮಂಗಳ ಚಿನ್ಮಯ ರಂಗಾ—
ನಂಗನಯ್ಯನೆ ಮೋಹನಾಂಗ
ತುಂಗಮಹಿಮನೆ ಶುಭಾಂಗ ॥ಆಹಾ॥

ಬಂಗಾರದ ಕುವರಿ ಮೇಲಂಗನೇರದಲಿ ಬಂದ
ಶೃಂಗಾರವೇನೆಂಬೆ ಎಂದಿಗೂ ಸ್ಮರಪಿತ ॥ ॥೮॥

ತೋಂಡಮಾನ ರಾಯನಣ್ಣ
ಚಂಡಭೂಪನು ಆಕಾಶ
ಕಂಡನು ಕಮಲದೊಳ್ ಶಿಶುವ ॥ಆಹಾ॥

ಅಂಡ ಅಖಿಳಕೋಟಿ ಆಸಮ ಈ ಶಿಶುವನ್ನು
ಹೆಂಡತಿ ಧರಣಿಯು ಕೊಂಡಳು ಮಗಳಾಗಿ ॥ ॥೯॥

ಮೂಲೇಶ ನಿನ್ನಯ ರಾಣಿ
ಮೂಲಪ್ರಕೃತಿ ಗುಣಮಾನಿ
ಕೀಲಾಲಭವಭವ ತಾಯಿ ॥ಆಹಾ॥

ಶೀಲ ಭೂಪಾಲನ ಸುತೆ ಪದ್ಮಾವತಿಯೆಂದು
ಬಾಲೇಶ ಸಹ ಪುಷ್ಪವನಕೆ ಬಂದಿಹಳೋ ॥ ॥೧೦॥

ಮಹಿದೇವಿ ಕಮಲವಾಸಿನಿಯು
ಬಹಿರ್ನೋಟಕ್ಕೆ ರಾಜಸುತೆಯು
ಬಹು ಚಿತ್ರ ಪುಷ್ಪವ ಕೊಯ್ಯೆ ॥ಆಹಾ॥

ಮಹತಿಪಾಣಿಯು ಬಹು ವಯೋರೂಪದಲಿ ಬಂದು
ಅಹಿಕಲ್ಪ ಶ್ರೀಶನೆ ಪತಿಯೆಂದು ನುಡಿದ ॥ ॥೧೧॥

ಹಾಟಕಗಿರಿಯಿಂದ ನೀನು
ಬೇಟೆಯಾಡುವ ರೂಪತಾಳಿ
ಘೋಟಕವೇರಿ ಸಂಭ್ರಮದಿ ॥ಆಹಾ॥

ಆಟವಾಡುವ ಬಾಲೆ ಬಳಿಯಲ್ಲಿ ಬಂದು ನೀ
ನಾಟಕವಾಡಿದ್ದು ವಾಡಲರಿಯೆನೊ ॥ ॥೧೨॥

ನಿತ್ಯನಿರ್ಮಲ ಅವಿಕಾರ
ಮರ್ತ್ಯನರವೋಲು ನೀ ನಟಿಸೋ
ಕೃತ್ಯಗಳರಿವರು ಯಾರೋ ॥ಆಹಾ॥
ಭೃತ್ಯವತ್ಸಲ ನೀನು ಬಕುಳೆಯು ಬಳಿ ಪೇಳಿ
ಸತ್ಯಸಂಕಲ್ಪ ನಿನ ಸಂದೇಶ ಕಳುಹಿದೆ॥ ॥೧೩॥

ಪೊಂದಿದೆ ಪುಲ್ಕಸೀರೂಪ
ಮುಂದಜಭವ ಶಿಶುವಾಗಿ
ನಂದಿನಿಧರ ಯಷ್ಟಿಯಾದ ॥ಆಹಾ॥
ಮುಂದಜಭವಾಂಡ ಗುಣಗುಲ್ಮ ಮಾಡಿ ನೀ
ಕಂಧರದಲಿ ಗುಂಜಿ ಕಂಬು ಸರವ ತೊಟ್ಟೆ ॥ ॥೧೪॥

ನಾರಾಯಣಪುರಿಯಲ್ಲಿ
ಮಾರನಯ್ಯನೆ ನಿನ್ನ ಸುಗುಣ
ವಾರಿಧಿ ಪೊಕ್ಕಳು ಪದುಮೆ ॥ಆಹಾ॥
ಪುರಿಪ ಧರಣೀದೇವಿ ಪುತ್ರಿಗೆ ಜ್ವರವೆಂದು
ಪರಿಪರಿ ಪರಿಹಾರ ಪಡೆದು ನೋಡಿದರಾಗ॥ ॥೧೫॥

ಶುದ್ಧಸುಂದರ ಸುಖಕಾಯ
ವೃದ್ಧ ಪುಲ್ಕಸೀ ವೇಷಧಾರಿ
ಬದ್ಧಶೋಕರ ಬಳಿ ಪೋದೆ ॥ಆಹಾ॥
ಇದ್ದ ಸುದ್ದಿಯ ಅಬದ್ಧವಿಲ್ಲದೆ ಪೇಳಿ
ಮುದ್ದು ಪದ್ಮೆಗೆ ಅನಿರುದ್ಧನೆ ಪತಿಯೆಂದೆ ॥೧೬॥

ವಹಿಸಿ ನಿನ ಶಾಸನ ಬಕುಳ
ಮಹದೇವನಾಲಯದಿಂದ
ಮಹಿಳೆಯರ ಸಹ ಕೂಡಿ ॥ಆಹಾ॥
ಮಹದೇವಿಯಲಿ ಪೋಗಿ ವಿಹಿತ ಮಾತುಗಳಾಡಿ
ಬಹು ಶುಭವಾರ್ತೆಯ ತಂದು ಪೇಳಿದಳೋ ॥ ॥೧೭॥

ಶುಕಮುನಿ ಕರಪ್ರದವಾದ
ಆಕಾಶನೃಪ ಲಗ್ನಪತ್ರ
ಸ್ವೀಕರಿಸಿದೆ ಬಹು ಹಿತದಿ ॥ಆಹಾ॥
ವಾಗೀಶ ಶಶಿಧರ ನಾಗೇಶ ಸೌಪರ್ಣ
ನಾಕೀಶ ಮೊದಲಾದ ಸುರರನು ಕರೆದೆ ॥ ॥೧೮॥

ಶಿಷ್ಟ ಸನ್ಮುನಿಜನ ಕೂಟ
ತುಷ್ಟ ಸುಮನಸಸಮೂಹ
ಶ್ರೇಷ್ಠಸುಗಂಧಿ ಆಗಮಿಸ ॥ಆಹಾ॥
ಸೃಷ್ಟ್ಯಾದಿ ಕರ್ತ ನಿನ ಸುಮಹೋತ್ಸವ ನೋಡಿ
ಇಷ್ಟಾರ್ಥ ಪಡೆದವರು ಎಷ್ಟೆಂಬೆ ವಿಭುವೆ ॥ ॥೧೯॥

ಮಾಯ ಜಯೇಶ ಶ್ರೀವತ್ಸ
ಛಾಯೇಶಗುಪಾಯ ಪೇಳಿ
ತೋಯಜೆಯನು ಕರೆತಂದೆ ॥ಆಹಾ॥
ಮಾಯಾ ಜಯಾ ಕಿರಿ ಕೃತಿ ಶಾಂತಿ ನಿನ್ನಿಂದ
ವಿಯೋಗರಹಿತರು ಎಂದು ಎಲ್ಲೆಲ್ಲೂ ॥ ॥೨೦॥

ಬೃಹದಣುವಿಗೆ ಸತ್ತಾಪ್ರದನೆ
ಸುಹೃದ ಸಂತೃಪ್ತಿ ಸುಖಾಬ್ಧೇ
ದೃಢ ವ್ರತ ಶುಕಮುನಿಗೊಲಿದೆ ॥ಆಹಾ॥

ಬೃಹತೀ ಫಲಾವನುಂಡು ಘೂತ್ಕಾರದಿ
ಗೃಹ ಬಹಿರದಿ ಇದ್ದ ಜನರ ತೃಪ್ತಿಸಿದೆ ॥ ॥೨೦॥

ಸುಜನರಿಗಾನಂದದಾತ
ದ್ವಿಜರೂಢ ಜಗದೀಶ ನೀನು
ಅಜಸುರರೊಡಗೂಡಿ ಬರೆ ॥ಆಹಾ॥
ಅಜಿತ ಚಿನ್ಮಯ ನಿನ್ನ ಆಕಾಶನೃಪ ನೋಡಿ
ನಿಜವಾಗಿ ಕೃತಕೃತ್ಯ ಧನ್ಯ ತಾನೆಂದ ॥ ॥೨೧॥

ಅಜರ ಮಂದಿರ ಪೋಲ್ವ ಮನೆಯು
ಪ್ರಜ್ವಲಿಸುವ ದಿವ್ಯ ಸಭೆಯು
ನಿಜಭಕ್ತ ಪುರಜನ ಗುಂಪು ॥ಆಹಾ॥
ದ್ವಿಜರ ವೇದಗಾನ ವಾದ್ಯ ಘೋಷಿಸಲಾಗ
ನಿಜಸತಿ ಪದ್ಮಗೆ ಮಾಂಗಲ್ಯ ಧರಿಸಿದೆ ॥ ॥೨೩॥

ಸುರ ಮುನಿ ಜನ ಮೂರು ವಿಧಕೆ
ತರತಮ ಯೋಗ್ಯತೆ ಅರಿತು
ಪರಿಪರಿ ಸಾಧನವಿತ್ತೆ ॥ಆಹಾ॥
ನೀರರುಹಜಾಂಡವು ನಿನ್ನಾಧೀನವು
ಸಿರಿ ಭೂ ಧೂರೆಯೇ ಶ್ರೀನಿವಾಸ ದಯಾನಿಧೇ ॥ ॥೨೪॥

ನೀ ನಿಂತು ನುಡಿಸಿದೀ ನುಡಿಯು
ನಿನ್ನಡಿಗಳಿಗೆ ಅರ್ಪಣೆಯು
ಚೆನ್ನ ಮಾರುತ ಮನೋಗತನೆ ॥ಆಹಾ॥
ವನರುಹಾಸನ ತಾತ **ಪ್ರಸನ್ನಶ್ರೀನಿವಾಸ**
ನಿನಗೆ ಪ್ರೀತಿಯಾಗಲಿ ಸುಹೃದ ಸಂತೃಪ್ತಿ ॥ ॥೨೫॥

॥ ಶ್ರೀ ವೆಂಕಟೇಶಾರ್ಪಣಮಸ್ತು ॥

೫೪೭

(ಅಂಕಿತ–ಕರಿಗಿರೀಶ)

ರಾಗ–ಕೇದಾರಗೌಳ ಝಂಪೆತಾಳ

ಏನೆಂತು ವರ್ಣಿಸಲಿ–ಆ ದಿವ್ಯಮೂರ್ತಿಯನು ॥ ॥ಪ॥

ಆನಂದಮಯ ನಮ್ಮ ಆನಂದಕಂದನನು ॥ ॥ಅ॥

ಆ ಪಾದ ಆ ಜಾನು ಆ ನಡುವು ಆ ನಾಭಿ
ಆ ವಕ್ಷ ಆ ಬಾಹು ಆ ಮುಖದ ಭಾವ
ಆ ನೇತ್ರ ಆ ನಿಲುವು ಆ ಮಂದಹಾಸಗಳ
ಆದ್ಯಂತ ಬಣ್ಣಿಸಲು ಆದಿಶೇಷಗೆ ವಶವೇ ॥ ॥೧॥

ಅವನಿಗೆ ಸಮರಧಿಕರಿಲ್ಲ ಅವಾತಗಿನ್ನು
ಆವ ಸಾಮ್ಯವ ಕೊಟ್ಟು ಬಣ್ಣಿಸುವೆನೋ
ಅವನೀಜಗಕೆಲ್ಲ ಆಧಾರವಾಗಿಹನೊ
ಆವನಂಘ್ರಿಯ ಮುನಿಗಳಾವಾಗ ಚಿಂತಿಪರೋ ॥ ॥೨॥

ಆವ ಮಂಗಳಮೂರ್ತಿಯಾ ಲಕ್ಷಣಗಳಿಲ್ಲ
ಆವ ಶಾಸ್ತ್ರದೊಳುಂಟು ಅವನಿಯೊಳಗೇ
ಆ ವಾಸುದೇವ ತಾನಾವಾಗಲೆಲ್ಲರೊಳು
ಆವಾಸವಾಗಿಹನು ಆ ಕರಿಗಿರೀಶನನು ॥ ॥೩॥



೩೪೮

## (ಪುರಂದರವಿಠ್ಠಲಾಂಕಿತ)

**ರಾಗ–ಮೋಹನ** **ಝಂಪೆತಾಳ**

ನಿನ್ನ ದಿವ್ಯಮೂರುತಿಯು ಕಣ್ಣುದಣಿಯಲಿ ನೋಡಿ ||
ಧನ್ಯನಾದೆನೋ ಧರೆಯೊಳು || ||ಪ||

ಇನ್ನು ಈ ಭವಕೆ ಅಂಜಲ್ಯಾತಕೆ ದೇವ
ಚೆನ್ನ ಶ್ರೀ ವೆಂಕಟೇಶಾ–ಶ್ರೀಶಾ || ||ಅ||

ಏಸು ಜನ್ಮದ ಪುಣ್ಯಫಲ ಬಂದೊದಗಿತೋ
ಈ ಸ್ವಾಮಿ ಪುಷ್ಕರಣಿಯಲೀ ।
ಸುಸ್ನಾನ ಜಪವ ಮಾಡಿ ವರಹದೇವರ ನೋಡಿ
ಶ್ರೀಸ್ವಾಮಿ ಮಹಾದ್ವಾರಕೇ ||
ಈ ಶರೀರವನೆ ಈಡ್ಯಾಡಿ ಪ್ರದಕ್ಷಿಣೆ ಮಾಡಿ
ಲೇಸಿನಿಂ ಪೊಗಳುತಲೀ ।
ಆ ಸುವರ್ಣ ಗರುಡಗಂಭವನೆ ನೋಡಿ ಸಂ–
ತೋಷವೆಂವಲಿ ಕೊಂಡಾಡಿದೇ–ಬಿಡದೇ || ||೧||

ನೆಟ್ಟನೆರಡನೆಯ ದ್ವಾರವನೆ ದಾಟಿ ಪೋಗುತಲಿ
ಪಟ್ಟಣೆಯ ಬಹು ಜನರಲೀ ।
ಕೃಷ್ಣಾಂಜಿನಾದವರ ಪೆಟ್ಟುಗಳ ತಾಳುತಲಿ
ಕೃಷ್ಣ ಕೃಷ್ಣ ಎನುತಲೀ ||
ಘಟ್ಟಿ ಮನಸಿನಲಿ ತಲೆ ಚಿಟ್ಟಿಡುತ ಕಂ–
ಗೆಟ್ಟು ಕಟಾಂಜನಕೆ ಬರುತಲೀ ||
ಬೆಟ್ಟದಧಿಪತಿ ನಿನ್ನ ದೃಷ್ಟಿಯಿಂವ ನೋಡುತಲಿ
ಸುಟ್ಟಿತೆನ್ನಯ ದುರಿತವೂ–ಸರ್ವವೂ || ||೨||

ಪಕ್ಷೀಂದ್ರವಾಹನನೆ ಇಕ್ಷುಚಾಪನ ಪಿತನೆ
ಲಕ್ಷ್ಮೀಪತಿ ಕಮಲಾಕ್ಷನೆ ।
ರಾಕ್ಷಸಾಂತಕನೆ ನಿರಪೇಕ್ಷ ನಿತ್ಯತೃಪ್ತ
ತ್ರ್ಯಕ್ಷಾಮರ ಸಂಸ್ತುತಿತನೆ ॥
ಅಕ್ಷಯ ಅಜಸುರೇಂದ್ರಾದಿವಂದಿತನೆ
ಸಾಕ್ಷಾತ್ ಜಗನ್ನಾಥನೇ ।
ಕುಕ್ಷಿಯೊಳು ಈರೇಳು ಲೋಕವನು ತಾಳಿದನೆ
ರಕ್ಷಿಸುವುದೊಲಿದು ಭರದೀ–ದಯದೀ ॥ ॥೩॥

ಶಿರದಲಿ ರವಿಕೋಟಿತೇಜದಿಂದ್ಜ್ವೊಳೆಯುವ
ಕಿರೀಟ ಕರ್ಣಕುಂಡಲಗಳು ।
ಕೊರಳ್ಕಾಸರಿಗೆ ವೈಜಯಂತೀ ಮಾಲೆಗಳು
ಪರಿಪರಿಯ ಹಾರಗಳನು ॥
ಕರದಲ್ಲಿ ಶಂಖ ಚಕ್ರ ಉರದಿ ಶ್ರೀವತ್ಸವು
ವರನಾಭಿ ಮಾಣಿಕ್ಯವು ।
ನಿರುಪಮ ಮಣಿಖಚಿತ ಸೂತ್ರ ಪೀತಾಂಬರ
ಚರಣದ್ವಯದಂದಿಗೆಯನೂ–ಇನ್ನೂ ॥ ॥೪॥

ಉರಗಾದ್ರಿಧೊರೆ ನಿನ್ನ ಚರಣವನ್ನು ಕಂಡಮೇಲೆ
ಉರಗ ಗಿರಿ ವ್ಯಾಘ್ರ ಸಿಂಹ ।
ಅರಸು ಚೋರಾಗ್ನಿ ವೃಶ್ಚಿಕವು ಮೊದಲಾದ
ಪರಿಪರಿಯ ಭಯಗಳುಂಟೆ ॥
ಪರಮವಿಷಯ ಲಂಪಟದೊಳಗೆ ಸಿಗದಂತೆ
ಕರುಣಿಸುವುದೊಲಿದು ದಯದೀ
ಸ್ಮರಗಧಿಕ ಲಾವಣ್ಯ ತಂದೆ ಶ್ರೀಪುರಂದರವಿಠ್ಠಲ
ಶರಣಜನ ಕರುಣಾರ್ಣವಾ–ದೇವಾ ॥ ॥೫॥



## ೫೪೯

## (ಗುರುಜಯವಿಠ್ಠಲಾಂಕಿತ)

**ರಾಗ–ಪಂತುವರಾಳಿ** **ಆದಿತಾಳ**

ವೆಂಕಟಾದ್ರಿನಿಲಯ–ಜೀಯಾ
ಸಂಕಟಪಡಲಾರೆನಯ್ಯಾ ॥ ॥ಪ॥

ನಾಕುಮಾಡು ಧರೆಗೆ ಎನ್ನ
ಏಕೆ ನಿರ್ದಯವೋ ಕಾಣೆ ॥ ॥ಅ॥

ಪಾಪಿಗಳೊಳು ಪಾಪಿ ನಾನು
ಪಾಪರಹಿತ ಸ್ವಾಮಿ ನೀನು
ಕೋಪಿಗಳೊಳು ಕೋಪಿ ನಾನು
ಕೋಪ ತಾಪದೂರ ನೀನು ॥ ॥೧॥

ಮಡದಿ ಮಕ್ಕಳ ಮಮತೆ ಪುಟ್ಟಿಸಿ
ಒಡಲಿಗೋಸುಗ ಪರರ
ಬೇಡಿಸಿ–ಕಂಡಕಂಡವರಿಂದ ಬೈಸಿ
ನೋಡಿ ನಗುವರೇನೋ–ಸ್ವಾಮಿ ॥ ॥೨॥

ಏನಿದೇನಿದು ನಿನ್ನ ಮಾಯಾ
ಏನು ಇವಕೆ ಬೇರುಪಾಯಾ
ಎನ್ನ **ಗುರುಜಯ ವಿಠ್ಠಲರಾಯಾ**
ನಿನ್ನ ನಂಬಿದರೇನಪಾಯ ॥೩॥



## ೫೫೦

## (ಆತಂಕಿ ಶ್ರೀನಿಧಿವಿಠ್ಠಲಾ)

**ರಾಗ ಪಂತುವರಾಳಿ.** **ಆದಿತಾಳ**

ವೆಂಕಟೇಶ ನೀನೇ ಧೊರೆ ಧೂರೆ ॥ ॥ಪ॥

ಈ ಸಂಕಟವೆಲ್ಲವಾ ಪರಿಹರಿವ ವೆಂಕಟೇಶ ॥ ॥ಅ॥

ಎತ್ತಿನ ಪೆಸರುಳ್ಳ ಮತ್ತೆ ರಕ್ಕಸ ತನ್ನ
ಕುತ್ತಿಗೆ ತೆಗೆದಿಡಲು ಗತಿಕೊಟ್ಟ– ಧೊರೆ ಧೊರೆ ॥ ॥೧॥

ಆಂಜನೆಯೆಂಬುವಳ್ಕಂಜು ಬಿಸಿಲಿನ್ನವೆ
ಆಂಜದೆ ತಪಿಸಲು ಸಂಜೀವನವ ಕೊಟ್ಟ– ಧೂರೇ ಧೊರೇ ॥ ॥೨॥

ಸಾಸಿರಮುಖವುಳ್ಳ ಶೇಷನಂಹಕಾರ
ಶ್ವಸನನ ಕೈಯಿಂದ ನಾಶಮಾಡಿಸಿದಂಥ– ಧೂರೇ ಧೊರೇ ॥ ॥೩॥

ಮಾಧವ ಮಾದಿಗ ಹಾದಿಯು ಮೆಟ್ಟಲು
ಮೋದದಿಂದ್ಧರಿಸಿದ ಮಾಧವ ಸಲಹೆನ್ನ– ಧೂರೇ ಧೂರೇ॥ ॥೪॥

ಮೇರುಗಿರಿಯು ಮಗಗೀರೆರಡ್ಯುಗದಲಿ
ಮೂರೊಂದು ನಾಮ ಬೀರಿದ ಶ್ರೀನಿಧಿವಿಠ್ಠಲಾ– ನೀ
ಧೂರೇ ಧೂರೇ ॥ ॥೫॥



## ೫೫೧

## (ಮೋಹನವಿಠ್ಠಲಾಂಕಿತ)

ರಾಗ–ಮಧ್ಯಮಾವತಿ. ಏಕತಾಳ

ವೆಂಕಟಾದ್ರಿನಿಲಯನ ಪಂಕಜನಾಭನ ತೋರುಪ್ಪ ಲಕುಮೀ ॥ ॥ಪ॥

ವಸುದೇವ ದೇವಕಿಕಂದಾ–ನಮ್ಮ
ಶಶಿಮುಖಿಯರೊಡನೆ ಆನಂದಾ
ಪಶುಗಳ ಕಾಯ್ದ ಗೋವಿಂದಾ–ನಮ್ಮ
ಬಿಸಜನಾಭ ಮುಕುಂದಾ ॥ ॥೧॥

ಸಾಮಜರಾಜ ವರದಾ–ಬಲು
ಪ್ರೇಮದಿ ಭಕುತರ ಪೊರೆದಾ
ಆ ಮಹಾ ದಿತಿಜರ ತರಿದಾ–ನಿ
ಸ್ಸೀಮ ಮಹಾಮಹಿಮನಾಗಿ ಮೆರೆದ–ನಮ್ಮ ॥ ॥೨॥

ಉರಗಗಿರಿಯಲಿಪ್ಪ–ಅಂದು
ಮರುತನ ಹೆಗಲೇರಿ ಬಪ್ಪ
ಶರಣರಿಗೊರವಿತ್ತ ತಪ್ಪ
ಸಿರಿ **ಮೋಹನವಿಠ್ಠಲ** ತಿಮ್ಮಪ್ಪ–ನಮ್ಮಪ್ಪನ ॥ ॥೩॥



## ೫೫೨

### (ಅಂಕಿತ ಶ್ರೀಪತಿವಿಠ್ಠಲ)

**ರಾಗ–ಯದುಕುಲಕಾಂಬೋದಿ** **ಆದಿತಾಳ**

ವೆಂಕಟೇಶ–ಭವಸಂಕಟ ಪರಿಹರಿಸೋ–ನಿನ್ನ ವರವನೆನಿಸೋ ॥ ॥ಪ॥

ಪಂಕಜಾಕ್ಷ ಅಕಳಂಕ ಮಹಿಮ ಹರಿಯೇ–ಆಶ್ರಿತರಿಗೆ
ಧೊರೆ ಯೇ ॥ಅ॥

ನಾನಾ ಜನುಮಗಳಲಿ ತೊಳಲಿ ಬಂದೇ–ನೀನೇ ಗತಿ ಎಂದೇ
ಜ್ಞಾನಾಜ್ಞಾನಾಖಿಳತಿ ದುಷ್ಕರ್ಮಾ–ಅವರಂತೆ ಸುಕರ್ಮಾ
ನಾನಾ ಬಗೆಯಲಿ ಇರುತಿರೆ ಅನುಭವಿಸೀ–ದುರ್ವಿಷಯ ಬಯಸೀ
ಹೀನವೃತ್ತಿಯಲಿ ದಿನವ ಜರಿದು ಕಳೆದೇ–ಬಗೆ ಬಗೆಯಿಂದಳಿದೇ ॥ ॥೧॥

ಧಾರುಣಿ ಧನ ವನಿತಾದಿ ವಿಷಯದಲ್ಲೀ–ಕಾಮುಕತನದಲ್ಲೀ
ಚಾರುಪರಿಯುತಿಹೆ ಮಾರ್ಗ ಕಾಣೆ ನಾನೂ–ಉಪಾಯವಿನ್ನೇನೂ
ಯಾರಿಗೆ ಹೇಳಲಿ ಎನ್ನ ವರ್ತಮಾನಾ–ನೀನೇವೆ ನಿದಾನ
ತೋರಿಸಿ ಎನ್ನನು ಬಿಡದೆ ಪಾಲಿಸಪ್ಪಾ–ಎಣಿಸದಿರು ತಪ್ಪಾ ॥ ॥೨॥

ಶ್ರೀಪದ್ಮಜಮುಖ ಪ್ರಮುಖ ನಿರ್ಜರೇಶಾ–ನಾ ನಿನ್ನ ದಾಸಾ
ನೀ ಪಾಲಿಸದಿರೆ ಗತಿಯಾರೋ ಮುಂದೇ–ಕಾರುಣ್ಯದಿ ತಂದೇ
**ಶ್ರೀಪತಿವಿಠ್ಠಲ** ಕರವ ಪಿಡಿಯೋ ಬೇಗಾ–ಉದ್ಧರಿಸೋ ಈಗಾ ॥ ॥೩॥



## ೫೫೩

## (ಅಂಕಿತ ವೆಂಕಟೇಶ)

**ರಾಗ–ತೋಡಿ** **ಆದಿತಾಳ**

ಇನ್ನೆಂದಿಗೋ ನಿನ್ನ ದರುಶನಾ–ಶೇಷಾದ್ರಿವಾಸಾ ॥ ॥ಪ॥

ಪನ್ನಂಗಶಯನ ಪ್ರಪನ್ನರ ಪಾಲಿಪ
ಘನ್ನಮಹಿಮ ನೀನೆನ್ನನುದ್ಧರಿಸೋ ॥ ॥ಅ॥

ಪರ ಸುರಮುನಿಗಳ ವೃಂದಾ-ನೆರಹಿದ ಯಾಗಗಳಿಂದ
ಪರಮಾದರದಿಂದಿರುವ ಸಮಯದಿ
ನಾರದಮುನಿ ಬಂದೊದಗಿ ನಿಂದಾ– ಇ
ದಾರಿಗರ್ಪಿತವೆಂದರುಹೀ ಮುರಳೀ ತೆರಳಿದಾ
ಸುರಮುನಿ ವಚನದಿ ಭೃಗುಮುನಿವರ ಪೋಗಿ
ಹರವಿರಂಚಿಯರ ನೋಡುತಾ–ಉರುತರ ಕೋಪದಿ ನಿಲ್ಲುತಾ
ಪರಮಪುರುಷರಲ್ಲವೆನ್ನುತಾ–ವೈಕುಂಠವನ್ನೇ ಸಾರುತಾ ॥
ಹರುಷದಿ ಶ್ರೀಹರಿ ಉರಗಶಯನನಾಗಿ
ಪರಮ ಯೋಗನಿದ್ರೆ ಮಾಡುತಾ–ಅರಿಯದಂತೆ ತಾ ನಟಿಸುತಾ
ಇರೆ ಮುನಿ ಪಾದದಿಂದ್ಹೊಯುತಾ–ತ್ವರಿತದಿಂದ ತಾನೇಳುತಾ ।
ಹರುಷದಿ ಮುನಿಪಾದ ಕರದಲಿ ಒತ್ತುತ್ತ
ಕರುಣದಿ ಸಲಹಿದೆ ದುರಿತವ ಹರಿಸಿ
ಹರಿ ಭಕುತರಘ ಹರಿಸಿ ಕಾಯುವಂಥ
ಕರುಣೆಗಳುಂಟೇ ಶ್ರೀ **ಹರಿಸರ್ವೋತ್ತಮ** ॥ ॥೧॥

ಸ್ವಾಮಿ ನೀ ನಿಜಧಾಮವನೇ ತೊರೆದೂ
ಸ್ವಾಮಿ ಕಾಸಾರತೀರದಿ ನಿಂದೂ

ಧಾಮವನರಸಿ ವಲ್ಮೀಕವನೆ ನೋಡಿ
ವಿಮಲ ಸ್ಥಳವಿದೆಂದು ಮನದಿ ಆನಂದದಿಂದಲಿ
ಬಂದು ನಿಂದೆ ಸನ್ಮುದವ ತೋರುತಾ ॥

ಕಮಲಭವ ಶಿವ ಸುರುಕರು ರೂಪದಿ
ಈ ಮಹಗಿರಿಯನು ಅರಸುತಾ–ಸ್ವಾಮಿ ನೀನಿಲ್ಲಹೆ–ಎನ್ನುತಾ
ಕಾಮಧೇನು ಪಾಲ್ಗರೆಯುತಾ–ಈ ಮಹಿಮೆಯನ್ನೇ–ಬೀರುತಾ ।

ಭೂಮಿಗೊಡೆಯ ಚೋಳ ನೃಪ ಸೇವಕನು
ಧೇನುವನ್ನೇ ತಾ ಹೊಡೆಯಲೂ– ಕಾಮನಯ್ಯ–ನೀನೇಳಲೂ
ಭೀಮವಿಕ್ರಮವ ತೋರಲೂ– ಕ್ಷಮಿಸಿದೆ ನೃಪನಾ–ದಯಾಳು ॥

ಅಮಿತ ಸುಗುಣಪೂರ್ಣ ಅಜರಾಮರಣನೆ
ನೀ ಮಸ್ತಕಸ್ಫೋಟನ ವ್ಯಾಜದಿ ತೋರಿ
ಪ್ರೇಮದಿ ಗುರು ಪೇಳ್ದ ಔಷಧಕಾಗಿ
ನೀ ಮೋಹವ ತೋರ್ದೆ–ವಿ**ಡಂಬನಮೂರ್ತೇ** ॥ ॥೨॥

ಮಾಯಾರಮಣನೆ ಜೀಯಾ–ಕಾಯುವೆ ಜೀವನಿಕಾಯ
ತೋಯಜಾಂಬಕ ಹಯವನೇರಿ ವಿರಹದಿ ತಿರುಗಿ ತಿರುಗೀ
ವನವನೆಲ್ಲ ಮೃಗಯನೆಪದಿ ನಿಂದು ನೋಡಿದೇ

ಪ್ರಿಯಸಖಿಯ ಕೂಡಿ ಪದುಮವತಿಯು ತಾ
ಹಯದಿ ಕುಳಿತ ನಿನ್ನ ನೋಡಲೂ–ಪ್ರಿಯ–ನುಡಿಯಿಂದ
ನೀ ಕೇಳಲೂ– ಅಯುತವೆಂದು ಅವಳಾಡಲೂ ॥

ಪ್ರಿಯಳಿವಳೆನಗೆಂದಾಲೋಚಿಸೀ–ಕಾಯಜಪಿತ ನಿನ್ನ
ಹಯವನೆ ಕಳಕೊಂಡು ಮಾಯದಿಂದ ನೀ–ಪಲಗಿದೇ
ತಾಯಿ ಬಕುಳೆಯೊಳು ಪೇಳಿದೇ–ತೋಯಜಮುಖಿಯಳ–ಬೇಡಿದೆ ॥

ಆ ಯುವತಿಯನ್ನೇ ಸ್ಮರಿಸುತ
ಪ್ರಿಯರಸನೆ ನೀ ಸ್ತ್ರೀರೂಪದಿ ಪೋಗಿ

ಪ್ರಿಯಾಗಿಹಳೆನ್ನು ಶ್ರೀ ಹರಿಗೀಯಲು
ಪ್ರೀಯವೆಂದು ಆಕಾಶನ ಒಪ್ಪಿಸಿ–ತಾಯಿಯಭೀಷ್ಟೆಯನ್ನಿತ್ತೆ ॥೩॥
**ಸ್ಮರವಣ ॥**

ಸಕಲಲೋಕೈಕನಾಥಾ–ಭಕುತರಭೀಷ್ಟಪ್ರದಾತಾ
ಭಕುತನಾದ ಆಕಾಶನ್ನ ಪತಿಯು–ಭಕುಳವಾತ
ಕೇಳಿ ಅಭಯವಿತ್ತು ಮಾಡಿಸಿ ಪದುಮಾವತಿಯ–ಪರಿಣಯ ।
ಶುಕರ ಸನ್ಮುಖದಲಿ ಅಕಳಂಕಮಹಿಮಗೆ
ತಾ ಕೊಟ್ಟನು ಲಗ್ನಪತ್ರಿಕಾ–ಸ್ವೀಕರಿನುವುದೀ ಕನ್ನಿಕಾ
ಈ ಕಾರ್ಯಕೆ ನೀನೇ ಪ್ರೇರಕಾ–ತಾ ಕಳುಹಿಸಿದ ಪುಣ್ಯಶ್ಲೋಕನಾ ॥

ಶೋಕರಹಿತ ಜಗದೇಕವಂದ್ಯ ಅವಲೋಕಿಸಿ ಪತ್ರಿಕವನ್ನು
ಸಕಲ ಸಾಧನವಿಲ್ಲಿನ್ನು–ಲೋಕೇಶಗರುಹ
ಬೇಕಿನ್ನು–ಏಕಾಕಿ ನಾನೂ–ಎನಲು ।
ಲೋಕಪತಿಯು ಸುರಕೋಟಿಗಳಿಂದಲಿ
ಈ ಕುವಲಯದಿ ನಿನ್ನ ಪರಿಣಯವೆಸಗಿದೆ
ಲೋಕಜನಕೆ ಕಲ್ಯಾಣವ ತೋರಿದೆ
ಭಕುತಜನರ ಪ್ರಿಯ–**ಶ್ರೀವತ್ಸಾಂಕಿತ** ॥೪॥

ಖಗವರ–ವಾಹನ ದೇವಾ–ತ್ರಿಗುಣರಹಿತ ಜಗಕಾವ
ಅಗಣಿತ ಮಹಿಮ ಗೋಮಯನೆನಿಸಿ ಬಗೆ
ಬಗೆರೂಪವಾ ಧರಿಸೀ– ಪರಮಾದರದಲಿ ಸುರರ **ಪೊರೆಯುತಾ** ।
ನಗಧರ ನೀನೀಗಿರಿಯೊಳು ನೆಲೆಸಿಹೆ
ಅಗಣಿತ ಸುರಗಣ ಕಿನ್ನರು ನಾಧ್ವರು ತರುಫಲ
ಖಗಮೃಗ ರೂಪವೂ–ಮಿಗಿಲೆನಿದ ಸರ್ವತೀರ್ಥವೂ
ಬಗೆ ಬಗೆ ಇಹ ಸೋಪಾನವೂ–ಪೊಗಲಳವೇ ಈ ಗಿರಿವರವು ॥
ಹಗಲು ಇರುಳು ಭಗವಂತನೆ ನಿನ್ನನು
ಪೊಗಳುತಿಹರು ನಿನ್ನ ಭಕ್ತರು

ನಿಗಮವ ಪಠಿಸುತ ನಡೆವರೂ
ನಗೆಮೊಗದಲಿ ನಿನ್ನ ದಾಸರೂ ।
ಗೋವಿಂದಾ ಮುಕುಂದಾ ಎನ್ನುತಾ
ಯುಗಯುಗದೊಳು ಈ ನಗದೊಳು ನಿಲಿಸಿ ನೀ
ಜಗವಜೀವರ ಜೀವನನಾಗಿಹೆ ಮಿಗಿಲೆನಿಸಿದ
**ಶ್ರೀವೆಂಕಟೇಶ** ಸದ್ಗುಣ ಸಚ್ಚಿದಾನಂದ ಮುಕುಂದಾ ॥ ॥೫॥



## ೫೫೪

## (ತಂದೆವೆಂಕಟೇಶವಿಠ್ಠಲಾಂಕಿತ)

**ರಾಗ–ಶಂಕರಾಭರಣ** **ತ್ರಿಪುಟತಾಳ**

ತಿರುಪತೀ ಯಾತ್ರೆಯ ಮಾಡೀ– ತಿರುಪತೀ॥ ॥ಪ॥

ತಿರುಪತಿ ಯಾತ್ರೆಯ ಮಾಡೀ–ನಿಮ್ಮ
ಸ್ವರೂಪ ಸುಖಫಲ ಬೇಡೀ ॥ಆಹಾ॥
ಪರದೇಹವೆಂಬಾಹಿಗಿರಿಯೊಳಿರುವ ಹೃತ್ಪು
ಷ್ಕರ ಮಧ್ಯದಲಿ ಮೆರೆವ ಉರಗಾದ್ರೀಶನ ನೋಡಿ ..... ॥ಅ॥

ಕ್ರತುಕೋಟಿ ಪುಣ್ಯ ಶೇಖರಿಸೀ–ಸರ್ವ
ತತುವೇಶರೊಲಿಮೆ ಸಂಗ್ರಹಿಸೀ–ಕರ್ಮ
ಗತಿಗಳನೆಲ್ಲಾ ತಿಕ್ರಮಿಸೀ–ಮಧ್ವ
ಮತದಾನ ದೀಕ್ಷೆಯ ವಹಿಸೀ ॥ಆಹಾ॥

ವಿತತ ಸಪ್ತಚಕ್ರಸ್ಥಿತಿಗಳನರಿತು ಸ
ತ್ಪ್ರಧಿಕರಾಗಿ ಸಪ್ತಕ್ಷಿತಿಧರವಿದೆಯೆಂದು ॥ ॥೧॥

ವದನವೆ ಪೂರ್ವಕವಾಟ–ತುಂದಿ
ಸದನವೆ ಶ್ರೀ ಶೈಲಮಾಟ–ಪಂಚ
ವಿಧಜ್ಞಾನ ಪರಿವಾರ ಕೂಟ–ಮೂರು
ವಿಧ ಶ್ವಾಸ ಗಿರಿಯೇರುವಾಟ ॥ಆಹಾ॥
ಬದಿಗನಾಗಿ ವಾಯು ಸಧನನಾಮಕ ಹರಿಯ
ಹೃದಯ ಶಿಖರದಿ ಕಾಂಬ ಮುದವ ಕಲ್ಪಿಸುತಿರೆ॥ ॥೨॥

ಎಪ್ಪತ್ತುಎರಡು ಸಾವಿರವು–ತೀರ್ಥ
ವಿಪ್ಪದು ಕೇಳು ವಿವರವು– ಆದರೊ
ಳೊಪ್ಪಲು ಬ್ರಾಹ್ಮೀಸರಿತವು–ಮಧ್ಯೆ
ಸರ್ವೇಶಶಯನನ ದೇಗುಲವು ॥ಆಹಾ॥
ಸಪ್ತಪ್ರಕಾರಕ ಸುಪ್ತಾದಿ ದ್ವಾರವು
ವಾಪ್ತದರ್ಪಯೆಂಬ ಪ್ರಾಪ್ತಾಧಿಕಾರದಿ॥ ॥೩॥

ಪಂಚಕೋಶ ಹರಿಮನೆಯು–ಮನೋ
ಪಂಚಕೇಶರ ದ್ವಾರಾವನೆಯು– ಪ್ರಾಣ
ಪಂಚಾಪ್ತಿರಾಧಾತ್ಮ ಸಧೆಯು–ಅಲ್ಲಿ
ಪಂಚವ್ಯೂಹದಿ ವ್ಯಾಪ್ತ ಹರಿಯು ॥ಆಹಾ॥
ಪಾಂಚರಾತ್ರೋಕ್ತ ವಿರಿಂಚಿಪಿತನ ಸ್ನಾನ
ಚಿಂತಿಸಿ ಬಿಗಿದ ರೋಮಾಂಚನಗಾತ್ರದಿ ॥ ॥೪॥

ಮೂಲಾಧಾರವೆಂಬ ಕಪಿಲ–ತೀರ್ಥ
ಗಾಳಿಗೋಪುರ ನಾಭಿಕಮಲ–ವೊಳ

ಕಾಲ್ಮುರಿ ದ್ವಾದಶಪಟಲ–ಮೀರಿ
ಫಾಳಿಸುತಿಹ ಹೃನ್ಮುಕುಳಾ– ॥ಆಹಾ॥
ಮಾಲಕ್ಷಿ ಏಳೆರಡು ಮೇಲಾವರಣಗಳಲ್ಲಿ
ಲೀಲೆಗೈಯ್ಯುತ ಸ್ವಾಮಿಕೂಲಗನ ಸೇವಿಪ॥ ॥೫॥

ನಿರ್ಮಮ ಅರಿಶಿನವಸನ–ಉಭಯ
ಕರ್ಮವೆ ಕಾಣಿಕೆ ಹಸನ–ಕ್ಷೇತ್ರ
ಧರ್ಮವೆ ಮನಸಿನ ಬೆಸನ–ದಾಸ್ಯ
ಮರ್ಮವೆ ಕೊಡುವ ವಿಧಾನ ॥ಆಹಾ॥
ಭರ್ಮಾಂಡದಲಿ ಜನ್ಮಾದ್ಯೂರ್ಮಿಗಳನು ಮೀರಿ
ನಿರ್ಮಲರಾಗೀಶ ಕೂರ್ಮ ಬೇಕೆಂಬರು॥ ॥೬॥

ಪರಿಚ್ಛೇದತ್ರಯದೊಳಸರಿದು–ಕರ್ಮಾಂ
ಕುರದ ಬೇರುಗಳಿಲ್ಲ ತರಿದೇ–ಲಿಂಗಾ
ವರಣವ ಕಳಚಿ ಮುಂಬರಿದು– ಮುಕ್ತಿ
ಕರತಳಾಮಲಕವೆಂದರಿತು ॥ಆಹಾ॥
ಗಿರಿರಾಯನಂಗಾಂಗಾಭರಣ ಸೌಂದರ್ಯವ
ವಿರಜಾನದಿಯೊಳೀಸಿ ವರವೈಕುಂರನ ನೋಡಿ ॥ ॥೭॥

ಪದ್ಮಾವತಿಯ ಪ್ರಾಣೇಶ– ಹೃದಯ
ಸದ್ಮದಲ್ಲಿರುವನೆಂದನಿಶ– ಯಾತ್ರೆ
ಚಿದ್ದೇಹದಲಿ ಮಾಡೆ ಶ್ವಾಸ– ವಹನ
ಇದ್ದಲ್ಲೇ ವಿದ್ಯುತ್ಪ್ರಭಾಸ ॥ಆಹಾ॥
ಬುದ್ಧಿಹೀನರು ಗಾಳಿಗುದ್ದಿ ವ್ಯಥೆಪಡುವಂತೆ
ದುರ್ದೈವಿಗಳಿಗಿದು ಬುದ್ಧ್ಯಾರೂಢವಹುದೇ ॥ ॥೮॥

ದ್ವಂದ್ವಸಮರ್ಪಣೆಯೆಂಬ– ಮುಡುಪ
ತಂದರೆ ಮಾತ್ರ ಕೈಕೊಂಬ– ಭಕ್ತಿ

ಯಿಂದ ಮಾರುತನವಲಂಬ– ಹೊಂದಿ
ಬಂದವರ ಪಾಕೃತಡಿಂಬ– ॥ಆಹಾ॥
ಎಂದೆಂದು ಲೇಪಿಸದಂದದಿ ಬಿಂಬಾತ್ಮ
ತಂದೆವೆಂಕಟೇಶವಿಠ್ಠಲಾನಂದವನೀವ ॥ ॥೯॥



**ಅರ್ಥವಿವರಣೆ:–**

ಪ್ರಮೇಯಗರ್ಭಿತವಾದ ಈ ಕೀರ್ತನೆಯ ಕರ್ತೃಗಳು **ಶ್ರೀತಂದೆ ವೆಂಕಟೇಶವಿಠ್ಠಲಾಂಕಿತ** ದಾಸವರ್ಯರು. ಪಿಂಡಾಂಡರೂಪವಾದ ಈ ಸಾಧನಶರೀರವನ್ನೇ **ತಿರುಪತಿಕ್ಷೇತ್ರಯಾತ್ರೆ** ಎಂದು ಅನುಸಂಧಾನಿಸುವ ಉಪಾಸನಾಮಾರ್ಗವನ್ನು ಪ್ರಸಕ್ತಕೀರ್ತನೆಯಲ್ಲಿ ಪ್ರತಿಪಾದಿಸಿದ್ದಾರೆ. **ತಿರುಪತೀ** = ಸಪ್ತಗಿರಿನಿವಾಸನಾದ ಶ್ರೀವೆಂಕಟೇಶನ ಪುಣ್ಯತಮಕ್ಷೇತ್ರ. **ಸ್ವರೂಪಸುಖಫಲ ಬೇಡಿ** = ಸ್ವರೂಪಗತ ನಿಜಾನಂದವನ್ನು ನೀಡೆಂದು ಪ್ರಾರ್ಥಿಸಿ (ಮುಕ್ತಿಪ್ರದರೂಪನು). **ಅಹಿಗಿರಿಯೊಳಿರುವ** = ಸಪ್ತಗಿರಿ (ಶೇಷಾದ್ರಿ) ಎಂಬ ಅನುಸಂಧಾನ. **ಹೃತ್ಪುಷ್ಕರಮಧ್ಯದಲಿ** = ದೇಹಗತ ಹೃತ್ಕಮಲದಲ್ಲಿ ನಿವಾಸಿಯಾದ ಬಿಂಬರೂಪೀ ಶ್ರೀಪರಮಾತ್ಮ. **ಉರಗಾದ್ರೀಶನ** = ಶೇಷಾಚಲಾಧಿಪತಿಯಾದ ಶ್ರೀವೆಂಕಟೇಶ, **ಕ್ರತುಕೋಟಿ ಪುಣ್ಯ ಶೇಖರಿಸಿ** = ಅಸಂಖ್ಯವಾದ ಯಾಗಗಳನ್ನು ಮಾಡಿದ ಫಲರೂಪವಾದ ಪುಣ್ಯಗಳನ್ನು ಸಂಗ್ರಹಿಸಿ, **ಸರ್ವತತುವೇಶರೊಲಿಮೆ** = ಸಕಲ ತತ್ತ್ವಾಭಿಮಾನಿದೇವತೆಗಳ ಅನುಗ್ರಹಕ್ಕೆ ಪಾತ್ರರಾಗಿ, **ಕರ್ಮಗತಿ** = ಸರ್ವಕರ್ಮಸಮರ್ಪಣಾಭಾವ. **ಅತಿಕ್ರಮಿಸಿ** = ಸಂಚಿತಾಗಾಮಿ ಕರ್ಮಗಳನ್ನು ಕಳೆದುಕೊಂಡು, **ವಿತತ ಸಪ್ತಚಕ್ರಸ್ಥಿತಿ** = ಈ ದೇಹದಲ್ಲಿ ವ್ಯಾಪಿಸಿರುವ ಸಪ್ತಕಮಲಗಳ ವ್ಯೂಹಗಳ ವ್ಯಾಪಾರಗಳನ್ನು ತಿಳಿದು.

**ಸಪ್ತಚಕ್ರಗಳ ವಿವರ:**— ೧. ತುಂದಿಯಲ್ಲಿ ಚತುರ್ದಳಕಮಲ. ೨. ನಾಭಿಯಲ್ಲಿ ಷಡ್ದಳಕಮಲ. ೩. ಹೃದಯದಲ್ಲಿ ಅಷ್ಟದಳಕಮಲ.

೪. ಉದರದಲ್ಲಿ ದ್ವಾದಶದಳಕಮಲ. ೫. ಕಂಠದಲ್ಲಿ ಷೋಡಶದಳಕಮಲ. ೬. ಭ್ರೂಮಧ್ಯದಲ್ಲಿ ದ್ವಿದಳಕಮಲ. ಮತ್ತು ೭. ಬ್ರಹ್ಮರಂಧ್ರದಲ್ಲಿ (ಶಿರಸ್ಸಿನಲ್ಲಿ) ಸಹಸ್ರದಳಕಮಲ.

ಈ ಧ್ಯಾನದಿಂದ ತುಂದಿಯಿಂದ ಪ್ರಾರಂಭಿಸಿ, ಶಿರಃಪರ್ಯಂತ ಸಪ್ತಗಿರಿಗಳನ್ನು ಕೆಳಗಿನಿಂದ ಮೇಲಕ್ಕೆ ಹತ್ತಿದಂತೆ ಅನುಸಂಧಾನ. **ಸತ್ಪಥಿಕರಾಗಿ** = ಸನ್ಮಾರ್ಗದಲ್ಲಿ ನಡೆಯುವ ಯಾತ್ರಿಕರಾಗಿ. **ಸಪ್ತಕ್ಷಿತಿಧರವಿದು** = ಏಳು ಗಿರಿಗಳಯಾತ್ರೆಯೆಂಬ ಅನುಸಂಧಾನದಿಂದ (ಕ್ಷಿತಿಧರ–ಪರ್ವತ). **ವದನವೆ** = ಈ ಶರೀರಗತ ಮುಖವೇ. **ಪೂರ್ವಕವಾಟ** = ಪೂರ್ವದಿಕ್ಕಿನ ದ್ವಾರವೆಂದು ಅನುಸಂಧಾನ (ಮೂಡಲಬಾಗಿಲು) **ತುಂದಿ ಸದನವೆ**= ಮೂಲಾಧಾರವೆಂಬ ಸ್ಥಾನವೇ. **ಶ್ರೀಶೈಲವಾಟ** = ಪಶ್ಚಿಮದಿಸೆಯಲ್ಲಿ ಶ್ರೀಶೈಲ ಸದೃಶವು. **ಪಂಚವಿಧಿ ಜ್ಞಾನ**= ಪಂಚಜ್ಞಾನೇಂದ್ರಿಯಗಳು. **ಮೂರು ವಿಧ ಶ್ವಾಸ** = ಪೂರಕ– ಕುಂಭಕ– ರೇಚಕಗಳೆಂಬ ಮೂರು ಪ್ರಕಾರವಾದ ಶ್ವಾಸಕ್ರಿಯೆಗಳೇ. **ಗಿರಿಯೇರುವಾಟ** = ಪರ್ವತಾರೋಹಣಕ್ರಿಯೆಯು **ಬದಿಗನಾಗಿ** = ಜೀವನಿಗೆ ಸಮೀಪನಾಗಿ ರಕ್ಷಕನಾಗಿರುವ. **ವಾಯು** = ಶ್ರೀವಾಯುದೇವರು, **ಸಧನನಾಮಕ ಹರಿಯ** = ಸಧನನೆಂಬ ಹೆಸರಿನ ಶ್ರೀಹರಿಯನ್ನು, **ಹೃದಯ ಶಿಖರದಿ** = ಹೃತ್ಪದ್ಮದ ಅಗ್ರದಲ್ಲಿ ಕಾಣುವ ಅಗ್ರೇಶನಾಮಕ ಬಿಂಬನನ್ನು,

**ತೀರ್ಥವಿಪ್ಪುದು** - ದೇಹಗತ 72,000 ನಾಡಿಗಳಲ್ಲಿ ಪುಣ್ಯನದಿಗಳು, ನದ್ಯಭಿಮಾನಿದೇವತೆಗಳೂ ಸನ್ನಿಹಿತರಾಗಿದ್ದಾರೆ. **ಬ್ರಾಹ್ಮೀಸರಿತವು** = ಆ ತೀರ್ಥಗಳ ಮಧ್ಯದಲ್ಲಿ ಸರಸ್ವತಿಯೇ ಅಭಿಮಾನಿಯಾದ **ಸ್ವಾಮಿಪುಷ್ಕರಣೀ** ಎಂದು ಅನುಸಂಧಾನ (ಬ್ರಾಹ್ಮೀ = ಬ್ರಹ್ಮನಪತ್ನಿ ಸರಸ್ವತೀ. ಸರಿತ = ನದಿ). **ದೇಗುಲವು** = ಗಿರಿಯ ಅಗ್ರದ ಮಧ್ಯದಲ್ಲಿ ಕಂಗೊಳಿಸುತ್ತಿರುವ ಶ್ರೀನಿವಾಸನ ದೇವಾಲಯವು, **ಸಪ್ತಪ್ರಕಾರಕೆ** = ಏಳು ಪ್ರಕಾರವಾದ ಪ್ರಾಕೃತಆವರಣಗಳಿಗೆ– ೧. ಅನಾದಿಲಿಂಗಾವರಣ. ೨. ತೈಜಸಾಹಂಕಾರಾವರಣ. ೩. ತಾಮಸಾಹಂಕಾರಾವರಣ, ೪. **ವೈಕಾರಿಕಾಹಂಕಾರಾ**

ವರಣ. ೫. ಆಸಿರುದ್ಧಾವರಣ. ೬. ಜೀವಾಚ್ಛಾದಿಕ ಮತ್ತು ೭. ಮಹ ತತ್ತ್ವಾವರಣ– ಹೀಗೆ ಸಪ್ತಪ್ರಾಕೃತಾವರಣಗಳು. **ಸುಪ್ತಾದಿ ದ್ವಾರವು** =ಜಾಗ್ರತಿ, ಸ್ವಪ್ನ, ಸುಷುಪ್ತಿ– ಎಂಬ ಅವಸ್ಥಾತ್ರಯಗಳೇ ಕವಾಟತ್ರ ಯಗಳು. **ವ್ಯಾಪ್ತದರ್ಶಿ**=ಸರ್ವಾಧಿಷ್ಠಾನಗಳಲ್ಲಿ ಶ್ರೀಭಗವದ್ರೂಪಗಳ ಚಿಂತನೆ, **ಪ್ರಾಪ್ತಾಧಿಕಾರದಿ**=ವ್ಯಾಪ್ತದರ್ಶಿತ್ವವೆಂಬುದೇ ತಿರುಪತಿ ಯಾತ್ರೆ ಮಾಡಲು ಏಕೈಕಾಧಿಕಾರವು.

**ಪಂಚಕೋಶ**.–೧. ಅನ್ನಮಯ ಕೋಶ ೨. ಪ್ರಾಣಮಯಕೋಶ ೩. ಮನೋಮಯಕೋಶ ೪. ವಿಜ್ಞಾನಮಯಕೋಶ ಮತ್ತು ೫. ಆನಂದ ಮಯಕೋಶ–ಎಂಬ ಶರೀರಗತಪಂಚಕೋಶಗಳೇ **ಹರಿಮನೆಯು**= ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಮತ್ತು ನಾರಾ ಯಣ ಎಂಬ ಪಂಚಭಗವದ್ರೂಪಗಳ ಮಂದಿರಗಳು.

**ಮನೋಪಂಚಕ**=ಮನಸ್ಸು–ಚಿತ್ತ–ಬುದ್ಧಿ–ಅಹಂಕಾರ–ಚೇತನ ಎಂಬ ಪಂಚಮನೋವೃತ್ತಿಗಳ **ಈಶ್ವರ**=ಅಭಿಮಾನಿದೇವತೆಗಳು, **ದ್ವಾರಾ ವನೆಯು**=ಪಂಚದ್ವಾರಗಳ ದ್ವಾರಪಾಲಕರೆಂಬ ಅನುಸಂಧಾನ (ಆವನ– ಕಾಯುವುದು, ರಕ್ಷಣೆ) **ಪ್ರಾಣಪಂಚಾಖ್ಯರ**=ಪ್ರಾಣ– ಅಪಾನ– –ವ್ಯಾನ– ಉದಾನ– ಸಮಾನರೆಂಬ ಶ್ರೀವಾಯುದೇವರ ಪಂಚಾಧಿಷ್ಠಾನ ಗಳೇ, **ಅಧ್ಯಾತ್ಮಸಥೆಯು**=ಸಲಿಗೆಯ ವರ್ತನೆಗಳು (ಸಥೆ=ಆತ್ಮೀಯತೆ ಸಲಿಗೆ, ಸದರ) **ಸಂಚೆವ್ಯೂಹದಿ**=ಪಂಚಕೋಶಗತ ಅನಿರುದ್ಧಾದಿ ಶ್ರೀ ಹರಿಯ ಪಂಚರೂಪಗಳ ಸಮೂಹ, **ಪಾಂಚರಾತ್ರೋಕ್ತ**=ಪಂಚರಾತ್ರಾ ಗಮಗಳಲ್ಲಿ ಹೇಳಿರುವಂತೆ, **ವಿರಿಂಚಿಪಿತನ ಸ್ಥಾನ**=ಬ್ರಹ್ಮಜನಕನಾದ ವಾಸುದೇವನ ಸ್ಥಾನವು (ಸಹಸ್ರದಳಾತ್ಮಕವಾದ ಬ್ರಹ್ಮರಂಧ್ರಗತ ಕಮಲ) **ಬಿಗಿದ ರೋಮಾಂಚನಗಾತ್ರದಿ**=ಎದ್ದ ರೋಮಾಂಚನಗಳಿಂದೊಡಗೂ ಡಿದ ದೇಹದಿಂದ ತಿರುಪತೀ ಯಾತ್ರೆಯ ಮಾಡಿ (ಗಾತ್ರ–ಶರೀರ) **ಮೂಲ ಧಾರವೆಂಬ**=ತುದಿಯೇ ಮೂಲಾಧಾರವು. ಅದೇ ಕಪಿಲತೀರ್ಥವೆಂಬ

ಅನುಸಂಧಾನ. **ನಾಭೀಕಮಲ** = ನಾಭಿಯಲ್ಲಿರುವ ಪದ್ಮಳವೇ ಗಾಳಿ ಗೋಪುರವು **ದ್ವಾದಶಪಟಲ** - ದೇಹದಲ್ಲಿರುವ ಉರಸ್ಥಳಗತ ದ್ವಾದಶ ದಳಕಮಲವೇ ಮೊಳಕಾಲ್ಮುರಿಯು **ಮೀರಿ** - ಅದನ್ನು ಹತ್ತಿ ಮುಂದೆ ಹೋಗಲು. **ಥಾಳಿಸುತಿಹ** ಪ್ರಕಾಶಮಾನವಾಗಿರುವ, **ಹೃನ್ಮುಕುಳಾ** = ಅಷ್ಟದಳಾತ್ಮಕವಾದ ಹೃತ್ಪದ್ಮವು. **ಏಳೆರಡು ಮೇಲಾವರಣಗಳಲ್ಲಿ** - -ಮೇಲಿರುವ ನವಾವರಣಗಳಲ್ಲಿ (ಪೃಥ್ವೀ- ಅಪ್ಪು ತೇಜಸ್ಸು- ವಾಯು- ಆಕಾಶ-ಮನಸ್ಸು-ಅಹಂಕಾರ-ಮಹತ್ತು-ಮತ್ತು ಅವ್ಯಕ್ತಗಳೆಂಬ ನವಾ **ಸ್ವಾಮಿಕೂಲಗನ** = ಸ್ವಾಮಿತೀರ್ಥದ ದಡದಲ್ಲಿರುವ **ನಿರ್ಮಮ** -- ವರಣಗಳು ಮಮಕಾರರಹಿತವಾದ, **ಉಭಯಕರ್ಮವೆ** = ಪಾಪಪುಣ್ಯ ಗಳೆಂಬ ದ್ವಂದ್ವ ಕರ್ಮಗಳೇ. **ಕಾಣಿಕೆಹಸನ** = ಶ್ರೇಷ್ಠವಾದ ಮುಡುಪು. **ಮನಸಿನ ಬೆಸನ** = ಪರಮಾತ್ಮನಲ್ಲಿ ಮನಸ್ಸನ್ನು ಕೂಡಿಸುವುದೇ, **ಕ್ಷೇತ್ರ ಧರ್ಮವು. ದಾಸ್ಯ ನುರ್ಮವೆ** = "ದಾಸೋऽಹಂ" ಎಂಬ ಭಾವನೆಯೇ **ಕೊಡುವವಿಧಾನ** - ಮುಡುಪು ಒಪ್ಪಿಸುವ ಕ್ರಮವು. **ಭರ್ಮಾಂಡ ದಲಿ** ಬ್ರಹ್ಮಾಂಡದಲ್ಲಿ (ಭರ್ಮ-ಹಿರಣ್ಯಗರ್ಭನಾಮಕರಾದ ಬ್ರಹ್ಮ ದೇವರು). **ಜನ್ಮಾದ್ಯೂರ್ಮಿಗಳನು** = ಜನನ ಮರಣಾಖ್ಯವಾದ ತೆರೆ ಗಳನ್ನು- ಅಲೆಗಳನ್ನು), **ನಿರ್ಮಲರಾಗಿ** ಕರ್ಮಬಂಧರಹಿತರಾಗಿ **ಈಶ ಕೂರ್ಮೆ** ನಿಯಾಮಕನಾದ ಶ್ರೀಹರಿಯ ಕಾರುಣ್ಯರೂಪವಾದ ಅನುಗ್ರಹ ಬೇಕೆಂಬ ಆಕಾಂಕ್ಷೆ ಉಳ್ಳವರು. **ಪರಿಚ್ಛೇದತ್ರಯದೊಳು** = ಸತ್ತ್ವ- ರಜ-ತಮಗಳೆಂಬ ತ್ರಿಗುಣಗಳ ಆವರಣಗಳನ್ನು. **ಒಳನದಿಯ ಮೀರಿ** = ಮೀರಿ, ಅಂದರೆ, ತ್ರಿಗುಣಾತೀತರಾಗಿ. **ಕರ್ಮಾಂಕುರದ** = ಅನಾದಿ ಕರ್ಮದ ಅಂಕುರ ರೂಪವಾದ **ಬೇರುಗಳೆಲ್ಲ ತರಿದು** = ಸಮೂಲವಾಗಿ ನಾಶಮಾಡಿ. (ಮೂಲೋತ್ಪಾಟನೆ) **ಲಿಂಗಾವರಣವ ಕಳಚಿ** = ವಿರಜಾ ನದಿ ಸ್ನಾನದ್ವಾರಾ ಲಿಂಗದೇಹಭಂಗ ಹೊಂದಿ (ಪ್ರಾಕೃತ ಕರ್ಮಮುಕ್ತರಾಗಿ) **ಗಿರಿರಾಯನ** = ಶೇಷಾಚಲಪತಿಯಾದ ವೆಂಕಟೇಶನ. **ಅಂಗಾಂಗ** = ಅಂಗೋಪಾಂಗಗಳಲ್ಲಿರುವ. **ವಿರಜಾನದಿಯೊಳು** = ಶ್ರೀನಿವಾಸನ ನಾನಾ ವಿಧವಾದ ಮನೋಹರವಾದ ಆಭರಣಗಳ ಅಲಂಕಾರವೇ **ವಿರಜಾನದಿ** ಎಂದ

ನುಸಂಧಾನ. ಶ್ರೀನಿವಾಸನ ಆಭರಣಗಳೆಲ್ಲವೂ ಲಕ್ಷ್ಮ್ಯಾತ್ಮಕ. ವಿರಜಾ ನದಿಯು ಲಕ್ಷ್ಮಿಯಿಂದ ಅಭಿಮನ್ಯಮಾನವಾಗಿದೆ. **ಹೃದಯಪದ್ಮ** = ಹೃದಯವೆಂಬ ಮನೆ. **ಅನಿಶ** = ಎಡಬಿಡದೆ ಜೀವರಿಗೆ ಬಿಂಬನಾಗಿದ್ದಾನೆ. **ಚಿದ್ದೇಹದಲಿ** = ಸ್ಥೂಲದೇಹಗತ ಮನಸ್ಸೆಂಬ ಶರೀರದಲ್ಲಿ. **ಶ್ವಾಸವಹನ** = ಉದಾನವಾಯುವಾಹನವಾದ ಶ್ರೀಹರಿಯು (ಉತ್ಕ್ರಮಣ ಕಾಲದಲ್ಲಿ ಈ ಭಗವದ್ರೂಪದ ಚಿಂತನೆ.) **ವಿದ್ಯುತ್ಪ್ರಭಾಸ** = ವಿದ್ಯುತ್ತಿನಂತೆ ಕ್ಷಣಕಾಲ ಪ್ರಕಾಶಿಸುವನು (ಮಿಂಚಿನಂದದಿ ಹೊಳೆವನು.) **ಬುದ್ಧಾರೂಢವಹುದೇ** = ಮೂಢರಿಗೆ ಬುದ್ಧಿಯಲ್ಲಿ ಈ ಅನುಸಂಧಾನವು ಎಂದಿಗಾದರೂ ಬರುವುದೇ ? **ಮಾರುತನ ಅವಲಂಬ** = ಶ್ರೀವಾಯುದೇವರ ತೃತೀಯಾವತಾರಭೂತರಾದ ಶ್ರೀಮನ್ಮಧ್ವಮುನಿಗಳ ಮತವನ್ನು ಅವಲಂಬಿಸಿ ತದನುಸಾರಿಯಾಗಿ ನಡೆಯುತ್ತಿರುವ. **ಪ್ರಾಕೃತಡಿಂಬ** = ಪಾಂಚಭೌತಿಕವಾದ ಸ್ಥೂಲಶರೀರವು.



**೯೫೫**

**(ಗುರುಗೋವಿಂದವಿಠ್ಠಲಾಂಕಿತ)**

**ರಾಗ–ಕಮಾಚ್** ರೂಪಕತಾಳ

ಕಾಮ ಕೋಟಿ ಸುಂದರಾ– ತಿರುಪತಿಯ
ಸ್ವಾಮಿತೀರ್ಥಮಂದಿರಾ ॥ ॥ಪ॥

ಕಾಮಜನಕ ಭಕ್ತಪ್ರೇಮಿ ಭವಾಟವಿ
ಧೂಮಕೇತು ಹೃತ್‌ಧಾಮದಿ ನೆಲೆಸೋ ॥ ॥ಅ॥

ವೃಷಭಾಚಲಾ–ಸನ್ನಿಲಯನೆ
ವೃಷಭಾ–ಚಲಾ ॥

ಒಸೆದು ವೆಂಕಸುತ ಅಸುರನ ಸವರುತ
ಅಸಮಗಿರಿಗೆ ನೀ ಅಸುರನ ಪೆಸರಿತ್ತೆ ॥ ॥೧॥

ಅಂಜನಾ–ಚಲಾ ನಿವಾಸನೆ ಪ್ರ
ಭಂಜನಾ–ಚಲಾ ॥
ಸಂಜೆಚರರ ಕುಲಭಂಜನ ಶರಧಿಜೆ
ಕಂಜಚಾಕ್ಷಿಪ್ರಿಯ ಅಂಜನಿವರದಾ ॥ ॥೨॥

ಶೇಷಾ–ಭೂಧರಾ ಮನಸಿನ ಬಹು
ಕ್ಲೇಶಾ–ಅಪಹರ ॥
ಶೇಷದೇವ ಮುದಲೀಸು ಹರಿಸಿ ಆವ
ನಾಶೆ ಸಲಿಸಿ ಹರಿ ಶೇಷಚಲನಾದೇ ॥ ॥೩॥

ವೆಂಕಟಾಚಲಾ–ಮಾಧವನಾ
ಸಂಕಟಗಳಾ ॥
ಅಂಕುರಿಸದೆ ನಿಷ್ಪಂಕನೆಂದೆನಿಸಿ
ಕಿಂಕರ ತನಯಳ ಕಂಕಣ ಕಟ್ಟಿದೆ ॥ ॥೪॥

ಶ್ರೀವರಾ–ಭೂವರಾ ಪೊರೆಯುವ ನೀ
ಜೀವರಾ–ಅಂತರಾ ॥
ಜೀವನಾಮಕನಾಗಿ ಜೀವಭಿನ್ನ ಪರ
ಕೈವಲ್ಯವ **ಗುರುಗೋವಿಂದವಿಠ್ಠಲ** ॥ ॥೫॥

೫೫೭

# ಶ್ರೀನಿವಾಸಸ್ತೋತ್ರ ನಕ್ಷತ್ರಮಾಲಿಕಾ

## (ಗುರುಶ್ರೀಶವಿಠಲಾಂಕಿತ)

**ರಾಗ–ಮೋಹನಕಲ್ಯಾಣಿ** **ಅಟ್ಟತಾಳ**

ಶ್ರೀನಿವಾಸ ದಯಾನಿಧೇ ‖ ‖ಪ‖

ಭಾನುಕೋಟಿತೇಜ ಲಾವಣ್ಯ ಮೂರುತಿ
ಶ್ರೀವೆಂಕಟೇಶಗೆ ನಮೋ ನಮೋ ‖ ‖ಅ‖

ಶೇಷಾಚಲನಿವಾಸ ದೋಷದೂರನೆ ಭಕುತ
ಪೋಷಕ ಶ್ರೀಕಾಂತ ನಮೋ ನಮೋ ‖ ‖೧‖

ಖಗರಾಜವಾಹನ ಜಗದೊಡೆಯನೆ ನಿನ್ನ
ಅಗಣಿತಮಹಿಮೆಗೆ ನಮೋ ನಮೋ ‖ ‖೨‖

ನೀಲಮೇಘಶ್ಯಾಮ ಪಾಲಸಾಗರಶಯನ
ಶ್ರೀಲಕುಮೀಶನೆ ನಮೋ ನಮೋ ‖ ‖೩‖

ಶಂಖಚಕ್ರಧರ ವೆಂಕಟರಮಣಕ
ಳಂಕಮೂರುತಿ ದೇವ ನಮೋ ನಮೋ ‖ ‖೪‖

ಪನ್ನಂಗಶಯನನೆ ನಿನ್ನಂಥ ದೇವರು
ಇನ್ನುಂಟೆ ಅಜಭವಸುರವಂದ್ಯ ನಮೋ ನಮೋ ‖ ‖೫‖

ಸೃಷ್ಟಿ ಇಚ್ಛಿಸಲಿ ಒತ್ತಟ್ಟಿಗಿದ್ದವರನ್ನು
ಸೃಷ್ಟಿಸಿ ಪೊರೆವ ಸಂಹಾರಿ ‖ ‖೬‖

ತನು ಮನ ಕರಣಗಳನ್ನು ಕೊಟ್ಟು
ಅನಿಮಿಷರು ಅಭಿಮಾನಿಗಳೆನಿಸಿದೆ ॥ ॥೭॥

ದೀನವತ್ಸಲ ನಿನ್ನಾಧೀನದೊಳಗಿಟ್ಟು
ಜ್ಞಾನಕರ್ಮಗಳ ಮಾಡಿಸುವೆಯೋ ॥ ॥೮॥

ಕ್ಷಣ ಬಿಡದಲೆ ಭಕುತ ಜನರ ರಕ್ಷಿಸುವಿ ದು-
ರ್ಜನರಿಗೆ ದುರ್ಲಭನೆನಿಸೂವೀ ॥ ॥೯॥

ವೈಷಮ್ಯ ನೈರ್ಘೃಣ್ಯ ಲೇಸವಿಲ್ಲದವರು-
ಪಾಸನದಂತೆ ಫಲಗಳೀವಿ ॥ ॥೧೦॥

ಒಂದೇ ರೂಪದಿ ಬಹುಮಂದಿಗಳೊಳಗಿದ್ದು
ಬಂಧ ಮೋಕ್ಷಪ್ರದನೆನಿಸೂವಿ ॥ ॥೧೧॥

ಜ್ಞಾನಿಗಳರಸ ಅಜ್ಞಾನಿಗಳೊಳು ನಾ ಅ
ಜ್ಞಾನಿ-ಸುಜ್ಞಾನವ ಪಾಲಿಸೋ ॥ ॥೧೨॥

ನಂಬಿದೆ ನಾ ನಿನ್ನ-ಬಿಂಬಮೂರುತಿ ಎನ್ನ
ಡಿಂಬದೊಳಗೆ ಪೊಳೆ ಅನುದಿನ ॥ ॥೧೩॥

ಘನ್ನಮಹಿಮ ಎನಗಿನ್ನೊಂದು ಬಯಕಿಲ್ಲ
ನಿನ್ನ ಧ್ಯಾನದೊಳಿಡು ಮರೆಯದೇ ॥ ॥೧೪॥

ನಿನ್ನ ಹೊರತು ಎನಗನ್ಯರಿಂದೇನಯ್ಯ
ನಿನ್ನ ಸ್ತುತಿಪ ಸುಖಕ್ಕೆಣೆಗಾಣೆ ॥ ॥೧೫॥

ದುರ್ಜನರಸಂಗ ವಿವರ್ಜನಮಾಡಿಸಿ ಸಾಧು
ಸಜ್ಜನರ ಸೇವೆಯೊಳಗಿಡೋ ॥ ॥೧೬॥

ಏಸುಜನ್ಮಗಳೀಯೆ ಲೇಸು ಚಿಂತೆಯು ಇಲ್ಲ
ದಾಸನೆಂದೆನಿಸೋ ದಾಸ್ಯವನಿತ್ತು ॥ ॥೧೭॥

ಎನ್ನಪ್ಪ ಎನ್ನಣ್ಣ ಎನ್ನ ಕಾಯುವ ದೇವ
ನಿನ್ನ ವಿಸ್ಮರಣೆಯ ಕೊಡದಿರೋ ॥ ॥೧೮॥

ಮನಸಿನ ಚಂಚಲವನು ತೊಲಗಿಸಿ ಪಾದ
ವನಜದಲ್ಲಿರಿಸಯ್ಯ ಜಿತವಾಗಿ ॥ ॥೧೯॥

ಕರಣಗಳಿಂದ ಚರಿಸುವ ಆ ವಿಷಯ ಶ್ರೀ-
ಹರಿ ನಿನ್ನ ಸೇವೆಯಾಗಲಿ ಸ್ವಾಮಿ ॥ ॥೨೦॥

ಹರಿಯು ಸರ್ವೋತ್ತಮ ಸುರರೆಲ್ಲ ದಾಸರು
ತರತಮ ಭೇದಜ್ಞಾನವನೀಯೋ ॥ ॥೨೧॥

ಬುದ್ಧಿಪೂರ್ವಕ ಗುರುಮಧ್ವಮತವ ತಿಳಿ
ದಿದ್ದವನೆ ಜ್ಞಾನವೃದ್ಧನೋ ॥ ॥೨೨॥

ಗುರುಗಳ ಕರುಣ ಸುಸ್ಥಿರವಾಗಿದ್ದವರಿಗೆ
ಹರಿ ನಿನ್ನ ಅನುಗ್ರಹವಾಗ್ವದೋ ॥ ॥೨೩॥

ನಿನ್ನ ಚಿತ್ತಕೆ ಬಂದದ್ದೆನ್ನಚಿತ್ತಕೆ ಬರಲಿ
ಅನ್ಯಥ ಬಯಕೆಯ ಕೊಡದಿರೋ ॥ ॥೨೪॥

ನಿನ್ನವರಲ್ಲದೆ ಅನ್ಯರು ಬಲ್ಲರೆ
ಘನ್ನ ಮಾತಿನ ಸುಖಸವಿಯನ್ನು ॥ ॥೨೫॥

ಸ್ತುತಿರತ್ನಮಾಲಾ ಸಂಸ್ತುತಿಸಿ ಹಿಗ್ಗುವರಿಗೆ
ಪ್ರತಿದಿನ ಸುಖ ಅಭಿವೃದ್ಧಿಯೋ ॥ ॥೨೬॥

ಗುರುಗಳು ಮಧ್ವರಾಯರು ಮೂರುಲೋಕಕ್ಕೆ ॥
ಧೊರೆ **ಗುರುಶ್ರೀಶವಿಠ್ಠಲ** ನಮೋ ನಮೋ ॥ ॥೨೭॥



**೫೫೭**

## ಮಂಗಳ ಪದ

### (ವಿಜಯವಿಠ್ಠಲಾಂಕಿತ)

**ರಾಗ– ಭೈರವಿ** **ಆದಿತಾಳ**

ಜಯ ಮಂಗಳಂ ನಿತ್ಯ ಶುಭಮಂಗಳಂ ॥ ॥ಪ॥

ತೊಳಸದಕ್ಕಿಯ ತಿಂಬ ಕಿಲುಬು ತಳಿಗೆಯಲುಂಬ
ಕೊಳಗದಲಿ ಹಣಗಳನು ಅಳೆದುಕೊಂಬ
ಇಲ್ಲ ಕಾಸು ಎಂದು ಸುಳ್ಳುಮಾತಾಡಿದರೆ
ಎಲ್ಲವನು ಕಸುಗೊಂಬ ಕಳ್ಳಧೊರೆಗೆ ॥ ॥೧॥

ತನ್ನ ನೋಡೇನೆಂದು ಮುನ್ನೂರು ಗಾವುದ ಬರೆ
ತನ್ನ ಗುಡಿಯ ಪೊಕ್ಕ ಜನರಿಗೆಲ್ಲ
ಹೊನ್ನು ಹಣಗಳ ಕೊಂಡು ತನ್ನ ದರುಶನ ಕೊಡದೆ
ಬೆನ್ನೊಡ್ಡೆಯ ಹೊಯಿಸುವ ಅನ್ಯಾಯಕಾರಿಗೆ ॥ ॥೨॥

ಗಿಡ್ಡ ಹಾರವನಾಗಿ ಬಡ್ಡಿದಾನವ ಬೇಡಿ
ದುಡ್ಡು ಕಾಸುಗಳಿಗೆ ಕೈಯ ನೀಡಿ
ಅಡ್ಡ ಬಿದ್ದ ಜನರ ವಿಡ್ಡೂರಗಳ ಕಳೆದು
ದೊಡ್ಡವರ ಮಾಳ್ಪ ಸಿರಿ **ವಿಜಯವಿಠ್ಠಲಗೆ** ॥ ॥೩॥

**ಅರ್ಥವಿವರಣೆ :**

**ತೊಳಸದಕ್ಕಿಯು** = ಅಕ್ಕಿಯನ್ನು ತೊಳಸದೇ ಇರುವ ಕೇಸಕ್ಕಿಯು ಅನ್ನ **ತಳಿ** = ದೇವರಿಗೆ ನೈವೇದ್ಯವನ್ನಿಡುವ ಹರಿವಾಣ. **ಕೊಳಗದಲಿ** = ಆಳತೆಯ ಪಾತ್ರೆ. **ಬೆನ್ನೊಡ್ಡೆಯು** = ಕೃಷ್ಣಾಜಿನದ ಪಟ್ಟಿಗಳಿಂದ ಬೆನ್ನಿನಮೇಲೆ ಹೊಡೆಯುವುದು (ದೇವರ ದರ್ಶನವಾದನಂತರ ಭಕ್ತರ ಗುಂಪನ್ನು ಚದುರಿಸಲು ಸಾಧನ). **ಗಿಡ್ಡ ಹಾರವನಾಗಿ** = ಕುಳ್ಳನಾದ ವಾಮನಾವತಾರೀಶ್ರೀಹರಿ. **ಒಡ್ಡಿ** = ಕೈ ನೀಡಿ (ಬಲಿಚಕ್ರವರ್ತಿಗೆ) **ವಿಡ್ಡೂರಗಳ** = ಪ್ರತಿಬಂಧಕರೂಪವಾದ ಪಾಪಗಳನ್ನು ಪರಿಹರಿಸಿ.

॥ ಶ್ರೀ ವೆಂಕಟೇಶ್ವರಾರ್ಪಣಮಸ್ತು ॥



|| ಶ್ರೀಃ ಹರಿಃ ಓಂ ||

## ವಿಭಾಗ-೭

# ಶ್ರೀರಾಮದೇವರ ಪರವಾದ ಕೀರ್ತನಮಾಲಾ

ಭಜನಕೌಸ್ತುಭ

# ೧. ಶ್ರೀರಾಮದೇವರ ಪರವಾದ ಕೀರ್ತನೆಗಳ ಸಂಗ್ರಹ

## ೫೫೮

## ರಂಗವಿಠ್ಠಲಾಂಕಿತ (ಶ್ರೀಪಾದರಾಜರ ಕೃತಿ)

**ರಾಗ–ಪೂರ್ವಿ** **ಖಂಡಛಾಪು ತಾಳ**

ಶ್ರೀರಾಮ ನಿನ್ನಪಾದವ ತೋರೋ
ಮೋಹನ್ನ ಗುಣಧಾಮ ನಿನ್ನ ಮೋಹದ ಪಾದವ ॥ ॥ಪ॥

ವರಗುಣಜಾಲ ಸುರಗಣಲೋಲಾ
ಕರುಣಾಪಾಲ ತರುಣೀ ಪರಿಪಾಲಾ ॥ ॥೧॥

ಅಜಭವಪೂಜಿತ ಗಜವರಭಾವಿತ
ಸುಜನರ ಸೇವಿತ ತ್ರಿಜಗವಂದಿತಾ ॥ ॥೨॥

ಅಂಗಜಜನಕ ವಿಹಂಗತುರಂಗ
ತುಂಗವಿಕ್ರಮ ಶ್ರೀರಂಗವಿಠ್ಠಲ ॥ ॥೩॥

**ಅರ್ಥವಿವರಣೆ :**

**ಮೋಹನ್ನ** = ಪರಮಮಂಗಳಕರವಾದ. **ವರಗುಣಜಾಲ** = ಅತ್ಯಂತ ಶ್ರೇಷ್ಠವಾದ ಅಪ್ರಾಕೃತವಾದ ಅನಂತಕಲ್ಯಾಣಗುಣಗಣಪರಿಪೂರ್ಣ. **ತರುಣೀಪರಿಪಾಲಾ** = ಅಹಲ್ಯೆಯ ಉದ್ಧಾರದ ಪ್ರಸಂಗ (ರಾಮಾವತಾರ). **ಅಜಭವಪೂಜಿತ** = ಬ್ರಹ್ಮ, ರುದ್ರಾದಿಗಳಿಂದ ಪೂಜ್ಯನು. **ಗಜವರಭಾವಿತ** = ಗಜರಾಜನಿಂದ ಸ್ತುತ್ಯ. **ಅಂಗಜಜನಕ** = ಮನ್ಮಥನ ಪಿತ. **ವಿಹಂಗತುರಂಗ** = ಗರುಡಗಮನನು.



೫೫೯

## ಅಂಕಿತ–ಮಹಿಪತಿ

ಶ್ರೀರಾಮ ರಾಮನೇ ಸಾರ್ವಭೌಮ
ಪರಮ ಪುರುಷೋತ್ತಮಾನಂತ ಮಹಿಮ ॥ ॥ಅ॥

ಹರಹೃದಯ ವಿಶ್ರಾಮ ಸುರಜನರಿಗೆ ಪ್ರೇಮ
ಕರುಣಾಸಾಗರ ಸಕಲಾತ್ಮರಾಮ ॥ ॥೧॥

ಸುರಭಿ ಕಲ್ಪದ್ರುಮವಾರ ಸ್ವಹಿತನಾಮ
ವಿರಮೋಪಹಾರಿ ಪೂರಿತಕಾಮ ॥ ॥೨॥

ಪ ಪಯರು ನಿಸ್ಸೀಮ ಪೊರೆವ ಶರಣರ ನೇಮ
ತರಳ ಮಹಿಪತಿ ಸ್ವಾಮಿ ಘನಮಹಿಮ ॥ ॥೩॥

೫೬೦

**ರಾಗ–ಕಾಂಬೋದಿ** **ಝಂಪೆತಾಳ**

**(ಪುರಂದರವಿಠಲಾಂಕಿತ)**

ರಾಮ ಎಂಬುವ **ಎರಡು** ಅಕ್ಷರದ ಮಹಿಮೆಯನು
ಪಾಮರರು ತಾವೇನು ಬಲ್ಲರಯ್ಯ ॥ ॥ಪ॥

ರಾ ಎಂದ ಮಾತ್ರದೊಳು ರಕ್ತ ಮಾಂಸದಲ್ಲಿದ್ದ
ಆಯುಷ್ಯಗತವಾದ ಅತಿ ಪಾಪವನ್ನು

ಮಾಯವನು ಮಾಡಿ ಮಹರಾಯ ಮುಕ್ತಿಯ ಕೂಡುವ
ದಾಯವನು **ವಾಲ್ಮೀಕಿ** ಮುನಿರಾಯ ಬಲ್ಲ ॥ ॥೧॥

ಮತ್ತೆ **ಮಾ** ಎಂದೆನಲು ಹೊರಬಿದ್ದ ಪಾಪಗಳು
ಒತ್ತಿ ಒಳಪೊಗದಂತೆ ಕವಾಟವಾಗಿ
ಚಿತ್ತ ಕಾಯಗಳ ಪವಿತ್ರ ಮಾಡುವ ಪರಿಯ
ಭಕ್ತವರ **ಹನುಮಂತ**ನೊಬ್ಬ ತಾ ಬಲ್ಲ ॥ ॥೨॥

ಧರೆಯೊಳಗೆ ನಾಮಕ್ಕೆ ಸರಿಮಿಗಿಲು ಇಲ್ಲೆಂದು
ಪರಮ ಪಾಪಗಳೆಲ್ಲ ಪೊಗಳುತಿಹವು
ಸಿರಿಯರಸ **ಪುರಂದರವಿಠಲನ** ನಾಮವನು
ಗಿರಿಕಾಂತೆಯೊಳಗಿಪ್ಪ **ಶಿವನು** ತಾ ಬಲ್ಲ ॥ ॥೩॥

**ಅರ್ಥವಿವರಣೆ :**

**ಆಯುಸ್ಸಿಗತವಾದ** = ಮೂಳೆಗೆ ಅಂಟಿಕೊಂಡಿರುವ, ಅಂದರೆ ಆಳವಾಗಿ ಒಳಹೊಕ್ಕ ಪಾಪಸಮೂಹಗಳನ್ನು **"ರಾಮ"**–ಎಂಬ ಎರಡು ಅಕ್ಷರಗಳ ಶಬ್ದವು ಸಮೂಲವಾಗಿ ಪರಿಹಾರಮಾಡುವುದು. ಹಿಂದೆ ಪರಮ ಪಾಪಿಷ್ಠನಾಗಿ ದುರ್ಮಾರ್ಗದಿಂದ ಜೀವನ ನಡೆಯಿಸುತ್ತಿದ್ದ ಬೇಡನು ನಾರದರ ಉಪದೇಶದಿಂದ **ರಾಮನಾಮ** ಜಪದಿಂದ ಆದಿಕವಿ **ವಾಲ್ಮೀಕಿ** ಎಂದು ಪ್ರಖ್ಯಾತನಾದನು. **ದಾಯವನು** = ಸಂಪತ್ತು ಅಂದರೆ, ಮುಕ್ತಿ ಎಂಬ ಸಂಪತ್ತನ್ನು ಹೊಂದಿದನು. **ಕವಾಟ** = ಬಾಯಿಯ ಎರಡು ತುಟಿಗಳೂ **ಮ** ಎಂದು ಉಚ್ಛರಿಸುವಾಗ ಸೇರಿ ಹೊರಬಿದ್ದ ಪಾಪಸಮೂಹಗಳು ಪುನಃ ಒಳಗೆ ಹೋಗದಂತೆ ಬಂಧಿಸುವುವು, ಈ ಮಹಿಮೆಯನ್ನು ಶ್ರೀರಾಮ ಕಾರ್ಯಧುರಂಧರನಾದ **ಹನುಮಂತ** ಬಲ್ಲ. ವೇದತುಲ್ಯವಾದ ಶ್ರೀರಾಮ ನಾಮಮಹಿಮೆಯನ್ನು **ಕಾಶೀ ವಿಶ್ವನಾಥನಾದ ಶ್ರೀರುದ್ರದೇವರು** ಬಲ್ಲರು. ರಾಮತಾರಕಮಂತ್ರವನ್ನು ತನ್ನ ಸತಿಯಾದ ಗಿರಿಜೆಗೆ ಉಪದೇಶಿಸಿದರು.

## ೫೬೧

## (ಅಂಕಿತ–ಪ್ರಸನ್ನವೆಂಕಟ)

**ರಾಗ–ಸಾವೇರಿ** **ಆದಿತಾಳ**

ಪಾಲಯ ಸೀತಾರಾಮ ಭೂಮಾ ॥ ॥ಪ॥

ದಶರಥನಂದನ ದಶಮುಖಭಂಜನ ತ್ರಿ
ದಶಭಯ ಶಮನ–ಸುಸ್ಮಿತವದನ ॥ ॥೧॥

ವಾತಜಸುತ ಭವಪಾತಕಹರ ವಿಧಿತಾತ ಪು
ನೀತಪದ–ಭೂತಪ ವರದಾ ॥ ॥೨॥

ದಿನಕುಲರತ್ನಾ ದೀನಜನರಕ್ಷ
ಮುನಿಜನ ತೋಷ–ಪ್ರಸನ್ನವೆಂಕಟೇಶಾ ॥ ॥೩॥

❖

**ಅರ್ಥವಿವರಣೆ :**

**ಭೂಮ** = ಚಕ್ರವರ್ತಿ (ಸಾಕೇತಪುರದ ಚಕ್ರವರ್ತಿ). **ತ್ರಿದಶ ಭಯಶಮನ** = ದೇವತೆಗಳ ಭಯವನ್ನು ಪರಿಹರಿಸುವ (ತ್ರಿದಶ–ದೇವತೆಗಳು). **ಸುಸ್ಮಿತವದನ** = ಮಂದಹಾಸಯುಕ್ತವಾದ ಮುಖ. **ವಾತಜ ಸುತ** = ವಾಯುಪುತ್ರನಾದ ಶ್ರೀಹನುಮಂತನಿಂದ ಸ್ತುತ್ಯನಾದವನು **ಭವಪಾತಕಹರ** = ಸಂಸಾರದಿಂದ ಉಂಟಾಗುವ ಪಾಪಗಳನ್ನು ಪರಿಹರಿಸುವವನು, **ವಿಧಿತಾತ** = ಬ್ರಹ್ಮದೇವರ ತಂದೆ. **ಪುನೀತಪದ** = ಪಾವನಚರಣನು. **ಭೂತಪ ವರದಾ** = ಭೂತನಾಥನಾದ ಶ್ರೀ ರುದ್ರದೇವರಿಗೆ ಅನುಗ್ರಹಪ್ರದನು. **ದಿನಕುಲ** = ಸೂರ್ಯವಂಶೋದ್ಭವ.

**ಸುಜಟಾಮಂಡಿತ ಮೌಳಿ** = ಮನೋಹರವಾದ ಜಟೆಯಿಂದ ಅಲಂಕೃತ ವಾದ ಶಿರ **ಮುನೀಂದ್ರಕರಾರ್ಚಿತ** = ಭಾರದ್ವಾಜ ಋಷಿಗಳು ಮತ್ತು ಇತರ ತಪೋನಿಧಿಗಳ ಕರಕಮಲದಿಂದ ಪೂಜಿತನಾದವ. **ಚಂಡ ಕುಲೇಶಾ** = ಸೂರ್ಯ ವಂಶೋದ್ಭವ (ಚಂಡ–ಪ್ರಖರಕಿರಣಯುಕ್ತನಾದ ಸೂರ್ಯ). **ವಾರಿದಶ್ಯಾಮ** = ನೀಲಮೇಘಶ್ಯಾಮ (ವಾರಿದ = ಮೇಘ) **ಸಮೀರಜ** = ವಾಯುಪುತ್ರ ಮಾರುತಿಯಿಂದ ಸಂಸೇವ್ಯಮಾನನಾದ.



## ೫೬೩

### (ವಿಜಯವಿಠ್ಠಲಾಂಕಿತ)

**ರಾಗ ಧನ್ಯಾಸಿ** **ಆದಿತಾಳ**

ರಾಮ ರಾಮ ಎಂಬರಡಕ್ಷರ
ಪ್ರೇಮದಿ ಸಲಹಿತು ಸುಜನರನು (ಭಜಕರನು. ಪಾ) ॥ಪ॥

ಹಾಲಾಹಲವನು ಪಾನವ ಮಾಡಿದ
ಫಾಲಲೋಚನನೆ ಬಲ್ಲವನು
ಆಲಾಪಿಸುತ ಶಿಲೆಯಾಗಿದ್ದ
ಬಾಲೆ ಅಹಲ್ಯೆಯು ಕೇಳೇನು ॥ ॥೧॥

ಅಂಜಿಕೆಯಿಲ್ಲದೆ ಗಿರಿ ಸಾರಿದ ಕಪಿ
ಕುಂಜರ ರವಿಸುತ ಬಲ್ಲವನು
ಎಂಜಲ ಫಲಗಳ ಹರಿಗರ್ಪಿಸಿದ
ಕಂಜಲೋಚನೆಯು ಕೇಳೇನು ॥ ॥೨॥

ಕಾಲವನರಿತು ಸೇವೆಯ ಮಾಡಿದ
ಲೋಲ ಲಕ್ಷ್ಮಣನ ಒಲ್ಲವನು
ವ್ಯಾಳಶಯನ ಶ್ರೀವಿಜಯವಿಠ್ಠಲನ
ಲೀಲೆರಥಿಯು ಕೇಳೇನು || ||೬||



**ಅರ್ಥವಿವರಣೆ :**

**ಹಾಲಾಹಲವನು** = ಕ್ಷೀರಸಮುದ್ರಮಥನಕಾಲದಲ್ಲಿ ಪ್ರಥಮವಾಗಿ ಉತ್ಪತ್ತಿಯಾದ ಕಟುರೂಪದ ಮಹಾವಿಷ. **ಫಾಲಲೋಚನ** = ಹಣೆಯಲ್ಲಿ ಕಣ್ಣುಳ್ಳ ತ್ರಿನೇತ್ರನಾದ ರುದ್ರದೇವರು. **ಗಿರಿ ಸಾರಿದ** = ಗಂಧಮಾದನಪರ್ವತವನ್ನು ಸೇರಿ ಅದನ್ನು ತಂದ ಶ್ರೀಮಾರುತೀ. **ರವಿಸುತ** = ಸೂರ್ಯಪುತ್ರನಾದ ಸುಗ್ರೀವ. **ಕಂಜಲೋಚನೆಯು** = ಕಮಲದಂತ ನೇತ್ರವುಳ್ಳ ಭಕ್ತವತ್ಸಲ. **ಕಾಲವನರಿತು** = ಸಮಯವನರಿತು ಶ್ರೀರಾಮಚಂದ್ರನ ಸೇವೆಯನ್ನು ಶ್ರದ್ಧಾಭಕ್ತಿಗಳಿಂದ ಮಾಡಿದ ರಾಮಾನುಜನಾದ ಶ್ರೀಲಕ್ಷ್ಮಣನು. **ವ್ಯಾಳಶಯನ** = ಶೇಷಶಯನನಾದ ಶ್ರೀಹರಿ.



## ೫೭೪

### (ವರದಗೋಪಾಲವಿಠ್ಠಲಾಂಕಿತ)

**ರಾಗ–ಕಾನಡ** **ಆಟತಾಳ**

ರಾಮನಾಮ ಭಜಿಸಿದವಗೆ ಉಂಟೇ ಭವದ ಬಂಧನ ಶ್ರೀ || ||ಪ||

ಕಾಮಹರನ ಸತಿಯು ಸದಾ ಪ್ರೇಮದಿಂದ ಭಜಿಸುವ ಶ್ರೀ || ||ಅ||

ಏವನು ಧನ್ಯನಾದ ಮೌನಿ ಯುವತಿ ಪಾವನಯಾದಳು
ರವಿಯಸುತನು ಪದವಿ ಪಡೆದ ಧ್ರುವನು ದಿವಿಜನೆನಿಸಿದ ॥ಶ್ರೀ॥ ॥೧॥

ಕರಿವರ ಪ್ರಹ್ಲಾದ ದ್ರೌಪದಿ ವರವಿಭೀಷಣರೆಲ್ಲರು
ಹರಿಯ ಸ್ಮರಣೆಮಾಡಿ ಸುಖಭರಿತರಾಗಲಿಲ್ಲವೇ ॥ಶ್ರೀ॥ ॥೨॥

ಗಿರಿಜೆ ರಾಮಮಂತ್ರದಿಂದ ಪರಮಮಂಗಳೆಯಾದಳು
**ವರದಗೋಪಾಲವಿಠಲ** ನಾಮ ದುರಿತಕಾನನ ಪಾವಕ ॥ಶ್ರೀ॥ ॥೩॥

**ಅರ್ಥವಿವರಣೆ :**

**ಭವದ ಬಂಧನ** = ಸಂಸಾರದ ಕಟ್ಟು. ರಾಮನಾಮಸ್ಮರಣೆಯಿಂದ ಕರ್ಮವಿಮೋಚನಾದ್ವಾರಾ, ಸಂಸಾರನಿವೃತ್ತಿ. **ಕಾಮಹರನಸತಿಯು** = ಮನ್ಮಥನನ್ನು ತನ್ನ ಫಾಲನೇತ್ರಾಗ್ನಿಯಿಂದ ಸುಟ್ಟ ಶ್ರೀರುದ್ರದೇವರ ಪತ್ನಿ ಪಾರ್ವತಿ. **ಮೌನಿಯುವತಿ** = ಗೌತಮಋಷಿಪತ್ನಿಯಾದ ಅಹಲ್ಯೆ. ಶಾಪಗ್ರಸ್ತಳಾಗಿದ್ದ ಅಹಲ್ಯೆಯನ್ನು ಶ್ರೀರಾಮ ತನ್ನ ಪಾದಸ್ಪರ್ಶದಿಂದ ಪಾವನಮಾಡಿದ. **ರವಿಯ ಸುತನು** = ಸೂರ್ಯಪುತ್ರನಾದ ಸುಗ್ರೀವನು ಕಿಷ್ಕಿಂಧಾನಗರದಲ್ಲಿ ಅಭಿಷಿಕ್ತನಾದ. **ದಿವಿಜ** = ಧ್ರುವನು ದೇವತೆ ಎನಿಸಿ ಶಾಶ್ವತವಾದ ಪದವಿ ಪಡೆದನು. **ಕವಿವರ** = ಗಜರಾಜನು. (ಗಜೇಂದ್ರ ಮೋಕ್ಷದ ಪ್ರಸಂಗ). **ದುರಿತಕಾನನ ಪಾವಕ** = ಪಾಪಗಳೆಂಬ ಅರಣ್ಯಕ್ಕೆ ಅಗ್ನಿಸದೃಶ.



ತತಿ ನವರಿ ಲಂಕಾಧಿಪತ್ಯ
ನತ ವಿಭೀಷಣಾಗಿತ್ತಾ ವರದಾಂಪ್ರ
ಯತಿವರದ **ಜಗನ್ನಾಥವಿಠ್ಠಲ** ರಾಮಾ ॥ ॥೩॥

**ಅರ್ಥವಿವರಣೆ :**

ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಮಹಾಪರಂಪರೆಯಲ್ಲಿ ವಿರಾಜಮಾನರಾಗಿದ್ದ ಶ್ರೀವರದೇಂದ್ರ ಶ್ರೀಪಾದಂಗಳವರು ಪೂಜಿಸುತ್ತಿದ್ದ ಮೂಲರಾಮದೇವರನ್ನು ಸಂದರ್ಶಿಸಿದಾಗ **ಶ್ರೀಜಗನ್ನಾಥದಾಸವರ್ಯರು** ರಚಿಸಿದ ಕೀರ್ತನೆ ಇದು.

**ಸದ್ಗುಣಗಣಧಾಮನು** ಅನಂತಕಲ್ಯಾಣಗುಣ ಪರಿಪೂರ್ಣ. **ನಿರ್ಜರಸಾರ್ವಭೌಮನು** = ದೇವತೆಗಳಲ್ಲಿ ಅತ್ಯಂತ ಶ್ರೇಷ್ಠನಾದ ದೇವ ದೇವೋತ್ತಮನು. **ಧನುಜಕುಲಭೀಮನು** = ರಾಕ್ಷಸರ ವಂಶಸಂಹಾರಿ. **ಉದ್ದಾಮನು** = ರಘುಕುಲತಿಲಕನು **ಹನುಮಪ್ರೇಮಾತನು** = ಶ್ರೀಮಾರುತಿಯ ಭಕ್ತಿಗೆ ಮುಕ್ಕುವವನು. **ಮನೋಭಿರಾಮನು** = ಮನಸ್ಸಿನ ಕಾಮಿತಾರ್ಥಪ್ರದಾಯಕ (ಭಕ್ತರ ಮನೋಮಂದಿರದಲ್ಲಿ ದೇದೀಪ್ಯಮಾನನಾಗಿ ವಿರಾಜಿಸುವ ಮಂಗಳ ಮೂರ್ತಿ) **ಸರಸಿಜೋದ್ಭವನ** = ಬ್ರಹ್ಮದೇವರ ಕರಾರ್ಚಿತನಾದವನು. **ರಸನ್ವಯ** = ಸರ್ವರಸವೇದ್ಯನು. **ನೃಪರಕರವಾರಿರುಹ ಪೂಜಿತ** = ರಾಜರುಗಳ ಕರಕಮಲದಿಂದ ಪೂಜಿತನಾದವನು. (ಕರ = ಹಸ್ತ. ವಾರಿರುಹ = ಕಮಲ) **ಗಾಧಿನಂದನನ** = ಗಾಧೀರಾಜನ ಮಗನಾದ ವಿಶ್ವಾಮಿತ್ರನ **ಸುಮೇಧಾ** - ಉತ್ತಮಯಾಗವನ್ನು. **ಅಗಾಧನಂದ** = ಅಪರಿಮಿತ ಅಪರಿಚ್ಛಿನ್ನಗಳಾದ ಆನಂತ ಆನಂದ ಪೂರ್ಣನು. **ಮೇದಿನೀಜಾತಳ** = ಭೂಪುತ್ರಿಯಾದ ಸೀತಾದೇವಿಯು. **ಉಮಾಧವನ ಧನು** = ಸ್ವಯಂವರದಲ್ಲಿ ಪಣವಾಗಿ ಇಟ್ಟಿದ್ದ ಶಿವಧನುಸ್ಸನ್ನು, **ನೀಲಪಯೋಧರ ಶಾಮಲ** = ನೀಲಮೇಘಶ್ಯಾಮ ವರ್ಣನು (ಪಯಃ ಧರ = ನೀರನ್ನು ಧರಿಸಿರುವ ಮೇಘಗಳು). **ಸುಮನಸ**

**ವಿರೋಧಿ ಲೋಕಮಾಯ** = ದೇವತೆಗಳ ಪ್ರಾಣಿಗಳಾದ ದೈತ್ಯರನ್ನು ಸಂಹರಿಸಿದ ರಘುಕುಲಲಲಾಮ **ಚತುರವಿಂಶತಿ ದಶಶತ ಸಹಸ್ರಜಿತ** = ರಾವಣನ ೨೪೦೦೦,೦೦೦೦ ಸೈನ್ಯವನ್ನು ಗೆದ್ದ (ಚತುರವಿಂಶತಿ = ೨೪ ದಶಶತ = 10 × 100 1000 ಸಹಸ್ರ = 1000. ಅಂದರೆ 24000 × 1000 = 24000,000) **ಅಮಿತಾ** = ಅನಂತನು **ಆದ್ಯಮಿತರೂಪ** = ಅನಾದ್ಯನಂತಕಾಲದಿಂದಲೂ ಅನಂತಾನಂತರೂಪನು **ಜಗನ್ಮಿತಾ** = ಲೋಕಪೂಜಿತ **ವರದೇಂದ್ರಯತಿವರದ** = ಶ್ರೀವರದೇಂದ್ರತೀರ್ಥ ಶ್ರೀಪಾದಂಗಳವರಿಗೆ ಒಲಿದ ಮೂಲರಾಮ

## ೫೭೩

### (ಪ್ರಾಣೇಶವಿಠಲಾಂಕಿತ)

**ರಾಗ–ಕಾಂಬೋದಿ** **ಝಂಪೆತಾಳ**

ಇಂತಿರುವುದೇನು ಬಗೆ ರಾಮಾ–ಹರಿ ಸ್ವ–
ತಂತ್ರ ಪ್ರಸಿದ್ಧ ಎಂದು ಪೊಗಳುತಿವೆ ವೇದ ॥ ॥ಪ॥

ವಿಧಿಗೆ ಪದವಿತ್ತವಗೆ–ವನವ ಚರಿಸುವುದೇನೊ
ಸಮಮಾನವನೆಮರವಮಣಿ ಒಡವನಾಗಿಹದೇನೊ ॥
ಪವನಜನಕನೆ ಋಷಿಗಳಂತೆ ಆಗುವುದೇನೊ
ಭುವನಪಾಲನು ಒಹು ಜನಗಳಿಂದಲು ಪತ್ರ–
ನವನವಾಶ್ರಯಿಸಿಕೊಂಡಿರುವುದೇನೊ ॥ ॥೧॥

ಸತ್ಯತೃಪ್ತನೆ ಶಬರಿ ಎಂಜಲುಂಬುವುದೇನೊ
ಉತ್ತಮ ವಿಹಗವಿರಲು ಕಾಲ್ಕಡಿಗೆಯುವದೇನೊ
ಭೃತ್ಯರು ವಿವಿಧರು ಸಿ ಚಾಪವ ಹೊರುವುದೇನೊ

**ಉತ್ತಮವಿಹಗಪಿರಲು** = ಗರುಡನೆಂಬ ಶ್ರೇಷ್ಠವಾಹನವಿರುತ್ತಿರಲು, ಪಾದಚಾರಿಯಾಗಿ ವನದಲ್ಲಿ ಸಂಚರಿಸಿದ ಬಗೆ ಏನಿದು? **ನಿತ್ಯ ಶ್ರೀ ಹೃದಯದೊಳಿರಲು** = ಲಕ್ಷ್ಮಿಯು ನಿನ್ನ ನಿತ್ಯಾವಿಯೋಗಿನಿ. ನಿನ್ನ ವಕ್ಷ ಸ್ಥಳವಾಸಿನಿ. ಹೀಗಿದ್ದರೂ, ಸೀತೆಯಿಂದ ನಿನಗೆ ವಿಯೋಗವೇ? ಶೇಷ ಶಾಯಿಯಾದವನು ಹುಲ್ಲಿನ ಹಾಸಿಗೆಯ ಮೇಲೆ ಮಲಗುವುದು ಏನು ಆಶ್ಚರ್ಯ?

✣

## ೫೬೭

## (ಶ್ರೀದವಿಠಲಾಂಕಿತ)

**ರಾಗ–ನಾದನಾಮಕ್ರಿಯೆ** **ಆದಿತಾಳ**

ಜಯ ಜನಕಜಾಪತೇ ರಾಮಾ ||ಜಯ|| ||ಪ||

ಜನಕಜಾಪತೇ ಜಲದಶ್ಯಾಮಾ
ಜಯ ರಘುವಂಶಲಲಾಮಾ || ||ಅ||

ಮುನಿಜನಕ ಮಧುಕೈಟಭ ಭೀಮ
ಮದನಬಿಂಬಾರ್ಚಿತ ಕಾಮಾ ||ಜಯ|| ||೧||

ರಾಮಚಂದ್ರ ರಘುವೀರ ಜಾನಕೀರಾಮ
ರಾವಣವೈರಿ ಶ್ರೀರಾಮಾ ||ಜಯ|| ||೨||

ಸಾಮಜವರದ ವಿನುತಸೋಮ
**ಶ್ರೀದವಿಠಲ** ಗುಣಧಾಮ ||ಜಯ|| ||೩||

**ಅರ್ಥವಿವರಣೆ:—**

**ಜನಕಜಾಪತೇ** = ಜನಕರಾಜನ ಪುತ್ರಿಯಾದ ಸೀತಾರಮಣ. **ಜಲದ ಶ್ಯಾಮಾ** = ನೀಲಮೇಘ ಶ್ಯಾಮಾ (ಜಲದ = ನೀರನ್ನು ಕೊಡುವ ಮೇಘ

ಗಳು) **ಸಾಮಜವರದ** = ಗಜರಾಜ ಸಂರಕ್ಷಕ. **ವಿನುತಸೋಮ** ರುದ್ರನಿಂದ ಸ್ತುತ್ಯನಾದ ಶ್ರೀರಾಮಚಂದ್ರ (ಸೋಮ = ಸ + ಉಮಾ = ಉಮಾಸಹಿತನಾದ ರುದ್ರದೇವರು)



೫೬೪

## (ಕಮಲೇಶವಿಠ್ಠಲಾಂಕಿತ)

**ಶ್ರೀರಾಗ** — **ಆದಿತಾಳ**

ಕೇಳೆ ಕಮಲಾಲಯೆ ಶ್ರೀರಾಮನ ಕಥೆಯಾ
ಕೊಡುವನು ಸನ್ಮತಿಯಾ ॥ ॥ಪ॥

ಕೇಳು ದಶರಥನೃಪಾಲನುದರದಿ ಸು-
ಶೀಲ ಕರುಣಾವರುಣಾಲಯನುದಿಸಿದ ॥ ॥ಅ॥

ಕೌಸಲ್ಯಾದೇವಿಯು ಗರ್ಭದಿಂದ—ಜನಿಸಿ ಮುನಿಕುಲೋ-
ತ್ತಂಸನ ಮಖವ ಕಾಯಲು ಬಂದ—ಬರುತಲಿ ತಾಟಕಿ
ಹಿಂಸಾ ಮಾಡಿದ—ಮುನಿ ಆಜ್ಞದಲಿಂದ—ಕಾಯ್ದ ಸುರವೃಂದಾ ॥
ಸಂಸೇವಿತ ಮುನಿಹಂಸನ ಸತಿಯ ಘ-
ಧ್ವಂಸಗೈದ ಪದಪಾಂಸುವ ಮಹಿಮೆಯ ॥ ॥೧॥

ಸೀತೆಯ ಸಹಿತಾಯೋಧ್ಯಗೆ ಬಂದ— ಕಿರಿಯಮ್ಮಗಿತ್ತ
ಮಾತು ಮನ್ನಿಸಲಾವನಕೈತಂದ— ಶೂರ್ಪನಖಿಯ ಸಹ
ಜಾತನಿಂದವಳನುಪಾಯದಲಿಂದ— ಸನ್ಯಾಸಿಯು ಬಂದಾ ॥
ಪಾತಕ ಮಾರೀಚಾತಿರಯ ಖಳ-
ವ್ರಾತವ ಘಾತಿಸಿದಾತನ ಮಹಿಮೆಯ ॥ ॥೨॥

ಕುಟಿಲಾಳಕಿ ಸತಿಯಾನ್ವೇಷಣೆಯಿಂದ– ಶ್ರೀರಾಮ ಪಂಪಾ–
ತಟಕೈತರಲು ಮಾರುತಿ ಬಂದಾ– ಸುಗ್ರೀವಗೆ ಸಂ–
ಘಟಿಸಿದ ಆಪ್ತಾನ್ವೇಷಣೆಯಿಂದ– ವಾಲಿಯ ಕೊಂದ ॥
ಕರಿಣಾಕ್ಷೀಶರ ಕಪಿಕಟಕದಿಂದ ಅಸು
ಕುಟಿಸಿದ **ಕಮಲೇಶವಿಠ್ಠಲನ** ಮಹಿಮೆಯು ॥ ॥೨॥

**ಅರ್ಥವಿವರಣೆ.—**

**ವರುಣಾಲಯಂ** = ಸಾಗರ **ಮುನಿಕುಲೋತ್ತಂಸನ** = ಋಷಿಶ್ರೇಷ್ಠರಾದ ವಿಶ್ವಾಮಿತ್ರರ. **ಮಖವ** = ಯಜ್ಞವನ್ನು. **ಮುನಿಹಂಸನ ಸತಿಯಘ** = ತಾಪಸೋತ್ತಮರಾದ ಗೌತಮರ ಪತ್ನಿಯ ಪಾಪವನ್ನು ಪರಿಹಾರಮಾಡಿ. **ಪದಪಾಂಸುವ** = ಶ್ರೀರಾಮನ ಪಾದಧೂಳಿ. **ಕಿರಿಯಮ್ಮಗೆ** = ಚಿಕ್ಕಮ್ಮನಾದ ಕೈಕೇಯಿಯು. **ಸಹಜಾತನಿಂದ** = ತಮ್ಮನಾದ ಲಕ್ಷ್ಮಣನಿಂದ **ಖಳವ್ರಾತವ** = ದೈತ್ಯರ ಸಮೂಹವನ್ನು, **ಘಾತಿಸಿ** = ಕೊಂದು. **ಕುಟಿಳಾಳಕಿ** = ಸುರುಳಿಯಾದ ಮುಂಗುರುಳುಳ್ಳ (ಕುಟಿಲ = ವಕ್ರ–ಸುರುಳಿ ಸುರುಳಿಯಾಗಿರುವ ಅಳಕಿ = ಮುಂಗುರುಳು) **ಪಂಪಾತಟ** = ಪಂಪಾಸರೋವರದ ತೀರ **ಆಪ್ತಾನ್ವೇಷಣೆಯಿಂದ** - ತನಗೆ ಆಪ್ತಳಾದ ಸೀತೆಯನ್ನು ಹುಡುಕುವುದಕ್ಕಾಗಿ. **ಕಪಿಕಟಕ** ಕಪಿಗಳ ಸಮೂಹ. **ಅಸು ಕುಟಿಸಿದ** ಪ್ರಾಣಾಪಹರಣಮಾಡಿದ.



೫೭೯

**ಅಂಕಿತ–ಭೀಮೇಶಕೃಷ್ಣ (ಹರಪನಹಳ್ಳಿ ಭೀಮವ್ವನವರ ಕೃತಿ)**

ರಾಮ ರಾಮ ಶ್ರೀರಘುರಾಮ ನೀಲಮೇಘ–
ಶ್ಯಾಮ ನಿನ್ನನಾಮ ಕಾಮಿತಾರ್ಥವ ಕರೆವುದು –
ಪ್ರೇಮದಿಂದ ಪಾಲಿಸುವುದು ನಿನ್ನ ನಾಮ ॥ ॥ಪ॥

ಕಲ್ಲೋದ್ಧಾರಕ ಕರುಣಾಳು-ರಾಮ
ಬಿಲ್ಲನೆತ್ತಿದ್ದ ವಿಖ್ಯಾತ ರಾಮ
ಸೊಲ್ಲು ಸೊಲ್ಲಿಗಿರಲಿ ಹರಿನಾಮ
ಚೆಲ್ಲ್ಯಾಡುವ ದಯ ಅವರಲ್ಲಿ ಪ್ರೇಮ ॥ ॥೧॥

ಧೀರಪುರುಷನೆ ದಿಗ್ವಿಜಯರಾಮ
ವಾರಿಧಿಯ ಕಟ್ಟಿದ್ದ ವನಜಾಕ್ಷ ರಾಮ
ಕ್ರೂರರಾಕ್ಷಸರನು ಕೊಂದು ಲಂಕಾ
ಸೂರೆಯನು ಮಾಡಿದಂಥ ನಿಸ್ಸೀಮ ॥ ॥೨॥

ದುಷ್ಟ ರಾವಣಶತ್ರು ಶ್ರೀರಾಮ
ಹುಟ್ಟಿ ಭಾನುವಂಶದಿ ಸೀತಾರಾಮ
ಮುಟ್ಟಿ ಭಜಿಸ ಸಜ್ಜನರಿಗೆ **ಭೀಮೇಶ-**
**ಕೃಷ್ಣ** ಕರವ ನೀಡುವ ತನ್ನ ಧಾಮ ॥ ॥೩॥

**ಅರ್ಥವಿವರಣೆ :**

**ನಿಸ್ಸೀಮ** - ಅಪರಿಮಿತಗುಣಪೂರ್ಣ (ಸಮಾಭ್ಯಧಿಕಶೂನ್ಯನು) **ಕಲ್ಲೋದ್ಧಾರಕ** = ಶಿಲೆಯಾಗಿ ಶಾಪದಿಂದ ಬಿದ್ದಿದ್ದ ಅಹಲ್ಯೆಯನ್ನು ಉದ್ಧಾರಮಾಡಿದ ಪ್ರಸಂಗ, **ಬಿಲ್ಲನೆತ್ತಿದ್ದ** ಸೀತಾಸ್ವಯಂವರದಲ್ಲಿ ಶಿವಧನುಸ್ಸನ್ನು ಭಂಗಮಾಡಿದ ಖ್ಯಾತಿಪುರುಷ, **ಸೊಲ್ಲು ಸೊಲ್ಲಿಗಿರಲು** = ಮಾತುಮಾತಿಗೆ. **ವಾರಿಧಿಯ ಕಟ್ಟಿದ** ದಕ್ಷಿಣಸಮುದ್ರಕ್ಕೆ ಸೇತುವೆಯನ್ನು ನಿರ್ಮಿಸಿದ. **ವನಜಾಕ್ಷ** = ಕಮಲದಳದಂತೆ ವಿಶಾಲನೇತ್ರನು. **ಲಂಕಾಸೂರೆಯನು** ಲಂಕಾನಗರಿಯನ್ನು ನಾಶಪಡಿಸಿದ (ರಾಕ್ಷಸರ ಸಂಹಾರದ್ವಾರಾ), **ಭಾನುವಂಶದಿ** = ಸೂರ್ಯವಂಶದಲ್ಲಿ ಸಂಜಾತ. **ತನ್ನಧಾಮ** -- ವೈಕುಂಠಾದಿ ಮುಕ್ತಿಸ್ಥಾನಗಳನ್ನು ಕೊಡುವವನು.

## ೯೭೦

**(ಅಂಕಿತ ಹೆಳವನಕಟ್ಟೆ ರಂಗಯ್ಯ)–(ಗಿರಿಯಮ್ಮನವರಕೃತಿ)**

ರಾಮ ಶ್ರೀರಘುನಂದನ ಶರಣು ಸಾರ್ವ–
ಭೌಮ ಭೂಸುರವಂದ್ಯ ‖ ‖ಪ‖

ಸೋಮಶೇಖರಮಿತ್ರ ಕಾಮಿತಫಲದಾತ್ರ
ಕಾಮಧೇನುವಿಶ್ವ ಭೀಮಸನ್ನುತ ಸೀತಾ ‖ರಾಮ‖ ‖೧‖

ಕ್ರೂರದಾನವ ಸಂಹಾರ ಕೌಸಲ್ಯಾ ಕುಮಾರ ಭೂ–
ಭಾರಹರ ಭಕ್ತಜನೋದ್ಧಾರ ವೇದಾಂತಸಾರ
ಚಾರುವದನ ಮಣಿಹಾರ ಕುಂಡಲಧರ
ವೀರರಾಘವ ವಿಶ್ವಾಧಾರ ಕರುಣಿಸು ಸೀತಾ ‖ರಾಮ‖ ‖೨‖

ಪಾಪರಹಿತ ಪಾವನಚರಿತ ಅಹಲ್ಯಾ–
ಶಾಪಹರಣ ದಿವ್ಯರೂಪ ರಮಾರಮಣ
ತಾಪವಿಚ್ಛೇದನ ತಾಮಸಗುಣಹರಣ ವ–
ಯಾಪತ ಬ್ರಹ್ಮಸ್ವರೂಪಮೂರುತಿ ಸೀತಾ ‖ರಾಮ‖ ‖೩‖

ಮದನಕೋಟಿಮೋಹನಾಂಗ ಮಾಧವ ಪುಣ್ಯಚರಿತ
ಕರುಣಾಪಾಂಗ **ಹೆಳವನಕಟ್ಟೆ ರಂಗಯ್ಯ**
ನವಾನಂದ ಸುಮತೀಂದ್ರ ಹೃದಯಪಂಕಜ ಭೃಂಗ
ಕದನವಿಕ್ರಮ ಬಾಹುಕೋದಂಡಧೃತ ಸೀತಾ ‖ರಾಮ‖ ‖೪‖

**ಅರ್ಥವಿವರಣೆ :**

**ಭೂಸುರವಂದ್ಯ** ವಿಪ್ರರಿಂದ ನಮ್ಯನು, **ಸೋಮಶೇಖರ ಮಿತ್ರ** = ರುದ್ರದೇವರಿಗೆ ಪರಮಾಪ್ತನು. **ಭೀಮಸನ್ನುತ** = ಭೀಮಸೇನ ದೇವರಿಂದ ಸಂಸ್ತುತ್ಯಮಾನನು. **ವೇದಾಂತಸಾರ** = ಅನಂತವೇದಗಳಿಗೆ

ಮುಖ್ಯವಿಷಯನು. **ಚಾರುವದನ** = ಸುಂದರವಾದ ಮುಖವುಳ್ಳವನು. **ಕುಂಡಲಧರ** = ಕಿವಿಯಲ್ಲಿ ಕುಂಡಲಗಳನ್ನು ಧರಿಸಿದವನು. **ಪಾವನ ಚರಿತ** = ಪವಿತ್ರಚಾರಿತ್ರ್ಯವುಳ್ಳವನು (ಅನಂತಕಲ್ಯಾಣಗುಣಪೂರ್ಣನು) **ತಾಪ ವಿಚ್ಛೇದನ** = ತಾಪತ್ರಯ ಪರಿಹಾರಕನು **ಮಾಧವ** = ರಮಾಪತಿ (ಮಾ = ರಮಾ. ಧವ = ಪತಿ) **ಸದಾನಂದ** = ನಿತ್ಯಾನಂದಪೂರ್ಣನು. **ಸುಮತೀಂದ್ರ** = ದೇವೋತ್ತಮ (ಸುಮತಿ = ಸ್ವಾತಿಕ ಮತಿಯುಳ್ಳ ದೇವತೆಗಳು) **ಹೃದಯಪಂಕಜ ಭೃಂಗ** = ಸರ್ವರ ಹೃತ್ಕಮಲನಿವಾಸಿಯು **ಬಾಹು ಕೋದಂಡ ಧೃತ** = ಕೋದಂಡವೆಂಬ ಧನುಸ್ಸನ್ನು ಬಾಹುವಿನಲ್ಲಿ ಧರಿಸಿರುವವನು.



## ೫೭೧

## (ಅಭಿನವಜನಾರ್ದನವಿಠ್ಠಲಾಂಕಿತ)

**ರಾಗ ಪೂರ್ವಿ** **ಆದಿತಾಳ**

ನಮೋ ನಮೋ ರಾಮ ದೇವೋ-
ತ್ತಮಾಂಜನಿಯ ಪ್ರೇಮಾ
ಕ್ಷಮಾಪಶ್ರಿತ ಜನಸಮೂಹಕೆ ಕಲ್ಪ-
ದ್ರುಮಾಪರಾದ ಕ್ಷಮಾವನಂ ಕುರು ॥ ॥ಪ॥

ಅಜಾತ ನರರೂಪ ರಘುಜಾಂ-
ಬುಜಾಪ್ತ ಕುಲದೀಪ
ಅಜೇಶ ಭುಜಗದ್ವಿಜೇಂದ್ರಮುಖಸುರ
ವ್ರಜಾಧಿಪತಿ ಹರೇ ಗಜೇಂದ್ರವರದ ॥ ॥೧॥

ಅಯೋಧ್ಯಾಪುರಿನಿಲಯ ನಿತ್ಯಾ-
ವಿಯೋಗಿನೀ ಪ್ರಿಯಾ
ದಯಾಪ ಅಸ್ಮದ್ಭಯಾಪಹರ ಋಷಿ
ಸುಯಾಗರಕ್ಷಕ ತ್ರಯೀಮಯಾತ್ಮಾ ॥ ॥೨॥

ಸನಾತನ ಸುಮಿತ್ರಾ ದಶರ್ಥ್ಯಂ-
ದನಾಖ್ಯನೃಪ ಪುತ್ರ
ಅನಾದಿ ಮಂಗಳಸುನಾಮ ಚರಿತಾ
ಘನಾಶ ಅಭಿನವಜನಾರ್ದನವಿಠ್ಠಲಾ ॥ ॥೩॥

**ಅರ್ಥವಿವರಣೆ:—**

**ಅಂಜನಿಯ ಪ್ರೇಮಾ** = ಅಂಜನಾದೇವಿಯ ಪುತ್ರ ಮಾರುತಿಯು ಅಂಜನಿ. ಅವನಿಗೆ ಪ್ರೀತಿಯ ವಸ್ತು ಶ್ರೀರಾಮಚಂದ್ರ. **ಕ್ಷಮಾಪ** = ಕ್ಷಮಾಸಮುದ್ರ (ಕ್ಷಮಾ + ಆಪ. ಆಪ = ಸಾಗರ) **ಕಲ್ಪದ್ರುಮ** = ಆಶ್ರಿತಜನರಿಗೆ ಕಲ್ಪವೃಕ್ಷಸದೃಶನು. **ಅಜಾತ** - ಜನನ ಮರಣವಿದೂರ. **ನರರೂಪ** = ಆದರೂ ನರವೇಷಧಾರಿಯಾಗಿ ಶ್ರೀರಾಮಾವತಾರದಿಂದ ಪ್ರಕಟನಾದನು. **ರಘುಜಾ** = ರಘುಕುಲೋದ್ಭವ. **ಅಂಬುಜಾಪ ಕುಲದೀಪ** = ಸೂರ್ಯನ ವಂಶದೀಪನಾಗಿ ಅವತರಿಸಿದವನು. **ಅಜ ಈಶ ಭುಜಗ ದ್ವಿಜೇಂದ್ರ** = ಬ್ರಹ್ಮ, ರುದ್ರ. ಶೇಷ, ಪಕ್ಷಿಶ್ರೇಷ್ಠನಾದ ಗರುಡ. **ಮುಖಸುರವ್ರಜಾಧಿಪತಿ** = ಇವರೇ ಮೊದಲಾದ ದೇವತಾ ಸಮೂಹಕ್ಕೆ ಸ್ವಾಮಿಯಾದವನು. **ನಿತ್ಯಾವಿಯೋಗಿನೀ ಪ್ರಿಯಾ** = ತನ್ನಿಂದ ಯಾವಾಗಲೂ ವಿಯೋಗರಹಿತಳಾದ ಲಕ್ಷ್ಮೀಪ್ರಿಯನು. **ದಯಾಪ** = ದಯಾಸಮುದ್ರ. **ಅಸ್ಮದ್ಭಯಾಪಹರ** = ನಮ್ಮಗಳ ಭಯವನ್ನು ಪರಿಹಾರ ಮಾಡುವವನು **ಋಷಿಸುಯಾಗ ರಕ್ಷಕ** = ಮುನಿಕುಲೋತ್ತಮರಾದ ವಿಶ್ವಾಮಿತ್ರರ ಯಜ್ಞರಕ್ಷಕನು. **ತ್ರಯೀ**

**ಮಯಾತ್ಮಾ** ಸೂರ್ಯಾಂತರ್ಯಾಮಿ ಶ್ರೀಮನ್ನಾರಾಯಣ (ತ್ರಯೀ ಮಯ=ಸೂರ್ಯ) **ಸನಾತನ** = ಪುರಾತನಪುರುಷ. **ಸುಮಿತ್ರಾ**= ಜೀವರ ಪಾಲಿಗೆ ಆಪ್ತ ಸ್ನೇಹಿತನ ಸದೃಶ. ಬಿಂಬನಾದ ಶ್ರೀ ಪರಮಾತ್ಮ. **ದಶಸ್ಯಂದನಾಖ್ಯ ನೃಪ** = ದಶರಥನೆಂಬ ಹೆಸರಿನ ರಾಜನ ಮಗ (ಸ್ಯಂದನ=ರಥ). ಅಘನಾಶ = ಪಾಪಪರಿಹಾರಕನು.



## ೫೭೨

## (ಅಂಕಿತ–ಕಾರ್ಪರನಾರಸಿಂಹ)

## ಶ್ರೀಅಕ್ಷೋಭ್ಯತೀರ್ಥಕರಾರ್ಚಿತ ಶ್ರೀರಾಮದೇವರ ಸ್ತೋತ್ರಪದ

**ರಾಗ–ಖರಹರಪ್ರಿಯ** **ಆದಿತಾಳ**

ರಾಮನ ನೋಡಿರೈ–ಮಂಗಳನಾಮನ ಪಾಡಿರೈ ॥ ॥ಪ॥

ಭೂಮಿಯೊಳಾರ್ಯ ಅಕ್ಷೋಭ್ಯಮತದೀ ಪೂಜಿತನ–ಸೀತಾನ್ವಿತನ ॥ ॥ಅ॥

ತಾಮರಸಭವಾದ್ಯಮರಗಣ ಪ್ರಾರ್ಥನದಿ–ದಶರಥ ಗೃಹದಿ
ಶ್ರೀಮನೋಹರನವತರಿಸಿ–ಭೂಭಾರವನುಳುಹಿ–ಸುಜನರ ಸಲಹಿ
ಪ್ರೇಮದಿ ಕುಶಲವರನುದಿನವೂ ಪೂಜಿಪೆವೆಂದೂ–ಬೆಸಗೊಳಲಂದೂ
ರಾಮನು ಸ್ಮರಿಸಲು–ವೈಕುಂಠದಿ ಬಂದಿಹನಾ– ಸೀತಾವರನಾ ॥ ॥೧॥

ಚಿಂತಿಸು ರಾಮನ–ಶುಭಲಕ್ಷಣಗಳನೇಕ–ಕರ್ಮವಿಪಾಕ
ಗ್ರಂಥದೊಳಷ್ಟಮಕಾಂಡದಿ ಚತುರಧ್ಯಾಯ–ದೊಳಗೀ ವಿಷಯಾ

ದ್ಯಂತವಾಗಿ ವರ್ಣಿತವೆಂಬುವದನೆ ಖರೆಯು–ಯತಿಕುಲವರ್ಯ
ಕಾಂತಕರಜ ರಘುದಾಂತ ಕರಾರ್ಚಿತಚರಣ– ಸುಜನೋ
ದ್ಧರಣ॥ ॥೨॥

ಘನಶೋಭಿಸುವ ಕುಂದಣಮಣಿಮಯದ ಕಿರೀಟ– ಯುಕ್ತ ಲಲಾಟ
ಚಿನ್ಮಯಗಾತ್ರದಿ ಮಿನುಗುವ ರತ್ನಾಭರಣ– ಜಿತರವಿಕಿರಣ
ಮನದೊಳು ಬಿಡದೆ ತನ್ನನು ಧೇನಿಪರಘಹರಣ– ಕರುಣಾಪೂರ್ಣ
ಮುನಿಸರ್ವಜ್ಞ ಕರಾರ್ಚಿತ ಲಕ್ಷ್ಮಣಯುತಸಾ–ರಿಪುಕುಲಮಥನಾ ॥ ॥೩॥

ಮಂದಹಾಸ ಮುಖದಿಂದೊಪ್ಪುವ ಶುಭಕಾಯಾ– ಕವಿಜನಗೇಯಾ
ಸುಂದರ ಹೇಮಮಂಟಪದೊಳು ಪೂಜೆಯಕೊಳುವ–
ಮನದೊಳು ಪೊಳೆವ
ಸಿಂದಿರುವುದು ದ್ವಿಜವೃಂದ–ಪಠಿಸುತಲಿ ವೇದಾ–ಮನಕತಿಮೋದಾ
ಹಿಂದಕೆ ಮಳಖೇಡ–ಮಂದಿರವೆನಿಪ ಜಯಾರ್ಯ–
ಮುನಿಸಂಸೇವ್ಯ ॥ ॥೪॥

ವರ್ಣಿಸಲೊಶವೆ ಶ್ರೀ ರಘುದಾಂತರ ಶುಭಚರಿಯು–ಬಹು ಆಶ್ಚರ್ಯ
ಪರಮಕ್ಷೇತ್ರ ಕೂಡಲಿಯೊಳಿರುವ ಮಂದಿರದಿ– ಪಾರಾಯಣದಿ
ಇರುತಿರಲೊಂದಿನ–ಕಿರಿಗೆಜ್ಜೆಗಳ ಸುನಾದ– ಕೇಳಲು ಮೋದ
ತರುಣರೀರ್ವರತಿತ್ವರದಿ–ಬರುತ ಸಮ್ಮುಖದಿ–ಪೊಕ್ಕರು ಗೃಹದಿ ॥ ॥೫॥

ಕಂಡರು ಮುನಿಪರು–ಕೊಂಡಾಡುತ ಹರಿಗುಣವ–ಪೊಂದಿರೆ ಮುದವ
ತಂಡ ತಂಡ ಬಣ್ಣಿಸುತವರನು ಗೃಹದೊಳಗೆ– ಹುಡುಕಿದರಾಗೆ
ಬಾಲರ ಕಾಣದೆ ಯೋಚಿಸಿದರು ಮನದೊಳಗೆ– ತಿಳಿದರು ಹೀಗೆ
ಕೂಡಲಿಶಯನ ಶ್ರೀರಾಮನೆ ದರ್ಶನವಿತ್ತ– ಲಕ್ಷ್ಮಣ ಸಹಿತ ॥ ॥೬॥

ಧರೆಯೊಳು ಬಹುಯತಿ ಕರಪೂಜಿತ ಪದುಪದುಮ– ಸದ್ಗುಣಧಾಮ
ನಿರುತ ಸೇವಿಸುವ ಧರೆಸುರನಿಕರಕೆ ಕೊಡುವ– ಬೇಡಿದ ವರವ

ಶರಣಜನಕೆ ಸುರತರುವೆನಿಸಿದ ಸುರಪ್ರಿಯಾ– **ಕಾರ್ಪರನಿಲಯ**
ತರುಪಿಪ್ಪಲಗತ **ಸಿರಿನಾರಸಿಹಂನೆ** ಈತ–ಶ್ರೀ ರಘುನಾಥಾ॥ ॥೭॥

**ಅರ್ಥವಿವರಣೆ:—**

**ತಾಮರಸಭವ** = ಶ್ರೀಹರಿಯ ನಾಭೀಕಮಲೋದ್ಭವರಾದ ಶ್ರೀಬ್ರಹ್ಮದೇವರು. **ತರುಪಿಪ್ಪಲಗತ**=ಕೃಷ್ಣಾನದಿಯತೀರದಲ್ಲಿ ಕೊಪ್ಪರ ಕ್ಷೇತ್ರವಿದೆ. ಇಲ್ಲಿ ಅಶ್ವತ್ಥವೃಕ್ಷದಲ್ಲಿ ಮೂಡಿದ ಕ್ಷೇತ್ರಮೂರ್ತಿ ಶ್ರೀನರಸಿಂಹ ದೇವರು ವಿದ್ಯಮಾನರಾಗಿದ್ದಾರೆ. **"ಕಾರ್ಪರ ನರಹರಿಯು"** ಅಂಕಿತದಲ್ಲಿ ಕೀರ್ತಿಶೇಷ ಪೂಜ್ಯಗಿರಿಯಾಚಾರ್ಯರು ರಚಿಸಿದ ಕೃತಿ ಇದು.



**೫೭೩**

**(ವ್ಯಾಸವಿಠ್ಠಲಾಂಕಿತ)**

ತೂಗೀ ಲಾಲಿಸಿದೆಯೋ ರಾಮಾ– ತೊಟ್ಟಿಲೋಳ್ ಮಲಗಿದ
ನಾಗಾರಿವಾಹನ ನತಜನ ಪ್ರೇಮಾ– ಸುರಸಾರ್ವಭೌಮಾ ॥ ॥ಪ॥

ಯೋಗಿಮಧ್ವಮತದಾಗಮ ಒರೆದಿಹ
ಭಾಗವತಾಗ್ರಣಿ ಈ ಗುರುಗಳ ಕೈ–ತೂಗೀ ॥ ॥ಅ॥

ಪ್ರಳಯಕಾಲದಲಿ ಶ್ರೀಹರಿ ಅಂದೂ– ಶ್ರೀಭೂದುರ್ಗಾತ್ಮಕ
ಜಲ ಆಲದೆಲೆಯ ಕತ್ತಲೆಯುಂದೂ– ಎಲ್ಲಾ ಜೀವರ ಪೊ–
ಕ್ಕಳ ಭಾಗ ಎಡಬಲದಲಿ ತಂದೂ– ಆರಾರೂ ಕಾಣದೆ
ಮಲಗಿದ ಫಲದೇನೆಂತೆಂದೂ– ದೀನಜನ ಬಂಧು ॥
ಥಳನೆ ಪೊಳೆವ ಮಣಿ ಹವಳ ತೊಟ್ಟಿಲೊಳು
ಲಲನೆ ಸಹಿತ ಬಲು ವೈಭೋಗ್ಯದಿ– ತೂಗೀ ॥ ॥೧॥

ಗೋಕುಲದೊಳಗಿನ ಗೋಪಿಯರಿಂದ– ತೂಗಿಸಿಕೊಂಡದ್ದು
ಸಾಕಾಗಲಿಲ್ಲೇ ಎಲೆ ಮುಕುಂದ– ಕೌಸಲ್ಯಾದೇವಿಯು
ಬೇಕೆಂದು ಮುದ್ದಿಸಿ ಮೋಹದಿಂದ– ಬಗೆ ಬಗೆ ಬಿನ್ನಪ
ವಾಕೆನ್ನ ಸರಿಬರಲಿಲ್ಲೆನಂದ– ಆವ ಕಾರಣದಿಂದ ॥
ಏಕಮಾನಸಿನಿಂದೀ–ಕವಿ ಮುನಿಪಗೆ
ಬೇಕೆಂದೊಲಿದು ಪರಾಕು ಕೈಗೊಳುತ –ತೂಗೀ॥ ॥೨॥

ಶ್ರುತಿಗೀತೆ ನಿನ್ನ ಸುಂದರವಾದ–ಅಂಭ್ರಣಿಸೂಕ್ತದಲಿ
ಸ್ತುತಿಸಿದತ್ತೆಲ್ಲ ಅಂತ್ಯಗಾಥಾ- ಆದಕಿಂತ ಇವರಲಿ
ಅತಿಶಯವೇನು ಪೇಳೆಲೋ ವೋದ–ಸತ್ಯಬೋಧಾರ್ಯರ
ಮಾತಿಗೆ ಮರುಳಾದೆಯೊ ಎಲೆ ಮಧುಸೂಧ–ವರತರ ಪರವೇದ ॥
ಪತಿತಪಾವನ ಶ್ರೀವ್ಯಾಸವಿಠ್ಠಲನೆ
ಅತಿಶಯವಲಿ ಈ ಯತಿಕರಹಿತವೆಂದು–ತೂಗೀ ಲಾಲಿಸಿದೆಯೋ॥
॥೩॥

❋

**೫೭೪**

**(ಅಂಕಿತ–ಪ್ರಸನ್ನಶ್ರೀನಿವಾಸ)**

**ರಾಗ–ಮಧ್ಯಮಾವತಿ** **ತ್ರಿಪುಟತಾಳ**

ಶ್ರೀರಾಮ ಸೀತಾರಮಣ ಮಾಂ ಪಾಹಿ ॥ ॥ಪ॥

ಉರುಜ್ಞಾನ ಸುಖರೂಪ ನಮೋ ವಾಸುದೇವ ॥ ॥ಅ॥

ಶ್ಯಾಮ ರಮಣೀಯ ಉರು ಆಮ್ನಾಯಕೂ ಅಮಿತ
ರಮೆ ಸೀತಾಯುತ ನಮೋ ಹನುಮಾದಿ ಸೇವ್ಯ
ವಾಮಹಸ್ತದಿ ಚಾಪ ಚಿನ್ಮುದ್ರೆ ಶರಬಲದಿ
ಅಮಿತಾರ್ಕಸೋಮ ಸ್ವಕಾಂತಿ ಶ್ರೀರಾಮ ॥ ॥೧॥

ಪರಮೇಶ ಏಕಾತ್ಮ ಆರದೂರ ಪರಿಪೂರ್ಣ
ಉರು ಸುಗುಣವಾರಿನಿಧಿ ನೀನೇ ಸ್ವತಂತ್ರ
ಅರವಿಂದಾಜಾಂಡಾದಿ ಜಗತ್ಸರ್ವ ಕರ್ತಾಜ
ಸುರರ ಮೊರೆ ಕೇಳಿ ದಶರಥನ ಸುತನಾದೆ ॥ ॥೨॥

ಚತುರ್ವದನ ಸಂಸೇವ್ಯ ಹಯವದನ ಷಡ್ರೂಪ
ಚತುರ್ವಿಂಶಾಕ್ಷರ ಸುಮಂತ್ರ ಪ್ರತಿಪಾದ್ಯ
ತ್ರಾತ ಪ್ರೇರಕಸ್ವಾಮಿ ರಾಮನೇ ಎಂದರಿತು
ಸಂಧ್ಯ ಸುಮಂತ್ರ ಋಷಿ– ಬಂದು ಪ್ರಾರ್ಥಿಸುತ ॥ ॥೩॥

ಸದುಪಾಸ್ಯ ನಿನ್ನ ಋಷಿ-ಆಶ್ರಮಕೆ ಕರೆದೊಯ್ಯೆ
ಶ್ರೋತವ್ಯ ಮಂತವ್ಯ ನಿಧಿದಾಸಿತವ್ಯ
ಪ್ರತ್ಯಕ್ಷ ಅವತಾರರೂಪ ನೀನೆಂದರಿತು
ಸಿದ್ಧರು ಭಕ್ತಿಯಿಂದಲಿ ವಂದಿಸಿದರು ॥ ॥೪॥

ತತ್ರ ತತ್ರಸ್ಥಿತೋ ವಿಷ್ಣುಃ ತತ್ತಚ್ಛಕ್ತಿ ಬೋಧಯನ್
ಅಸ್ತ್ರ ದೇವತೆಗಳೇ ತತ್ವವನು ಅರಿತು
ಸತ್ತಾದಿದಾತನೇ ಶಾಸ್ತ್ರಸ್ವಾಮಿ ವಿಷ್ಣೋ
ಪ್ರತ್ಯಗಾತ್ಮನೆ ರಾಮ ನಿನಗೆ ನಮಿಸಿದರು ॥ ॥೫॥

ಯಜ್ಞಗೆ ಯಜ್ಞಗೆ ವಿಶ್ವಾಮಿತ್ರಗೆ ನಮೋ
ಯಜ್ಞಭುಕ್ ಯಜಮಾನ ಯಜ್ಞ ಯಜ್ಞೇಶ
ಇಜ್ಯಪೂಜ್ಯನೆ ಸ್ವಾಮಿ ಮನ್ಮನೋವಾಕ್ಸಂಸ್ಥ
ಯಜ್ಞಸ್ಥ ಯಜ್ಞ ಮಾಂ ಪಾಹಿ ನಮೋ ನಮಸ್ತೇ ॥ ॥೬॥

ವೇದವತಿ ತ್ವದಧೀನೆ ಸರ್ವಜಗದಾಧಾರೆ
ಭೂದೇವಿ ಸುಖಪೂರ್ಣೆ ಅಜೆ ನಿತ್ಯಮುಕ್ತೆ
ವೈದೇಹಿ ಜಾನಕಿ ಸೀತಾನಾಮದಿ ತಾನೆ
ಈ ಧರೆಯೊಳ್ ತೋರಿಹಳು ನಿನ್ನನನುಸರಿಸಿ ॥ ॥೭॥

ಸುರರಾಜಗಜ ಇಕ್ಷುಜಲ್ಲೆಯ ಮುರಿವಂತೆ
ಪರ ಭಳಿ ಬಳಿ ನೀನು ಶಿವಚಾಪ ಮುರಿದು
ಸುರರು ನರವರ್ಯರು ಹರುಷದಿಂದಲಿ ನೋಡೆ
ಸಿರಿಸೀತೆ ವರಮಾಲೆ ನಿನಗೆ ಹಾಕಿದಳು ॥ ॥೮॥

ಶರಭಂಗ ಶಬರಿ ಜಟಾಯು ಮೊದಲಾದವರ
ವರ ಭಕ್ತಿಗೆ ಮೆಚ್ಚಿ ಯೋಗ್ಯಗತಿಯಿತ್ತೆ
ಮಾರುತಿಗೆ ಪ್ರಿಯರೆಂದು ರವಿಜಗೆ ವಿಭೀಷಣಗೆ
ಕರುಣಿಸಿದೆ ನಿರಪೇಕ್ಷ ನೀ ಪೂರ್ಣಕಾಮ ॥ ॥೯॥

ಕ್ರೂರ ಪೌಲಸ್ತ್ಯಾದಿ ರಕ್ಕಸರ ತರಿದು ನೀ
ಧರೆಯಲಿ ಸುಕ್ಷೇಮ ಧರ್ಮ ಸ್ಥಾಪಿಸಿದೆ
ಸರಸಿಜಾಸನ ಲೋಕದಂತಾಯಿತೀ ಲೋಕ
ವರವಿಷ್ಣುಭಕ್ತರಿಯ ಸೌಖ್ಯ ಎಲ್ಲೆಲ್ಲೂ ॥ ॥೧೦॥

ಸರಸಿಜಾಸನ ಪಿತ **ಪ್ರಸನ್ನ ಶ್ರೀನಿವಾಸನೆ**
ಸರಿ ಮಿಗಿಲು ನಿನಗಿಲ್ಲ ಯಾರು ಎಂದೆಲ್ಲೂ
ಸಿರಿ ಸೀತಾಯುತ ರಾಮ ಎಂದೂನೂ ಎಲ್ಲೆಲ್ಲೂ
ಮಾರುತಿ ಸಾವಿತ್ರಿ ಭರತಾದ್ರಿ ಸೇವ್ಯ ॥ ॥೧೧॥

**ಅರ್ಥವಿವರಣೆ:—**

**ಉರುಜ್ಞಾನ** = ಅತ್ಯಧಿಕ ಅಪರಿಚ್ಛಿನ್ನವಾದ ಜ್ಞಾನ. ಆನಂದಮಯನು. **ವಾಸುದೇವ** = ಸರ್ವತ್ರವ್ಯಾಪ್ತ. ಮೋಕ್ಷಪ್ರದ ಭಗವದ್ರೂಪ. **ಶ್ಯಾಮ** = ನೀಲಮೇಘವರ್ಣಕಾಯ. **ರಮಣೀಯ** = ಅತ್ಯಂತ ಮನೋಹರವಾದ. **ಅಮ್ನಾಯಕೂ ಅಮಿತ** = ವೇದಾತೀತ **ವಾಮಹಸ್ತದಿ ಚಾಪ** = ಎಡಗೈಯ್ಯಲ್ಲಿ ಕೋದಂಡವೆಂಬ ಧನುಸ್ಸನ್ನೂ, **ಶರಬಲದಿ** = ಬಲಗಡೆ ಬೆನ್ನಿನಲ್ಲಿ ಬಾಣಗಳ ಬತ್ತಳಿಕೆಯನ್ನೂ ಧರಿಸಿರುವವನು. **ಚಿನ್ಮುದ್ರೆ** =

ಅಭಯ ಸಾಂಕೇತಹಸ್ತವುಳ್ಳವ. **ಅಮಿತಾರ್ಕ ಸೋಮ** = ಅನಂತಾನಂತಾ ಕೋಟಿ ಸೂರ್ಯ ಮತ್ತು ಚಂದ್ರಕಾಂತಿಯುಳ್ಳವನು. **ಪರಮೇಶ** = ಸರ್ವೋತ್ತಮ. ಸರ್ವಕ್ಕೂ ನಿಯಾಮಕನು. **ಏಕಾತ್ಮ** = ಏಕಾಮೇವ ಅದ್ವಿತೀಯನು. **ಅರದೂರ** = ದೋಷವಿದೂರನು. **ಉರು ಸುಗುಣವಾರಿನಿಧಿ** = ಅನಂತಕಲ್ಯಾಣಗುಣಗಣಸಾಗರನು. **ಅರವಿಂದಾಜಾಂಡದಿ** = ಬ್ರಹ್ಮಾಂಡದಲ್ಲಿ **ಸರ್ವಕರ್ತೃಜ** = ಸಕಲ ಚೇಷ್ಟಾ ಪ್ರವರ್ತಕನು. **ಚತುರ್ವದನ ಸಂಸೇವ್ಯ** = ಚತುರ್ಮುಖಬ್ರಹ್ಮದೇವರಿಂದ ಸೇವಿತನಾದನು. **ಹಯವದನ** = ಹಯಗ್ರೀವ, ಕಪಿಲ, ದತ್ತಾತ್ರೇಯ, ವೇದವ್ಯಾಸ ಮಹಿದಾಸ, ಯಜ್ಞನೆಂಬ ಆರು ಜ್ಞಾನೋಪದೇಶರೂಪನು. **ಚತುರ್ವಿಂಶಾಕ್ಷರ ಸುತಂತ್ರ ಪ್ರತಿಪಾದ್ಯ** = ಕೇಶವಾದಿ ಕೃಷ್ಣಾಂತ ರೂಪಗಳಿಂದ ತತ್ತ್ವನ್ಯಾಸ ಮಂತ್ರದಿಂದ ಪ್ರತಿಪಾದ್ಯನಾಗವನು. **ತ್ರಾತ** = ರಕ್ಷಕನು. **ಸುಮಂತ್ರ** = ದಶರಥನ ಮಂತ್ರಿಗಳಲ್ಲಿ ಒಬ್ಬನು. ರಾಮನು ವನವಾಸಕ್ಕೆ ಹೋದಾಗ, ರಥವನ್ನು ತಾನೇ ನಡೆಯಿಸಿಕೊಂಡು ಹೋಗಿದ್ದ. **ಶ್ರೋತವ್ಯ ........ಧ್ಯಾಸಿತವ್ಯ** = ಶ್ರವಣಕ್ರಿಯೆ,ಮಂತ್ರೋಚ್ಚಾರಣೆ ನಿಧಿಧ್ಯಾಸನಾದಿಗಳಿಗೆ ಮುಖ್ಯ ಪ್ರತಿಪಾದ್ಯನಾದ ಶ್ರೀಹರಿಯು. **ಸಿದ್ಧರು** = ಸಿದ್ಧಾಶ್ರಮದ ನಿವಾಸಿಗಳಾದ ಮುನಿಪುಂಗವರು. ಈ ಆಶ್ರಮವು ಮಲದ ಮತ್ತು ಕರೂಶ ದೇಶಗಳ ನಡುವೆ ಇದೆ. ಪೂರ್ವದಲ್ಲಿ ಅದಿತಿ. ಕಾಶ್ಯಪ, ವಾಮನ ಮುಂತಾದವರು ಈ ಆಶ್ರಮದಲ್ಲಿ ತಪಸ್ಸನ್ನಾಚರಿಸಿ ಸಿದ್ಧಿಯನ್ನು ಪಡೆದ ಕಾರಣದಿಂದ, "ಸಿದ್ಧಾಶ್ರಮ"–ವೆಂಬ ಹೆಸರು ಬಂದಿತು. **ಸತ್ತಾದಿದಾತನೇ** = ಶ್ರೀಹರಿಯೇ ಸರ್ವಚೇತನರಿಗೆ ಸತ್ತಾ (ಶಕ್ತಿ) ಪ್ರದನು **ಶಾಸ್ತ್ರಸ್ವಾಮಿ** = ಸರ್ವ ಸಚ್ಛಾಸ್ತ್ರಗಳಿಗೂ ಮುಖ್ಯತಾತ್ಪರ್ಯನು ಶ್ರೀಹರಿಯು. **ಪ್ರತ್ಯಗಾತ್ಮನೆ** = ಜಡಜೀವಂದ ಅತ್ಯಂತ ವಿಲಕ್ಷಣನಾದ ಶ್ರೀಪರಮಾತ್ಮನು. **ಯಜ್ಞಗೆ** = ಯಜ್ಞನಾಮಕ ಶ್ರೀಹರಿಗೆ (ಶ್ರೀಹರಿಯ ಅವತಾರಗಳಲ್ಲಿ ಒಂದು) **ಯಜ್ಞಗೆ** = ಸಕಲ ಯಜ್ಞಗಳಿಗೂ ಮುಖ್ಯ ವಿಷಯನು. **ವಿಶ್ವಾಮಿತ್ರಗೆ** = ಜಗನ್ಮಿತ್ರನಾದ ಶ್ರೀಹರಿ. **ಯಜ್ಞಭುಕ್** = ಯಜ್ಞದ ಹವಿಸ್ಸನ್ನು ತಾನು ಸ್ವಾಖ್ಯರಸ ರೂಪದಿಂದ ಸ್ವೀಕರಿಸಿ,

ನಂತರ ಇತರ ದೇವತೆಗಳಿಗೆ ಕೊಡುವನು. **ಯಜಮಾನ** = ಯಜ್ಞಕ್ರಿಯೆ
ಯಲ್ಲಿ ಮುಖ್ಯ ಯಜಮಾನ (ಯಜ್ಞಾಧಿಪತಿ) ನು ಶ್ರೀಹರಿಯೇ. **ಇಜ್ಯ** =
ಯಾಗ ಅಥವಾ ಯಜ್ಞ. ಅದರಲ್ಲಿ ಪೂಜ್ಯನು ಶ್ರೀಹರಿ. **ಮನ್ಮನೋವಾ
ಕ್ಸಂಸ್ಥ** = ನನ್ನ ಮನಸ್ಸು ಮತ್ತು ವಚನಗಳಲ್ಲಿ ಅಂತರ್ಯಾಮಿಯಾದವನೇ.
(ವಾಙ್ಮನೋಮಯ ರೂಪನು) **ಯಜ್ಞಸ್ಥ** = ಯಜ್ಞಾಂತರ್ಯಾಮಿ
ರೂಪ. **ವೇದವತಿ** = ಲಂಕಾಪಟ್ಟಣದಲ್ಲಿ ಅಶೋಕವನದಲ್ಲಿದ್ದ ಸೀತಾ
ಪ್ರತಿರೂಪ. **ಅಜೆ** = ಜನನ ಮರಣವಿದೂರಳು. **ವೈದೇಹಿ** = ವಿದೇಹ
ರಾಜ್ಯದ ಅರಸನಾದ ಜನಕನ ಮಗಳು ಸೀತೆ. **ಜಾನಕೀ** = ಜನಕರಾಜನ
ಪುತ್ರಿ ಸೀತೆ. **ಸುರರಾಜ ಗಜ** = ದೇವತೆಗಳ ಅಧಿಪತಿಯಾದ ಇಂದ್ರನ
ಆನೆ ಐರಾವತವು. **ಇಕ್ಷುಜಿಲ್ಲೆಯನು** = ಕಬ್ಬಿನ ಜಲ್ಲೆಯನ್ನು **ಪರ
ಫಲಿ ಬಲಿ** = ಮಾತೃಕಾನ್ಯಾಸನದ ವರ್ಣವಾಚ್ಯ-ಭಗವದ್ರೂಪಗಳು ಪರಿ
ಪರಾಯ ನಮಃ ಫಂ-ಫಲಿನೇ ನಮಃ ಬಂ=ಬಲಿನೇ ನಮಃ) **ಶಿವ
ಚಾಪ** = ಹರನ ಧನುಸ್ಸನ್ನು. **ನರವರ್ಯರು** = ಮಾನುಷೋತ್ತಮರು
**ಶರಭಂಗ** = ಗೌತಮವಂಶದ ಒಬ್ಬ ಋಷಿ ದಂಡಕಾರಣ್ಯದಲ್ಲಿ ತಪಸ್ಸು
ಮಾಡುತ್ತಿದ್ದ. ವನವಾಸಕ್ಕೆ ಬಂದ ಶ್ರೀರಾಮಲಕ್ಷ್ಮಣರನ್ನು ಸತ್ಕರಿಸಿ, ಯೋಗಾ
ಗ್ನಿಯಿಂದ ದೇಹತ್ಯಾಗಮಾಡಿದ ಋಷಿಪುಂಗವ. **ಶಬರಿ** = ಬೇಡರ
ಜಾತಿಯ ಹೆಣ್ಣುಮಗಳು ರಾಮನಿಗಾಗಿ ಕಾದಿದ್ದು, ರಾಮಲಕ್ಷ್ಮಣರಿಗೆ ಕಂದ
ಮೂಲಫಲಗಳನ್ನು ಅರ್ಪಿಸಿ, ಅವರಿಂದ ಅನುಗ್ರಹೀತಳಾದ ಶ್ರೀರಾಮಭಕ್ತೆ.
**ಜಟಾಯು** = ವಿನುತೆಯ ಪುತ್ರನಾದ ಅರುಣನ ಪುತ್ರ. ಶ್ಯೇನಿ ಇವನ
ತಾಯಿ ಸಂಪಾತಿ ಇವನ ಅಣ್ಣ. ಸೀತಾಪಹರಣಮಾಡುತ್ತಿದ್ದ ರಾವಣನೊಡನೆ
ಯುದ್ಧಕ್ಕೆ ನಿಂತ ವೀರ. ರೆಕ್ಕೆ ಕಡಿದು ಕೆಳಗೆ ಬಿದ್ದಿದ್ದ ಜಟಾಯು ರಾಮ
ಲಕ್ಷ್ಮಣರಿಗೆ ಸೀತಾಪಹರಣದ ವೃತ್ತಾಂತ ತಿಳಿಸಿ, ಶ್ರೀರಾಮನು ಕೈಯಿಂದಲೇ
ಸಂಸ್ಕಾರ ಹೊಂದಿದ. **ರವಿಜಗೆ** = ಸೂರ್ಯಪುತ್ರನಾದ ಸುಗ್ರೀವನಿಗೆ
**ನಿರಪೇಕ್ಷ** = ಅನವೃತ ಮಹಿಮನು (ಸಮಾಭ್ಯಧಿಕಶೂನ್ಯನು). **ಪೂರ್ಣ
ಕಾಮ** = ನಿತ್ಯತೃಪ್ತ ಹಾಗೂ ಪರಿಪೂರ್ಣನು. - **ಪೌಲಸ್ತ್ಯಾದಿ** =
ಕೃತಯುಗದ ಅಂತ್ಯದಲ್ಲಿ ಚತುರ್ಮುಖನ ಮಾನಸಪುತ್ರನಾದ ಪುಲಸ್ತ್ಯ

ನೆಂಬ ಋಷಿಯ ಪುತ್ರ ರಾವಣ. ಪುಲಸ್ತ್ಯಮುನಿಯು ಕೇಶಿನಿ (ಕೈಕಸಾ) ಯಲ್ಲಿ ರಾವಣನನ್ನು ಪಡೆದ. ಪೌಲಸ್ತ್ಯನೆಂದರೆ ರಾವಣ. (ಪುಲಸ್ತ್ಯಪುತ್ರ) **ಸರಸಿಜಾಸನ** = ಕಮಲಪೀಠಸ್ಥನಾದ ಚತುರ್ಮುಖಬ್ರಹ್ಮದೇವರು. (ಬ್ರಹ್ಮನ ಲೋಕ- ಎಂದರೆ, ಸತ್ಯಲೋಕದಂತೆ ಆಯಿತು ಶ್ರೀರಾಮ ರಾಜ್ಯ-ಎಂದು ತಾತ್ಪರ್ಯ). **ಸರಸಿಜಾಸನ ಪಿತ**=ಬ್ರಹ್ಮನ ಜನಕನಾದ ಶ್ರೀಮನ್ನಾರಾಯಣ. **ಸರಿ ಮಿಗಿಲು ನಿನಗಿಲ್ಲ**=ನಿನಗೆ ಸಮಾನರಾಗಲೀ ಅಧಿಕರಾಗಲೀ ಯಾರೂ ಇಲ್ಲ. (ಸಮಾಭ್ಯಧಿಕಶೂನ್ಯನು). **ಸೌಮಿತ್ರಿ**= ಸುಮಿತ್ರಾಪುತ್ರ ಲಕ್ಷ್ಮಣ.



### ೫೭೫

### (ಅಂಕಿತ-ಖಾದ್ರಿನೃಸಿಂಗ)

### [ಶ್ರೀತಿಪ್ಪಣ್ಣಾರ್ಯಕವಿಶೇಖರ ವಿರಚಿತ "ಶ್ರೀಹನುಮದ್ವಿಲಾಸ" ದಿಂದ ಆಯ್ದ ಕೀರ್ತನೆ]

**ರಾಗ-ಪಂತುವರಾಳಿ** **ಛಾಪುತಾಳ**

ಶ್ರೀಮಹಾಶ್ರೀನಿವಾಸನು- ರಘು
ರಾಮಾವತಾರವ ಧರಿಸಿದನೊಲವಿಲಿ ॥ ॥ಪ॥

ಬಾಲತ್ವದಲಿ ತಾಟಕಿಯೆಂಬ ದೈತ್ಯಳ
ಸೋಲಿಸಿ ಗಾಧೇಯನ ಮಖವ
ಪಾಲಿಸಿ ಪತಿಯ ಶಾಪದಿ ಕಲ್ಲಾಗಿದ್ದವಳ
ಬಾಲೆಯ ಮಾಡಿ ಭೂಪಾಲರ ಜರಿದಿರ್ದ
ಶೂಲಿಯ ಬಿಲ್ಮುರಿದು-ಶ್ರೀಸತಿಯಾದ
ಬಾಲಿಕಾಮಣಿಗೊಲಿದು-ಮೇಲ್ ಜಮದಗ್ನಿ

ಬಾಲಾಗ್ರಣಿಯುಗೆಲಿದು– ತಂದೆಯ ನುಡಿ
ಲಾಲಿಸುತಲಿ ಪೊರೆದು–ಸನ್ಮುನಿವೇಷ
ಶಾಲಿಯಾಗುತಲನುಜ ಸೀತಾ
ಲೋಲರೋಚನೆ ಸಹಿತ ಗಂಗಾ–
ಕೂಲ ಗುಹನಿಂ ದಾಟಿ ಪರಮ ವಿ–
ಶಾಲವನವನು ಪೊಕ್ಕ ರಾಘವ ॥ ॥೧॥

ಭರತಗೆ ಪಾದುಕೆಯಿತ್ತು–ವಿರಾಧನ
ತರಿದು–ಘೋರದಂಡಕಾರಣ್ಯದಿ
ವರಮುನಿಗಳಿಗಭಯವಕೊಟ್ಟಗಸ್ತ್ಯನ
ಶರಚಾಪಗಳ ಸಂಗ್ರಹಿಸಿ ಶೂರ್ಪನಖಿ ಬಂ–
ಧುರನಾಸಿಕವ ಛೇದಿಸಿ–ಖರಾದಿ ಯೋ–
ಧರುಗಳ ಸಂಹರಿಸಿ–ದುರ್ಮದ ಕಾಕಾ–
ಸುರನೊಂದಕ್ಷಿಯನು ಶಿಕ್ಷಿಸಿ–ಮಾಯಾಮೃಗ
ಬರಲದ ಕತ್ತರಿಸಿ–ಸೀತೆಯನಪ–
ಹರಿಸಿ ರಾವಣ ಪೋಗೆ ಗಹನದಿ
ಚರಿಸುತಲಿ ಜಾನಕಿಯ ಕಾಣದೆ
ತಿರುಗುತ ಜಟಾಯುವಿಗೆ ಮೋಕ್ಷವ
ಕರುಣಿಸಿದ ಕಾರುಣ್ಯಸಾಗರ ॥ ॥೨॥

ಹಿಂಗದೆ ಶಬರಿಯ ಭಕ್ತಿಭಾವಕೆ ಮೆಚ್ಚಿ
ಮಂಗಳಕರ ಪಂಪಾಕ್ಷೇತ್ರದಲಿ
ಗಂಗೆಯಂದದ ತೀರ್ಥದಲಿ ಮಿಂದು–ನಿತ್ಯ ಕ–
ರ್ಮಂಗಳಾಚರಿಸಿ ಮೇಲ್–ಋಷ್ಯಮೂಕದಿ ರಘು–
ಪುಂಗವರ್ ಸಾರಿರಲು– ಕಾಣುತ್ತ ಪ–
ತಂಗಜ ಭಯಗೊಳಲು– ರಾಘವರಂತ–

ರಂಗವ ಬೆಸಗೊಳಲು— ಬೇಗದೊಳ್ಪ
ಶಾರ್ಙ್ರಂಗನ ಕಳುಹಿಸಲು— ಸಂತೋಷದಿ
ತುಂಗವಿಕ್ರಮನಾದ ಸುಗುಣ ತ
ರಂಗ ಮಾರುತಿಯೆಂಬ ನೂತನ
ಭೃಂಗ ಸಾರುತ್ತಿರ್ದ **ಖಾದ್ರಿನೃ-**
**ಸಿಂಗನಂಘ್ರಿ** ಸರೋಜಯುಗಳವ || ||೩||

**ಅರ್ಥವಿವರಣೆ:—**

**ಒಲವಿನಲಿ** = ಸಂತೋಷದಿಂದ ಶ್ರೀಹರಿಯು ಧರ್ಮಸಂಸ್ಥಾಪನಾರ್ಥವಾಗಿ ದೇವತೆಗಳಿಂದ ಪ್ರಾರ್ಥಿತನಾಗಿ ರಾಮಾವತಾರವನ್ನು ಸ್ವೇಚ್ಛೆಯಿಂದ ಮಾಡಿದನು. **ತಾಟಕಿ** = ಸುಕೇತುವೆಂಬ ಯಕ್ಷರಾಜನ ಪುತ್ರಿ, ಸುಕೇತುವು ಬ್ರಹ್ಮನ ವರದಿಂದ ಸಾವಿರ ಆನೆಗಳ ಬಲವುಳ್ಳ **ತಾಟಕಿ** ಎಂಬ ಮಗಳನ್ನು ಪಡೆದನು. ಜರ್ಝುಸೆಂಬ ಯಕ್ಷನ ಪುತ್ರನಾದ ಸುಂದನ ಎಂಬುವನನ್ನು ಲಗ್ನವಾದಳು. ಮಾರೀಚ, ಸುಬಾಹುಗಳೇ ಇವಳ ಪುತ್ರರು. ಅಗಸ್ತ್ಯನ ಶಾಪದಿಂದ ಕುರೂಪಿಯಾಗಿ, ಘೋರರೂಪ ತಾಳಿ, ವಿಶ್ವಾಮಿತ್ರನ ಆಶ್ರಮದ ಸಮೀಪದಲ್ಲಿದ್ದ ವನದಲ್ಲಿ ವಾಸಿಸುತ್ತಾ, ಸಜ್ಜನರನ್ನು ಪೀಡಿಸುತ್ತಿದ್ದಳು. ವಿಶ್ವಾಮಿತ್ರನ ವಚನಾನುಸಾರ ಶ್ರೀರಾಮನು ತಾಟಕಿಯನ್ನು ಕೊಂದನು **ಗಾಧೇಯನ** = ವಿಶ್ವಾಮಿತ್ರನು. ಚಂದ್ರವಂಶ ಸಂಜಾತನಾದ ಜಹ್ನು ಎಂಬ ರಾಜನ ಮಗನೇ ಗಾಧಿಯು. ಕನ್ಯಾಕುಬ್ಜ ದೇಶದ ಅರಸನು. ಗಾಧಿಯ ಪುತ್ರನೇ ಗಾಧೇಯ ನಾಮಕನಾದ ವಿಶ್ವಾಮಿತ್ರನು. **ಮಖವ** = ಯಜ್ಞವನ್ನು. **ಪಾಲಿಸಿ** = ಯಜ್ಞಕಂಟಕರಾಗಿದ್ದ ಸುಬಾಹು ಇತ್ಯಾದಿ ರಾಕ್ಷಸರನ್ನು ಕೊಂದು, ವಿಶ್ವಾಮಿತ್ರನ ಯಾಗರಕ್ಷಕನಾದನು ಬಾಲಕ ಶ್ರೀರಾಮಚಂದ್ರ, **ಪತಿಯ ಶಾಪದಿ** = ಗೌತಮಋಷಿಗಳ ಶಾಪದಿಂದ. **ಕಲ್ಲಾಗಿದ್ದವಳ** = ಶಿಲಾರೂಪವನ್ನು ತಾಳಿದ್ದ ಅಹಲ್ಯೆಯನ್ನು. **ಭೂಪಾಲರ ಜರಿದಿರ್ದ** = ಸೀತಾ ಸ್ವಯಂವರಕ್ಕಾಗಿ ಬಂದಿದ್ದ ಅನೇಕ ರಾಜಾಧಿರಾಜರುಗಳ ಶಕ್ತಿಯನ್ನು ಭಂಗಗೊಳಿಸಿದ್ದ. **ಶೂಲಿಯ** =

ತ್ರಿಶೂಲಧಾರಿಯಾದ ಶಿವನ. **ಬಿಲ್ಮುರಿದು**= ಸ್ವಯಂವರದಲ್ಲಿ ಪಣವ ನ್ನಾಗಿ ಇಟ್ಟಿದ್ದ ಶಿವಧನುಸ್ಸನ್ನು ಲೀಲಾಜಾಲವಾಗಿ ಭಂಗಗೊಳಿಸಿ, **ಬಾಲಿ ಕಾಮಣಿಗೊಲಿದು** = ಕನ್ಯಾಮಣಿಯಾದ ಸೀತೆಯನ್ನು ಪಾಣಿಗ್ರಹಿಸಿ, **ಜಮದಗ್ನಿ ಬಾಲಾಗ್ರಣಿಯ ಗೆಲಿದು** = ಜಮದಗ್ನಿ ಋಷಿಗಳ ಪುತ್ರ ಶ್ರೇಷ್ಠನಾಗಿದ್ದ ಪರಶುರಾಮನನ್ನು ಎದುರಿಸಿ ಗೆದ್ದು (ದಶರಥರಾಮನು ತನ್ನಿಂದ ಅಭಿನ್ನನಾದ ಭಾರ್ಗವರಾಮನನ್ನು ಎದುರಿಸಿದ ವಿಡಂಬನ ಪ್ರಸಂಗ) **ತಂದೆಯನುಡಿ**= ತಂದೆಯಾದ ದಶರಥನ ವಚನಪಾಲಿಸಲು. **ಮುನಿವೇಷ ಶಾಲಿಯಾಗುತ** = ಜಟಾವಲ್ಕಲಧಾರಿಯಾಗಿ ತಾಪಸವೇಷವನ್ನು ಧರಿಸಿ, **ಗಂಗಾಕೂಲ** = ಗಂಗಾನದಿಯನ್ನು ದಾಟಿ (ಕೂಲ-ದಡ). **ಗುಹನಿಂ**= ಗುಹನ ಸಹಾಯದಿಂದ ಶೃಂಗಬೇರಪುರದಲ್ಲಿ ರಾಜನಾಗಿದ್ದ ಬೇಡರ ಅರಸು. ದಶರಥನ ಆಪ್ತಮಿತ್ರ. ಸೀತಾರಾಮಲಕ್ಷ್ಮಣರನ್ನು ಗಂಗೆಯ ದಕ್ಷಿಣತೀರಕ್ಕೆ (ಕೂಲ) ದೋಣಿಯಿಂದ ದಾಟಿಸಿದ ಪ್ರಸಂಗ.

**ಭರತಗೆ**= ಶ್ರೀರಾಮನ ತಮ್ಮ ಕೈಕೇಯಿಯ ಪುತ್ರ ಮನ್ಮಥನ ಅವತಾರನು ಅವನಿಗೆ ತನ್ನ ಪಾದುಕೆಗಳನ್ನು ನೀಡಿ ಅನುಗ್ರಹಿಸಿದನು, **ವಿರಾಧನ**= ತುಂಬುರು ಎಂಬ ಗಂಧರ್ವನು ಕುಬೇರನ ಬಳಿಗೆ ಹೋಗುತ್ತಿದ್ದ ರಂಭೆಯನ್ನು ಪೀಡಿಸಿ, ಅವಳಿಂದ ಶಾಪಗ್ರಸ್ತನಾಗಿ ದಂಡಕಾರಣ್ಯದಲ್ಲಿ "**ವಿರಾಧ**" ನೆಂಬ ಹೆಸರಿನಿಂದ ಲೋಕಕಂಟಕನಾಗಿದ್ದನು. ವನವಾಸಕಾಲದಲ್ಲಿ ಸೀತೆ ಯನ್ನು ಅಪಹರಿಸಿ, ರಾಮಲಕ್ಷ್ಮಣರಿಂದ ಛಿನ್ನಭುಜನಾಗಿ ಮಡಿದು, ಪೂರ್ವ ಗಂಧರ್ವದೇಹವನ್ನು ಪಡೆದು, ಶಾಪವಿಮೋಚನೆ ಹೊಂದಿದ ಪ್ರಸಂಗ. **ಅಗ ಸ್ತ್ಯನ**= ಅಗ-ಸ್ತ್ಯನ ಬೆಟ್ಟದ ಬೆಳವಣಿಗೆಯನ್ನು ತಡೆಹಿಡಿದ ಮಹಾಮುನಿ. ಮಿತ್ರಾವರುಣರೆಂಬ ಋಷಿಗಳು ಒಮ್ಮೆ ಊರ್ವಶಿಯನ್ನು ಕಂಡು ಮೋಹಿತ ರಾದರು ಊರ್ವಶಿ ಅವರ ವೀರ್ಯವನ್ನು ಒಂದು ಕುಂಭದಲ್ಲಿ ಇರಿಸಿದಳು. ಅದರಿಂದ ಅಗಸ್ತ್ಯನೂ ವಸಿಷ್ಠನೂ ಜನಿಸಿದರು. ಇದರಿಂದಲೇ ಅವರಿಗೆ ಮೈತ್ರಾವರುಣಿ ಮತ್ತು ಕುಂಭಸಂಭವರೆಂದು ಹೆಸರಾಯಿತು. ವಿಧರ್ಭರಾ ಜಕುವರಿಯಾದ ಲೋಪಾಮುದ್ರೆ ಅಗಸ್ತ್ಯರ ಪತ್ನಿ. **ಶರಚಾಪಗಳ ಸಂಗ್ರ ಹಿಸಿ**= ಅಗಸ್ತ್ಯರು ರಾಮಲಕ್ಷ್ಮಣಸೀತಾದೇವಿಯರನ್ನು ತಮ್ಮ ಆಶ್ರಮಕ್ಕೆ

ಕರೆದೊಯ್ದು, ಸತ್ಕರಿಸಿ, ಬಿಲ್ಲು, ಬಾಣಗಳನ್ನು ಅನುಗ್ರಹಿಸಿದರು. **ಶೂರ್ಪ ನಖಿ** = ಪುಲಸ್ತ್ಯಪುತ್ರನಾದ ವಿಶ್ರವಸು ಎಂಬುವನಿಂದ ಕೈಕಸಿ ಎಂಬ ರಕ್ಕಸಿಯಲ್ಲಿ ಜನಿಸಿದವಳು. ರಾವಣ ಕುಂಭಕರ್ಣನ ತಂಗಿ. ವಿದ್ಯುಜ್ಜಿಹ್ವೆ ಈಕೆಯ ಪತಿ. **ಬಂಧುರ ನಾಸಿಕನ** = ಲಕ್ಷ್ಮಣನು ಶ್ರೀರಾಮನಿಂದ ಆಜ್ಞಪ್ತನಾಗಿ ಶೂರ್ಪನಖಿಯ ಕಿವಿ ಮೂಗುಗಳನ್ನು ಕತ್ತರಿಸಿ ವಿರೂಪಗೊಳಿಸಿದನು. **ಖರಾದಿ** = ವಿಶ್ರವಸ್ಸಿನಿಂದ ರಾಕಾ ಎಂಬ ರಾಕ್ಷಸಿಯಲ್ಲಿ ಜನಿಸಿದವನು. ರಾವಣನ ಬಲತಾಯಿಯ ಮಗ. ಶೂರ್ಪನಖಿ ಮತ್ತು ದೂಷಣ ಈರ್ವರೂ ಈತನ ಒಡಹುಟ್ಟಿದವರು. ರಾವಣನು ಶೂರ್ಪನಖಿಯನ್ನು ಖರದೂಷಣರ ಸಂರಕ್ಷಣೆಯಲ್ಲಿ ಇತ್ತು, ಖರನಿಗೆ ದಂಡಕಾರಣ್ಯದ ರಾಜ್ಯ ವಿತ್ತನು. 14 000 ಮಂದಿ ರಾಕ್ಷಸರನ್ನು ಆ ಜನಸ್ಥಾನ ಖರದೂಷಣರಿಗೆ ಬೆಂಬಲರನ್ನಾಗಿ ಕೊಟ್ಟನು. **ಕಾಕಾಸುರನ** = ಕಾಗೆಯ ರೂಪದಲ್ಲಿದ್ದ ರಾಕ್ಷಸನು ದಂಡಕಾರಣ್ಯದಲ್ಲಿರುವಾಗ, ಶ್ರೀರಾಮನು ಸೀತಾದೇವಿಯ ತೊಡೆಯ ಮೇಲೆ ಮಲಗಿರುವ ಸಮಯದಲ್ಲಿ, ಸೀತೆಯ ಸೌಂದರ್ಯದಿಂದ ಮೋಹಿತನಾದ ಕಾಕಾಸುರನು ಆಕೆಯ ಸ್ತನವನ್ನು ಕುಕ್ಕಲು ಪ್ರಯತ್ನಿಸಿದನು. ಆಗ ಎಚ್ಚೆತ್ತ ಶ್ರೀರಾಮನು ದರ್ಭೆಯ ಅಸ್ತ್ರವನ್ನು ಪ್ರಯೋಗಿಸಿದನು. ಅದು ಬೆನ್ನಟ್ಟಿ ಬರುತ್ತಿರಲು, ದಿಕ್ಕುಗಾಣದೇ ಶ್ರೀರಾಮನನ್ನೇ ಶರಣು ಹೊಂದಿದನು. ಆಗ ಶ್ರೀರಾಮನು ಅವನ ಒಂದು ಕಣ್ಣನ್ನು ಧರ್ಭೆಯಿಂದ ಕುಕ್ಕಿದನು ಅದರಿಂದ ಕಾಗೆಗಳಿಗೆ ಒಂದೇ ಕಣ್ಣು ಕಾಣಿಸುವುದು. **ಮಾಯಾಮೃಗ ಬರಲು** = ಚಿನ್ನದ ಜಿಂಕೆಯ ರೂಪದಲ್ಲಿ ಬಂದಿದ್ದ ಮಾರೀಚನನ್ನು ಸಂಹರಿಸಿ, **ಜಟಾಯು** = ವಿನತೆಯ ಪುತ್ರನಾದ ಅರುಣನಿಂದ ಶ್ಯೇನಿ ಎಂಬ ಪಕ್ಷಿಜಾತಿಯವಳಲ್ಲಿ ಜನಿಸಿದ ಕಿರಿಯಪುತ್ರ. ಸಂಪಾತಿ ಈತನ ಅಣ್ಣ. ಸೀತಾಪಹರಣ ಮಾಡಿದ ರಾವಣನನ್ನು ಎದುರಿಸಿ, ರೆಕ್ಕೆ ಮುರಿದು, ಬಿದ್ದಿದ್ದ ಜಟಾಯುವಿಗೆ ಮೋಕ್ಷಪ್ರದನಾದ ಶ್ರೀರಾಮ **ಶಬರಿಯ** = ಬೇಡರ ಜಾತಿಯ ವೃದ್ಧ ತಾಪಸಿ. ಮರದಿಂದ ಬಿದ್ದ ಪಕ್ವವಾದ ನಾನಾವಿಧವಾದ ಫಲಗಳನ್ನು ಆಯ್ದು ತಂದು, ಶ್ರೀರಾಮನ ದರ್ಶನಕ್ಕಾಗಿ ಪ್ರತಿನಿತ್ಯವೂ ಹಂಬಲಿಸುತ್ತಿದ್ದ ಭಕ್ತೆ. **ಗಂಗೆಯಂಪದ**

**ತೀರ್ಥದಲಿ** = ಗಂಗೆಯಂತಹ ಪವಿತ್ರವಾದ ಸ್ವಚ್ಛವಾದ ಜಲದಿಂದ ಕೂಡಿದ್ದ ಪಂಪಾಸರೋವರ. **ಋಷ್ಯಮೂಕದಿ** = ಪಂಪಾಸರೋವರದ ಸಮೀಪದಲ್ಲಿರುವ ಪರ್ವತ. ಶ್ರೀಮತಂಗ ಮುನಿಗಳ ಆಶ್ರಮವು ಈ ಬೆಟ್ಟದ ತಪ್ಪಲಿನಲ್ಲಿತ್ತು. ಅಲ್ಲಿ ವಾಲಿಯಿಂದ ರಾಜ್ಯಭ್ರಷ್ಟನಾಗಿ ಕಿಷ್ಕಿಂದಾನಗರದಿಂದ ಓಡಿಸಲ್ಪಟ್ಟ ಸುಗ್ರೀವನು ಕೆಲವು ಕಪಿವೀರರೊಡನೆ ಈ ಪರ್ವತದಲ್ಲಿ ವಾಸವಾಗಿದ್ದನು. **ರಘುಪುಂಗವರ್** = ರಘುಕುಲಸಂಜಾತರಾದ ಶ್ರೀರಾಮಲಕ್ಷ್ಮಣರು. **ಪತಂಗಜ** = ಸೂರ್ಯಪುತ್ರನಾದ ಸುಗ್ರೀವನು (ಪತಂಗ – ಸೂರ್ಯ) **ಅಂತರಂಗ ಬೆಸಗೊಳಲು** = ತನ್ನ ಮನೋಗತವನ್ನು ಅರುಹಲು, **ವಜ್ರಾಂಗನ** = ವಜ್ರಶರೀರಿಯಾದ ಮಾರುತಿಯನ್ನು, **ತುಂಗವಿಕ್ರಮನಾದ** = ಶ್ರೇಷ್ಠಪರಾಕ್ರಮಶಾಲಿಯಾದ, **ಸುಗುಣತರಂಗ** ಸದ್ಗುಣಗಳ ಸಮೂಹ (ತರಂಗ, ಅಂದರೆ, ಅಲೆಗಳಂತೆ ಏಕಪ್ರಕಾರವಾಗಿರುವ). **ನೂತನ ಭೃಂಗ** = ಹೊಸದುಂಬಿಯು (ಮಾರುತಿಯು ಭೃಂಗಸದೃಶ. ಶ್ರೀರಾಮನ ಪವಿತ್ರ ಪಾದಯುಗ್ಮಗಳು ಕಮಲ ಸದೃಶ). **ಅಂಘ್ರಿ ಸರೋಜಯುಗಳವ** = ಎರಡು ಚರಣಾರವಿಂದಗಳನ್ನು.



## ೫೭೬

### (ಅಂಕಿತ–ಖಾದ್ರಿನೃಸಿಂಗ) [ಹನುಮದ್ವಿಲಾಸದಿಂದ]

**ರಾಗ–ಯದುಕುಲಕಾಂಬೋದಿ** **ಆದಿತಾಳ**

ರಾಮನಿಂಥಾ ಚೆಲುವನಮ್ಮಯ್ಯ –ಸೀತಾ
ರಾಮನಿಂಥಾ ಚೆಲುವನಮ್ಮಯ್ಯ ॥ ॥ಪ॥

ರಾಮನಿಂಥಾ ಚೆಲುವನಮ್ಮ–ರಾಗ ಜಗದಭಿರಾಮ ದುರಿತ ವಿ–
ರಾಮ ಸದ್ಗುಣಧಾಮ ಮತಾರಕ
ನಾಮ ಮೇಘಶ್ಯಾಮ ಶ್ರೀರಘುರಾಮ ॥ ॥ಅ॥

ನೀಲಮಣಿಗಳ ಸಾಲಕುಂತಲ
ಜಾಲನೋಡಲು ಬಾಲಚಂದ್ರನ
ಪೋಲುತಿರುವುದು ಫಾಲಭಾಗ ವಿ– ಶಾಲ ಕಮಲಾಕ್ಷಿ

ಭ್ರೂಲತೆಯಿಂದ್ರಕಾರ್ಮುಕವು– ಸೋಗೆಗಂಗಳ
ಢಾಳಗಳು ಪುಂಡರೀಕವು– ಕೂರ್ಮಸಮ ಕ–
ಪೋಲ ಚಂಪಕನಾಸಿಕವು– ಲಲಿತ ಮುಕ್ತಾಫಲಗಳ

ಸೋಲಿಸುವುದು ರದನಂಗಳ ಚಂದವು
ಲಾಲಿಪ ಚೆಂದುಟಿ ನವಕುರುವಿಂದವು
ಮೇಲಹ ನುಡಿಗಳು ವರಮಕರಂದವು
ಬಾಲಕಿ ನಸುನಗೆ ಬಹುತರ ಮಂದವು ॥ ॥೧॥

ಮೀರಿ ಬರೆದಡೆ ಬಾರದಿರುತಿಹ
ಕೋರೆಮೀಸೆಯು ಚಾರುಚುಟುಕವು
ದಾರವಹ ಶ್ರೀಕಾರಕರ್ಣಗ–ಳೀ ರಮಾರಮಣಿ

ವಾರಿಜಾರಿಯು ವದನವು– ವಕ್ತ್ರವನು ವಿ
ಚಾರಿಸೆ ಕರ್ಪೂರರಸದನವು– ಶಂಖದಂದದಿ
ತೋರುವ ಕಂಠವು ತುಲಸೀ– ಹಾರದಿಂದ ಶೋಭಿತವು

ಭೂರಿ ಸುಬಾಹುಗಳು ಕರಿಕರಂಗಳು
ನೀರಜಗಳ ನಿಂದಿಸುವ ಕರಂಗಳು
ವಾರಿಜಮುಖರೇಖಾ ಜಾಲಂಗಳು
ಶ್ರೀರಂಜಿತ ಕರತಲವಾಸಂಗಳು ॥ ॥೨॥

ಪೀನವಕ್ಷವು ಮಾನಿತ ತ್ರಿವ–
ಳೀ ನಿಬಿಡದುದರಾಸುಯುತ ನಾ
ಭೀನಳಿನ ಸೂಕ್ಷ್ಮಾನುಸರಕಟಿ– ಯಾಸ್ಯಪಗಮ್ಯ

ಶ್ರೀನುತ ರಂಭಾಸ್ತಂಭಗಳು– ತೊಡೆಗಳು ಸ
ಮಾನಜಾನು ಜಂಘೆಗಳು– ಭದ್ರರೇಖೆಗಳು
ಮಾನಸಸಂಭವನುಪಮಾನುಗಳು– ಪಲ್ಲವ ವರ್ಣಪ್ರೊಡೆ

ದೀನಜನಾವನ ಸುಗುಣತರಂಗನು
ಮೌನಿಂದ್ರಾಕೃತಿಯುಳ್ಳ ಶುಭಾಂಗನು
ಏನೆಂಬೆನು ಬಹು ಕರುಣಾಪಾಂಗನು
ಮಾನಿನಿ ಶ್ರೀವಮತ್ಯಾದ್ರಿನೃಸಿಂಗನು ॥ ॥೩॥

**ಅರ್ಥ ವಿವರಣೆ :—**

ಅಶೋಕವನದಲ್ಲಿ ಶ್ರೀಸೀತಾದೇವಿಯನ್ನು ಮಾರುತಿಯು ಕಂಡಾಗ, ದೇವಿಯ ವಚನದಂತೆ, ಶ್ರೀರಾಮಚಂದ್ರಮೂರ್ತಿಯ ವರ್ಣನೆಯನ್ನು ಮಾಡುವ ಪ್ರಸಂಗವಿದು.

**ಜಗದಭಿರಾಮ**=ಜಗತ್ತಿನಲ್ಲಿ ಚೆನ್ನಾಗಿ ಕ್ರೀಡಿಸುವವನು (ರಾಮ– ರಮು– ಕ್ರೀಡತೇ ಎಂಬ ಧಾತುವಿನ ಪರಿಷ್ಕಾರರೂಪ. ಅಂದರೆ ಲೋಕ ವ್ಯಾಪಾರ ನಿರ್ವಾಹಕನು) **ದುರಿತವಿರಾಮ** = ಪಾಪಗಳನ್ನು ಕಳೆಯುವವನು. **ತಾರಕನಾಮ**=ಶ್ರೀರಾಮನಾಮವು ಭವಸಾಗರವನ್ನು ದಾಟಿಸುವ ಏಕೈಕ ಉಪಾಯವು. **ಕುಂತಲಜಾಲ** – ತಲೆಗೂದಲು ಅಥವಾ (ಮುಂಗುರುಳು) **ಫಾಲಭಾಗ**=ಶ್ರೀರಾಮನ ಹಣೆಯು ಕುಂತಲದಿಂದ ಅಲಂಕೃತವಾಗಿ ಬಾಲಚಂದ್ರನಂತೆ ಪ್ರಕಾಶಮಾನವಾಗಿರುವುದು. **ಭ್ರೂಲತೆ** = ಒಳ್ಳೆಯಂತಿರುವ ಹುಬ್ಬುಗಳು. **ಇಂದ್ರಕಾರ್ಮುಕವು** - ಇಂದ್ರಚಾಪದಂತೆ, ಕಾಮನ ಬಿಲ್ಲನ್ನು ಹೋಲುವುದು **ಸೋಗೆ ಕಂಗಳ ಢಾಳಗಳು** = ಕಣ್ಣಿನ ತುದಿಯಲ್ಲಿ ತಿದ್ದಿರುವ ಕಾಡಿಗೆಯ ಗೆರೆಯು ಕಾಂತಿಯುಕ್ತವಾಗಿದೆ (ಢಾಳ– ಕಾಂತಿ–ಶೋಭಾ) **ಪುಂಡರೀಕವು**= ಕಣ್ಣುಗಳು ಕಮಲದಳದಂತೆ ವಿಶಾಲವಾಗಿವೆ. **ಕೂರ್ಮಸಮಕಪೋಲ**= ಕೆನ್ನೆಗಳು ಆಮೆಯ ಬೆನ್ನಿನಂತೆ ಉನ್ನತವಾಗಿದ್ದು ನುಣುಪಾಗಿವೆ,

**ಚಂಪಕನಾಸಿಕವು** = ಮೂಗು ಸಂಪಿಗೆಹೂವಿನಂತೆ ನೀಳವಾಗಿದೆ. **ರದನಂಗಳ ಚಂದವು**= ಹಲ್ಲಿನ ಜೆಲುವಿಕೆಯು ಶುಭ್ರಮುತ್ತಿನ ಕಾಂತಿಯನ್ನು ಮೀರಿದೆ. **ಚೆಂದುಟಿ** = ಮನೋಹರವಾದ ತುಟಿಗಳು, **ನವಕುರುವಿಂದವು** ಹೊಸದಾದ ಕೆಂಪಿನ ಮಾಣಿಕ್ಯದಂತಿವೆ. **ವರ ಮಕರಂದವು**= ವರ್ಣನಾ ನುಡಿಗಳು ಮಧುವಿನಂತೆ ಸಿಹಿಯಾಗಿವೆ. (ಮಧು ಮೃದು ವಚನಗಳು). **ಮಂದವು** = ನಗೆ ಮಂದಹಾಸದಿಂದ ಯುಕ್ತವಾದದ್ದು.

**ಕೋರೆ ಮೀಸೆಯು**= ಆಗತಾನೇ ಕಾಣಿಸುತ್ತಿರುವ ಕುಡಿಮೀಸೆಯು **ಚಾರುಚುಬುಕವು** = ಸುಂದರವಾದ ಗದ್ದವು. **ದಾರವಹ ಶ್ರೀಕಾರ ಕರ್ಣಗಳೀ** = ಮುಖಕ್ಕೆ ಒಪ್ಪುವ ವಿಶಾಲಕರ್ಣಗಳು (ದಾರವಹ= ಬಾಗಿಲಿನ ಚೌಕಟ್ಟು). **ವಕ್ತ್ರವನು**= ಮುಖವನ್ನೂ, **ಭೂರಿ ಸುಬಾಹುಗಳು** = ಬಲಿಷ್ಠವಾದ ನೀಳಬಾಹುಗಳು. **ಕರಿಕರಂಗಳು** = ಆನೆಯ ಸೊಂಡಿಲಿನಂತೆ ದೀರ್ಘವಾದ ಕೈಗಳು. **ವಾರಿಜಮುಖರೇಖಾ ಜಾಲಂಗಳು** = ಕಮಲವದಳದ ಎಸಳಿನ ಅಂಬಿನಂತೆ ವಿನ್ಯಾಸ. **ಶ್ರೀರಂಜಿತಾ ಕರಕಲವಾಸಂಗಳು** = ಶ್ರೀಲಕ್ಷ್ಮಿಯನ್ನು ಆಲಿಂಗಿಸುವ ಮುಂಗೈಗಳು.

**ಪೀನವಕ್ಷವು** ಉನ್ನತವಾದ ಎದೆಯಭಾಗ. **ಮಾನಿತ ತ್ರಿವಳೀ**= ಪೂಜ್ಯವಾದ ಮೂರು ಸುರಳೀ ಗೆರೆಗಳು (ಹೊಟ್ಟೆಯ ಮೇಲೆ), **ನಿಬಿಡ ದುದರಾನುಯುತ**= ಉದರದಲ್ಲಿ ಸಕಲ ಬ್ರಹ್ಮಾಂಡವನ್ನು ಧರಿಸಿರುವ, **ನಾಭೀನಳಿನ**= ಹೊಕ್ಕುಳಿನ ಕಮಲ (ನಾಭೀಕಮಲ). **ಸೂಕ್ಷ್ಮಾನುಸರಕಟಿ** = ಸೂಕ್ಷ್ಮವಾದ ನೊಂಟ (ಸಿಂಹಕಟಿಯಂತೆ). **ಶ್ರೀನುತ ರಂಭಾಸ್ತಂಭಗಳು** = ಶ್ರೀಲಕ್ಷ್ಮಿಯಿಂದ ಸ್ತುತ್ಯಮಾನವಾದ ಬಾಳೆಯ ದಿಂಡಿನಂತಿರುವ ಎರಡು ತೊಡೆಗಳು. **ಜಾನು** = ಮಂಡಿ. **ಜಂಘೆ**= ಕೆಳಕಾಲಿನ ಭಾಗ. **ಪಾದಗಳು**= ಚರಣದ್ವಯ. **ಭದ್ರರೇಖೆಗಳು**= ಅಂಗಾಲಿನಲ್ಲಿರುವ ಧ್ವಜ, ಅಂಕುಶ ಇತ್ಯಾದಿ ಮಂಗಳ ಚಿನ್ಹೆಗಳು.

**ಮಾನಸಸಂಭವನ** = ಶ್ರೀಪುರುಷನಾಮಕ ಹರಿಯು ಮನಸ್ಸಿನಿಂದ ಹುಟ್ಟಿದ ಮನ್ಮಥನನ್ನು ಸರ್ವವಿಧಗಳಲ್ಲಿಯೂ ಮೀರಿಸುವ ಲಕ್ಷಣಗಳು. **ದೀನಜನಾವನ** = ಶರಣಾಗತರಾದ ಜನಗಳ ಸಮೂಹ. **ಸುಗುಣ ತರಂಗನು** = ಸಮುದ್ರದಲ್ಲಿ ನಿರಂತರವಾಗಿರುವ ಅಲೆಗಳಂತೆ ಅಪಾರ ಸದ್ಗುಣನಾಮನು. **ವರೌನೀಂದ್ರಾಕೃತಿಯುಳ್ಳ** = ತಾಪಸವೇಷಧಾರಿ ಯಾದ. **ಶುಭಾಂಗನು** = ಮಂಗಳವಾದ ಅವಯವಗಳುಳ್ಳವನು.



## ೫೭೭

### ಅಂಕಿತ–ಖಾದ್ರೀಧಾಮ ನರಹರಿ

### [ಹನುಮದ್ವಿಲಾಸದಿಂದ ಆಯ್ದ ಕೀರ್ತನೆ]

**ರಾಗ–ಕಾನಡ** **ಛಾಪುತಾಳ**

ರಾಮನ ಕಂಡಾ– ಶ್ರೀಮಾರುತಿ
ರಾಮನ ಕಂಡಾ ॥ ॥ಪ॥

ರಾಮನ ಜಗದಧಿ ರಾಮನ ಜಿತಭೃಗು
ರಾಮನ ದಶರಥ– ರಾಮನಾದ ಮಹಾನುಭಾವನ ॥ ॥ಅ॥

ಚಾರುಸುಂದರನ – ಧೈರ್ಯಶಾಲಿ ಮಹಾ
ಮೇರು ಮಂದರನ– ಸನ್ಮುನಿಜನ ಶೃಂ
ಗಾರ ಚಂದಿರನ– ಸದ್ಗುಣಗಣ
ಪಾರನ ದೈತ್ಯ ವಿದಾರನ ಕಾರುಣ್ಯಾ
ಗಾರನಾಶ್ರಿತ ಸಾರಸಾಕ್ಷನ
ಧೀರ ಲೋಕೋದ್ಧಾರನಾಗಿಹ ॥ ॥೧॥

ಬಲದಿ ಲಕ್ಷ್ಮಣನು- ಭಾಸುರ ಭಕ್ತಿ
ಯಲಿ ಕುಳಿತಿಹನು- ತನ್ನಯ ಕರ
ಗಳ ಮುಗಿದಿಹನು- ಧನುರ್ಬಾಣ

ಗಳ ಹಿಡಿವಮುರಾರಿಕುಲವನೆಗ್ರೊತ್ತಿ ತಾ
ನಲಸದೇ ಶ್ರೀಲಲನೆಯನು ತಪ
ಸುಲಭದಿಂದೆನಲೊಲಿದು ಕೇಳುವ ॥ ॥೨॥

ಎಡದಿ ಸುಗ್ರೀವ- ಅಜುತ ಮೃದು
ನುಡಿಯಲಿ ದೇವ- ಮಾರುತಿ ಈಗ
ತಡೆಯದೆ ಬರುವ- ಮಜ್ಜನನಿ ಮೆ

ಲ್ಲಡಿಯ ಸುಕ್ಷೇಮವ ಒಡನೆ ಬಿನ್ನಪಗೈದು
ಪೊಡವಿಸುತೆಯಿತ್ತ್ರೊಡವೆ ಕುರುಹನು
ಕೊಡುವೆನೆನೆ ನಗುತ್ತೊಡನೆ ಲಾಲಿಪ ॥ ॥೩॥

ಹಿಂದೆ ಭಲ್ಲೂಕ- ಗೋಪುಚ್ಛರ
ಬೃಂದವನೇಕ- ಶಾಖಾಮೃಗ
ಸಂದೋಹಾನೀಕ- ವಗಣಿತದಿ

ಇಂದು ರಾವಣನ ನಾವ್ ಕೊಂದು ನಿಂದವನಿಯ
ನಂದನೆಯ ಮುದದಿಂ ತರಬೇ
ಕೆಂದು ನುಡಿವರ ಸಂವಣಿಯೊಳಿಹ ॥ ॥೪॥

ಸಮುಖದೋಳ್ ನೀಸು - ಸುಷೇಣನು
ಸುಮುಖ ದುರ್ಮುಖನು- ಕೇಸರಿ ವೀರ
ಕುಮುದ ದ್ವಿವಿದನು- ಶೂರಾಕಾರ

ಪ್ರಮುಖ ನಾಯಕರೆಲ್ಲರ ಮಿತದಿಂ ನಿಂದಿರ್ದು
ಕಮಲಲೋಚನ ವಿಮಲ ಖಾದ್ರೀ
ಧಾಮ ನರಹರಿ ನಮೋ ನಮೋ ಯೆನೆ ॥ ॥೫॥

**ಅರ್ಥವಿವರಣೆ:—**

ಶ್ರೀಮದಾಂಜನೇಯನು ಶತಯೋಜನಪ್ರವಿಸ್ತಾರವಾದ ದಕ್ಷಿಣ ಸಮುದ್ರವನ್ನು ಪುನರ್ಲಂಘಿಸಿ, ಸೀತಾಮಾತೆ ಕೊಟ್ಟ ಚೂಡಾಮಣಿಯೊಂದಿಗೆ ಜಾಂಬವಾದಿಗಳ ಸಹಿತ, ಪುನಃ ಕಿಷ್ಕಿಂಧೆಗೆ ಹಿಂದಿರುಗಿ, ಶ್ರೀರಾಮಚಂದ್ರಮೂರ್ತಿಯನ್ನು ಸಂದರ್ಶಿಸಿದಾಗ, ಮಾರುತಿ ಕಂಡ ರಾಮನ ಭವ್ಯಾಕೃತಿಯನ್ನು ವರ್ಣಿಸುವ ಕೀರ್ತನೆ ಇದು.

**ಜಗದಭಿರಾಮನ** = ಜಗತ್ತಿಗೇ ಮನಮೋಹಕನಾದ ಶ್ರೀರಾಮ. (ಜಗತ್ತಿನಲ್ಲಿ ಕ್ರೀಡಿಸುವ), **ಜಿತಭೃಗುರಾಮನ** = ಪರಶುರಾಮನನ್ನು ಗೆದ್ದ. (ತನ್ನ ಅಭಿನ್ನರೂಪ ಪರಶುರಾಮ, ದಶರಥರಾಮ ತೋರಿದ ವಿಡಂಬನೆ): **ಚಾರು ಸುಂದರನ** = ಚಾರು—ಎಂದರೆ ಸುಂದರ. ಪುನರುಕ್ತಿ ಇದಲ್ಲ. ಸುಂದರಕೆ ಸುಂದರರೂಪ ಎಂದರ್ಥ. **ಮಹಾಮೇರು ಮಂದರನ** = ಮಹತ್ತಾದ ಮೇರು ಮಂದರ ಪರ್ವತಸದೃಶನು. (ಧೈರ್ಯದಲ್ಲಿ ಉಪಮಾನ). **ಸನ್ಮುಖರ** = ಅಪ್ರಾಕೃತ ಜ್ಞಾನಾನಂದಾದಿ ಗುಣಪೂರ್ಣನಾದ ವದನಾರವಿಂದ, **ಸದ್ಗುಣ ಗಣಹಾರನ** = ಮಂಗಳ ಗುಣಾಲಂಕೃತನ (ಅನಂತ ಕಲ್ಯಾಣಗುಣಗಣಪರಿಪೂರ್ಣನು). **ಆಶ್ರಿತ ಸಾರಸಾರ್ಕನ** = ಮೊರೆಹೊಕ್ಕ (ಆಶ್ರಿತ) ಭಕ್ತರೆಂಬ ಕಮಲಗಳಿಗೆ (ಸಾರಸ), ಸೂರ್ಯನಂತಿರುವ (ಅರ್ಕನ), ಸೂರ್ಯನ ದರ್ಶನದಿಂದ ಕಮಲ ಅರಳುವುದು. ಶ್ರೀರಾಮನ ದಿವ್ಯದರ್ಶನದಿಂದ ಭಕ್ತರ ಮನಸ್ಸು ಆನಂದದಿಂದ ಅರಳುವುದೆಂಬ ಭಾವ.

**ಭಾಸುರಭಕ್ತಿ** = ಶುದ್ಧವಾದ ಭಕ್ತಿಭಾವ. **ಅಮರಾರಿಕುಲವನೆಗ್ಗೊತ್ತಿ** ದೇವತೆಗಳ ಶತ್ರುಗಳಾದ ದಾನವರ ವಂಶವನ್ನೇ ನಿರ್ಮೂಲಗೊಳಿಸಿ, **ಅಲಸದೇ** = ತಡಮಾಡದೇ, **ಪೊಡವಿಸುತೆಯಿತ್ತ ಒಡವೆ** = ಭೂಪುತ್ರಿಯಾದ ಸೀತೆಯು ಹನುಮಂತನಿಗೆ ಕೊಟ್ಟ ಚೂಡಾಮಣಿಯನ್ನು, **ಕುರುಹನು** = ಚಿಹ್ನೆ (ಸಂಕೇತ), **ಭಲ್ಲೂಕ** = ಕರಡಿಗಳು

**ಗೋಪುಚ್ಛೈರ**= ಆಕಳಿನ ಬಾಲದಂತೆ ಉಬ್ಬವಾದ, ತುದಿಯಲ್ಲಿ ಕೂದಲಿನ ಗೊಂಚಲಿನಿಂದ ಕೂಡಿದ ಬಾಲವುಳ್ಳ ಕಪಿವರ್ಗ. **ಶಾಖಾಮೃಗ**=ಕೊಂಬೆಯಿಂದ ಕೊಂಬೆಗೆ ಹಾರುವ ಕೋತಿಗಳು.



## ೫೭೮

(ಅಂಕಿತ-ಕರಿಗಿರೀಶ)

**ರಾಗ-ಮಾಂಡ್** **ಆದಿತಾಳ**

ರಾಮ- ರಾಮಾ ರಾಮಾ- ರಾಮ ಶ್ರೀರಾಮ ॥ ॥ಪ॥

ರಾಮ- ಸೀತಾರಾಮ- ರಾಮ ಜಯರಾಮ ॥ ॥ಅ॥

ಶ್ರೀರಘುವಂಶ ಲಲಾಮನೆ- ರಾಮ
ತಾರಕ ಮಂಗಳನಾಮನೆ- ರಾಮ
ನೀರದ ನಿರ್ಮಲ ಶ್ಯಾಮನೆ- ರಾಮ
ಸಾರಸಲೋಚನ ಸೌಮ್ಯನೆ- ರಾಮ ॥ ॥೧॥

ಕೌಸಲ್ಯಾದೇವಿ ಕುಮಾರಕ- ರಾಮ
ಕೋಸಲ ದೇಶಾನಂದಕ- ರಾಮ
ಆಸುರೀ ತಾಟಕ ಶಿಕ್ಷಕ- ರಾಮ
ಕೌಶಿಕ ಯಜ್ಞಸಂರಕ್ಷಕ- ರಾಮ ॥ ॥೨॥

ಮುನಿಸತಿ ಶಾಪವಿಮೋಚಕ- ರಾಮ
ಅನಲಾಕ್ಷಕಾರ್ಮುಕ ಭಂಜಕ- ರಾಮ
ಜನಕಸುತಾನಂದ ವರ್ಧಕ- ರಾಮ
ಅನುಪಮ ಲೀಲಾದ್ಯೋತಕ- ರಾಮ ॥೩॥

ಸತ್ಯಪರಾಕ್ರಮ ಸಾತ್ವಿಕ –ರಾಮ
ಪಿತೃವಾಕ್ಯ ಪರಿಪಾಲಕ– ರಾಮ
ಉತ್ತಮಚರಿತಾ ದರ್ಶಕ– ರಾಮ
ಚಿತ್ರಕೂಟಾದ್ರಿ ನಿವಾಸಕ–ರಾಮ ॥ ॥೪॥

ಕಾಕುತ್ಸವಂಶಲಲಾಮನೆ– ರಾಮ
ಲೋಕೇಶ ಲೋಕ ಮನೋಹರ– ರಾಮ
ಶ್ರೀಕರಾಶ್ರಿತಜನ ಮಂದಾರ– ರಾಮ
**ಶ್ರೀ ಕರಿಗಿರೀಶ** ಸುಂದರ– ರಾಮ ॥ ॥೫॥



**ಅರ್ಥವಿವರಣೆ:—**

**ತಾರಕ ಮಂಗಳನಾಮ** = ಶ್ರೀರಾಮ ನಾಮಸ್ಮರಣೆಯು ಭವ ಸಾಗರದಿಂದ ತಾರಕವು. ಇವರ ಮಹಿಮೆಯನ್ನು ಅರಿತ ಶ್ರೀರುದ್ರದೇವರು ಶ್ರೀರಾಮ ತಾರಕಮಂತ್ರವನ್ನು ಶ್ರೀಪಾರ್ವತಿಗೆ ಉಪದೇಶಿಸಿದರು. **ನೀರದ ನಿರ್ಮಲ ಶಾಮನೆ** = ನೀಲಮೇಘಶ್ಯಾಮನೆ. (ನೀರದ– ಮೇಘಗಳು. ನಿರ್ಮಲ = ನಿರ್ದೋಷ). **ಸಾರಸಲೋಚನ** = ಕಮಲ ದಳಗಳಂತೆ ವಿಶಾಲವಾದ ನೇತ್ರವುಳ್ಳವನು. **ಸೌಮ್ಯನೆ** = ಪರಮಶಾಂತ ಮೂರ್ತಿಯೇ, **ಕೌಶಿಕ** = ವಿಶ್ವಾಮಿತ್ರ. **ಮುನಿಸತಿಶಾಪವಿಮೋಚಕ** = ಗೌತಮರ ಪತ್ನಿ ಅಹಲ್ಯೆಯನ್ನು ಶಾಪದಿಂದ ವಿಮೋಚನೆ ಮಾಡಿ, ಉದ್ಧರಿಸಿದ ಶ್ರೀರಾಮಚಂದ್ರ. **ಅನಲಾಕ್ಷ ಕಾರ್ಮುಕ ಭಂಜನ** = ಶಿವಧನಸ್ಸನ್ನು ಮುರಿದು ಸೀತಾದೇವಿಯನ್ನು ಪಾಣಿಗ್ರಹಣ ಮಾಡಿಕೊಂಡನು. (ಅನಲಾಕ್ಷ = ಫಾಲನೇತ್ರದಲ್ಲಿ ಅಗ್ನಿಯನ್ನು ಉಳ್ಳವನು–ಶ್ರೀರುದ್ರದೇವರು ಕಾರ್ಮುಕ– ಧನುಸ್ಸು). **ಜನಕಸುತಾ** = ಜನಕರಾಜನ ಪುತ್ರಿಯಾದ ಸೀತಾದೇವಿ. **ಅನುಪಮಲೀಲಾದ್ಯೋತಕ** = ಅಸದೃಶವಾದ ಲೀಲಾವೈಭವ ಮೂರ್ತಿಯು.

**ಲೋಕೇಶ** = ಜಗದೀಶ ಜಗತ್ತನ್ನು ನಿಯಮನ ಮಾಡುವವನು. **ಶ್ರೀಕರ**=ರಮಾರಮಣನು (ಮಂಗಳಪ್ರದನು). **ಆಶ್ರಿತ ಜನಮಂದಾರ**= ತನ್ನ ಆಶ್ರಯ ಹೊಕ್ಕವರ ಪಾಲಿಗೆ ಕಲ್ಪವೃಕ್ಷ ಸದೃಶನು.



## ೫೭೯

## (ಅಂಕಿತ ಪ್ರಸನ್ನ)

## (ಶ್ರೀ ಪ್ರಸನ್ನತೀರ್ಥರಿಂದ ವಿರಚಿತ)

**ರಾಗ–ಸಿಂಧುಭೈರವಿ** **ಆದಿತಾಳ**

ಕೋಸಲಾಧಿಪ ಶುಭತಮ ದಾಶರಥೇ ॥ ॥ಪ॥

ದಾಸನಲ್ಲಿ ಕೃಪಾಲೇಶವ ಬೀರೆಲೊ ॥ ॥ಅ॥

ಹರನ ಚಾಪವ ಮುರಿದು ಸ್ವಯಂವರದಿ ಜಾನಕೀ
ಕರವಪಿಡಿದು ಸುರನರರನು ಹರುಷಪಡಿಸಿದ
ಸರಸಿಜಲೋಚನ ಕಾಯೋ ಕರುಣದಲಿ ॥ ॥೧॥

ವನವ ಸೇರಿ ಮುನಿಗಳ ಶಂಸದನವ ಪೊಂದಿದ
ಮುನಿದು ವಿವಿಧ ದುರುಳರನ್ನು ಹನನ ಮಾಡಿದ
ಹನುಮಗೆ ದರುಶನವನಿತ್ತೆ ॥ ॥೨॥

ವಾನರ ಬಲದಿಂದ ಕೂಡಿ ವನಧಿ ಬಂಧಿಸಿ
ದಶಾನನಮುಖರನ್ನು ಕೊಂದು ಮಾನಿನೀಮಣಿ
ಜಾನಕಿಯಲ್ಲಿ **ಪ್ರಸನ್ನ**ನಾದ ॥ ॥೩॥



**ಅರ್ಥ ವಿವರಣೆ:—**

**ಕೋಸಲಾಧಿಪತಿ** = ಕೋಸಲದೇಶದ ಚಕ್ರವರ್ತಿಯಾದ ಶ್ರೀರಾಮನೇ, **ದಾಶರಥೇ** = ದಶರಥನ ಪುತ್ರ. **ಹರನ ಚಾಪವ** = ಶಿವಧನುಸ್ಸನ್ನು, **ಶಂಸನವ** = ಹೊಗಳುವಿಕೆ ಸ್ತೋತ್ರ. **ಹನನ** = ಸಂಹಾರ. **ವನಧಿ** = ಶತಯೋಜನ ಪ್ರವಿಸ್ತಾರವಾದ ದಕ್ಷಿಣ ಸಮುದ್ರ. **ದಶಾನನ** = ಹತ್ತುತಲೆಯ ರಾವಣ. **ಮಾನಿನೀಮಣಿ** = ಶ್ರೇಷ್ಠಸ್ತ್ರೀ.



## ೫೮೦

### (ಪ್ರಾಣನಾಥ ವಿಠ್ಠಲಾಂಕಿತ)

**ರಾಗ–ಮಧ್ಯಮಾವತಿ** **ಅಟತಾಳ**

ರಾಮನ ನೋಡ ಬನ್ನಿರೆ ಭಾಮೆಯರೆಲ್ಲ ॥ ॥ಪ॥

ರಾಮನ ನೀವು ನೋಡ ಬನ್ನಿರೆ–ಕಾಮಿತಾರ್ಥವ ಬೇಡಿ ಸುಖಿಸಿರೆ
ಸ್ವಾಮಿ ನೀನೆ ಗತಿ ಎಂದರೆ–ಕಾಮಿತಾರ್ಥವ ನೀವ–
ಧೊರೆಯನ ॥ ॥ಅ॥

ಸೀತೆಗೋಸುಗ ಸೇತುವೆಯ ಕಟ್ಟಿ–ಧೂರ್ತರಾವಣನ ಘಟ್ಟಿಸಿ
ಖ್ಯಾತಿಯಿಂದಲಿ ರಥವನೇರಿ–ಸೀತೆ ಸಹಿತ ಬರುವನಂತೆ ॥ ॥೧॥

ಹರಿಯು ನರನಾಗುತಲಿ ಬಂದು–ವರ ಅಯೋಧ್ಯಾಪುರದಿ ನಿಂದು
ಮೆರೆದ ಸಿಂಹಾಸನವನೇರುತ–ಹರುಷದಲಿ ತಾ ಕೊಡುವವನಂತೆ ॥
॥೨॥

ಮಾನನಿಧಿ **ಪ್ರಾಣನಾಥ ವಿಠ್ಠಲ**–ನಾನುರಾಗದಿ ಭಜಿಸುವರ ಸುರ
ಧೇನುವಂದದಿ ಸಲಹುವನು–ಮಾನಿನಿಯರು ಮನ್ನಿಸುತ ಬೇಗ ॥ ॥೩॥



## ೫೮೧

## (ತಂದೆವೆಂಕಟೇಶವಿಠ್ಠಲಾಂಕಿತ)

**ರಾಗ–ಭೈರವಿ** **ಆದಿತಾಳ**

ಕಂಡೆ ಕಂಡೆ– ರಾಮನ ಕಂಡೆ ಕಂಡೇ ॥ ॥ಪ॥

ಕಂಡೆ ಕಮಲನುಮಾಪ್ತಕುಲಜನ– ಕಂಡೆ ಕಮಲಜವಂದ್ಯ ಚರಣನ
ಕಂಡೆ ಕಮಲಾಲಯುಸುವಕ್ಷನ– ಕಂಡೆ ಕಮಲದಳಾಯತಾಕ್ಷನ ॥ ॥ಅ॥

ಆತಿ ಬಲಾನ್ವಿತ ದಿತಿಸುತರು– ಭೂತಳದಿ ಧರ್ಮಚ್ಯುತಿಯನೆಸಗಲ
ಜಾರಿತವು ದಶರಥನ ಜಠರೋದ್ಭೂತನಾಗುತಲೀ
ಖ್ಯಾತಗಾಧಿಜ ಮಾತ ಮನ್ನಿಸಿ– ಪಾತಕಿಯ ಸದೆದಾ–ತಳೋದರಿ
ಸೀತೆ ಕರಪಿಡಿದಾತತಾರ್ಯ– ಸುರೇತರಾರಿಯನು ॥ ॥೧॥

ಸವತಿ ವಿಷವಿಹ್ವಲಿತೆ ಮಾತಿಗೆ– ಯುವತಿಯನುಜನಸಹಿತ ವನವಾ
ಸವನು ಕೈಕೊಂಡವನಿಸುರ ಋಷಿ– ಕವಿ ವಿಪಕ್ಷಿತರ
ಸವನತ್ರಯ ಸಿಂಧ್ಯಾ ಸುಕರ್ಮ– ಪ್ರವಚನಾತಂಕ ದುಷ್ಟ ದುರ್ದಾ
ನವರ ಸಂಹರಿಸಿದ ಭವವಾಂಬುಧಿ– ನವಸುಪೋತನನಾ ॥ ॥೨॥

ದಶಶಿರನ ಬೆಸನಾಂತು ದಾನವ– ಮಿಸುನಿ ಮೃಗವಾಗೆಸೆಯೆ ಬಾಣದ
ಲಸು ಹರಿಸಿ ಸತಿಯಿಲ್ಲದಿರೆ ಬಹು– ವ್ಯಸನ ನಟಿಸುತ್ತಾ
ಶ್ವಸನ ಸುಗ್ರೀವಾದಿಗಳ ಪ್ರೇ– ರಿಸುತ ರಾವಣವಂಶವನು ಯಮ
**ನೊಶವ ಮಾಡಿದ ಕುಶನ ತಂದೆ ವೆಂಕಟೇಶವಿಠ್ಠಲನಾ** ॥ ॥೩॥

**ಅರ್ಥವಿವರಣೆ:—**

**ಕಮಲಸುಮಾಪ್ತ ಕುಲಜನ** = ಸೂರ್ಯವಂಶೋತ್ಪನ್ನನಾದ ಶ್ರೀರಾಮಚಂದ್ರ. (ಕಮಲ ಸುಮ = ಕಮಲಪುಷ್ಪ. ಆಪ್ತ = ಕಮಲ ಮಿತ್ರನಾದ ಸೂರ್ಯ. ಕುಲಜನ = ಸೂರ್ಯವಂಶದಲ್ಲಿ ಅವತರಿಸಿದ). **ಕಮಲಜವಂದ್ಯ ಚರಣನ** = ಬ್ರಹ್ಮನಿಂದ ವಂದಿತ ಪಾದವುಳ್ಳವನು (ಕಮಲಜ = ಶ್ರೀಹರಿಯ ನಾಭೀಕಮಲೋದ್ಭವರಾದ ಬ್ರಹ್ಮ). **ಕಮಲಾಲಯ ಸುವಕ್ಷನ** = ಕಮಲನಿವಾಸಿನಿಯಾದ ಲಕ್ಷ್ಮಿಯನ್ನು ತನ್ನ ವಕ್ಷದಲ್ಲಿ ಧರಿಸಿದ ಶ್ರೀಹರಿ. **ಕಮಲದಳಾಯತಾಕ್ಷನ** = ಕಮಲದ ದಳದಂತೆ ವಿಸ್ತಾರವಾದ ಕಣ್ಣುಳ್ಳ ಶ್ರೀರಾಮಚಂದ್ರ. ಇಲ್ಲಿ **ಕಮಲ** ಶಬ್ದ ವನ್ನು ಆಲಂಕಾರಿಕವಾಗಿ ಪ್ರಯೋಗಿಸಿದ್ದಾರೆ ಕವಿಪುಂಗವರು.

**ದಿತಿಸುತರು** = ದಿತಿಯ ಪುತ್ರರಾದ ದೈತ್ಯರು. **ಧರ್ಮಚ್ಯುತಿಯನು ಎಸಗಲು** = ಧರ್ಮನಾಶಕಾರ್ಯದಲ್ಲಿ ತೊಡಗಿರಲು, **ಅಜಾತರಿಪು** ಅಜಾತಶತ್ರುವಾದ ದಶರಥ. **ಗಾಧಿಜ** = ಗಾಧಿರಾಜನ ಪುತ್ರ ವಿಶ್ವಾಮಿತ್ರ **ಪಾತಕಿಯ ಸದೆದಾ** = ನೀಚಳಾದ ತಾಟಕಿಯನ್ನು ಸಂಹರಿಸಿದ, **ತಳೋದರಿ** = ನಿಮ್ನೋದರಳಾದ ಸೀತಾದೇವಿ. **ಸುರೇತರಾರಿಯನ** = ದೇವತೆಗಳ ಶತ್ರುವಾದ ಶ್ರೀರಾಮ. (ಸುರೇತರ = ಸುರರಿಗೆ ವಿರೋಧಿ ಗಳಾದ ದೈತ್ಯರು).

**ಸವತಿ ವಿಷವಿಹ್ವಲಿತ ಮಾತಿಗೆ** = ಮಲತಾಯಿಯಾದ ಕೈಕೇಯಿಯ ವಿಷ ಪೂರಿತವಾದ **ಮಾತಿಗೆ** (ಭರತನಿಗೆ ಪಟ್ಟ. ಶ್ರೀರಾಮನಿಗೆ 14 ವರ್ಷ ವನವಾಸ–ಎಂಬ ಬಿನ್ನಹ) **ಅವನಿಸುರ** = ಬ್ರಾಹ್ಮಣವರ್ಗ. (ಭೂಸುರರು), **ವಿಪಶ್ಚಿತರ** = ತಾಪಸಿಗಳಾದ ಬ್ರಹ್ಮಜ್ಞಾನಿಗಳ, **ಸವನತ್ರಯ** = ತ್ರಿಕಾಲ ಸಂಧ್ಯಾವಂದನೆ. **ಅಂತಕ ದುಷ್ಟ ದುರ್ದಾನವರ** = ಋಷಿ ಮುನಿಗಳ ಸತ್ಕರ್ಮಾಚರಣೆಗೆ ಪ್ರತಿಬಂಧಕರಾಗಿದ್ದ ದುರುಳರೂ ತಮೋಯೋಗ್ಯರೂ ಆದ ದೈತ್ಯರನ್ನು (ಇಲ್ಲಿ ದುಷ್ಟ ಮತ್ತು

ದುರ್ದಾನವ ಎಂಬ ಏಕಾರ್ಥಶಬ್ದಪ್ರಯೋಗವಿದೆ. ದುಷ್ಟ–ಎಂದರೆ, ದುರುಳರು. ದುರ್ದಾನವ–ಎಂದರೆ ಸ್ವರೂಪದಲ್ಲಿ ತಮೋಯೋಗ್ಯರಾದ ದೈತ್ಯರು), **ಭವಾಂಬುಧಿ** = ಸಂಸಾರವೆಂಬ ಸಾಗರಕ್ಕೆ, **ನವ ಸುಪೋತನನಾ** = ಹೊಸನಾವೆಯಂತಿರುವವನ (ಪೋತನ = ನಾವೆ)

**ದಶಶಿರನ** = ದಶಕಂಠನಾದ ರಾವಣನ, **ಬೆಸನಾಂತು** = ಆಜ್ಞೆಯನ್ನು ತಾಳಿ (ಬೆಸನ = ಅಪ್ಪಣೆ, ಆಜ್ಞೆ). **ದಾನವ** = ದೈತ್ಯನಾದ ಮಾರೀಚನು **ವಿಂಸುನಿಮೃಗವಾಗಿ ಎಸೆಯೆ** = ಬಂಗಾರದ ಜಿಂಕೆಯಾಗಿ. ಬಂದು ಸುಳಿಯಲು (ವಿಸುನಿ–ಚಿನ್ನ, ಮೃಗ–ಜಿಂಕೆ). **ಅಸುಹರಿಸಿ** = ಏಕಬಾಣದಿಂದ ಅವನನ್ನು ಕೊಂದು. **ಶ್ವಸನ** = ವಾಯುಪುತ್ರನಾದ ಹನುಮಂತ, **ಕುಶನ ತಂದೆ** = ಕುಶರಾಯನ ಪಿತನಾದ ಶ್ರೀರಾಮಚಂದ್ರಮೂರ್ತಿ.



## ೫೮೨

## ಶ್ರೀ ರಾಮಚರಿತಾಮೃತಸಾರ–ಅರ್ಥಾನುವೃತ್ತ
## (ನಕ್ಷತ್ರಮಾಲಿಕಾ ಸ್ತೋತ್ರ–ಲಾವಣಿಮಟ್ಟು)
## (ರಮಾಕಾಂತವಿಠಲಾಂಕಿತ)

ಮತ್ಸ್ಯಾದಿ ಮಾನವ ರೂಪದಿ–ಲೀಲೆಯ ತೋರಿದ ರಾಮನ–ಚರಿತ್ರೆ ಇದೂ
ಸತ್ಯ ಧರ್ಮಗಳ ಹಿಡಿದ–ಪುರುಷೋತ್ತಮ ಹರಿ–ಅವತಾರವಿದು ॥ ॥೧॥

ರಕ್ಕಸರೆಲ್ಲರ ಸವರುತ–ಸುಜನರೊಳಕ್ಕರೆ ಮಾಳ್ಪುದೆ–ಮುಖ್ಯ ಗುರಿ
ಸಿಕ್ಕದೆ ಮೋಹಕೆ-ತಕ್ಕ ಮನದಿ ಪರಮಾರ್ಥ ತಿಳಿಯೆ–ಪಾರಾಗುವಿರಿ ॥೨॥

ಜನನದೂರ–ತಾ ಜನಿಸಿದ ಜಗದೊಳು–ಇನ ಕುಲವಂಶೋದ್ಧಾರಕನು
ಜನನಿ ಜನಕ–ಕೌಸಲ್ಯಾ ದಶರಥರೀರ್ವರ–ಮನದಿಷ್ಟ ಸಲಿಸಿದನು ॥ ॥೩॥

ಅವಿಯೋಗಿನಿ ಸಿರಿ–ದಿವಿಜರ ಸಹಿತದಿ–ಅವನಿಯೊಳಿದಳು ಸಂಭ್ರಮದಿ
ಭುವನಾಧಿಪ ಶ್ರೀರಾಮನ ಸೇವಿಸಿ–ಕಾಯುತ ನಿಂದಳು ಕಾತುರದಿ ॥
॥೪॥

ಪತಿಗನುವಾಗಲು –ಶ್ರೀಸತಿ ಬೆಳೆದಳು–ಮಿಥಿಲಾಪುರದಲಿ ಸಂತಸದಿ
ರತಿಪತಿ ರಿಪು–ಧನು ಪಣವಾಗಿಸಿದರು–ಕ್ಷಿತಿಜೆಯ ಮದುವೆಗೆ ಅತಿಶಯದಿ ॥
॥೫॥

ಇನಕುಲತಿಲಕನು–ಅನುಜನ್ನ ಕೂಡುತ– ಮುನಿಯಾಗವ ಸಂರಕ್ಷಿಸುತಾ
ವನಿತೆ ಅಹಲ್ಯೆಯ– ಸಲಹುತ–ಬಂದನು ಜನಕರಾಜನಲಿ ಮುನಿ
ಸಹಿತ ॥ ॥೬॥

ಹರಸುರ ಪಾಲಕ–ತೃಣಕಾಷ್ಟದಪರಿ– ಮುರಿದನು ಶಿವಧನು ಸುಲಭದೊಳು
ಸುರತತಿ–ಪುಷ್ಪವೃಷ್ಟಿಯ ಕರೆದರು– ಧರೆಸುತೆ ರಾಮನ ವರಿಸಿದಳು ॥ ॥೭

ಕೊಟ್ಟ ಮಾತಿನೊಳಗಿಟ್ಟ–ನಿಷ್ಠೆಯನು ಕಷ್ಟದಿ–ಹೇಳಿದ ದಶರಥನಾ
ಇಷ್ಟ ಸಲಿಸಿ–ಪಷ್ಟಷ್ಟ ವರುಷ– ಶ್ರೀರಾಮನು ಬಿಟ್ಟನು ರಾಜ್ಯವಾ ॥
॥೮॥

ನಾರಾಯಣನವತಾರ–ಕಾರ್ಯಕ್ಕಿದು– ಪೂರಕವಾಗಲು ರಾಜ್ಯವನೂ
ಧಾರೆಯನೆರೆಯುತ–ಭರತಗೆ ಸೀತಾಲಕ್ಷ್ಮಣ ಸಮೇತ–ತೆರಳಿದನು ॥ ॥೯॥

ಕಾಯಜನಂಬಿಗೆ–ನೋಯುತ ದಶಶಿರ– ಮಾಯಾಮೃಗವನು
ಕಳುಹಲ
ತೋಯಜಾಕ್ಷಿ–ಅನ್ಯಾಯದ ಛಾಯದಿ– ಕಾಯುತ ವನದೊಳು
ಕುಳಿತಿರಲು ॥ ॥೧೦॥

ದನುಜಾಗ್ರಣಿ–ರಾವಣ ಬಂದನು– ಕಾನನದೊಳಗಿರೆ ವೇಷಾಂತರ
ಕ್ಷಣದಲಿ ವೈದು–ಸೀತಾಕೃತಿ–ಲಲನೆಯು ಇರಿಸಿದ–ಲಂಕೆಯ ಅನುನಯದೀ ॥
॥೧೧॥

ಅರಸಿಯ ಕಾಣದೆ–ಪರಿತಪಿಸುತ್ತಲೆ– ಪುರ ಕಿಷ್ಕಿಂಧ ಪ್ರವೇಶಿಸಿದಾ
ಸ್ಮರಮಣಗುಂಟೆ ಈವಿರಹತಾಪವು– ನರನಟನೆಯು ತಾ ತೋರಿಸಿದಾ॥
॥೧೨॥

ಮನದಲಿ ಘನ–ಚಿಂತೆಯನು ತಳೆಯುತ– ಕನಲಿಕೆ ಕಪಿವರರಲಿ ಇಟ್ಟು
ವನಚರ ವಾಲಿಯ-ಹನನವ ಗೈಯುತ–ಇನತನುಜ ಗೈಅಭಯವಕೊಟ್ಟು॥
॥೧೩॥

ಅಗ್ರಜ ವಾನರ–ಅಗ್ನಿಸಖಿಜ ಪೂರ್ಣಪ್ರಜ್ಞ–ಹನುಮಂತನ ಕೂಡಿ
ಅಜ್ಞರತೆರ–ಸರ್ವಜ್ಞಶಿಖಾಮಣಿ– ಸುಗ್ರೀವನ ಸಖ್ಯವ ಬೇಡಿ ॥
॥೧೪॥

ಇಂಗಿತಜ್ಞ-ಕಪಿಪುಂಗವ ಹನುಮ ಶುಭಾಂಗ ಶ್ರೀರಾಮನ ವಾರ್ತೆಯನು
ಅಂಗನೆ ಸೀತೆಗೆ–ತಿಳುಹಲು ಶರಧಿಯ– ಲಂಘಿಸಿ ಲಂಕೆಯ ಸಾರಿದನು ॥
॥೧೫॥

ಮಂಗಳೆ ಮೈಥಿಲಿ–ಗುಂಗುರವೀಯುತ–ಶೃಂಗಾರದ ಮುದ್ರಿಕೆ ತಂದ
ಹಿಂಗದೆ ರಿಪುವನ–ಭಂಗವಗೈಸುತ–ಲಂಕೆಯದಹಿಸಿ ಶೌರ್ಯದಿ ಬಂದಾ
॥೧೬॥

ಹರುಷದಿ ರಘುವರ–ಸಂಘ್ರಿಗೆನಮಿಸುತ–ಗುರುತಿನ ಮುದ್ರಿಕೆಯನೆ ಇತ್ತು
ಪರಮಾಲಿಂಗನ–ಸೌಖ್ಯವ ಸುರಿಸುತ– ಹರಸಿದ ರಾಮನು ಮುದವಿತ್ತು ॥
॥೧೭॥

ವರಧಿಗೆ ಸೇತುವೆ–ವಿರಚಿಸಿ ಕಪಿಗಳ–ನೆರಹುತ ಸೈನ್ಯವ ಸೇರಿಸುತಾ
ಮರುಳ ರಾವಣನ-ಪುರವನ್ನೇ ಪೊಗುತಲಿ–ಸಮರವ ರಣದಲಿ
ಹೂಡುತಲೀ ॥ ॥೧೮॥

ಸೃಷ್ಟಿ ಸ್ಥಿತಿ ಲಯ–ದೃಷ್ಟಿಮಾತ್ರದಲಿ–ಕಟ್ಟಳೆ ಮಾಡುವ ಶ್ರೀಹರಿಯು
ದುಷ್ಟ ರಾವಣನ-ಸಂಹಾರ ಮಾಡಿದಕೆ– ಇಷ್ಟನು ಹರಹಿದ ಹೊಸ ಪರಿಯು॥
॥೧೯॥

ನವರುತ ಅಸುರರ-ಅವನಿಯ ಭಾರವ–ತದೇಕದಿ ಇಳುಹಿದ ನಿಸ್ಸೀಮಾ
ಅವನಿಜೆ ಸೀತೆಯ–ಹವಣದಿ ಕೂಡಿದ– ಪವನ ಸಂಸೇವಿತ ಶ್ರೀರಾಮ ॥
॥೨೦॥

ಭಕ್ತ ವಿಭೀಷಣಗಿತ್ತು–ರಾಜ್ಯವನು–ಸುತ್ತ ನೆರೆದ ಪರಿವಾರವನು
ಹತ್ತಿಸಿ ಪುಷ್ಪಕ–ಸದ್ಭಕ್ತರ ಸಹಿತ–ಮತ್ತೆ ಅಯೋಧ್ಯೆಗೆ ಮರಳಿದನು ॥
॥೨೧॥

ಆರಳು ಮುತ್ತಾಕ್ಷತೆ-ವರಪುಷ್ಪದ ಮಳೆ-ಕರೆದರು ಪುರಜನ ಸಂತಸದೀ
ಭರತನು ರಾಮರ-ಚರಣಕ್ಕೆ ಎರಗಿದ–ರಾಜ್ಯವನೊಪ್ಪಿಸೀ ಕಡು
ಮುದದೀ ॥ ॥೨೨॥

ಸೀತಾ ಲಕ್ಷ್ಮಣ-ಭರತ ಶತ್ರುಘ್ನ ಸ–ಮೇತದಿ ಶ್ರೀ ರಘುನಾಥನಲೀ
ವಾತಾತ್ಮಜ ಮುನಿಪ್ರೋತ್ತಮರೆಲ್ಲರು– ಸ್ತೋತ್ರವಗೈದರು ಭಕ್ತಿಯಲೀ ॥
॥೨೩॥

ರಾಮಚರಿತೆ–ಸುಕ್ಷೇಮ ಕೊಡಲಿ ಇದು– ಯಾಮ ಯಾಮದಲಿ
ಪರಿಪರಿಗೆ
ಕಾಮಾರಿಯ–ಹೃದ್ಧಾಮದಿ ನೆಲೆಸಿಹ–ರಾಮನು ಕೃಪೆಗೈಯಲಿ
ನಮಗೇ ॥ ॥೨೪॥

ದುರುಳ ದೈತ್ಯರನು ಮುರುಳುಮಾಳ್ಪುದಕೆ–ತೋರಿದ ಹರಿ ನರಲೀಲೆಯನು
ಅರಿಯಲು ಸಪ್ತುಜ್ಞಾನದಿ ಹರಿಯನು–ಸಿರಿವರ ರಾಮನು
ಪೊರೆಯುವನು ॥ ॥೨೫॥

ಹನುಮತ್ಸೇವಿತ ಇನಕುಲ ತಿಲಕಗೆ–ಮುನಿವಂದ್ಯಗೆ ಪಾಡುವೆ
ಮಂಗಳ
ಪ್ರಣತರ ಪಾಲಿಪ ಗುಣಗಣನಿಲಯಗೆ–ವಿನಯದಿ ಕೋರುವೆ
ಶುಭಮಂಗಳಾ ॥ ॥೨೬॥

ಆಂತರಾತ್ಮ **ರಮಾಕಾಂತವಿಠಲನ**–ಚಿಂತನೆಗೊದಗುವ ಚರಿತೆ ಇದೂ
ಸಂತಸವೀಯಲಿ ಸಂತ ಸುಜನರಿಗೆ–ಸಂತತ ಸಂತಾಪವ ಕಳೆದೂ॥ ॥೨೭॥

**ಅರ್ಥವಿವರಣೆ :–**

ಈ ಕೀರ್ತನೆಯ ಕರ್ತೃಗಳಾದ ಶ್ರೀರಮಾಕಾಂತವಿಠಲಾಂಕಿತ ದಾಸ ವರ್ಯರು ಶ್ರೀಮದ್ರಾಮಾಯಣದ ಸಮಗ್ರ ಕಥಾನಕವನ್ನು ೨೭ ನುಡಿಗಳಲ್ಲಿ ಸಮಗ್ರವಾಗಿ ನಿರೂಪಿಸಿರುತ್ತಾರೆ.

**ಮರ್ತ್ಯದಿ** = ಭೂಲೋಕದಲ್ಲಿ, **ಇನಕುಲ** = ಸೂರ್ಯವಂಶ ಶ್ರೀರಾಮನು ಸೂರ್ಯವಂಶದಲ್ಲಿ ಅವತರಿಸಿದನು (ಇಕ್ಷ್ವಾಕುಕುಲ), **ಅವಿಯೋಗಿನಿ** = ಎಂದೆಂದೂ ಶ್ರೀಹರಿಯಿಂದ ಶ್ರೀಲಕ್ಷ್ಮಿಗೆ ವಿಯೋಗವಿಲ್ಲ. **ಅವನಿಯೊಳು ಇಳಿದಳು** = ಭೂಮಿಯಲ್ಲಿ ಅವತರಿಸಿದಳು. **ರತಿಪತಿ ರಿಪು** = ಮನ್ಮಥನನ್ನು ತನ್ನ ಫಾಲನೇತ್ರಾಗ್ನಿಯಿಂದ ದಹಿಸಿದ ಮಹರುದ್ರ ದೇವರು. **ಧನುಪಣವಾಗಿಸಿದರು** = ಶೈವಧನುಸ್ಸನ್ನು ಜನಕಮಹಾ ರಾಜನು ಸೀತಾಸ್ವಯಂವರದಲ್ಲಿ ಪಣವಾಗಿ ಇಟ್ಟನು **ಕ್ಷಿತಿಜೆಗೆ** = ಭೂಪುತ್ರಿಯಾದ ಸೀತೆಗೆ, **ಮುನಿಯಾಗವ** = ವಿಶ್ವಾಮಿತ್ರರ ಯಜ್ಞವನ್ನು. **ತೃಣಕಾಷ್ಟದ ಪರಿ** = ಹುಲ್ಲುಕಡ್ಡಿಯಂತೆ ಲೀಲಾಜಾಲವಾಗಿ ಮುರಿದನು.

**ಸುರತತಿ**=ದೇವತಾಸಮೂಹ **ಷಷ್ಟಷ್ಟ ವರುಷ** = ಷಷ್ಠ+ಅಷ್ಟ= 6+8=14ವರ್ಷ ವನವಾಸ, **ಕಾಯಜನ ಅಂಬಿಗೆ**=ಮನ್ಮಥನ ಬಾಣಕ್ಕೆ ಅಂದರೆ, ಕಾಮವಶನಾದ ರಾವಣನು, **ಮಾಯಾಮೃಗವನು**=ಭಂಗಾರದ ಜಿಂಕೆಯ ವೇಷದಲ್ಲಿ ಮಾರೀಚ ಬಂದ ಪ್ರಸಂಗ, **ತೋಯಜಾಕ್ಷಿ**= ಕಮಲದಳದಂತೆ ವಿಸ್ತಾರವಾದ ಕಣ್ಣುಳ್ಳ ಸೀತೆ (ತೋಯಜ=ನೀರಿನಲ್ಲಿ ಹುಟ್ಟಿದ ಕಮಲ), **ದನುಜಾಗ್ರಣಿ** = ರಾಕ್ಷಸಾಗ್ರೇಸರನಾದ ರಾವಣನು, **ಸೀತಾಕೃತಿ ಲಲನೆಯ**=ರಾವಣನು ಅಪಹರಿಸಿದ್ದು ಸೀತಾಪ್ರತೀಕ ಮಾತ್ರ **ಸ್ವರಮಣ** = ತನ್ನ ಭಗವದ್ರೂಪಗಳಲ್ಲಿಯೇ ಕ್ರೀಡಿಸುವ ಶ್ರೀಹರಿ. **ಕನಲಿಕೆ** = ಮನಸ್ಸಿನ ಆತಂಕ. **ವನಚರ** = ಕಪಿ. **ಇನತನುಜಗೆ** = ಸೂರ್ಯಪುತ್ರನಾದ ಸುಗ್ರೀವನಿಗೆ, **ಅಗ್ನಿಸಖಜ** = ಅಗ್ನಿಮಿತ್ರನಾದ ವಾಯುವಿನ ಪುತ್ರ ಮಾರುತಿ. **ಮೈಥಿಲಿ** = ಮಿಥಿಲಾಪುರದರಸನಾದ ಜನಕರಾಜನ ಪುತ್ರಿ ಸೀತೆ. **ಕಟ್ಟಳೆ** = ನಿಯಮನ **ಅವನಿಜೆ** = ಭೂಪುತ್ರಿಯಾದ ಸೀತೆ. **ಹವಣದಿ** = ಅಗ್ನಿಪ್ರವೇಶದ್ವಾರಾ (ಹವಿಸ್ಸು) **ಪವನ ಸಂಸೇವಿತ** = ವಾಯುದೇವರಿಂದ ಸಂಸೇವ್ಯನಾದ ಶ್ರೀರಾಮಚಂದ್ರ **ವಾತಾತ್ಮಜ**= ವಾಯುಪುತ್ರನಾದ ಶ್ರೀ ಹನುಮಂತ. **ಮುನಿಪೋತ್ತಮರೆಲ್ಲರೂ**=ಮುನಿಶ್ರೇಷ್ಠರೆಲ್ಲಾ (ಮುನಿಪ+ಉತ್ತಮ), **ಕಾಮಾರಿಯು** =ಮನ್ಮಥನನ್ನು ದಹಿಸಿದ ಶ್ರೀರುದ್ರದೇವರು. **ಹೃದ್ಧಾಮದಿ**=ಮಹರುದ್ರದೇವರು ನಿರಂತರದಲ್ಲಿ ತಮ್ಮ ಹೃನ್ಮನಸ್ಸಿನಲ್ಲಿ ಶ್ರೀರಾಮತಾರಕ ಮಂತ್ರವನ್ನು ಜಪಿಸುತ್ತಿರುವರು **ಮರುಳು**=ದೈತ್ಯರ ಮೋಹನಾರ್ಥವಾಗಿ, **ನರಲೀಲೆಯನು**=ಮಾನವರಂತೆ ನಟನೆ, **ಸಮ್ಯಜ್ಞಾನದಿ**=ಸಮೀಚೀನವಾದ ಜ್ಞಾನದಿಂದ **ಪ್ರಣತರ**=ಶರಣಾಗತರಾದವರನ್ನು **ಗುಣಗಣನಿಲಯಗೆ** = ಅನಂತಕಲ್ಯಾಣಗುಣಗಣಧಾಮನಿಗೆ, **ಚಿಂತನೆಗೆ ಒದಗುವ**= ಉಪಾಸನೆಗೆ ವಿಷಯವು ಶ್ರೀರಾಮ ಚರಿತ್ರೆ, **ಸಂತಾಪವ**=ಮನಸ್ಸಿನ ದುಗುಡವನ್ನು.



## ೫೮೩

## (ಗುರುಗೋವಿಂದ ವಿಠ್ಠಲಾಂಕಿತ)

## (ದರ್ಭಶಯನ ಶ್ರೀರಾಮದೇವರ ಸ್ತೋತ್ರಪದ)

**ರಾಗ–ಯದುಕುಲಕಾಂಬೋದಿ** **ಆದಿತಾಳ**

ಪಂಕಜಾಕ್ಷ ಮನಪಂಕ ಕಳೆಯೋ ಎನ್ನ–ಕರುಣಾರಸಪೂರ್ಣ ||
ಲಂಕೇಶನನುಜಗೊಲಿದ ಹರಿಯೇ–ಆಶ್ರಿತರಿಗೆ ಧೊರೆಯೇ || ||ಅ||

ನವಗ್ರಹ ಪೂಜೆಗಳೊಪ್ಪಿತೇನೋ ನಿನಗೇ–ಸರ್ವಾಧಾರಕಗೇ
ತವಚರಣಾಬ್ಜಸ್ತವನ ಮಾಳ್ಪ ನರನೂ–ಭವವಿಮುಕ್ತನಹನೂ ||
ಕವಿಜನನುತ ಸತ್ಪ್ರವರ ನಿನ್ನಲೀಲಾ–ಲೋಕಶಿಕ್ಷಗನುಕೂಲ
ತವಕದಿ ಗೈದೆ ವಿವಿಧ ಪೂಜೆಗಳನ್ನು–ನವಪಾಷಾಣಗಳನ್ನು || ||೧||

ಸರ್ಪಶಯನ ಪರಿವಾರದೊಡನೆ ಬಂದೂ–ಶರಧಿತೀರದಿ ನಿಂದೂ
ಅಪ್ಪಣೆ ನಡೆಸದ ಸಿಂಧುಪತಿಯ ನೋಡೀ–ದರ್ಭಶಯನ ಮಾಡೀ ||
ಕಪ್ಪಗೊರಳಸಖ ಕುಪಿತನಾಗೆ ನೀನೂ–ಬೆದರಿ ಬಿನ್ನವಿಸಿದನೂ
ಒಪ್ಪಿ ಬಂಧಿಸಿದೇ ಸೇತುವೆಯನ್ನು–ಭಕ್ತರಿಗೆ ಪ್ರಸನ್ನಾ || ||೨||

ಘಾತಿಸುತಲಿ ಬಲು ಯಾತಧಾನರನ್ನಾ–ರಾವಣಾದಿಗಳನಾ
ಸೀತೆಯೊಡವೆರಸಿ ತೆರಳಿ ನೀನೂ–ಸಲಹಿದೆ ಅನುಜನನೂ ||
ಸೇತುಬಂಧ ಸಿರಿಮಾಧವ ಶ್ರೀನಲ್ಲಾ–**ಗುರುಗೋವಿಂದವಿಠ್ಠಲಾ**
ಮಾತು ಮಾತಿಗೆ ಕೊಡು ತವಲೀಲಾ–ಉಚ್ಚರಿಸುವೆ ಸೊಲ್ಲಾ || ||೩||

**ಅರ್ಥವಿವರಣೆ:–**

ಶ್ರೀ ಗುರುಗೋವಿಂದವಿಠ್ಠಲಾಂಕಿತ ದಾಸವರ್ಯರು ದಕ್ಷಿಣಭಾರತ ಯಾತ್ರೆಯನ್ನು ಕೈಗೊಂಡಾಗ, ದರ್ಭಶಯನಕ್ಕೆ ಆಗಮಿಸಿದ್ದಾರೆ. ಅಲ್ಲಿ

ದರ್ಭಶಯನನಾದ ಶ್ರೀರಾಮದೇವರ ಸಂದರ್ಶನ ಭಾಗ್ಯವಡೆದು, ಭಕ್ತ್ಯಾತಿಶಯದಿಂದ ರಚಿಸಿದ ಕೀರ್ತನೆ ಇದು.

**ಮನಪಂಕ** = ಮನಸ್ಸಿನ ಕೆಸರು (ಮನಸ್ಸಿನ ದೋಷಗಳು), **ಲಂಕೇಶನನುಜಗೆ** = ಲಂಕಾಧಿಪತಿ ರಾವಣನ ತಮ್ಮ ವಿಭೀಷಣನಿಗೆ ಒಲಿದು, ಅವನಿಗೆ ಲಂಕಾಪಟ್ಟಣದ ಪಟ್ಟಾಭಿಷೇಕಮಾಡಿದ ಪ್ರಸಂಗವಿಶೇಷ. **ನವಗ್ರಹಗಳ ಪೂಜೆ** = ದರ್ಭಶಯನದಲ್ಲಿ ಶ್ರೀರಾಮನು ನವಗ್ರಹಗಳಿಂದ ಪೂಜಿತನಾಗಿದ್ದಾನೆ. **ತವಚರಣಾಬ್ಜ ಸ್ತವನ** = ನಿನ್ನ ಪಾದಾರವಿಂದಗಳ ಸ್ತೋತ್ರ. **ಕವಿಜನನುತ** = ಜ್ಞಾನಿಗಳಿಂದ ಸಂಸ್ತೂಯಮಾನನು. **ಸತ್ಪ್ರವರ** = ಸಮೀಚೀನವಾದ ಲೀಲಾ ವೈಭವ ಮೂರ್ತಿ. **ನವಪಾಷಾಣಗಳನ್ನು** = ದರ್ಭಶಯನದಲ್ಲಿ ಶ್ರೀರಾಮಚಂದ್ರನು ನವಪಾಷಾಣಗಳ ಪೂಜೆ ಮಾಡಿದ್ದಾನೆ. **ಶರಧಿತೀರದಿ** = ದಕ್ಷಿಣಸಮುದ್ರದ ದಂಡೆ, **ಅಪ್ಪಣೆ ನಡೆಸದ ಸಿಂಧುಪತಿಯು ನೋಡಿ** = ಸೇತುವೆಯನ್ನು ಕಟ್ಟಲು ಶ್ರೀರಾಮನು ಸಾಗರಾಧಿಪತಿ ವರುಣನಿಗೆ ತಿಳಿಸಲು, ಅವನು ಮಾರ್ಗಬಿಡದಿದ್ದ ಪ್ರಸಂಗದಲ್ಲಿ, ಕೋಪಗೊಂಡ ಶ್ರೀರಾಮ ಕೋದಂಡದೀಕ್ಷಾಚಾರ್ಯನಾಗಿ, ಸಮುದ್ರವನ್ನೇ ಒಣಗಿಸಿಬಿಡುತ್ತೇನೆಂದು ಬಾಣವನ್ನು ಹೂಡಿದಾಗ, ವರುಣನು ಭಯದಿಂದ ಕಂಪಿಸುತ್ತಾ ಬಂದು, ಶರಣಾಗತನಾದ. **ದರ್ಭಶಯನ ಮಾಡೀ** = ಆಗ ಶ್ರೀರಾಮನು ದರ್ಭೆಗಳ ಹಾಸಿಗೆ ಹಾಕಿಕೊಂಡು ಮಲಗಿದನು. **ಕಪ್ಪುಗೊರಳಸಖ** = ವಿಷಕಂಠನಾದ ಶ್ರೀರುದ್ರನ ಮಿತ್ರನಾದ ಶ್ರೀ ರಾಮದೇವರು. **ಯಾತುಧಾನರನ್ನು** = ದೈತ್ಯವೃಂದವನ್ನು, **ಸಲಹಿದೆ ಅನುಜನನೂ** = ಶ್ರೀರಾಮನ ಆಗಮನವನ್ನೇ ನಿರೀಕ್ಷಿಸುತ್ತಾ, ನಂದಿಗ್ರಾಮದಲ್ಲಿದ್ದ ತಮ್ಮನಾದ ಭರತನನ್ನು ಸಂತೈಸಿ, **ಸೇತುಬಂಧ** = ಸೇತುವೆಯನ್ನು ಕಟ್ಟಿದ, **ಸೊಲ್ಲಾ** = ಸ್ತೋತ್ರರೂಪವಾದ ಮಾತುಗಳು.



೫೮೪

## ॥ಶ್ರೀರಾಮ ದ್ವಾದಶನಾಮಸ್ತೋತ್ರಮ್॥

ಪ್ರಥಮಂ ಶ್ರೀಕರಂ ವಿದ್ಯಾತ್ ದ್ವಿತೀಯಂ ದಾಶರಥ್ಯಕಮ್॥
ತೃತೀಯಂ ರಾಮಚಂದ್ರಂ ಚ ಚತುರ್ಥಂ ರಾವಣಾಂತಕಮ್॥ ॥೧॥

ಪಂಚಮಂ ಲೋಕಪೂಜ್ಯಂ ಚ ಷಷ್ಟಕಂ ಜಾನಕೀಪ್ರಿಯಮ್ ॥
ಸಪ್ತಮಂ ವಾಸುದೇವಂ ಚ ರಾಘವೇಂದ್ರಂ ತಥಾಷ್ಟಮಮ್ ॥೨॥

ನವಮಂ ಪುಂಡರೀಕಾಕ್ಷಂ ದಶಮಂ ಲಕ್ಷ್ಮಣಾಗ್ರಜಮ್ ॥
ಏಕಾದಶಂ ಚ ಗೋವಿಂದಂ ದ್ವಾದಶಂ ಸೇತುಬಂಧನಂ ॥ ॥೩॥

ಏತದ್ದ್ವಾದಶನಾಮಾನಿ ತ್ರಿಕಾಲೇ ಯಃಪಠೇನ್ನರಃ
ದಾರಿದ್ರ್ಯದೋಷ ನಿರ್ಮುಕ್ತೋ ಧನಧಾನ್ಯ ಸಮೃದ್ಧಿಮಾನ್ ॥೪॥

ಜನವಶ್ಯಂ ರಾಜವಶ್ಯಂ ಸರ್ವಕಾರ್ಯಫಲಂ ಲಭೇತ್ ॥
ಅರ್ಧರಾತ್ರೇ ಜಪೇನ್ನಿತ್ಯಂ ಸರ್ವದುಃಖವಿನಾಶವಾನ್ ॥೫॥

॥ಇತಿ ಶ್ರೀಬ್ರಹ್ಮಾಂಡಪುರಾಣೇ ಬ್ರಹ್ಮನಾರದಸಂವಾದೇ ಶ್ರೀರಾಮದ್ವಾದಶನಾಮ ಸ್ತೋತ್ರಮ್॥

೫೮೫

## ॥ಶ್ರೀರಾಮ ಪಂಚಕಮ್॥

ಪ್ರಾತಃಸ್ಮರಾಮಿ ರಘುನಾಥ ಪಾದಾರವಿಂದಂ॥
ಮಂದಸ್ಮಿತಂ ಮಧುರಭಾಷವಿಶಾಲಫಲಮ್॥
ಕರ್ಣಾವಲಂಬೀ ಚಲಕುಂಡಲಲೋಲ ಗಂಡಂ॥
ಕರ್ಣಾಂತ ದೀರ್ಘನಯನಂ ನಯನಾಭಿರಾಮಮ್ ॥ ॥೧॥

ಪ್ರಾಥರ್ಭಜಾಮಿ ರಘುನಾಥ ಪಾದಾರವಿಂದಂ॥
ರಕ್ಷೋಗಣಾಯ ಭಯದಂ ವರದಂ ದ್ವಿಜೇಭ್ಯಃ॥
ಯದ್ರಾಜ್ಯಸಂಸದಿ ವಿಭಜ್ಯ ಮಹೇಶಚಾಪಂ॥
ಸೀತಾಕರಗ್ರಹಣ ಮಂಡಲಮಾಪ ಸದ್ಯಃ ॥ ॥೨॥

ಪ್ರಾತರ್ನಮಾಮಿ ರಘುನಾಥ ಪಾದಾರವಿಂದಂ॥
ವಜ್ರಾಂಕುಶಾದಿ ಶುಭರೇಖಿ ಧ್ವಜಾವಹಂ ಮೇ॥
ಯೋಗೀಂದ್ರ ಮಾನಸ ಮಧುವ್ರತ ಸೇವ್ಯಮಾನಂ।
ಶಾಪಾಪಹಂ ಸಪದಿ ಗೌತಮಧರ್ಮಪತ್ನ್ಯಾಃ ॥ ॥೩॥

ಪ್ರಾತಃಶ್ರಯೇ ಶ್ರುತಿನುತಾಂ ರಘುನಾಥ ಕೀರ್ತಿಂ॥
ನೀಲಾಂಬುದೋತ್ಪಲಸಿತೇತರ ರತ್ನನೀಲಾಮ್॥
ಆಮುಕ್ತ ಮೌಲಿಕವಿಭೂಷಣ ಭೂಷಣಾಡ್ಯಾಂ॥
ಧ್ಯೇಯಾಂ ಸಮಸ್ತಮುನಿಭಿರ್ಜನಮೃತ್ಯುಹಂತ್ರೀಮ್ ॥ ॥೪॥

ಪ್ರಾಥರ್ವದಾಮಿ ವಚಸಾ ರಘುನಾಥ ನಾಮ।
ವಾಗ್ದೋಷಹಾರಿ ಸಕಲಂ ಶಮಲಂ ನಿಹಂತಿ॥
ಯೋ ಪಾರ್ವತೀ ಸ್ವಪತಿನಾ ಸಹಭೋಕ್ತುಕಾಮಾ॥
ಪ್ರೀತ್ಯಾ ಸಹಸ್ರಹರಿನಾಮಸಮಂ ಜಜಾಪ ॥ ॥೫॥

ಯಃ ಶ್ಲೋಕಪಂಚಕಮಿದಂ ನಿಯತಂ ಪಠೇದ್ಯಃ॥
ಪ್ರಾತಃ ಪ್ರಭಾತಸಮಯೇ ಪುರುಷಃ ಪ್ರಬುದ್ಧಃ॥
ಶ್ರೀರಾಮಕಿಂಕರ ಜನೇಷು ಏವ ಮುಖ್ಯೋ॥
ಭೂತ್ವಾ ಪ್ರಯಾತಿ ಹರಿಲೋಕಮನನ್ಯಲಭ್ಯಮ್ ॥ ॥೬॥

**ವಾದಿರಾಜಯತಿ ಪ್ರೋಕ್ತಂ ಪಂಚಕಂ ಜಾನಕೀಪತೇಃ॥**
ಶ್ರವಣಾತ್ ಸರ್ವಪಾಪಘ್ನಂ ಪರಮುಕ್ತಿದಾಯಕಂ ॥

**॥ಇತಿ ಶ್ರೀ ವಾದಿರಾಜಯತಿ ವಿರಚಿತಂ ಶ್ರೀ ರಾಮಪಂಚಕಂ॥**

೫೮೭

## ||ಶ್ರೀರಾಮ ಪ್ರಭಾತ ಪಂಚಕಮ್||

ಪ್ರಾತಃ ಸ್ಮರಾಮಿ ರಘುರಾಮಮನೇಕ ರಕ್ಷೋ॥
ಭೀತ ಸ್ವಭಕ್ತ ಜನತಾ ಪರಿಪಾಲನಾಯ॥
ಜಾತಂ ಸ್ವತೋ ದಶರಥಾದಿತಿ ಕೈತವೇನ||
ನೀತಿ ಪ್ರಕಾಶಿತ ಮಹಾಮುನಿ ಶಿಷ್ಯಭಾವಮ್॥ ॥೧॥

ಪ್ರಾತರ್ಭಜಾಮಿ ಗುರುಸತ್ರವಿರೋಧಿ ರಕ್ಷೋ ॥
ಜಾತಂ ನಿಹತ್ಯ ಕಲಯನ್ ವಿಮಲಾನುಹಲ್ಯಾಮ್॥
ಯಾತಾಂ ಸತೀಸರಣಿಮೀಶಧನುಶ್ಚ ಭಂಕ್ತ್ವಾ ॥
ಸೀತಾಮವಾಪ್ಯ ಪಥಿ ದರ್ಶಿತ ಭಾರ್ಗವೈಕ್ಯಮ್ ॥ ॥೨॥

ಪ್ರಾತರ್ನಮಾಮಿ ಪುರಮಾಪ್ಯ ಪಿತುರ್ನಿದೇಶಾತ್
ಭ್ರಾತುಃ ಪ್ರದಾಯ ನಿಜರಾಜ್ಯಮರಣ್ಯಮೇತ್ಯ ॥
ಸೀತಾಂಸ್ಥಿತಾಮಪಿ ಹೃತೇತಿ ಚರನ್ ತದಾಪ್ತ್ಯೈ ।
ವಾತಾತ್ಮಜೋಕ್ತಿ ಸಚಿವೀಕೃತ ಸೂರ್ಯಸೂನುಮ್ ॥ ॥೩॥

ಪ್ರಾತರ್ನಿರಂತರಮಹಂ ಮನಸಾsರ್ಚಯಾಮಿ ॥
ಸೀತಾಸ್ಥಿತಿಂ ದಶಮುಖಸ್ಯವನೇ ವಿದಿತ್ವಾ॥
ಜ್ಞಾತ್ವಾ ಚ ಲೌಕಿಕ ಪದಾಪ್ತಮರುತ್ಸುತೇನ॥
ಸೇತುಂ ನಿಬಧ್ಯ ಜಲಧೌ ಹತರಾವಣಾದಿಮ್ ॥ ॥೪॥

ಪ್ರಾತಃಸ್ತುವೀಮಿ ದಶಕಂಧರ ರಾಜ್ಯಮಸ್ಯ॥
ಭ್ರಾತುಃ ಪ್ರದಾಯ ದಹನೇ ವಿನಿವಾತ್ಯ ಯಾತಾಮ್॥

ಸೀತಾಂ ಪ್ರಗೃಹ್ಯ ಭರತಾರ್ಪಿತ ಸರ್ವರಾಜ್ಯಂ ||
ಪಾತಾರಮಾತ್ಮ ಶರಣಾಮರಧೇನು ರತ್ನಮ್ ||೫||

ಶ್ರೀಮಧ್ವಸುಜನೇಂದ್ರೈಃ ತನ್ಮಧ್ಯಸ್ಥ ಗುರುಹೃದ್ಗತಃ।
ರಾಮಃ ಪ್ರೀತೋಽಸ್ತು ವಾಗ್ರತ್ನೈಃ ಕರ್ಮಂದಿವಿಭವೋ
ಚಿತ್ರೈಃ ||೬||

ಸುಜನೇಂದ್ರಕರಾಜ್ಜೋತ ಸುಜ್ಞಾನೇಂದ್ರಯತೀರಿತಮ್ ||
ಪ್ರಭಾತ ಪಂಚಕಂ ನಿತ್ಯಂ ಪಠನ್ ರಾಮಪ್ರಿಯೋ ಭವೇತ್ || ||೭||

||ಇತಿಶ್ರೀ ಸುಜ್ಞಾನೇಂದ್ರಯತಿಕೃತ ಶ್ರೀರಾಮಪ್ರಭಾತ ಪಂಚಕಮ್||



೫೮೭

## ||ಶ್ರೀರಾಮಸ್ತೋತ್ರಂ||

ಪದ ರಸನೇ ಸತತಮ್ ||ಪ||

ದಶರಥನಂದನ ರಾಮೇತಿ–ಶ್ರೀರಾಮೇತಿ ||ಅ||

ಜನಕಸುತಾನನವಾರಿಜವಿಕಸನ
ಕಾರಣ ದಿನಮಣಿಕಿರಣೇತಿ – ಜಯ ಕಿರಣೇತಿ ||೧||

ಪವನಜ ಕಪಿಕುಲತಿಲಕ ಕರಾಂಬುಜ
ಪೂಜಿತ ಮೃದುಪದ ಕಮಲೇತಿ –ಗುಣ ವಿಮಲೇತಿ ||೨||

ವಾಸವ ಮೋದಿತ ಮುನಿವರಲಲನಾ
ವೃಜಿನ ವಿಧೂನನ ನಾಥೇತಿ – ಶ್ರೀನಾಥೇತಿ ||೩||

||ಇತಿ ಹುಲಗಿ ಶ್ರೀ ಸತ್ಯಾಚಾರ್ಯಕೃತ ಶ್ರೀರಾಮಸ್ತೋತ್ರಂ||

೫೮೮

## ॥ಶ್ರೀರಾಮಚರಿತ್ರ ಮಂಜರೀ॥

ಶ್ರೀಮಾನ್ ಪೂರ್ವಂ ಪ್ರಜಾತೋ ದಶರಥನೃಪತೇ ರಾಮನಾಮಾಽಥ
ನೀತೋ
ವಿಶ್ವಾಮಿತ್ರೇಣ ಮಂತ್ರಾಸ್ತ್ರಹೃದನುಜಸಹಿತಸ್ತಾಟಕಾಂ ಘಾತಕೋಽ
ಸ್ತ್ರಮ್॥
ಬ್ರಹ್ಮಾದ್ಯಂ ಪ್ರಾಪ್ಯ ಹತ್ವಾ ನಿಶಿಚರನಿಕರಂ ಯಜ್ಞಪಾಲೋ ವಿಮೋಚ್ಯಾ
ಹಲ್ಯಾಂ ಶಾಪಾಚ್ಚ ಭಂಕ್ತ್ವಾ ಶಿವಧನುರುಪಯನ್ ಜಾನಕೀಂ ನ-
ಪ್ರಸೀದೇತ್ ॥೧॥

ಆಯನ್ ರಾಮಃ ಸಭಾರ್ಯೋಽಧ್ವನಿ ನಿಜಸಹಜೈರ್ ಭಾರ್ಗವೇಷ್ವಾ
ಸರೋಪಾತ್
ತದ್ಗಂ ಹತ್ವಾ ಸುರಾರಿಂ ಪುರಗ ಉತಸು ತಸ್ಮಾತ್ಪದೈರ್ಭೂಪಪೃಷ್ಟೈಃ
ಕಲ್ಯಾಣಾನಂತಧರ್ಮೋಽಗುಣಲವರಹಿತಃ ಪ್ರಾಣನಾಮಂತರಾತ್ಮೇ-
ತ್ಯಾದ್ಯುಕ್ತ್ಯಾಭಿಷೇಕೇ ಪುರಜನಮಹಿತೋ ಮಹತ್ಯಾಂ ಮೇದ
ಚೋಭಿಃ ॥೨॥

ಕೈಕೇಯೀ ಪ್ರೀತಿಹೇತೋಃ ಸ್ವಸಹಜನೃಪಜೋ ವಲ್ಕಲೀಯಾನ್ಯರಣ್ಯಂ
ಗಂಗಾತಾರೀ ಗುಹಾರ್ಚ್ಯಃ ಕೃತರುಚಿರಜಟೋ ಗೀಷ್ಪತೇಃ ಪುತ್ರಮಾನ್ಯಃ
ತೀರ್ತ್ವಾ ಕೃಷ್ಣಾಂ ಪ್ರಯಾತೋಽವತು ನಿಜಮಮಲಂ ಚಿತ್ರಕೂಟಂ ಪ್ರಪನ್ನಂ
ಸ್ವಾಂಬಾಭಿರ್ಭ್ರಾತರಂ ತಂ ಶ್ರುತಜನಕಗತಿ ಸಾಂತ್ವಯನ್ ವ್ಯುಪ್ತತೀರ್ಥಃ ॥
॥೩॥

ದತ್ವಾಸ್ಮೈ ಪಾದುಕೇ ಸ್ವೇ ಕ್ಷಿತಿಭರಣಕೃತೌ ಪ್ರೇಷ್ಯ ತಂ ಕಾಕನೇತ್ರಂ
ವ್ಯಸ್ಯಾರಾಧ್ಯೋಽತ್ರಿನಾಮ್ನಾ ವನಮಥ ಸಮಿತೋ ದಂಡಕಂ ತಾಪ
ಸೇಷ್ಟಃವನ್ ॥

ಕುರ್ವನ್ ಹತ್ವಾ ವಿರಾಧಂ ಖಿಲಕುಲದಮನಂ ಯಾಚಿತಸ್ತಾಪಸಾಗ್ರೈಃ
ತ್ರೀಷಾಂ ದತ್ವಾಽಭಯಂ ಸ್ವಾನಸಿಧನುರಿಷುಧೀನ್ಪ್ರಾಪ್ಯನ್ನಗಸ್ತ್ಯಾತ್ಸ
ಪಾಯಾತ್ ॥೪॥

ಆಸೀನಃ ಪಂಚವಟ್ಯಾಮಕುರುತವಿಕೃತಾಂ ರಾಕ್ಷಸೀ ಯೋ ದ್ವಿಸಪ್ತ–
ಕ್ರವ್ಯಾದಾನಪ್ಯನೇಕಾನಥ ಖರಮವಧೀತ್ ದೂಷಣಂ ಚ ತ್ರಿಶೀರ್ಷಮ್ ॥
ಮಾರೀಚಂ ಮಾರ್ಗರೂಪಂ ದಶವದನಹೃತಾಮಾಕೃತಿಂ ಭೂಮಿಜಾಯಾಃ
ಅನ್ವಿಷ್ಯನ್ನಾರ್ತಗೃಧ್ರಂ ಸ್ವಗತಿಮಥನಯನ್ ಮಾಮವೇತ್ ಘ್ನನ್
ಕಬಂಧವನ್ ॥೫॥

ಪಂಪಾತೀರಂ ಚಗಚ್ಛನ್ನಿಹ ಕೃತವಸತಿ ಭಕ್ತಿತುಷ್ಟಃ ಶಬರ್ಯೈ
ದತ್ವಾ ಮುಕ್ತಿಂ ಪ್ರಕುರ್ವನ್ ಹನುಮತ ಉದಿತಂ ಪ್ರಾಪ್ತ ಸುಗ್ರೀವ
ಸಖ್ಯಂ ॥
ಸಪ್ತಚ್ಛಿತ್ವಾಽಥ ತಾಲಾನ್ ವಿಧಿವರಬಲಿನೋ ವಾಲಿಭಿತ್ ಸೂರ್ಯ
ಸೂನುಂ
ಕುರ್ವಾಣೋ ರಾಜ್ಯಪಾಲಂ ಸಮವತು ನಿವಸನ್ ಮಾಲ್ಯ
ವತ್ಕಂದರೇಽಸೌ ॥೬॥

ನೀತ್ವಾಮಾಸಾನ್ ಕಪೀಶಾನಿಹ ದಶಹರಿತಃ ಪ್ರೇಷ್ಯ ಸೀತಾಂ ವಿಚಿಂತ್ಯಾ–
ಯಾತಶ್ರೀಮದ್ಧನೂಮದ್ಗಿರಮಥ ಸಮನುಶ್ರುತ್ಯ ಗಚ್ಛನ್ ಕಪೀಂದ್ರೈಃ ॥
ಸುಗ್ರೀವಾದ್ಯೈರಸಂಖ್ಯೈರ್ದಶಮುಖಸಹಜಂ ಮಾನಯನ್ನಬ್ಧಿವಾಚಾ
ದೈತ್ಯಘ್ನಸ್ಸೇತುಕಾರೀ ರಿಪುಪುರರುದವೇದ್ ವಾನರೈರ್ವೈರಿಘಾತೀ ॥೭॥

ಭಗ್ನಂ ಕೃತ್ವಾ ದಶಾಸ್ಯಂ ಗುರುತರವಪುಷಂ ಕುಂಭಕರ್ಣಂ ನಿಗೃಹ್ಯ
ಪ್ರಧ್ವಸ್ತಾಶೇಷನಾಗಂ ಪದಕಮಲನತಂ ತಾರ್ಕ್ಷ್ಯಮಾನಂದ್ಯ ರಾಮಃ

ಸರ್ವಾನುಜ್ಜೀವಯಂತಂ ಗಿರಿಧರಮನಘಶ್ಚಾಂಜನೇಯಂ ಕಪೀನ್
ಸ್ತ್ವಾನ್
ವಿಜ್ಞಾನಾಸ್ತ್ರೇಣ ರಕ್ಷನ್ ಸಮವತು ದಮಯನ್ ಲಕ್ಷ್ಮಣಾಚ್ಛಕ್ರ
ಶತ್ರೂನ್ ॥೮॥

ಕ್ರವ್ಯದಾನ್ ಘ್ನನ್ನಸಂಖ್ಯಾನಪಿ ದಶವದನಂ ಬ್ರಹ್ಮಪೂರ್ವೈಃ ಸುರೇಶೈಃ
ಪುಷ್ಪೈರಾಕೀರ್ಯಮಾಣೋ ಹುತವಹವಿಮಲಾಮಾಪ್ಯ ಸೀತಾಂ ವಿಧಾಯ ॥
ರಕ್ಷೋನಾಥಂ ಸ್ವಭಕ್ತಂ ಸ್ವಪುರಮಥಗತಃ ಪುಷ್ಪಕಸ್ಥೈಃ ಸಮಸ್ತೈಃ ॥
ಸಾಮ್ರಾಜ್ಯೇ ಚಾಭಿಷಿಕ್ತೋ ನಿಜಜನಮಖಿಲಂ ಮಾನಯನ್ ಮೇಗತಿಪತಿಃ
ಸ್ಯಾತ್ ॥೯॥

ರಕ್ಷನ್‌ಕ್ಷೋಣೀಂ ಸಮೃದ್ಧಾಂ ನುತ ಉತ ಮುನಿಭಿರ್ಮಾನಯನ್
ವಾಯುಸೂನುಂ
ಪ್ರೇಷ್ಯಾದಿತ್ಯಾತ್ಮಜಾದೀನ್ ವ್ಯತನುತ ಭರತಂ ಯೌವ್ವ ರಾಜ್ಯೇನು
ಮಾನ್ಯ ॥
ಕಾರ್ಯೇ ಸೌಮಿತ್ರಿಮಾರ್ತಶ್ಚಗದಿತಕೃದರಿಘ್ನೋಽಥ ಶತ್ರುಘ್ನ–
ತೋ ಯೋ
ಹತ್ವಾಽಸೌ ದುಷ್ಟಶೂದ್ರಂ ದ್ವಿಜಸುತಗುಬವೇತ್ ಕುಂಬಜಾನ್ಮಾಲ
ಭಾರೀ ॥೧೦॥

ಯಜ್ಞಂ ತನ್ವಂನ್ ತ್ರಿಕೋಟೀನ್ ವ್ಯತುದತ ಭರತಾದ್ಯೋಽಸುರಾನೀಶನಾ
ವಾಕ್ಯಾದ್ಯಾಸ್ಯನ್
ಧಾಮಾತ್ರಿಪುತ್ರಂ ಭುಜಿಮಥ ಸನಯನ್ ಆತ್ಮಸೂನೂ ಸ್ವರಾಜ್ಯೇ॥

ಕೃತ್ವಾ ಶ್ರೀ ಹ್ರೀ ಹನೂಮದ್ಧೃತ ವಿಮಲಚಲಚ್ಚಾಮರ ಛತ್ರ ಶೋಭೀ
ಬ್ರಹ್ಮಾದ್ಯೈಃ ಸ್ತೂಯಮಾನೋ ನಿಜಪುರವಿಲಸತ್ಪಾದಪದ್ಮೋಽವತಾನ್ಮಾಮ್
॥೧೧॥

॥ಇತಿ ಶ್ರೀರಾಮಚಾರಿತ್ರ ಮಂಜರೀ ಲೇಶತಃ ಕೃತಾ॥
**ರಾಘವೇಂದ್ರೇಣ ಯತಿನಾ ಭೂಯಾತ್ ರಾಮಪ್ರಸಾದದಾ ॥೧೨॥**

**॥ಇತಿ ಶ್ರೀ ರಾಘವೇಂದ್ರತೀರ್ಥಕೃತಾ ಶ್ರೀರಾಮಚಾರಿತ್ರ ಮಂಜರೀ॥**

॥ಶ್ರೀ ಸೀತಾರ್ಪಣಮಸ್ತು॥



**೫೮೯**

## ತೊರವೆ ರಾಮಾಯಣದ ಮಂಗಳಾಚರಣ ಪದ್ಯ (ಕವಿ–ತೊರವೆಯನರಹರಿ)

ಶ್ರೀ ಜನಕಜಾರಮಣ ವಿಮಲ ಸ– ।
ರೋಜ ಸಂಭವ ಜನಕನನುಪಮ।
ರಾಜಶೇಖರವಿನುತ ನಿಖಿಳಾಮರ ಕಿರೀಟಚಯ ॥
ರಾಜಿತಾಮಲ ಲಲಿತಪದಪಂ– ॥
ಕೇಜನಾನತ ಜನದಯಾ ಸುರ–।
**ಭೂಜ ತೊರವೆಯರಾಯ ನರಹರಿ** ಪಾಲಿಸುಗೆ ಜಗವ ॥

(ಬಾಲಕಾಂಡ–ಪದ್ಯ–೧)

**ಪ್ರತಿಪದಾರ್ಥ :-**

**ಶ್ರೀಜನಕಜಾರಮಣ** = ಕಾಂತಿಸಂಪನ್ನಳಾದ ಜನಕರಾಜನ ಪುತ್ರಿ ಸೀತೆಯ ಪತಿ, **ವಿಮಲ** = ನಿರ್ಮಲಾತ್ಮನಾದ, **ಸರೋಜಸಂಭವ** = ಶ್ರೀಪದ್ಮನಾಭನ ನಾಭೀಕಮಲದಲ್ಲಿ ಸೃಷ್ಟನಾದ ಬ್ರಹ್ಮದೇವರ, **ಜನಕ** = ತಂದೆ, **ಅನುಪಮ** = ಅಸದೃಶನಾದ, **ರಾಜಶೇಖರ ವಿನುತ** = ಚಂದ್ರ ಮೌಳಿಯಾದ ರುದ್ರನಿಂದ ನಮ್ಯನಾದ, **ನಿಖಿಳ** = ಸಮಸ್ತ, **ಅಮರಕಿರೀಟ**

**ಚಯ** = ದೇವತೆಗಳ ಕಿರೀಟಗಳ ಸಮೂಹದ ಕಾಂತಿಯಿಂದ, **ರಾಜಿತ** = ಪ್ರಕಾಶಿತವಾದ, **ಅಮಲ** = ಪವಿತ್ರವಾದ (ನಿರ್ದೋಷವಾದ) **ಲಲಿತ** = ಮನೋಹರವಾದ, **ಪದಪಂಕೇಜ** = ಪಾದಕಮಲಗಳುಳ್ಳವ, **ಆನತ** = ಶರಣಾಗತರಾದ, **ಜನ** ಜನರ ಪಾಲಿಗೆ, **ದಯಾ ಸುರಭೂಜ** = ದಯಾಯುಕ್ತನಾದ ಕಲ್ಪವೃಕ್ಷ ಸದೃಶನಾದ, **ತೊರೆವೆಯರಾಯ ನರಹರಿ** = ತೊರೆವೆ ಕ್ಷೇತ್ರದ ನಾರಸಿಂಹದೇವರು, **ಜಗವ ಪಾಲಿಸುಗೆ** = ಜಗತ್ತನ್ನು ಸಲಹಲಿ.



|| ಶ್ರೀಃ ಹರಿಃ ಓಂ ||

ವಿಭಾಗ-೭

# ಶ್ರೀಹರಿಯ ಪರವಾದ ಕೀರ್ತನಮಾಲಾ

## ಶ್ರೀಕೃಷ್ಣದೇವರ ಪರವಾದ ಹರಿದಾಸ ಕೀರ್ತನ ತರಂಗಿಣಿ

ಭಜನಕೌಸ್ತುಭ

॥ ಗೋಪಾಲಕೃಷ್ಣಾಯ ನಮಃ ॥

**ಧ್ಯಾನಶ್ಲೋಕಃ—**

ಕಸ್ತೂರಿ ತಿಲಕಂ ಲಲಾಟಫಲಕೇ ವಕ್ಷಃಸ್ಥಲೇ ಕೌಸ್ತುಭಂ ।
ನಾಸಾಗ್ರೇ ವರಮೌಕ್ತಿಕಂ ಕರತಲೇ ವೇಣುಃ ಕರೇ ಕಂಕಣಮ್ ॥
ಸರ್ವಾಂಗೇ ಹರಿಚಂದನಂ ಸುಲಲಿತಂ ಕಂಠೇಚ ಮುಕ್ತಾವಲೀ ।
ಗೋಪಸ್ತ್ರೀ ಪರಿವೇಷ್ಟಿತೋ ವಿಜಯತೇ **ಗೋಪಾಲಚೂಡಾಮಣಿಃ** ॥೧॥

**(ಶ್ರೀ ಮದ್ಭಾಗವತಮ್)**

ಸಚ್ಚಿದಾನಂದರೂಪಾಯ ವಿಶ್ವೋತ್ಪತ್ತ್ಯಾದಿ ಹೇತವೇ ।
ತಾಪತ್ರಯ ವಿನಾಶಾಯ **ಶ್ರೀಕೃಷ್ಣಾಯ** ನಮೋ ನಮಃ ॥೨॥

ನಮಃ ಪರಮಕಲ್ಯಾಣ ನಮಃ ಪರಮಮಂಗಳ ।
ವಾಸುದೇವಾಯ ಶಾಂತಾಯ ಯದೂನಾಂಪತಯೇ ನಮಃ ॥

**(ದಶಮಸ್ಕಂದ–ಪೂರ್ವಾರ್ಧ–ಅಧ್ಯಾಯ ೧೦– ಶ್ಲೋಕ–೩೬)**

ವಾಣೀ ಗುಣಾನುಕಥನೇ ಶ್ರವಣೌ ಕಥಾಯಾಂ ।
ಹಸ್ತೌ ಚ ಕರ್ಮಸು ಮನಸ್ತವ ಪಾದಯೋರ್ನಃ ॥
ಸ್ಮೃತ್ಯಾಂ ಶಿರಸ್ತವ ನಿವಾಸಜಗತ್ಪ್ರಣಾಮೇ ।
ದೃಷ್ಟಿಃ ಸತಾಂ ದರ್ಶನೇಽಸ್ತು ಭವತ್ತನೂನಾಮ್ ॥



೫೯೦

(ರಂಗವಿಠ್ಠಲಾಂಕಿತ)

ರಾಗ–ಕಲ್ಯಾಣಿ ಅಟತಾಳ

ಏಕೆ ದೂರುವಿರೇ–ರಂಗಯ್ಯನ
ಏಕೆ ದೂರುವಿರೇ || ||ಪ||

ಸಾಕು ನಿಮ್ಮ ದೂರ ಬಲ್ಲೆನು
ಈ ಕುವರನಾಕೃತ್ಯ ಮಾಳ್ಪನೇ || ||ಅ||

ದಟ್ಟಡಿಯಿಡಲರಿಯ–ಗೋವತ್ಸವ
ಬಿಟ್ಟು ಚೆಲಿಸಬಲ್ಲನೆ ||
ಘಟ್ಟಿಯಾಗಿ ಗೊತ್ತಿನಲ್ಲಿ
ಕಟ್ಟಿನೊಳು ಕಟ್ಟಿದ್ದ ಕರುಗಳು
ಬಿಟ್ಟನೇ–ಈ ಕೃಷ್ಣನಮೇ–
ಲೆಷ್ಟು ಹೊಟ್ಟೇಕಿಚ್ಚೇ ನಿಮಗೆ || ||೧||

ಕಿನೆಹಾಲು ಬೆಣ್ಣೆಯನು ಇತ್ತರೆ ಆ
ದಿನವೊಲ್ಲನು ಊಟವ||
ಮನೆ ಮನೆ ಮನೆಗಳನು ಪೊಕ್ಕು
ಬೆಣ್ಣೆ ಹಾಲ್ಮೊಸರನ್ನು ತಿನ್ನುತ
ವನಿತೆಯರನು ಕೂಡಾಡಿದನೆಂ–
ದೆನಲು ನಿಮಗೆ ನಾಚಿಕೆಯಿಲ್ಲವೇ || ||೨||

ಪಾಲು ಮೊಸರು ಬೆಣ್ಣೆಯು– ಇಲ್ಲವೆ ನ-
ಮ್ಮಾಲಯದೊಳು ನೋಡಿರೇ॥
ಪೇಳುವರೆ ಈ ರೌಳಿಗಳ ಗೋ-
ಪಾಲ ಬಾಲನ ನೋಡಿ ಸ್ಮರಿಸದೆ
ಬಾಳುವಿರಾ ಭವಜಲಧಿಯಿಂದಲಿ
ತೇಲಿಸುವನೆ **ರಂಗವಿಠಲ** ॥ ॥೩॥

**ಅರ್ಥವಿವರಣೆ:–**

ಗೋಪಿಕಾಸ್ತ್ರೀಯರೆಲ್ಲಾ ಒಟ್ಟಾಗಿ ಯಶೋದೆಯ ಬಳಿಗೆ ಬಂದು, ತುಂಟ ಕೃಷ್ಣನ ಮೇಲೆ ಚಾಡಿ ಹೇಳುತ್ತಾರೆ. ಆಗ ಅಸಂತುಷ್ಟಳಾದ ಯಶೋದೆ ಅವರನ್ನು ಕುರಿತು– "ಏಕೆ ನುಮ್ಮನೆ ಮುಗ್ಧ ಬಾಲಕನನ್ನು ದೂರುತ್ತೀರಿ? ಅವನು ಯಾವ ತಪ್ಪೂ ಮಾಡಿಲ್ಲ" ವೆಂದು ಕೇಳುತ್ತಾಳೆ. ಈ ಪ್ರಸಂಗವನ್ನು **ಶ್ರೀಪಾದರಾಜರು** ಹೃದಯಂಗಮವಾಗಿ ಚಿತ್ರಿಸಿದ್ದಾರೆ–ಪ್ರಸಕ್ತ ಕೀರ್ತನೆಯಲ್ಲಿ.

**ರಂಗಯ್ಯನ** = ಸಮಸ್ತಜೀವರ ಅಂತರ್ಯಾಮಿಯಾಗಿದ್ದು, ಕ್ರೀಡೆಯಾಡುವವನು. **ಈ ಕುವರ** = ಪುಟ್ಟ ಹಾಗೂ ಮುಗ್ಧ ಬಾಲಕ. **ದಟ್ಟಡಿಯಿಡಲು ಅರಿಯ** ಸರಿಯಾಗಿ ಹೆಜ್ಜೆ ಇಡಲು ತಿಳಿಯನು. **ಗೋವತ್ಸವ**= ಆಕಳುವಿನ ಕರುವನ್ನು. **ಗೊತ್ತಿನಲ್ಲಿ** = ಹಸುಗಳನ್ನು ಕಟ್ಟುವ ಗೋಶಾಲೆಯಲ್ಲಿ ಹುಲ್ಲನ್ನು ಹಾಕುವ ಜಾಗದಲ್ಲಿ ಗೂಟಕ್ಕೆ ಬಿಗಿಯಾಗಿ ಕಟ್ಟಿರುವ ಕರುಗಳನ್ನು ಎಂದಿಗಾದರೂ ಬಿಚ್ಚಬಲ್ಲನೇ?– ಎಂದು ಸವಾಲು ಹಾಕುತ್ತಾಳೆ ಯಶೋದೆ. **ಪಾಲ್ಮೊಸರನ್ನು** = ಹಾಲು, ಮೊಸರುಗಳನ್ನು **ವನಿತೆಯರ**= ಸ್ತ್ರೀಯರೊಡನೆ. ಪುಟ್ಟ ಬಾಲಕ ಸ್ತ್ರೀಯರೊಡನೆ ಸರಸವಾಡುತ್ತಾನೆಂದು ಹೇಳಲು ನಿಮಗೆ ನಾಚಿಕೆಯಾಗುವುದಿಲ್ಲವೇ?– ಎಂದು ಪ್ರಶ್ನಿಸುತ್ತಾಳೆ **ನಮ್ಮಾಲಯದೊಳು** =ನಮ್ಮ ಮನೆಯಲ್ಲಿ ಹಾಲು, ಮೊಸರು ಬೆಣ್ಣೆ ಸಮೃದ್ಧಿಯಾಗಿವೆ. **ರೌಳಿಗಳ** = ಚಾಡಿ ಮಾತುಗಳನ್ನು

**ಭವ ಜಲಧಿಯಿಂದಲಿ** = ಸಂಸಾರವೆಂಬ ಸಮುದ್ರದಿಂದ. ಹೀಗೆ ಹೊಟ್ಟೆ ಕಿಚ್ಚಿನಿಂದ ಕೃಷ್ಣನಮೇಲೆ ದೂರಿದರೆ ನಿಮ್ಮನ್ನು ಭವಜಲಧಿಯಿಂದ ತೇಲಿ ಸುತ್ತಾನೆಯೇ ? ಅವನನ್ನು ಭಕ್ತಿಯಿಂದ ನಂಬಿದರೆ ಮಾತ್ರ ಸಂಸಾರದ ಬಂಧನದಿಂದ ಮುಕ್ತಿ—ಎಂತ ತಾತ್ಪರ್ಯ.

೫೯೧

(ರಂಗವಿಠ್ಠಲಾಂಕಿತ)

ರಾಗ—ಶಂಕರಾಭರಣ ಆದಿತಾಳ

ಕೇಳಿದ್ಯಾ—ಕೌತುಕವನ್ನು—ಕೇಳಿದ್ಯಾ ॥ ॥ಪ॥

ಕೇಳಿದ್ಯಾ ಕೌತುಕವನ್ನು—ನಾ
ಕೇಳಿದೆ ನಿನಗಿಂತ ಮುನ್ನು ॥ಆಹಾ॥
ಚಾಳಿಕಾರ ಕೃಷ್ಣ—ಪೇಳದೆ ಮಧುರೆಗೆ
ಕೋಳಿ ಕೂಗದ ಮುನ್ನ—ನಾಳೆ ಪಯಣವಂತೆ ॥ಅ॥

ಕರೆಯಬಂದಿಹನಂತೆ ಕ್ರೂರ—ತಮ್ಮ
ಕಿರಿ ಅಯ್ಯನಂತೆ ಅಕ್ರೂರ—ಪುರ
ಹೊರವಳಯದಿ ಬಿಟ್ಟು ತೇರಾ ॥ಆಹಾ॥
ಹಿರಿಯನೆಂದು ಕಾಲಿಗೆರಗಲು ರಾಮಕೃ
ಷ್ಣರ ರಕ್ಕಿಸಿಕೊಂಡು ಮರಳು ಮಾಡಿದ ಬುದ್ಧಿ ॥ ॥೧॥

ಸೋದರಮಾವನ ಮನೆಯಾ—ಬೆಳೆ
ಗಾದರೆ ನಾಳಿನ ಉದಯಾ—ಪರ
ಮಾದರವಂತೆ ತ್ವರೆಯಾ—ಅಲ್ಲ ತೋ—
ರಿದ ಮನಕೆ ನಾರಿಯಾ ॥ಆಹಾ॥

ಸಾಧಿಮಲ್ಲ ಮೊದಲಾದ ಬಿಲ್ಲುಹಬ್ಬ
ಸಾಧಿಸಿಕೊಂಡು ಬರುವನೆಂಬ ಸುದ್ದಿ ॥ ॥೨॥

ಹುಟ್ಟಿದ ಸ್ಥಳವಂತೆ ಮಧುರೀ–ಕಂಸ
ನಟ್ಟುಳಿಗಾರದೆ ಬೆದರೀ–ತಂ
ದಿಟ್ಟ ತನ್ನ ತಂದೆ ಚದುರೀ–ತೋರಿ
ಕೊಟ್ಟಳು ಭಯವನ್ನು ಬೆದರೀ ॥ಆಹಾ॥
ಎಷ್ಟು ಹೇಳಲಿ ರಂಗವಿಠ್ಠಲ ಮಾವನ
ಭೆಟ್ಟಿಗಾಗಿ ಒಡಂಬಟ್ಟು ಪೋಗುವ ಸುದ್ದಿ ॥ ॥೩॥

**ಅರ್ಥವಿವರಣೆ:—**

ಕಂಸನಿಂದ ಪ್ರೇಷಿತನಾಗಿ ಅಕ್ರೂರನು ಶ್ರೀಬಲರಾಮ ಕೃಷ್ಣರನ್ನು ಮಧುರಾಪಟ್ಟಣಕ್ಕೆ ಬಿಲ್ಲು ಹಬ್ಬದ ನೆಪದಲ್ಲಿ ಕರೆದುಕೊಂಡು ಹೋಗುವುದಕ್ಕಾಗಿ ಗೋಕುಲಕ್ಕೆ ಆಗಮಿಸಿದ್ದಾನೆ. ಹಿಂದಿನದಿನದ ರಾತ್ರಿಯೇ ಅಕ್ರೂರನ ಆಗಮನ. ಬಲರಾಮಕೃಷ್ಣರ ಪ್ರಯಾಣದ ವಿಷಯ ಸಕಲ ಗೋಪಸ್ತ್ರೀಯರಿಗೆ ಗೊತ್ತಾಗಿದೆ. ಅವರೆಲ್ಲರೂ ಸೇರಿ, ವಿಚಾರ ವಿನಿಮಯ ಮಾಡಿಕೊಳ್ಳುವ ಪ್ರಸಂಗವಿಶೇಷವನ್ನು ಈ ಕೀರ್ತನೆಯಲ್ಲಿ **ಶ್ರೀಪಾದರಾಜಗುರುಸಾರ್ವಭೌಮರು** ಸುಂದರವಾಗಿ ಚಿತ್ರಿಸಿದ್ದಾರೆ.

**ಕೌತುಕವನ್ನು** = ಕುತೂಹಲವನ್ನುಂಟುಮಾಡುವ ಸೋಜಿಗದ ಸಂಗತಿ. **ನಾ ಕೇಳಿದೆ ನಿನಗಿಂತ ಮುನ್ನ** = ಒಬ್ಬ ಗೋಪಸ್ತ್ರೀಯು ಹೇಳುತ್ತಾಳೆ– ನಿನಗಿಂತ ಮುಂಚೆಯೇ ನಾನು ವಿಷಯ ಕೇಳಿದೆ—ಎಂದು **ಚಾಳಿಕಾರ** = ವಿಚಿತ್ರ ಕ್ರೀಡಾವಿಶಿಷ್ಟನಾದ, **ಕೋಳಿ ಕೂಗದ ಮುನ್ನ** = ಬೆಳಗಿನ ರಥಾವಕ್ಕಿಂತ ಮುಂಚಿತವಾಗಿಯೇ, **ಪಯಣ** = ಪ್ರಯಾಣ

**ಕ್ರೂರ** = ಹೆಸರೇನೋ ಅಕ್ರೂರ. ಆದರೆ ನಮ್ಮ ಪಾಲಿಗೆ ಅವನು ಕ್ರೂರನೇ ಸರಿ–ಎಂದು ಗೋಪಿಯರ ಅಭಿಪ್ರಾಯ. **ಕಿರಿಯಯ್ಯ** = ಚಿಕ್ಕಪ್ಪ **ಹೊರ ವಳಯದಿ** = ಊರಿನ ಹೊರಭಾಗದಲ್ಲಿ, **ತಕ್ಕಿಸಿಕೊಂಡು** = ವಂಚನೆಯಿಂದ, **ಪರಮಾದರವಂತೆ** = ಮಥುರಾನಗರಿಯಲ್ಲಿ ಬಲರಾಮಕೃಷ್ಣರಿಗೆ ಅತ್ಯಂತ ಆದರ ತೋರುವರಂತೆ, **ತ್ವರೆಯೊ** = ವೇಗದಿಂದೊಡಗೂಡಿದ, **ನಾರಿಯರ್** = ಅಲ್ಲಿ ಸುಂದರರಾದ ಸ್ತ್ರೀಯರು ಬಹುಮಂದಿ ಇದ್ದಾರೆ. ನಮ್ಮನ್ನಗಲಿಸಿ, ಅಲ್ಲಿ ಸ್ತ್ರೀಯರ ಸೌಂದರ್ಯವು ಶ್ರೀಕೃಷ್ಣನನ್ನು ಆಕರ್ಷಿಸಬಹುದೆಂದು ಗೋಪಿಯರ ಶಂಕಾ. **ಸಾಧಿಮಲ್ಲ** = ಪರಾಕ್ರಮರಾದ ಜೆಟ್ಟಿಗಳು. **ಬಿಲ್ಲುಹಬ್ಬ** = ಮಥುರೆಯಲ್ಲಿ ಕಂಸನು ವಿಶೇಷವಾಗಿ ಏರ್ಪಡಿಸಿದ್ದ ಹಬ್ಬ. **ಹುಟ್ಟಿದ ಸ್ಥಳವಂತೆ ಮಥುರಿ** = ಶ್ರೀಕೃಷ್ಣನ ಜನ್ಮಸ್ಥಳ–ಮಥುರಾಪಟ್ಟಣ. ಆ ಕಾರಣದಿಂದ ಕೃಷ್ಣನಿಗೆ ಮಥುರೆಯ ಮೇಲೆ ತುಂಬಾ ಮಮತೆ–ಎಂದು ದೂರುತ್ತಾರೆ ಮುಗ್ಧ ಗೋಪಸ್ತ್ರೀಯರು. **ಅಟ್ಟಳಿ** = ಬೆನ್ನುಹತ್ತಿ ಹೋಗವುದು. **ಒಡಂಬಟ್ಟು** = ತಾನೇ ಸಮ್ಮತಿಸಿ.

***

## ೫೯೨

### ವೃತ್ತನಾಮ–ಪಾರಿಜಾತ

**ರಾಗ–ಮೋಹನ** **ಝಂಪೆತಾಳ**

ಮಾನನಿಧಿ ಶ್ರೀಕೃಷ್ಣ ಮಥುರೆಗ್ಹೋಗುವನಂತೆ
ಏನು ಪಥವಮ್ಮ ನಮಗೆ ‖ ‖ಪ‖

ಮಾನವೇನಿದಕೆ ಮಾನಿನಿಯರೆಲ್ಲರು ಕೂಡಿ
ಆಣೆಯನು ಕಟ್ಟ್ಯವನಡ್ಡನಿಲ್ಲುವ ಬನ್ನಿ ‖ ‖ಅ‖

ಕಳ್ಳತನವೇ ನಮ್ಮ ವಲ್ಲಭರು ಈ ಸುಳುವು
ಎಲ್ಲವನು ಬಲ್ಲರಮ್ಮ
ಒಲ್ಲದಲೆ ನಮ್ಮ ಬಿಟ್ಟರೆ ಒಳಿತು ವನಜಾಕ್ಷ
ಎಲ್ಲಿಗೈದಿದರೆ ನಾವಲ್ಲಿಗ್ಹೋಗುವ ಬನ್ನಿ ॥ ॥೧॥

ಇಂದು ಉದಯದಿ ಮೊದಲು ಇಂದೀವರಾಕ್ಷಿಯರು
ಗೋವಿಂದನ ಬಳಿಗೈದುವ
ಒಂದು ಕಡೆಯಲಿ ಕುಳಿತು ಲಲನೆಯೋರ್ವಳ ಕೈಯ
ಲಿಂದಲಲ್ಲಿಗೆ ಕಳುಹಿ ಕೇಳ್ವೇವೇನು ಪೇಳುವನೋ ॥ ॥೨॥

ಹರಿಣಾಂಕವದನೆಯರು ನೆರೆದು ಬರುತಿರೆ ಕೇಳಿ
ಪರಮಹರುಷದಲಿ ಬಂದು
ಸರಿರಾತ್ರಿಯೊಳು ಹೀಗೆ ಬರುವುದೇನೆಂದಲು
ಎರಗಿ ಬಿನ್ನೈಸಿದರು ಅಂಬುಜದಳಾಕ್ಷನಿಗೆ ॥೩॥

## ಶ್ಲೋಕ

ಪಲವು ಕಾಲವು ನಿನ್ನ ಸ್ನೇಹ ಸುಖವ ಹಾರೈಸಿಕೊಂಡಿರುತಿಹ
ಲಲನಾವ್ಯೂಹವ ಬಿಟ್ಟು ಅಕ್ರೂರನೊಡನೆ ನೀ ಮಧುರೆಗೆ ಪೋದರೆ
ಕಳೆಯಲಾಪೆವೇ ಕಾಂತ ಕೇಳು ದಿನವ ಈ ಕಂತುವಿನ ಬಾಧೆಗೆ
ಘಳಿಗೊಂದು ಯುಗವಾಗಿ ತೋರುತಿಹುದೋ ಜಲಜಾಕ್ಷ ನೀನಿಲ್ಲದೇ॥

## ಪದ

ಬ್ಯಾಡ–ಮಧುರೆಗೆ ಪೋಗಬ್ಯಾಡೆಲವೋ ಶ್ರೀಕೃಷ್ಣ
ಬೇಡಿಕೊಂಬೆವೋ ದೈನ್ಯದಿ
ನೋಡು ನಮ್ಮೊಳು ದಯಮಾಡು ಮದನಂಗೆ ಗುರಿ
ಮಾಡುವುದು ಉಚಿತವೇ ಮಾಧವ–ಕೃಪಾಕರನೇ ॥ ॥೪॥

## ಶ್ಲೋಕ

ಬಾಲಭಾವದಲಿಂದಂಗಸುಖವ ಬಹು ಬಗೆಯಲಿಂದುಳುಹಿವೆ
ಲೋಲಲೋಚನೆ ನಿಮ್ಮ ಬಿಟ್ಟು ಪುರದ ನಾರೀರಿಗಾಸೂವಿದರೆ
ನೀಲಕಂಠರನು ಮೆಚ್ಚ ನೋಡಿ ನಿಜವ-ನಿಮಗೇತಕೀ ಸಂಶಯ
ಕಾಲಕ್ಷೇಪವನಲ್ಲಿ ಮಾಡೆ ಕಿಂಚಿತ್ಕಾಲದೊಳಾನೈದುವೆ ॥

## ಪದ

ಪಾಲಿಸುವುದಪ್ಪಣೆಯ ಪಾಟಲಸುಗಂಧಿಯರೆ ॥
ಕಾಲಹರಣವ ಮಾಡದೇ
ನಾಳೆ ಉದಯಕೆ ಪೋಗಿ ನಾಲ್ಕೆಂಟು ದಿನದೊಳು
ವ್ಯಾಳೆಗಿಲ್ಲಿಗೆ ಬರುವೆ ಕಾಳಾಹಿವೇಣಿಯರೆ ॥ ॥೫॥

## ಶ್ಲೋಕ

ಮಾರನಮ್ಮನೆ ಕೇಳು ಅಲ್ಲಿರುತಿಹ ನಾರೇರು ಬಲು ನಿಪುಣರೋ
ನೀರಜಾಂಬಕ ನೋಡು ನಿನ್ನ ಮನವ-ನಿಮಿಷಾರ್ಧದೊಳು ಸೆಳೆವರೋ
ಮಾರಕೇಳಿಯ ಶಾಸ್ತ್ರ ಮರ್ಮವರಿತು-ಆ ನಾರಿಯರ್ ನೆರೆಯುವು
ಗಾರು ಹಳ್ಳಿಯಲ್ಲಿಪ್ಪ ಗೋವಳೆಯರ ವಿಚಾರಗಳ್ ಸ್ಮರಿಪೆಯಾ

## ಪದ

ಬಿಲ್ಲು ಹಬ್ಬವೆ ಸುಳ್ಳು ಬಿಸರುಹಾರಿಯರಿಕ್ಷು
ಬಿಲ್ಲನುತ್ಸವಕೆ ನಿನ್ನ
ಖುಲ್ಲ ಅಕ್ರೂರನನು ಕಳುಹಿ ಕರೆಸಿದರಲ್ಲಿ
ವಲ್ಲಭೆಯರು ನೆರೆವೆ- ನಮ್ಮೆಲ್ಲರನು ಮರೆವೆ ॥ ॥೬॥

## ಶ್ಲೋಕ

ನಾರೀಹಾರ ಕಿರೀಟ ಕುಂಡಲಯುಗ ಕೇಯೂರ ವಲಯಾದಿಗಳ್
ಚಾರುವಸ್ತ್ರ ಸುಗಂಧ ಪುಷ್ಪನಿಚಯ- ಹಾರಂಗಳ ಧರಿಸಿರೆ

ಮಾರಕೇಳಿಯ ಮಾತಿಲಿಂದಲವರ– ಮನಸೆಮ್ಮಾಳಿಂದಾಗದೆ
ನಾರೇರೊಲುಮೆಯೆಂತೆ ಲೋಕದೊಳು- ನನ್ನಾಶ್ಯತಕೆ ದೂರ್ವಿರೇ ॥

### ಪದ

ಮಲ್ಲಯುದ್ಧವ ನೋಡಬೇಕೆನುತ ಮಾವನ
ಮಲ್ಲಿಗೆ ಕರೆಸಲದಕೆ
ಇಲ್ಲದಪವಾದ ಈ ಸುಳ್ಳು ಸುದ್ದಿಗಳ ನೀ
ವೆಲ್ಲಿ ಸೃಜಿಸಿದರೆ ಸರಿಯಲ್ಲ ನಿಮಗಿಳೆಯೊಳಗೆ ॥ ॥೭॥

### ಶ್ಲೋಕ

ಪತಿ ಸುತ ಪಿತೃ ಮುಖ್ಯ–ಭ್ರಾತೃ ಬಾಂಧವರು ಎಂಬ
ಅತಿಶಯ ನಮಗಿಲ್ಲ– ಲಾಲಿಸೀ ಮಾತನೆಲ್ಲ
ರತಿಪತಿಪಿತ ನೀನೇ- ರಾತ್ರಿಯೋಳ್ ಕೊಳಲನೂದೇ
ಕ್ಷಿತಿಪತಿ ನಿನ್ನೆಡೆಗೇ ಕ್ಷಿಪ್ರದಿಂ ಬಂದೆವಲ್ಲೋ ॥

### ಪದ

ಬಾಲತನದಲಿ ಯಮುನಾತೀರದಲಿ ನೀ ವತ್ಸ
ಪಾಲನೆಯ ಮಾಡುತಿರಲು
ಕಾಲ ಮೊದಲಾಗಿ ಈ ವ್ಯಾಳೆ ಪರಿಯಂತರವು
ಕಾಲು ಘಳಿಗೆಗ್ಯಗಲದಿಹ ಕಾಂತೆಯರ ತ್ಯಜಿಸುವರೇ ॥ ॥೮॥

### ಶ್ಲೋಕ

ನೀಲಕುಂತಳೆ ಕೇಳು ನಿಮ್ಮ ಮನೆಯ ಆ ನೆಲುವಿನ ಮೇಲಿನ
ಪಾಲು ಬೆಣ್ಣೆಯ ಕದ್ದು–ಮೆದ್ದು ಬಹಳ ಕಾಲಂಗಳ ಕಳೆದೆನೆ
ಬಾಲೆ ಮನ್ಮಥ ಬಾಣದೆಚ್ಚು ತಪಿಸೆ–ಬಲ್ ಬಗೆಯಲಿಂದುಳಿಯದ
ಲೋಲಲೋಚನೆ ನಿಮ್ಮೊಳಾನು ಬಹಳ ಚಾಪಲತ್ವಂ ಮಾಳ್ಪೆನೇ

### ಪದ

ಬಟ್ಟಗಂಗಳೆ ನಿಮ್ಮ ಬಿಟ್ಟು ಘಳಿಗಿರಲಾರೆ
ದುಷ್ಟಕಂಸನು ಕರೆಸಲು
ಅಟ್ಟಿದರೆ ಪೋಗದಿರೆ ಸಿಟ್ಟಿನಿಂದಲಿ ವ್ರಜಕೆ
ಅಟ್ಟುಳಿಯ ಮಾಡುವನು ಅಂಬುಜಸುಗಂಧಿಯರೇ ॥ ॥೯॥

### ಶ್ಲೋಕ

ವಾರಿಜಾಂಬಕ ವಾರಿಜಾರಿವದನ ವಾರಾಶಿಜವಲ್ಲಭ
ವಾರಿವಾಹನನಿಭಾಂಗ ವಾಸವನುತ–ವಾಕೆಮ್ಮದೊಂದಾಲಿಸೋ
ವಾರಿಜೋದ್ಭವನಯ್ಯ ನಿನ್ನ ವಿರಹವಾರಾಶಿಯೊಳು ಮುಳುಗಿಹ
ನಾರೀನಿಚಯವ ಪಾರುಗಾಣಿಸೋ ಕೃಪಾನಾವೆಯಲೀದೆಮ್ಮನು ॥

### ಪದ

ಮಾರನೆಂಬುವನು ಬಲು ಕ್ರೂರ ನಮ್ಮನಗಲಿಸಿ ನೀ
ಊರಿಗ್ಹೋದುದನು ಕೇಳಿ
ವಾರಿಜಾಸ್ತ್ರವನು ಎದೆಗೇರಿಸೆಮ್ಮನು ಬಿಡದೆ
ಹೋರುವನು ಅಹೋರಾತ್ರಿಯಲಿ ತಪಿಸುತ ॥ ॥೧೦॥

### ಶ್ಲೋಕ

ಪರಿಪರಿಯಲಿ ನಿಮ್ಮ–ಪಾರಿಸಿ ನೋಡೆ (ಪಾಡನೇ ಕೇಳಿ) ಮುನ್ನ
ಕರುಣದಿ ಕೊರೆತಿಲ್ಲ–ಕಾಂತೆ ಕೇಳೆನ್ನ ಸೊಲ್ಲ
ತ್ವರಿತದಿ ಬಹೆನಲ್ಲಿ- (ಬಾರದಲೆ) ತಡೆದು ನಾ ನಿಂತರಲ್ಲಿ
ಸರಸಿಜಭವ ಭವ ಮಾರ–ರಾಣಿ ಕೇಳಿ ಪ್ರವೀಣೆ

## ಪದ

ತರುಣಾಂಕವವದನೆಯರೆ ಹರುಷಪೂರಿತರಾಗಿ
ಕರೆಮು ತಾಂಬೂಲವನಿತ್ತು
ಕಳುಹಿರೆನ್ನನು ನಿಮ್ಮ ಕ್ಲಪ್ತಕಾಲಕೆ ಬಂದು
ನೆರೆಯುದಿದ್ದರೆ ನಾನು ಪರಮಪುರುಷನೇ ಕೇಳಿ ॥ ॥೧೧॥

ಮಾರ–ನೆಂಬವನಂದೆ ಮಡಿದನು ಶಿವನ–ಆ ಮೂರನೇ ಕಣ್ಣಲಿ
ನಾರೇರಿಲ್ಲದೆ ನಾಭಿಯಿಂದ ಪಡೆದ–ಆ ಬ್ರಹ್ಮನೆಂಬಾತನ
ನಾರಿ ಊರ್ವ ಕುಮಾರರಾಣೆ ಹರಿಯು ತಾನಿಟ್ಟಿದುನೇನೆಂಬೆವೆ
ಮಾರು–ಹೊರಗಿನ ಹೊರಗೆ ಹೋಯಿತೆಂಬೋ ತೀರಾಯತೆ ಭಾಮಿನಿ ॥

## ಪದ

ಹಲವು ಮಾತುಗಳ್ಯಾಕೆ–ಜಲಜಾಕ್ಷ ನಿನ್ನ ಪದ
ಜಲಜವನು ನೆರೆನಂಬಿಹ
ಒಲುಮೆಯುಲ್ಲಿರುತಿಪ್ಪ ಲಲನಾವ್ಯೂಹವ ಬಿಟ್ಟು
ಕಳೆಯಬೇಡೆಮ್ಮನು **ರಂಗವಿಠಲರೇಯಾ** ॥ ॥೧೨॥

**ಅರ್ಥವಿವರಣೆ :**

ಮಧುರಾಪಟ್ಟಣದಿಂದ ಕಂಸನಿಂದ ಪ್ರೇಷಿತನಾಗಿ ಅಕ್ರೂರನು ಶ್ರೀ ರಾಮಕೃಷ್ಣರನ್ನು ಬಿಲ್ಲುಹಬ್ಬದ ನೆಪನಲ್ಲಿ ನಗರಕ್ಕೆ ಕರೆದೊಯ್ಯಲು ಗೋಕುಲಕ್ಕೆ ಆಗಮಿಸಿದ್ದಾನೆ. ಈ ವಿಷಯ ಗೋಪಿಕಾಸ್ತ್ರೀಯರ ವೃಂದಕ್ಕೆ ತಿಳಿಯಿತು. ಶ್ರೀಕೃಷ್ಣನ ವಿರಹದಿಂದ ಖಿನ್ನರಾದ ಆ ವ್ರಜನಾರಿಯರು ಶ್ರೀಕೃಷ್ಣನ ಬಳಿಗೆ ಸಾರಿ, ಅವನನ್ನು ಮಧುರಾನಗರಕ್ಕೆ ಹೋಗಬೇಡವೆಂದು ನಾನಾ ಪರಿಯಿಂದ ಪ್ರಾರ್ಥಿಸುತ್ತಾರೆ. ಶ್ರೀಮದ್ಭಾಗವತದ ದಶಮಸ್ಕಂಧಗತ ಈ ಪ್ರಸಂಗವಿಶೇಷವನ್ನು **ಶ್ರೀಪಾದಗುರುರಾಜಸಾರ್ವಭೌಮರು** ಪ್ರಸಕ್ತ ವ್ಯಕ್ತನಾಮರೂಪವಾದ ಕೀರ್ತನೆಯಲ್ಲಿ ಹೃದಯಂಗಮವಾಗಿ ಚಿತ್ರಿಸಿರುತ್ತಾರೆ. ಒಂದು ಶ್ಲೋಕ–ಒಂದು ಪದ–ಹೀಗೆ ಸಾಹಿತ್ಯಾನು

ಬಂಧದಿಂದ ಕೂಡಿರುವ ಕೀರ್ತನೆಯ ಪ್ರಾಕಾರಕ್ಕೆ ನೃತ್ತನಾಮ-ಎಂದು ಹೆಸರು. ಸಾಮಾನ್ಯವಾಗಿ ಈ ವಿಧವಾದ ಕೀರ್ತನ ಸಾಹಿತ್ಯವನ್ನು ಪಾರಿಜಾತ ಎನ್ನುವರು.

**ಮಾನನಿಧಿ** = ಉತ್ಕೃಷ್ಟವಾದ ಗೌರವಾದರಗಳಿಗೆ ಪಾತ್ರನಾದ ಶ್ರೀಕೃಷ್ಣ ಪರಮಾತ್ಮನು. **ಮಧುರೆ** = ಶೂರಸೇನ ದೇಶದ ರಾಜಧಾನಿ. ಶ್ರೀಕೃಷ್ಣನ ಜನ್ಮಸ್ಥಳ. ಪ್ರಕೃತ ಕಂಸನೇ ರಾಜ. **ಪಥವಮ್ಮ** = ನಮ್ಮ ಮುಂದಿನ ಗತಿಯೇನು ? -ಎಂದು ಗೋಪಿಕಾಸ್ತ್ರೀಯರ ಸಮಸ್ಯೆ. **ಮಾನಿನಿಯರೆಲ್ಲರು** = ಸ್ತ್ರೀವೃಂದವೆಲ್ಲಾ. **ಆಣೆಯನು** = "ಕೃಷ್ಣನೇ ನೀನು ನಮ್ಮನ್ನಗಲಿ ಪೋದರೆ, ನಮ್ಮ ಮೇಲಿನ ಆಣೆ-ಎಂದು ಆಣೆಯಿಟ್ಟು. **ಅವನಿಗಡ್ಡ** = ಕೃಷ್ಣನು ಮಧುರೆಗೆ ಹೋಗದಂತೆ ಸಾಲಾಗಿ ಅಡ್ಡಗಟ್ಟಿ ನಿಲ್ಲೋಣ **ವಲ್ಲಭರು** = ಪತಿಗಳು, **ಸುಳುವು** = ಕುರುಹು (ಶ್ರೀಕೃಷ್ಣನ ಪ್ರಯಾಣದ ಸಂಗತಿ). **ವನಜಾಕ್ಷ** = ಕಮಲ ಪುಷ್ಪದ ದಳದಂತೆ ವಿಶಾಲನೇತ್ರವುಳ್ಳ ಶ್ರೀಕೃಷ್ಣ (ವನಜ-ನೀರಿನಲ್ಲಿ ಹುಟ್ಟಿದ ಕಮಲ). **ಇಂದು ದಯದಿ** = ಈ ದಿನದಿ ಸೂರ್ಯೋದಯದ ಮುಂಚೆಯೇ. **ಇಂದೀವರಾಕ್ಷಿಯರು** = ಕನ್ನೈದಿಲೆ ಪುಷ್ಪದ ದಳದಂತೆ ವಿಸ್ತಾರವಾದ ಕಣ್ಣುಳ್ಳ ಸುಂದರಸ್ತ್ರೀಯರು **ಹರಿಣಾಂಕವದನೆಯರು** = ಚಂದ್ರಬಿಂಬದಂತೆ ಗುಂಡಾದ ಸುಂದರ ಮುಖವುಳ್ಳ ಗೋಪಿಕಾಸ್ತ್ರೀಯರು (ಹರಿಣ-ಜಿಂಕೆ ಹರಿಣಾಂಕ = ಜಿಂಕೆಯ ಸಾಂಕೇತವುಳ್ಳ ಚಂದ್ರ). ಸ್ತ್ರೀವೃಂದವು ಶ್ರೀಕೃಷ್ಣನು ಮಧುರೆಗೆ ಹೋಗುವ ಹಿಂದಿನ ರಾತ್ರಿಯ ವೇಳೆ ತನ್ನನ್ನು ಸಾರಿದಾಗ. **ನೆರೆದು** = ಒಟ್ಟಿಗೆ ಸೇರಿ, **ಎರಗಿ** = ಶ್ರೀಕೃಷ್ಣನ ಪಾದಗಳಿಗೆ ನಮಸ್ಕರಿಸಿ, **ಬಿನ್ನೈಸಿದರು** = ಬಿನ್ನಹ ಮಾಡಿಕೊಂಡರು. **ಮದನಂಗೆ ಗುರಿಮಾಡುವುದು** = ಮನ್ಮಥನ ಭಾಧೆಗೆ ಗುರಿಮಾಡುವುದು ನಿನಗೆ ತರವಲ್ಲ (ವಿಯೋಗ ದುಃಖದಿಂದ ತಪ್ತರಾಗಿದ್ದಾರೆ ಗೋಪಸ್ತ್ರೀಯರು). **ಬಾಲಭಾವದಲಿದ್ದು** = ಕನ್ಯಾವಸ್ಥೆಯಲ್ಲಿದ್ದು, **ಲೋಲಲೋಚನೆ** = ಚಂಚಲಾಕ್ಷಿಯರು. **ನೀಲಕಂಠನು ಮೆಚ್ಚ** = ನಿಮ್ಮನ್ನು ಬಿಟ್ಟು ಮಧುರಾನಗರದ ಸ್ತ್ರೀಯರಿಗೊಲಿದರೆ ಮನೋನಿಯಾಮ

ಕನಾದ ಶಿವನೂ ಮೆಚ್ಚಲಾರ–ಎನ್ನುತ್ತಾನೆ ಶ್ರೀಕೃಷ್ಣ, (ಇಲ್ಲಿ ನೀಲಕಂಠ–ಶಬ್ದಪ್ರಯೋಗದ ಔಚಿತ್ಯವೇನೆಂದರೆ–ನೀಲಕಂಠನು ಮನೋಯಾಮಕನು. ನನ್ನ ಮನಸ್ಸು ಚಂಚಲವಾಗದು–ಎಂದು ತಾತ್ಪರ್ಯ). **ಕಾಲಕ್ಷೇಪವ** = ಅಲ್ಲಿ ಸುಮ್ಮನೆ ಸಮಯ ವ್ಯರ್ಥಮಾಡುವುದಿಲ್ಲ. **ಕಿಂಚಿತ್ಕಾಲದೊದೊಳು** = ಅತಿ ಶೀಘ್ರವಾಗಿ **ಪಾಟಲಸುಗಂಧಿಯರೆ** = ಗುಲಾಬಿ ವರ್ಣದ ಪಾದರಿಯ ಹೂವಿನಂತೆ ಪರಿಮಳಯುಕ್ತರೇ. **ಕಾಳಾಹಿವೇಣಿಯರೇ** = ಕಪ್ಪಾದ ಸರ್ಪದಂತೆ ನೀಳವಾದ ಜಡೆಯುಳ್ಳವರೆ (ಕಾಳ–ಕಪ್ಪು. ಅಹಿ – ಹಾವು–ವೇಣಿ – ತಲೆಗೂದಲು–ಜಡೆ), **ಮಾರನಯ್ಯನೆ** = ಮನ್ಮಥನ ಜನಕನಾದ ಶ್ರೀಕೃಷ್ಣನೇ (ಪ್ರದ್ಯುಮ್ನ ಮನ್ಮಥನ ಅವತಾರ) ಪ್ರದ್ಯುಮ್ನನು ಶ್ರೀಕೃಷ್ಣಪುತ್ರ). **ನೀರಜಾಂಬಕ** = ಕಮಲದಳದಂತೆ ನೇತ್ರವುಳ್ಳ (ನೀರಜ – ಕಮಲ ಅಂಬಕ = ನೇತ್ರ), **ಮಾರಕೇಳಿಯ** = ಸಂಗಸುಖ (ಸುರತ) **ಗಾರು** = ಒರಟರಾದ. **ಗೋವಳಿಯರ** = ಗೋಕುಲದ ಸ್ತ್ರೀಯರು (ಗೋಪಸ್ತ್ರೀಯರು). **ಬಿಲ್ಲುಹಬ್ಬವ** = ಪ್ರತಿ ವರ್ಷವೂ ಕಂಸಾಸುರನು ಮಥುರಾನಗರಿಯಲ್ಲಿ ಧನುರ್ಯಾಗವೆಂಬ ಸಮಾರಂಭವನ್ನು ಏರ್ಪಡಿಸುತ್ತಿದ್ದನು. ಅದೇ ಬಿಲ್ಲುಹಬ್ಬ. **ಬಿಸರುಜಾಕ್ಷಿಯರು** = ಕಮಲನೇತ್ರೆಯರು. **ಖುಲ್ಲ** = ಕ್ರೂರ (ಇಂತಹ ಕ್ರೂರನಿಗೆ 'ಅಕ್ರೂರ'ನೆಂದು ಹೆಸರೇ?). **ನಾರೀಹಾರ** = ಕುತ್ತಿಗೆಯಿಂದ ಇಳಿಬಿದ್ದ ನೀಳವಾದ ಹಾರ. **ಕುಂಡಲಯುಗ** = ಎರಡು ಕರ್ಣಾಭರಣಗಳು. **ಕೇಯೂರ** = ತೋಳುಬಳೆ (ಭಾಪುರಿ). **ಪುಷ್ಪನಿಚಯ** = ಹೂವಿನ ಗೊಂಚಲು **ಮಲ್ಲಯುದ್ಧವ** = ಜಟ್ಟಿಗಳೊಡನೆ ಕುಸ್ತಿಯಾಟ. **ರತಿಪತಿಪಿತ** = ಮನ್ಮಥಜನಕ (ರತಿಪತಿ—ಮನ್ಮಥ). **ಕ್ಷಿತಿಪತಿ** = ಭೂದೇವಿಯ ರಮಣ. **ವತ್ಸಪಾಲನೆಯ** = ಕರುಗಳನ್ನು ಕಾಯುವುದು. **ನೀಲಕುಂತಳೆ** = ಕಪ್ಪಾದ ಮುಂಗುರುಳುಗಳಿಂದ ಕೂಡಿದ. **ಜಾಲಂಗಳಂ** = ಮೋಡಿ (ಮೋಹ). **ಬಟ್ಟಕಂಗಳ** = ಅಗಲವಾದ ಕಣ್ಣುಗಳುಳ್ಳ **ವ್ರಜಕೆ** = ಗೋಕುಲಕ್ಕೆ. **ಅಟ್ಟುಳಿ** = ಬೆನ್ನಟ್ಟುವುದು, **ವಾರಿಜಾಂಬಕ** = ಕಮಲದ ದಳದಂತೆ ನೇತ್ರವುಳ್ಳ ಶ್ರೀಕೃಷ್ಣ. **ವಾರಿಜಾರಿ**

**ವದನ** = ಚಂದ್ರಬಿಂಬನಂತೆ ಮುಖವುಳ್ಳವನು. **ವಾರಾಶಿಜ ವಲ್ಲಭ** = ಲಕ್ಷ್ಮೀಪತಿ (ವಾರಾಶಿ— ಸಮುದ್ರ. ವಾರಾಶಿಜಾ—ಸಮುದ್ರ ಕನ್ಯೆಲಕ್ಷ್ಮೀ) **ವಾರಿವಾಹನಿಭಾಂಗ** = ನೀಲಮೇಘಶ್ಯಾಮ (ವಾರಿವಾಹ—ಮೇಘ ನಿಭಾಂಗ—ಕಾಂತಿಯುಕ್ತವಾದ ಶರೀರ) **ವಾಸವನುತ** = ಇಂದ್ರನಿಂದ ಸ್ತುತ್ಯ **ವಾರಿಜೋದ್ಭವನಯ್ಯ** = ನಾಭೀಕಮಲಸಂಭವರಾದ ಬ್ರಹ್ಮದೇವರ ತಂದೆ. **ವಿರಹವಾರಾಶಿಯೊಳ್** = ವಿರಹಸಮುದ್ರದಲ್ಲಿ (ಶ್ರೀಕೃಷ್ಣನ ಅಗಲುವಿಕೆಯ ವಿರಹ) **ನಾರೀರ್ನಿಚೆಯ** = ಸ್ತ್ರೀಸಮೂಹ. **ಕೃಪಾ ನಾವೆಯಲಿ** = ನಿನ್ನ ಕರುಣವೆಂಬ ದೋಣಿಯಲ್ಲಿ ನಮ್ಮನ್ನು ವಿರಹಸಾಗರದಿಂದ ದಾಟಿಸೆಂದು ಪ್ರಾರ್ಥಿಸಿದ್ದಾರೆ. **ಮಾರನೆಂಬುವ** = ಮನ್ಮಥನ ಬಾಧೆ. **ವಾರಿಜಾಸ್ತ್ರವ** = ಕುಸುಮ ಬಾಣವನ್ನು (ಕಾಮನ ಬಾಣ) **ಹೊೀರುವನು** = ಕಾಡಿಸುವನು **ಸರಸಿಜಭವ ಮಾರರಾಣೆ** = ಶ್ರೀಕೃಷ್ಣನು ತಾನು ಜಾಗ್ರತೆ ಬರುವುದಾಗಿ ಬ್ರಹ್ಮ ಮತ್ತು ಕಾಮನ ಮೇಲೆ ಆಣೆಇಟ್ಟು ಶಪಥ ಮಾಡುತ್ತಾನೆ. (ಇಬ್ಬರೂ ಶ್ರೀಹರಿಯ ಪುತ್ರರು) **ಪ್ರವೀಣೆ** = ಚದುರೆಯರೇ. **ಹರಿಣಾಂಕವದನೆಯರೆ** = ಚಂದ್ರವದನೆಯರೇ (ಹರಿಣಾಂಕ—ಜಿಂಕೆಯ ಸಾಂಕೇತವಿರುವ ಚಂದ್ರ) **ಕ್ಲೃಪ್ತ ಕಾಲಕೆ** = ನಿಗದಿಯಾದ ಸಮಯಕ್ಕೆ ನಾನು ಬರುವೆ. **ನಾರೀರಿಲ್ಲದೆ** = ಸ್ತ್ರೀಯ ಸಂಬಂಧವೇ ಇಲ್ಲದೇ ನಾಭಿಯಲ್ಲಿ ಬ್ರಹ್ಮನನ್ನು ಪಡೆದ ಸ್ವರಮಣ ಶ್ರೀಹರಿ. **ಈರ್ವಕುಮಾರರಾಣೆ** = ಶಿವನ ಫಾಲನೇತ್ರಾಗ್ನಿಯಿಂದ ದಗ್ಧನಾದ ಮನ್ಮಥ ಮತ್ತು ನಾಭೀಕಮಲೋದ್ಭವರಾದ ಬ್ರಹ್ಮ— ಈ ಇಬ್ಬರು ಮಕ್ಕಳ ಆಣೆ. **ಪದಜಲಜ** = ಪಾದಕಮಲ **ಒಲುಮೆಯಲಿ** = ಪ್ರೇಮದಿಂದ. **ಲಲನಾವ್ಯೂಹ** = ಸ್ತ್ರೀಯರ ವೃಂದವನ್ನು ತೊರೆದು ಹೋಗಬೇಡ. **ಕಳೆಯಬೇಡೆಮ್ಮನು** = ನಮ್ಮನ್ನು ಅಗಲಿ ಹೋಗಬೇಡ—ಎಂದು ದೈನ್ಯದಿಂದ ಪ್ರಾರ್ಥಿಸುತ್ತಾರೆ.

❧

## ೫೯೩

### (ರಂಗವಿಠ್ಠಲಾಂಕಿತ)

**ರಾಗ–ಶಂಕರಾಭರಣ (ಖರಹರಪ್ರಿಯ) ಆದಿತಾಳ (ತ್ರಿಪುಟ)**

ಎಲ್ಲ್ಯಾಡಿ ಬಂದ್ಯೋ–ಎನ್ನ ರಂಗಯ್ಯಾ–ನೀ
ಎಲ್ಲ್ಯಾಡಿ ಬಂದ್ಯೋ–ಎನ್ನ ಕೃಷ್ಣಯ್ಯಾ–ನೀ ॥ ॥ಪ॥

ಬಾಲಯ್ಯ ನೀನೆನ್ನ–ಕಣ್ಣ ಮುಂದಾಡದೆ
ಎಲ್ಲಾಡಿ ಬಂದ್ಯೋ–ರಂಗಯ್ಯಾ ನೀ ॥ ॥ಅ॥

ಆಲಯದೊಳಗೆ ನೀನಾಡದೆ–ಬೆಣ್ಣೆ (ಪಾ.ಬೆನಿ)
ಪಾಲು ಸಕ್ಕರೆ ನೀ ಬೇಡದೇ–(ನೀನೊಲ್ಲದೆ–ಪಾ) ಇಲ್ಲಿ
ಬಾಲರಿಂದೊಡಗೂಡಿ ಆಡದೆ–ಮುದ್ದು
ಬಾಲಯ್ಯ ನೀನೆನ್ನ–ಕಣ್ಣ ಮುಂದಾಡದೇ–ನೀ ॥ ॥೧॥

ಬಟ್ಟ ಮುತ್ತಿನ ಬೊಗಸೆ ಕಂಗಳು–ಫಣೆಯೊ
ಳಿಟ್ಟ ಕಸ್ತೂರಿ ತಿಲಕದಂದವು–ಬಲು (ಅಲ್ಲಿ.ಪಾ)
ದಿಟ್ಟತನದಿ ನೀ–ಓಡ್ಯಾಡಲು (ಕೂಡ್ಯಾಡಲು–ಪಾ)
ಪುಟ್ಟಕೃಷ್ಣಯ್ಯ–ನೀ ಎನ್ನ ಕಣ್ಣ ಮುಂದಾಡದೇ–ನೀ ॥ ॥೨॥

ಅಷ್ಟದಿಕ್ಕಿಲಿ ಅರಸಿ–ಕಾಣದೆ–ಬಹಳ
ದೃಷ್ಟಿಗೆಟ್ಟೆನೊ–ನಿನ್ನ ನೋಡದೇ–ಇ
ನ್ನೆಷ್ಟು ಹೇಳಲಿ–ಕೇಳ ಬಾರದೇ–**ರಂಗ**
ವಿಠ್ಠಲ–ನೀನೆನ್ನ ಕಣ್ಣ ಮುಂದಾಡದೇ–ನೀ ॥ ॥೩॥

**ಅರ್ಥವಿವರಣೆ:—**

ಹೊರಗೆ ಆಟವಾಡಲು ಹೋಗಿದ್ದ ತುಂಟ ಶ್ರೀಕೃಷ್ಣ ತಡವಾಗಿ ಮನೆಗೆ ಬಂದ. ಎಷ್ಟು ಹೊತ್ತಾದರೂ ಮನೆಗೆ ಬರದ ಆ ಚೋರನು ಎಲ್ಲಿ ಹೋದನೋ— ಎಂದು ಚಿಂತಿಸುತ್ತಾ ಗೋಪಿ ಬಾಲಗೋಪಾಲನಿಗಾಗಿ ಎಲ್ಲೆಲ್ಲೂ ಹುಡುಕುತ್ತಾಳೆ, ಆಯಾಸದಿಂದ ಬಸವಳಿದು ಬೇಸತ್ತ ಯಶೋದೆ ತುಂಟತನವು ಸುರಿಯುತ್ತಿದ್ದ ಮುದ್ದು ಕೃಷ್ಣನನ್ನು ನೋಡಿದಾಗ, ಅವಳ ಬಾಯಿಂದ ಹೊರಬಿದ್ದ ವಚನಗಳನ್ನು ಶ್ರೀಪಾದರಾಜರು ಈ ಕೀರ್ತನೆಯ ಸಾಹಿತ್ಯದ ಶಬ್ದಗಳಲ್ಲಿ ಸೆರೆಹಿಡಿದಿದ್ದಾರೆ

**ಎಲ್ಲ್ಯಾಡಿ ಬಂದೆ** = ತುಂಟಕೃಷ್ಣ ! ನೀ ಎಲ್ಲಿಗೆ ಹೋಗಿದ್ದೆ ? ಎಲ್ಲಿ ಆಟವಾಡುತ್ತಿದ್ದೇ—ಎಂದು ಕಳವಳದಿಂದ ಪ್ರಶ್ನಿಸುತ್ತಾಳೆ. **ಬಾಲಯ್ಯ** = ಪುಟ್ಟಮಗು. **ನೀ ಎನ್ನ ಕಣ್ಣ ಮುಂದಾಡದೆ** = ನನ್ನ ಎದುರಿಗೇ ಆಟವಾಡದೇ ಹೊರಗೆಲ್ಲಿ ಹೋಗಿದ್ದೆ ? **ಆಲಯದೊಳಗೆ** — ನಮ್ಮ ಮನೆಯಲ್ಲಿ. **ಚಿನಿಪಾಲು** — ಕೆನೆಗಟ್ಟಿದ ಹಾಲು **ಬಟ್ಟ** — ಗುಂಡ ಗಿರುವ. **ಬೊಗಸೆಕಣ್ಣುಗಳು** — ಮುತ್ತಿನಂತೆ ಪ್ರಕಾಶಮಾನವಾದ ಅಗಲವಾದ ಕಣ್ಣುಗಳು. **ಫಣೆಯೊಳಿಟ್ಟ** = ಹಣೆಯಲ್ಲಿ ಧರಿಸಿದ **ಕಸ್ತೂರಿ ತಿಲಕದಂದವು** = ಕಸ್ತೂರೀ ತಿಲಕದ ಸೊಬಗು (ಕಸ್ತೂರೀ ತಿಲಕಾಂಕಿತ ಫಾಲನು ಶ್ರೀಕೃಷ್ಣ). **ದಿಟ್ಟತನದಿ** = ಕೆಚ್ಚಿನಿಂದ, **ಅಷ್ಟ ದಿಕ್ಕಲಿ** = ಎಂಟು ದಿಕ್ಕುಗಳಲ್ಲಿ, ಅಂದರೆ ನಿನ್ನನ್ನು ಹುಡುಕಿಕೊಂಡು ಎಲ್ಲೆಲ್ಲೂ. **ಅರಸಿ** = ಹುಡುಕಿ **ದೃಷ್ಟಿಗೆಟ್ಟೆನೋ** = ಕಣ್ಣು ಕಣ್ಣು ಬಿಟ್ಟೆ (ಮನಸ್ಸಿನಲ್ಲಿ ಆತಂಕಪಟ್ಟೆ) **ಇನ್ನೆಷ್ಟು ಹೇಳಲಿ** = ಕೃಷ್ಣಾ, ನಿನಗೆಷ್ಟು ಸಾರಿ ನಾ ಹೇಳಬೇಕು—ನಮ್ಮ ಮನೆಯಲ್ಲಿಯೇ ಆಡಿಕೊಂಡಿರು— ಹೊರಗೆ ಹೋಗಬೇಡವೆಂದು—ಎನ್ನುತ್ತಾಳೆ ಮೋಹಪರವಶಳಾದ ಗೋಪಿ.

## ಕೊಳಲು

(ಅಂಕಿತ–ಶ್ರೀಕೃಷ್ಣ) (ಶ್ರೀವ್ಯಾಸರಾಜರ ಕೃತಿ)

ರಾಗ–ಮೋಹನ ಆದಿತಾಳ

ಕೊಳಲನೂದುವ ಚದುರನ್ಯಾರೇ– ಪೇಳಮ್ಮಯ
ತಳಿರಂದದಿ ತಾ ಪೊಳೆವ ಕರದಿ ಪಿಡಿದು ॥ಪ॥

ನಾದದಿ ತುಂಬಿತು ಗೋವರ್ಧನಗಿರಿ
ಪಾದಪಕುಲ ಘನ ಪರೆದಿತು ಖಗಕುಲ
ಸಾದಿಸಿ ನೋಡಲು ಕೃಷ್ಣನ ಈಗಲೇ
ಸಾಧ್ಯವೇನೇ– ಬೃಂದಾವನದೊಳು ॥ ॥೧॥

ಮೇವು ಮರೆತವು ಗೋವುಗಳೆಲ್ಲವು
ಸಾವಧಾನದಿ ಹರಿದಳು ಯಮುನಾ
ಆವು ಕಾಯುತಲಿ ಗೋವಳರೆಲ್ಲರ
ಹಾವಭಾವದಲಿ– ಬೃಂದಾವನದೊಳು ॥ ॥೨॥

ಸುರರು ಸುರಿದರಾಕಾಶದಿ ಸುಮಗಳ
ಸರಿದು ಪೋಗಿ ನೋಡೇ– ಬೃಂದಾವನದೊಳು
ಸಾರಿ ಸಾರಿ ಶ್ರೀ ಕೃಷ್ಣನು ಈಗಲೇ
ತುರುಗಳ ಕಾಯ್ವ ಕದಂಬ ವನದೊಳು ॥ ॥೩॥

**ಅರ್ಥವಿವರಣೆ :**

ಶ್ರೀ ವ್ಯಾಸರಾಜಗುರುಸಾರ್ವಭೌಮರ ಸುಂದರ ಕೃತಿ ಇದು. ಗೋಕುಲದಲ್ಲಿ ಶ್ರೀಕೃಷ್ಣನ ಮುರಳೀನಾದದ ಮಹಿಮೆಯನ್ನು ಹೃದಯಂಗಮವಾಗಿ ವಿವರಿಸಿದ್ದಾರೆ.

**ಚದುರ** = ನಿಪುಣ (ಉತ್ತಮ ಕಲಾವಿದ), **ತಳಿರಂದದಿ** = ಚಿಗುರಿನಂತೆ, ಶ್ರೀಕೃಷ್ಣನ ಕರವು ಚಿಗುರಿನಂತೆ ಮೃದುವಾಗಿ ಕೋಮಲವಾಗಿದೆ. ಅಂತಹ ಸುಂದರಕರದಲ್ಲಿ ಕೊಳಲನ್ನು ಹಿಡಿದ್ದು ನುಡಿಸುತ್ತಿರುವ ದೃಶ್ಯ ವರ್ಣನಾತೀತ. **ನಾದದಿ** = ಮಧುರ ವಾದ ಸಂಗೀತದ ಧ್ವನಿ, **ಗೋವರ್ಧನ ಗಿರಿ** = ಯಮುನಾ ನದಿಯ ತೀರದಲ್ಲಿ ಬೃಂದಾವನದ ಸಮೀಪದಲ್ಲಿರುವ ಒಂದು ಪರ್ವತ, **ಖಗಕುಲ** = ಪಕ್ಷಿಗಳ ಸಮೂಹ. ಶ್ರೀಕೃಷ್ಣನ ಕೊಳಲಿನ ಸುಮಧುರ ಧ್ವನಿಯನ್ನು ಕೇಳಲು, ಅನೇಕ ಪಕ್ಷಿಗಳ ಸಮೂಹ ಆಕಾಶದಲ್ಲಿ ನೆರೆದು, ವ್ಯಾಪಿಸಿತು. (**ಘನಬರಿದಿತು**) **ಸಾಧಿಸಿ ನೋಡಲು** = ಪೂರ್ಣವಾಗಿ ಪರೀಕ್ಷಿಸಿ ನೋಡಲು ಸಾಧ್ಯವಿಲ್ಲ–ಎಂದು ಗೋಪಿಕಾಸ್ತ್ರೀಯರು ತಮ್ಮ ತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು. **ಮೇವು** = ಬಾಯಿಯಲ್ಲಿ ಕಚ್ಚಿದ ಹುಲ್ಲನ್ನು, **ಮರೆತವು** = ಹಸುಗಳು ಆಗತಾನೇ ಹುಲ್ಲನ್ನು ತಿನ್ನುತ್ತಿದ್ದಾಗ, ಕೃಷ್ಣನ ಮುರಳೀ ನಿನಾದವನ್ನು ಕೇಳಿ, ತಮ್ಮ ಕರ್ಣಪುಟಗಳನ್ನು ಆ ನಾದತರಂಗ ಗಳ ಕಡೆಗೆ ಚಾಚಿ, ಹುಲ್ಲನ್ನು ತಿನ್ನುವುದನ್ನೇ ಮರೆತವು. ಇದೊಂದು ಉತ್ಪ್ರೇಕ್ಷಾಲಂಕಾರ, **ಸಾವಧಾನದಿ** = ಹರಿಯುತ್ತಿದ್ದ ಯಮುನಾನದಿಯ ಅಭಿಮಾನಿದೇವತೆಯು, ಶ್ರೀಕೃಷ್ಣನ ಕೊಳಲಿನ ಮಧುರಗಾನವನ್ನು ಕೇಳಬೇಕೆಂಬ ಉತ್ಸುಕತೆಯಿಂದ, ನಿಧಾನವಾಗಿ ಹರಿದಳೆಂದು ಉತ್ಪ್ರೇಕ್ಷಿಸು ತ್ತಾರೆ **ಗೋವಳರೆಲ್ಲರ** = ಗೋಪಾಲಕರೆಲ್ಲರ, **ಹಾವಭಾವದಲಿ** = ಮುಖದ ಹಾವಭಾವ ವಿಲಾಸಗಳಿಂದ, **ಸುರರು** = ದೇವತಾಗಣ, **ಸುಮಗಳು** = ಆಕಾಶದಲ್ಲಿ ನೆರೆದು, ಶ್ರೀಕೃಷ್ಣನ ಮೇಲೆ ಹೂವಿನಮಳೆ ಗರೆದರು. **ಸರಿದು ಪೋಗಿ** = ನಿಧಾನವಾಗಿ ಹೋಗಿ, **ಕದಂಬ ವನದೊಳು** = ಕದಂಬ ಮರಗಳ ತೋಪು (ನೀಪ ವೃಕ್ಷ ಸಮೂಹ),



೫೯೫

(ಅಂಕಿತ ಶ್ರೀಕೃಷ್ಣ)

ಉಗಾಭೋಗ

ಜಾರತ್ವವನು ಮಾಡಿದ ಪಾಪಂಗಳಿಗೆಲ್ಲ
ಗೋಪೀಜನ ಜಾರನೆಂದರೆ ಸಾಲದೇ
ಚೋರತ್ವವನು ಮಾಡಿದ ಪಾಪಂಗಳಿಗೆಲ್ಲ
ನವನೀತ ಚೋರನೆಂದರೆ ಸಾಲದೇ
ಕ್ರೂರತ್ವವನು ಮಾಡಿದ ಪಾಪಂಗಳಿಗೆಲ್ಲ
ಮಾವನ ಕೊಂದವನೆಂದರೆ ಸಾಲದೇ
ಪ್ರತಿದಿವಸ ಮಾಡಿದ ಪಾಪಂಗಳಿಗೆಲ್ಲ
ಪತಿತಪಾವನನೆಂದರೆ ಸಾಲದೇ
ಇಂತಿಪ್ಪ ಮಹಿಮೆಯೊಳೊಂದನಾದರು ಒಮ್ಮೆ
ಸಂತತ ನೆನೆವರ ಸಲಹುವ ಸಿರಿಕೃಷ್ಣ

**ಅರ್ಥವಿವರಣೆ :—**

ಶ್ರೀಕೃಷ್ಣನ ನಾಮಸ್ಮರಣೆಯ ಮಹಿಮೆಯನ್ನು ಪ್ರತಿಪಾದಿಸುವ ಸುಂದರವಾದ ಉಗಾಭೋಗವಿದು.

**ಜಾರತ್ವ** = ಪರಸ್ತ್ರೀಗಮನ. ಇದು ಮಹಾಪಾಪ, ಆದರೆ ಶ್ರೀಕೃಷ್ಣನು ಗೋಪಿಯರ ಅಂಗಸಂಗ ಮಾಡಿದ ಪ್ರಸಂಗದ ರಹಸ್ಯವೇ ಬೇರೆ ಶ್ರೀಪರಮಾತ್ಮನು ಸ್ವರಮಣನು. ಆಪ್ತಕಾಮನು

ಶ್ರೀಲಕ್ಷ್ಮೀದೇವಿಯರಿಂದಲೂ ಶ್ರೀಹರಿಗೆ ಆಗಬೇಕಾದದ್ದು ಏನೇನೂ ಇಲ್ಲ. ಸ್ವೇಚ್ಛೆಯಿಂದ ಪ್ರವರ್ತಿಸುವ ಸರ್ವಸ್ವತಂತ್ರನು. ಪರಾಪೇಕ್ಷ ರಹಿತನು. ಇಲ್ಲಿ ಪ್ರಮೇಯದ ರಹಸ್ಯವೇನೆಂದರೆ, ಗೋಪಿಕಾಸ್ತ್ರೀಯರ ಬಿಂಬನಾದ ಶ್ರೀಹರಿಯೇ ತನ್ನಲ್ಲೇ ತಾನು ರಮಿಸಿದನು. ಇವರಿಂದ ಬಿಂಬ ಕ್ರಿಯಾದ್ವಾರಾ ಪ್ರತಿಬಿಂಬಭೂತರಾದ ಗೋಪಿಯರಿಗೆ ಆನಂದ ಭೋಗ.

**ನವನೀತ ಚೋರ**=ಬೆಣ್ಣೆಯ ಕಳ್ಳನೆಂದರೆ ಸಾಲದೇ ? – ಎಂದು ಸವಾಲು ಹಾಕುತ್ತಾರೆ ಶ್ರೀ ವ್ಯಾಸರಾಜರು ! **ಈಶಾವಾಸ್ಯಮಿದಂ ಸರ್ವಂ**–ಎಂಬ ಉಪನಿಷದ್ವಾಕ್ಯದಂತೆ ಬ್ರಹ್ಮಾಂಡಗತ ಸಮಸ್ತ ವಸ್ತುಗಳೂ ಶ್ರೀಪರಮಾತ್ಮನದೇ. ಅವನನ್ನು ಬಿಟ್ಟು ಯಾವ ಪದಾರ್ಥವೂ ಇಲ್ಲ. ಬೇರೆ ಯವರ ವಸ್ತುವನ್ನು ಕದಿಯುವುದಕ್ಕೆ "ಚೌರ್ಯ" ಎನ್ನುವರು. ಸಮಸ್ತ ವಸ್ತುಗಳೂ ಭಗವದಧೀನವೆಂದಮೇಲೆ ಚೌರ್ಯವೆಲ್ಲಿಂದಬಂತು ? ಅವನಿಗೆ ಸೇರಿದ ವಸ್ತುವನ್ನು ಅವನೇ ತೆಗೆದುಕೊಂಡನು ಶ್ರೀಹರಿಯು ಸರ್ವಸಾರ ಭೋಕ್ತನು. ಸ್ವಾದ್ವಿರಸವನ್ನು ಮಾತ್ರ ಸ್ವೀಕರಿಸುವ ಸ್ವರಮಣನು. **ಮಾವನ ಕೊಂದವನೆಂದರೆ** – ತನ್ನ ಸೋದರಮಾವನಾದ ಕಂಸಾಸುರರನ್ನು ಸಂಹರಿಸಿದವನು ಶ್ರೀಕೃಷ್ಣ ಕ್ರೂರಿಯೂ ಪಾಪಿಷ್ಠನೂ ಆದ ಕಂಸನು ತನ್ನ ಪ್ರೀತಿಯ ತಂಗಿ ದೇವಕಿಯನ್ನೇ ತುರಂಗದಲ್ಲಿಟ್ಟ. ನಿಷ್ಕರುಣೆಯಾಗಿ ಅವಳ ಮಕ್ಕಳನ್ನು ಕೊಂದನು ಅಂತಹವನ ಸಂಹಾರ ಲೋಕೋಪಕಾರವಲ್ಲವೇ ? **ಪತಿತಪಾವನ** = ಸಜ್ಜನರು ಕರ್ಮವಶದಿಂದಲಾಗಲೀ, ಶಾಪನಿಮಿತ್ತ ವಾಗಲೀ ಅಸುರಾವೇಶದಿಂದಲಾಗಲೀ ಪಾಪಕರ್ಮಗಳನ್ನು ಮಾಡುವರು. ತದನಂತರ ಪಶ್ಚಾತ್ತಾಪ ಪಟ್ಟು ಕರುಣಾಳುವಾದ ಕಮಲನಾಭನನ್ನು ಶರಣು ಹೊಂದುವರು. ಅಂತಹ ಸಜ್ಜನರ ಪ್ರಾಪಪ್ರಕ್ಷಾಳನಗೈದು, ಅವರನ್ನು ಶುದ್ಧರನ್ನಾಗಿಸುವ ಪರಮಾದಯಾಸಾಗರನು ಆ ಪರಮನು. ಶ್ರೀಹರಿಯ ನಾಮಸ್ಮರಣೆಯಿಂದ ಸಕಲದುರಿತ ಪರಿಹಾರವೆಂಬ ತತ್ತ್ವವನ್ನು ಪ್ರಸಕ್ತ ಉಗಾಭೋಗವು ಪ್ರತಿಪಾದಿಸುವುದು.



## ೫೯೭

## (ಅಂಕಿತ–ಶ್ರೀಕೃಷ್ಣ)

**ರಾಗ–ಧನ್ಯಾಸಿ (ಪರಾಂಡ್)** **ಆದಿತಾಳ**

ಕೊಡೋ ಕೊಡೋ ಕೊಡೋ ॥ ॥ಪ॥

ತಡಮಾಡಬೇಡ ಹರಿ
ಮಡದಿಯರುಡುವ ಸೀರೆಗಳ ॥ಅ॥

ದೀನರಕ್ಷಕ ಎಮ್ಮ ಮಾನವನುಳಿಸೋ
ಮಾನಿನಿ ಲೋಲಾ ಮಮತೆಯ ನಿಲಿಸೋ ॥ ॥೧॥

ಭಂಡು ಮಾಡದಿರೋ ಭಾವಜನಯ್ಯನೆ
ಪುಂಡರೀಕಾಕ್ಷ ನೀ ದಯಮಾಡೋ ॥ ॥೨॥

ಗರತಿಯರನು ಗೇಲಿಮಾಡುವುದೇಕೊ
ಸರಸಿಜನಾಭ ಶ್ರೀಕೃಷ್ಣರಾಯ ॥ ॥೩॥



**ಅರ್ಥವಿವರಣೆ :**

ಗೋಪಿಕಾಸ್ತ್ರೀಯರು ಯಮುನಾನದಿಯಲ್ಲಿ ಸ್ನಾನಮಾಡುವುದಕ್ಕಾಗಿ ತಮ್ಮ ಸೀರೆಗಳನ್ನು ದಡದಲ್ಲಿದ್ದ ಮೆಟ್ಟಿಲುಗಳ ಮೇಲಿಟ್ಟು, ನದಿಯಲ್ಲಿ ಇಳಿದರು. ಆಗ ತುಂಟನಾದ ಶ್ರೀಕೃಷ್ಣನು ಅಲ್ಲಿಗೆ ಬಂದ, ಅವರನ್ನು ಗೇಲಿ ಮಾಡುವ ಉದ್ದೇಶ್ಯದಿಂದ ಆ ಸೀರೆಗಳನ್ನು ತೆಗೆದುಕೊಂಡು ಸಮೀಪದ ಮರದಮೇಲೇರಿದನು. ಆಗ ಗೋಪಿಯರು ತಮ್ಮ ವಸ್ತ್ರವನ್ನು ಕೊಡು ಎಂತ ಶ್ರೀಕೃಷ್ಣನನ್ನು ಅಂಗಲಾಚಿದರು. ಈ ಪ್ರಸಂಗವನ್ನು ಶ್ರೀವ್ಯಾಸರಾಜಗುರುಸಾರ್ವಭೌಮರು ವರ್ಣಿಸುತ್ತಾರೆ ಪ್ರಸಕ್ತ ಕೀರ್ತನೆಯಲ್ಲಿ.

**ಮಡದಿಯರು ಉಡುವ** = ಪತ್ನಿಯರಾದ ಸ್ತ್ರೀಯರು ಉಡುವ ಸೀರೆಗಳನ್ನು. **ಮಾನಿನಿ ಲೋಲಾ** = ಸ್ತ್ರೀಯರನ್ನು ಮೋಹಗೊಳಿಸುವ ಸುಂದರಮೂರ್ತಿ ಶ್ರೀಕೃಷ್ಣ. **ಮಮತೆಯ ನಿಲಿಸೋ** = ನಿನ್ನಲ್ಲಿ ಭಕ್ತಿ ಭಾವವನ್ನು ಸ್ಥಿರಪಡಿಸು. **ಭಂಡು ಮಾಡದಿರೋ** = ಹುಡುಗಾಟಮಾಡಬೇಡ. **ಭಾವಜನಯ್ಯನೆ** = ಮನ್ಮಥಜನಕನೆ **ಪುಂಡರೀಕಾಕ್ಷ** = ಕಮಲದಳದಂತೆ ವಿಸ್ತಾರವಾದ ನೇತ್ರವುಳ್ಳವನು. **ಗರತಿಯರನು** = ಲಗ್ನವಾದ ಸ್ತ್ರೀಯರು, **ಸರಸಿಜನಾಭ** = ತನ್ನ ನಾಭಿಯಲ್ಲಿ ಲೋಕಾತ್ಮಕವಾದ ಸುವರ್ಣಾತ್ಮಕ ಕಮಲವನ್ನು ತನ್ನ ಇಚ್ಛಾಮಾತ್ರದಿಂದ ಸೃಷ್ಟಿಸಿದ ಶ್ರೀಪದ್ಮನಾಭನು.



## ೫೯೭

## (ಅಂಕಿತ–ಶ್ರೀಕೃಷ್ಣ)

**ರಾಗ–ಶಹನ** **ಛಾಪುತಾಳ**

ಯಾಕೆ ಬೃಂದಾವನ ಯಾಕೆ ಗೋಕುಲ ನಮಗೆ
ಯಾಕೆ ಬಂದೆಯೋ ಉದ್ಧವ ॥ ॥ಪ॥

ಯಾಕೆ ಸ್ನೇಹದಮಾತು ಲೋಕಮೋಹಕ ತಾನು
ಆ ಕುಬ್ಜೆಯನು ಕೂಡಿದ–ಉದ್ಧವ॥ ॥ಅ॥

ಬಿಲ್ಲುಗಾರನ್ನಯನ ಬ್ಯಾಡೆನಗೆ ನಡೆನೋಟ
ಇಲ್ಲದಂತಾಯಿತಲ್ಲ
ತಲ್ಲಣಿಸುತ್ತಿದೆ ತಾಪ ಮೈಯೊಳು ಹೆಚ್ಚಿ
ಪರವಶವಾಯಿತಲ್ಲ
ಎಲ್ಲರನಗಲಿಸಿದ ಖುಲ್ಲ ಅಕ್ರೂರ ನಮ್ಮ
ವಲ್ಲಭನ ಕರೆದೊಯ್ದನೇ

ಮಲ್ಲರ ಮರ್ಧಿಸಿದ ಮಾವ ಕಂಸನ ಕೊಂದ
ವಲ್ಲಭನ ತೋರಿಸ್ಯೆಯು–ಉದ್ಧವ ॥ ॥೧॥

ಅನುದಿನವಾದರಸಿ ಅಧರಾಮೃತವನಿತ್ತು
ಆನಂದವನು ತೋರುವ
ಮನದ ಮರ್ಮವ ತಿಳಿದು ಮನಸಿಜನ್ಯೆಯನು
ಮಧುರ ಮಾತಿಲಿ ದಣಿಸುವ
ಕನಸಿನೊಳು ಕಂಡ ತೆರನಾಯಿತು ನೋಡು
ಮುನಿವಂದ್ಯ ತಾನೇ ಬಲ್ಲ
ವನಜಾಕ್ಷ ವಾಸುದೇವನ ತಂದು ತೋರಿಸಿ
ಒಡಗೂಡಿಸ್ಯೆಯು ನೀನೆ–ಉದ್ಧವ ॥ ॥೨॥

ಕರುಣಾಬ್ಧಿಯೆಂಬರಾ ಕಪಟನಾಟಕದವನ
ಸರಸ ವಿರಸಮಾಡಿದ
ಸ್ಮರಿಸಿದವರ ಕಾಯ್ವ ಶರಣಜನ ಪಾಲಕ
ಮರೆತನೇತಕೋ ಎಮ್ಮನು
ತ್ವರಿತದಿಂದಲಿ ಪೋಗಿ ತರುಣೇರಗೋಳ್ಹೇಳಿ
ಬರಮಾಡಬೇಕೆಂಬೆನೋ
ನೆರೆ ನಂಬಿದವರನ್ನು ಪೊರೆವ ಶ್ರೀಕೃಷ್ಣ ನೀ
ಪರಿಯಲ್ಲಿ ಪೇಳಬಾರೋ–ಉದ್ಧವ ॥ ॥೩॥

**ಅರ್ಥವಿವರಣೆ:–**

**ಉದ್ಧವ** = ಶ್ರೀಕೃಷ್ಣನ ಮಂತ್ರಿ–ಸ್ನೇಹಿತ. ವಸುದೇವನ ತಮ್ಮನಾದ ದೇವಭಾಗನ ಮಗ. ಕೃಷ್ಣನು ಮಥುರೆಯಲ್ಲಿ ಕಂಸನನ್ನು ಕೊಂದ ಸಮಾಚಾರವನ್ನು ಗೋಕುಲಕ್ಕೆ ತಿಳಿಸಿದಾಗ, ಗೋಪಿಯರು ಉದ್ಧವನೊಡನೆ ಸಂಭಾಷಿಸಿದ ಪ್ರಸಂಗವಿಶೇಷವಿದು.

ಶ್ರೀಕೃಷ್ಣನ ವಿಯೋಗದ ತಾಪದಿಂದ ಬಳಲಿದ ಗೋಪಿಯರು ಆ ವಿರಹತಾಪವನ್ನು ಸೈರಿಸಲಾರದೇ ಉದ್ಧವನಲ್ಲಿ ತಮ್ಮ ಅಂತರಂಗದ ಅಳಲನ್ನು ತೋಡಿಕೊಳುತ್ತಾರೆ. **ಕುಬ್ಜೆ** = ಕಂಸನ ದಾಸಿ. ಪ್ರತಿದಿನವೂ ಪರಿಮಳ ಯುಕ್ತವಾದ ಗಂಧವನ್ನು ಕಂಸನಿಗೆ ತಂದು ಕೊಡುತ್ತಿದ್ದಳು. ಮಧುರೆಗೆ ಬಂದ ರಾಮಕೃಷ್ಣರು ಮಾರ್ಗಮಧ್ಯದಲ್ಲಿ ಕುಬ್ಜೆಯನ್ನು ಕಂಡು, ಅವಳಿಂದ ಗಂಧವನ್ನು ಸ್ವೀಕರಿಸಿ, ತನ್ನ ಮೈಯ್ಗೆ ಪೂಸಿಕೊಂಡನು. ಅವಳನ್ನು ತನ್ನ ಕಾಲಿನ ಬೆರಳಿನಿಂದ ಆಧಾರಕೊಟ್ಟು ನಿಲ್ಲಿಸಿ, ಅವಳ ಗೂನುಬೆನ್ನನ್ನು ನೇರವಾಗಿ ಮಾಡಿ ಅವಳ ಕುರೂಪವನ್ನು ಪರಿಹರಿಸಿದನು. ಶಾಪಗ್ರಸ್ತಳಾದ ಗಂಧರ್ವ ಕನ್ಯೆ.

**ಬಿಲ್ಲುಗಾರನಯ್ಯನ** = ಬಿಲ್ಲುಹಬ್ಬದ ನೆಪದಲ್ಲಿ ಕಂಸನು ರಾಮ ಕೃಷ್ಣರನ್ನು ಮಧುರಾಪಟ್ಟಣಕ್ಕೆ ಅಕ್ರೂರನ ದ್ವಾರಾ ಕರೆಯಿಸಿಕೊಂಡನು. ಆದರಲ್ಲಿ ಶ್ರೀಕೃಷ್ಣನು ಪಾತ್ರವಹಿಸಬೇಕಾದ ಕಾರಣದಿಂದ, ಬಿಲ್ಲುಗಾರ ನೈಯನ ಎಂದರ್ಥ. ಇನ್ನೊಂದರ್ಥ—ಬಿಲ್ಲುಗಾರನೆಂದರೆ—ಕಬ್ಬಿನ ಜಲ್ಲೆ ಯನ್ನೇ ಧನುಸ್ಸನಾಗಿ ಉಳ್ಳ ಮನ್ಮಥನು. ಅವನ ಅಯ್ಯ—ಅಂದರೆ ಜನಕನಾದ ಶ್ರೀಕೃಷ್ಣನೆಂದರ್ಥ. **ಬ್ಯಾಟೆನಗೆ** = ಮನಮೋಹಕವಾದ (ಸೆರೆಹಿಡಿ ಯುವ) ಮಂದಹಾಸ. **ನಡೆ** = ಅವನ ಗಂಭೀರವಾದ ಪದಚಲನೆ. **ನೋಟ** = ವೈಯ್ಯಾರದ ಮೋಹಕ ನೋಟ. **ತಲ್ಲಣಿಸುತಿದೆ ತಾಪ** = ಶ್ರೀಕೃಷ್ಣನ ಅಗಲುವಿಕೆಯಿಂದ ಉಂಟಾದ ವಿರಹತಾಪದಿಂದ ನಮ್ಮ ಮನಸ್ಸು ಕಳವಳಗೊಂಡು ಅಸ್ತವ್ಯಸ್ತವಾಗಿದೆ—ಎನ್ನುತ್ತಾರೆ ಆ ಗೋಪಿಯರು ಉದ್ಧವನ ಮುಂದೆ. **ಖುಲ್ಲ** = ಕ್ರೂರಿಯಾದ (ಹೆಸರು ಮಾತ್ರ ಅಕ್ರೂರ. ಆದರೆ ಅವನ ಕಾರ್ಯ ಕ್ರೂರತನದಿಂದ ಕೂಡಿದೆ). **ವಲ್ಲಭನ** = ಪ್ರಿಯ ನಾದ ಶ್ರೀಕೃಷ್ಣನನ್ನು. **ಮಲ್ಲರ** = ಚಾಣೂರ ಮತ್ತು ಮುಷ್ಟಿಕ ಎಂಬ ಅಜೇಯರಾದ ಜಟ್ಟಿಗಳನ್ನು ಗೆದ್ದ ಶ್ರೀಕೃಷ್ಣ. **ಅನುದಿನವಾದರಿಸಿ** = ಪ್ರತಿನಿತ್ಯದಲ್ಲೂ ನಮ್ಮನ್ನು ಪ್ರೀತ್ಯಾದರಗಳಿಂದ ಆನಂದಪಡಿಸುತ್ತಿದ್ದ. **ಮನಸಿಜನೈಯನು** = ಮನ್ಮಥಜನಕನು (ಮನಸಿಜ—ಶ್ರೀಪರಮಾತ್ಮನ ಮನಸ್ಸಿನಿಂದ ಜಾತನಾದ ಮನ್ಮಥ). **ಮುನಿವಂದ್ಯ** = ಸಕಲ ತಾಪಸಿ

ಗಳಿಂದ ನಮ್ಮನ್ನಾವ. **ಒಡಗೂಡಿಸ್ಯೆಯು** = ಎಲೈ ಉದ್ಧವ, ನೀನೇ ಶ್ರೀಕೃಷ್ಣನನ್ನು ಕರೆತಂದು ನಮ್ಮೊಡನೆ ಸೇರಿಸು. **ಕರುಣಾಬ್ಧಿ** = ದಯಾಸಮುದ್ರ. **ಸರಸ ವಿರಸ** = ನಮ್ಮೊಡನೆ ಸರಸವಾಡುತಿದ್ದು, ಈಗ ಕಪಟನಾಟಕಮಾಡಿ ಮನಸ್ಸಿಗೆ ವಿರಸವನ್ನುಂಟುಮಾಡಿದ. **ತರುಣೀರ ಗೋಳ್ಹೇಳಿ** = ಗೋಪಿಯರ ಮನಸ್ಸಿನ ದುಃಖವನ್ನು ಆವನಿಗೆ ತಿಳಿಸಿ. **ಈಪರಿಯಲ್ಲಿ** = ಶ್ರೀಕೃಷ್ಣನಿಗೆ ನಮ್ಮನ್ನು ದುಃಖಿತರನ್ನಾಗಿ ಮಾಡುವ ಈ ರೀತಿ ಸರಿಯಲ್ಲವೆಂದು ತಿಳಿಸಿ, ಕರೆದು ತಾರೆಂದು ಕಳಕಳಿಯಿಂದ ಪ್ರಾರ್ಥಿಸುತ್ತಾರೆ ಉದ್ಧವವನ್ನು.



### ೫೯೮

### (ಅಂಕಿತ–ಹಯವದನ) (ಶ್ರೀವಾದಿರಾಜರ ಕೃತಿ)

**ರಾಗ–ಪೂರ್ವಿ** **ರೂಪಕತಾಳ**

ಲೋಕ ಭರಿತನೋ ರಂಗನೇಕಚರಿತನೋ ॥ ॥ಪ॥

ಕಾಕು ಜನರ ತರಿದು ತನ್ನೇಕಾಂತಭಕ್ತರ ಪೊರೆವ ಕೃಷ್ಣ ॥ ॥ಅ॥

ರಾಜಸೂಯ ಯಾಗದಲ್ಲಿ ರಾಜರಾಜರಿರಲು ಧರ್ಮ
ರಾಜಸುತನು ಈತನೆ ಸಭಾಪೂಜೆಗರ್ಹನೆನಿಸಿದಾತ ॥ ॥೧॥

ಮಿಕ್ಕ ನೃಪರ ಜರಿದು ಅಮಿತವಿಕ್ರಮ ಯದುವರನೆ ತನಗೆ
ತಕ್ಕ ರಮಣನೆಂದು ರುಕ್ಮಿಣಿ ಉಕ್ಕಿ ಮಾಲೆಯಿಕ್ಕಿದಳಾಗ ॥ ॥೨॥

ಉತ್ತರೆಯ ಗರ್ಭದಲ್ಲಿ ಸುತ್ತುಮುತ್ತಿದ ಅಸ್ತ್ರವನ್ನು
ಒತ್ತಿ ಚಕ್ರದಿಂದ ನಿಜಭಕ್ತ ಪರೀಕ್ಷಿತನ ಕಾಯ್ದ ॥ ॥೩॥

ಜ್ಞಾನಶೂನ್ಯನಾಗಿ ನೊಕ್ಕಿ ನಾನೆ ವಾಸುದೇವನೆಂದು
ಹೀನ ಪೌಂಡ್ರಕನ ಶಿರವ ಚಾಣರಾಯ ಖಂಡಿಸಿ ಮೆರೆದ ॥ ॥೪॥

ತನ್ನ ಸೇವಕಜನರ ಪೊರೆದು ಉನ್ನಂತ ಉಡುಪಿಯಲ್ಲಿ ನಿಂತು
ಘನ್ನ ಮಹಿಮೆಯಿಂದ ಮೆರೆವ ಪ್ರಸನ್ನ **ಹಯವದನ** ಕೃಷ್ಣ ॥ ॥೫॥

**ಪ್ರತಿಪದಾರ್ಥ :-**

**ಲೋಕಭರಿತನೋ** = ಬ್ರಹ್ಮಾಂಡಗತ ಸರ್ವದೇಶಗಳಲ್ಲಿ ಪೂರ್ಣ ವ್ಯಾಪ್ತನು. **ರಂಗ** = ಸರ್ವಜೀವರ ಅಂತರಂಗದಲ್ಲಿ ಕ್ರೀಡಿಸುವ ಬಿಂಬನು **ಅನೇಕಚರಿತನೋ** = ನಾನಾಮಹಿಮೆ ಮತ್ತು ವ್ಯಾಪಾರವುಳ್ಳವನು. **ಕಾಕುಜನರ** = ದುಷ್ಟಜನರ. **ತರಿದು** = ನಾಶಮಾಡಿ (ದುಷ್ಟಶಿಕ್ಷಣ ಕಾರ್ಯ). **ಏಕಾಂತಭಕ್ತರ** = ಅಂತರಂಗಭಕ್ತರನ್ನು. **ರಾಜಸೂಯ ಯಾಗ** = ಪಾಂಡವರು ಯುಧಿಷ್ಠರನ ನೇತೃತ್ವದಲ್ಲಿ ನಡೆಯಿಸಿದ ಅದ್ಭುತ ಯಾಗ. **ರಾಜರಾಜರಿರಲು** = ಅನೇಕ ಸುಪ್ರಸಿದ್ಧ ಅತಿರಥ ಮಹಾರಥ ರಿದ್ದರೂ, **ಧರ್ಮರಾಜಸುತನು** = ಯಮಧರ್ಮರಾಯನ ವರದಿಂದ ಕುಂತಿಯಲ್ಲಿ ಜನಿಸಿದ ಯುಧಿಷ್ಠಿರ. **ಸಭಾಪೂಜೆಗೆ** = ಅಗ್ರಪೂಜೆಗೆ **ಮಿಕ್ಕನೃಪರ** = ಶಿಶುಪಾಲನೇ ಮೊದಲಾದ ರಾಜರುಗಳನ್ನು. **ಜರಿಪು** = ತಿರಸ್ಕರಿಸಿ. **ಅಮಿತವಿಕ್ರಮ** = ಮಿತಿಯಿಲ್ಲದ ಪರಾಕ್ರಮಶಾಲಿ. **ಯದುವರನೆ** = ಯದುಕುಲ ತಿಲಕನಾದ ಶ್ರೀಕೃಷ್ಣನೇ. **ಉಕ್ಕಿ** = ಆನಂದೋದ್ರೇಕದಿಂದ. **ಮಾಲೆಯಲಿಕ್ಕಿದಳಾಗ** = ಶ್ರೀಕೃಷ್ಣನ ಕೊರಳಿಗೆ ಮಾಲೆಹಾಕಿ, ವರಿಸಿದಳು. **ಉತ್ತರೆ** = ವಿರಾಟರಾಯನ ಪುತ್ರಿ. ಅಭಿಮನ್ಯುವಿನ ಪತ್ನಿ ಪರೀಕ್ಷಿತನ ಮಾತೆ. **ಅಸ್ತ್ರವನ್ನು** = ಪರೀಕ್ಷಿತನು ಉತ್ತರೆಯ ಗರ್ಭದಲ್ಲಿರುವಾಗ, ಅಶ್ವತ್ಥಾಮನು ಕಲಿಯ ಆವಿಷ್ಟನಾಗಿ ಪಾಂಡವರ ಕುಲವನ್ನೇ ನಿರ್ವಂಶವಾಗಿ ಮಾಡಲು ಪ್ರತಿಜ್ಞೆಮಾಡಿ, ಬ್ರಹ್ಮಾಸ್ತ್ರ ಬಿಡಲು, **ಚಕ್ರದಿಂದ** = ಶ್ರೀಕೃಷ್ಣನು ತನ್ನ ಸುದರ್ಶನಚಕ್ರವನ್ನು

ಬಿಟ್ಟು ಗರ್ಭಸ್ಥ ಶಿಶುವನ್ನು ಸಂರಕ್ಷಿಸಿದ ಪ್ರಸಂಗ. **ಜ್ಞಾನಶೂನ್ಯನಾಗಿ** = ಅಜ್ಞಾನಿಯಾಗಿದ್ದ. **ಸೊಕ್ಕಿ** = ಮದದಿಂದ ಕೊಬ್ಬಿದ್ದ. **ಹೀನ ಪೌಂಡ್ರಕನ** = ಪುಂಡ್ರವಂಶದ ವಸುದೇವನ ಪುತ್ರ. ಶ್ರೀಕೃಷ್ಣನಂತೆಯೇ ತಾನೂ ಕೀರ್ತಿವಂತನಾಗಬೇಕೆಂಬ ದುರುದ್ದೇಶದಿಂದ ಕೃಷ್ಣನಂತೆಯೇ ಶಂಖ ಚಕ್ರಗಳನ್ನು ಧರಿಸಿ (ಕೃತಕಾಯುಧಗಳು) ಕೃಷ್ಣನೊಡನೆ ಹೋರಾಡಿ ಸೋತನು. ನಂತರ ಶಿವನನ್ನು ಕುರಿತು ತಪಸ್ಸು ಮಾಡಿ ಅವನನ್ನು ಮೆಚ್ಚಿಸಿ ಶಸ್ತ್ರಾಸ್ತ್ರಗಳನ್ನು ಪಡೆದನು. ಕೃಷ್ಣನ ಮೇಲೆ ಪ್ರಯೋಗಿಸಿದ ಆ ಅಸ್ತ್ರಗಳೆಲ್ಲವೂ ವ್ಯರ್ಥವಾಗಲು, ಕೊನೆಗೆ ನಿರಾಶನಾಗಿ ಕ್ಷುದ್ರಶಕ್ತಿಯನ್ನು ಪ್ರಯೋಗಿಸಿದನು. ಅದೂ ಕುಂಠಿತವಾಯಿತು. ಕೊನೆಗೆ ಕೃಷ್ಣನಿಂದಲೇ ಹತನಾದ. **ಘನ್ನಮಹಿಮೆಯಿಂದ** = ಉನ್ನತ ಮಹಾಮಹಿಮನಾಗಿ. **ಮೆರವ** = ಉಡುಪಿಯಲ್ಲಿ ವೈಭವಮೂರ್ತಿಯಾಗಿ ವಿಜೃಂಭಿಸುತ್ತಾ. **ಪ್ರಸನ್ನ** = ಭಕ್ತರಪಾಲಿಗೆ ಅನುಗ್ರಹಪ್ರದನಾಗಿ.

## ೩೯೯

### (ಅಂಕಿತ–ಹಯವದನ)

**೩ಗ–ನೀಲಾಂಬರಿ** **ಮಿಶ್ರಛಾಪತಾಳ**

ಏನು ಸುಕೃತವ ಮಾಡಿದಳೋ ಯಶೋದೆ
ಶ್ರೀನಿಧಿಯಾದ ಕೃಷ್ಣನ್ನ ಕರೆದು ಮುದ್ದಿಸುವಳಂತೆ ॥ ॥ಪ॥

ಗಂಗಾಜನಕನಿಗೆ ಗಡಿಗೆ ನೀರೆರೆವಳಂತೆ
ಮಂಗಳಾಂಗಗೆ ಶೃಂಗರಿಸುವಳಂತೆ
ತುಂಗ ಭೂಧರನ್ನ ತೊಟ್ಟಿಲೊಳು ತೂಗುವಳಂತೆ
ಕಂಗಳಿಗಗೋಚರನ ಕರೆದಪ್ಪಿಕೊಂಬಳಂತೆ ॥ ॥೧॥

ನಗವನೆತ್ತಿದವನ ಮಗುವೆಂದೆತ್ತುವಳಂತೆ
ನಿಗಮಗೋಚರನ ತಾ ನಿಟ್ಟಿಪಳಂತೆ
ಅಗಣಿತಸತ್ವನ್ನ ಹಗ್ಗದಿ ಕಟ್ಟುವಳಂತೆ
ಮಿಗೆ ನಿತ್ಯತೃಪ್ತಗೆ ಪಾಲನೆರೆವಳಂತೆ ॥ ॥೨॥

ಬಹುಮುಖನಿಗೆ ಭಾಮೆ ಮುದ್ದುಕೊಡುವಳಂತೆ
ಅಹಿತಲ್ಪನಿಗೆ ಹಾವತುಳಿದೀಯೆಂಬಳಂತೆ
ಮಹಾ ದೈತ್ಯದಲ್ಲಣಗೆ ಬಹು ಭಯವ ತೋರುವಳಂತೆ
ಮಹಿಮ ನರಸಿಂಹಗೆ ಗುಮ್ಮನ ತೋರುವಳಂತೆ ॥ ॥೩॥

ಚತುರ್ಮುಖಪಿತನ ಸುತನೆಂದೆತ್ತುವಳಂತೆ
ಶ್ರುತಿವಿನುತಗೆ ಜೋಗುಳಪಾಡುವಳಂತೆ
ಶತರವಿತೇಜಗಾರತಿಯನೆತ್ತುವಳಂತೆ
ಗತಭೀತನಿಗೆ ಭಾಮೆ ರಕ್ಷೆಯಿಕ್ಕುವಳಂತೆ ॥ ॥೪॥

ಕಡೆಗೋಲ ನೇಣ ಕೈಯಲಿ ಪಿಡಿದೊಲವಿಂದ
ಪಡುಗಡಲತಡಿಯ ದ್ವಾರಕನಿಲಯ
ಬಿಡದೆ ನೆಲೆಸಿದ ಹಯವದನ ಮುದ್ದು
ಉಡುಪಿನ ಕೃಷ್ಣನ ಉಡಿಯೊಳಿತ್ತುವಳಂತೆ ॥ ॥೫॥



**ಅರ್ಥವಿವರಣೆ :—**

ಪ್ರಸಕ್ತ ಕೀರ್ತನೆಯಲ್ಲಿ ಹಯವದನಮುದ್ರಾಂಕಿತರಾದ ಶ್ರೀ ವಾದಿರಾಜ ಗುರುಸಾರ್ವಭೌಮರು ಯಶೋದೆಯ ಪುಣ್ಯಾತಿಶಯವನ್ನು ಕೊಂಡಾಡಿದ್ದಾರೆ. ಅಪಾರ ಮಹಿಮಾಸಂಪನ್ನನಾದ ಅಪ್ರಮೇಯ ಶ್ರೀಕೃಷ್ಣನನ್ನು ಅಕ್ಕರೆಯಿಂದ ಪಾಲಿಸಿದ ರೀತಿಯಲ್ಲಿ ವರ್ಣಿಸುತ್ತಾರೆ.

**ಸುಕೃತ** = ಪುಣ್ಯ. **ಶ್ರೀನಿಧಿ** = ಶ್ರೀನಾಮಕಳಾದ ಲಕ್ಷ್ಮೀದೇವಿಗೆ ಭಾಗ್ಯಪ್ರದನಾದ. ಗಂಗಾಜನಕನಾದ ಮಂಗಳಸ್ವರೂಪನಿಗೆ ನೀರೆರೆದು ಸ್ನಾನ ಮಾಡಿಸುವಳಂತೆ. ಜ್ಞಾನಾನಂದ ಪರಿಪೂರ್ಣನಾದ ಶ್ರೀಹರಿಗೆ ನಾನಾ ರೀತಿ ಯಲ್ಲಿ ಶೃಂಗಾರಮಾಡುವಳಂತೆ. ಉನ್ನತ ಪರ್ವತವನ್ನು (**ತುಂಗಭೂಧರ**) ಎತ್ತಿದ ಶ್ರೀಕೃಷ್ಣನನ್ನು (ಗೋವರ್ಧನೋದ್ಧಾರಿ) ತೊಟ್ಟಿಲಿನಲ್ಲಿ ಹಾಕಿ ತೂಗುವಳಂತೆ. ಅಗೋಚರನಾದ ಶ್ರೀಹರಿಯನ್ನು ಹತ್ತಿರಕ್ಕೆ ಕರೆದು ಆಲಂಗಿಸಿ ಕೊಳ್ಳುವಳಂತೆ. ವೇದಪ್ರತಿಪಾದ್ಯನಾದವನನ್ನು ದೃಷ್ಟಿಸಿನೋಡುತ್ತಾಳಂತೆ. ಅಮಿತಶಕ್ತನನ್ನು ಹಗ್ಗದಿಂದ ಒರಳಿಗೆ ಕಟ್ಟುವಳಂತೆ. ನಿತ್ಯತೃಪ್ತನೂ ಮತ್ತು ಸ್ವರಮಣನೂ ಆದ ಸರ್ವಸಾರಭೋಕ್ತನಿಗೆ ಹಾಲು ಬೆಣ್ಣೆ ಕೊಡುವ ಳಂತೆ. ಸಹಸ್ರವದನವುಳ್ಳವನಿಗೆ ಆ ಸರಸಿಜಾಕ್ಷಿಯು ಎತ್ತಿ ಮುತ್ತುಕೊಡು ವಳಂತೆ. ಶೇಷನನ್ನೇ ಶಯನವನ್ನಾಗಿ ಉಳ್ಳ (**ಅಹಿತಲ್ಪನಿಗೆ**) ವಿಚಿತ್ರ ಮಹಿಮನಿಗೆ ಹಾವು ತುಳಿದೀಯಾ–ಎಂದು ಕಳವಳಪಡುವಳಂತೆ.ದಾನವಾಂತಕ ನಾದ ಆ ದೇವದೇವನಿಗೆ ಗದರಿಸಿ ಭಯತೋರುವಳಂತೆ ತುಂಗಮಹಿಮನಾದ ನರಸಿಂಹನಿಗೆ ಗುಮ್ಮನನ್ನು ತೋರಿಸಿ ಹೆದಸುರಿವಳಂತೆ. ಬ್ರಹ್ಮಪಿತನನ್ನು ತನ್ನ ಮಗನೆಂದು ಎತ್ತುವಳಂತೆ. ವೇದಸ್ತುತ್ಯನಿಗೆ ಜೋಗುಳ ಪಾಡುವ ಳಂತೆ. ಕೋಟಿಸೂರ್ಯಪ್ರಕಾಶನಿಗೆ ನೀರಾಜನ ಎತ್ತುವಳಂತೆ. ಭಯ ವಿದೂರನಿಗೆ (**ಗತಭೀತನಿಗೆ**) ಭಾಮೆ ರಕ್ಷೆ ಇಡುವಳಂತೆ. ಉಡುಪಿಯ ಕೃಷ್ಣನು ಒಂದು ಕೈಯಲ್ಲಿ ಕಡೆಗೋಲನ್ನು, ಇನ್ನೊಂದು ಕೈಯಲ್ಲಿ ಹಗ್ಗ ವನ್ನು (**ನೇಣ**) ಹಿಡಿದಿದ್ದಾನೆ. (ಗೋಪಾಲನವೇಷ). **ಪಡುಗಡಲ ತಡಿಯ** = ಪಶ್ಚಿಮ ಸಮುದ್ರದ ತೀರದಲ್ಲಿರುವ ರಜತಪೀರಪುರದಲ್ಲಿ (ಉಡುಪಿ) ಶ್ರೀಮನ್ಮಧ್ವಮುನಿಗಳಿಂದ ಸ್ಥಾಪಿತನಾದ ಹಯವದನನ್ನು ತನ್ನ ಊಡಿಯಲ್ಲಿ ಎತ್ತುವಳಂತೆ. ಅತ್ಯುತ್ತಮ ಉತ್ಪ್ರೇಕ್ಷಾಲಂಕಾರ.



## ೬೦೦

### (ಅಂಕಿತ ಹಯವದನ)

ರಾಗ–ಶಂಕರಾಭರಣ ಏಕತಾಳ

ನೆನೆವೆನನುದಿನ ನೀಲನೀರದ
ವರ್ಣನ–ಗುಣರನ್ನನ ‖ ‖ಪ‖

ಮುನಿಜನಪ್ರಿಯ ಮುದ್ದು ಉಡುಪಿನ
ರಂಗನ–ದಯಾಪಾಂಗನ ‖ ‖ಅ‖

ದೇವಕೀಜಠರೋದಯಾಂಬುಧಿ
ಚಂದ್ರನ–ಗುಣಸಾಂದ್ರನ
ಗೋವ್ರಜಕೆ ಘನ ಯಮುನೆಯ ದಾಟಿ
ಬಂದನ–ಅಲ್ಲಿ ನಿಂದನ
ಮಾವ ಕಳುಹಿದ ಮಾಯಾ ಶಟವಿಯ
ಕೊಂದನ–ಚಿದಾನಂದನ
ದೇವರಿಪು ದೈತ್ಯೇಂದ್ರ ಶಕಟನ
ಒದ್ದನ–ಶತ್ರುತಿಸಿದ್ಧನ ‖ ‖೧‖

ಗೋಕುಲದ ಗೋಪಿಯರ ವಂಚಕ
ಚೋರನ–ಬಹು ಧೀರನ
ಅನೇಕ ನಾರಿಯ ರ್‍ವರಸನವನು ಕ
ದ್ದೊಯ್ದನ–ತುರುಗಾಯ್ದನ
ನಾಕಿಯರಿಗೆಥೇನು ವತ್ಸ ವಿ–
ಘಾತನ–ವಿಖ್ಯಾತನ
ಕಾಕುಮತಿ ಕಾಳಿಂಗನ ಫಣ
ತುಳಿದನ–ಅವಗೊಲಿದನ ‖ ‖೨‖

ಶೈಲವನು ಅತಿಶಯದ ಬೆರಳಲಿ
ಆಂತನ–ಬಲವಂತನ
ಸೋಳ ಸಾಸಿರ ಬಾಲೆಯರ ಕರ
ಪಿಡಿದನ–ಸುಧೆಗುಡಿದನ
ಜಾತಿ ಭಾಮೆಯರೊಡನೆ ಜಲಕ್ರೀಡೆ
ಗಿಳಿವನ–ಅಲ್ಲಿ ನಲಿದನ
ಪೀಠೆಯರಿ ಬಲಸಿಯರಿಗಿಷ್ಟವ
ಕೊಟ್ಟನ–ಸಂತುಷ್ಟನ ॥ ॥೩॥

ಕ್ರೂರ ಬಕ ಕೇಶಿಗಳನೆಲ್ಲರ
ಸೀಳ್ದನ–ಸುರರಾಳ್ದನ
ಅಕ್ರೂರ ಕರೆಯಲು ಹರುಷದಿಂದಲಿ
ಬಂದನ–ಸುರವಂದ್ಯನ
ನಾರಿ ಕುಬುಜೆಗೆ ಭೂರಿ ಸಂತಃ
ವಿತ್ತನ–ಅತಿಶಕ್ತನ
ವಾರಣವನು ಕೆಡಹಿದಪ್ರತಿ
ಮಲ್ಲನ–ಅತಿಚೆಲ್ವನ ॥ ॥೪॥

ಸುಲಭದಿಂದಲಿ ಶಿವನ ಧನುವನು
ಮುರಿದನ–ನೆರೆಮೆರೆದನ
ಮಲೆತ ಮಲ್ಲರ ಕೆಡಹಿ ರಂಗದಿ
ನಿಂತನ–ಜಯವಂತನ
ಖಳಕುಲಾಗ್ರಣಿ ಕಂಸನೆಂಬನ
ಹೊಡೆದನ–ಹುಡಿಗೆಡೆದನ
ಬಲದಿ ತಾಯಿತಂದೆ ಬಂಧನ
ಕಡಿದನ–ಯಶ ಪಡೆದನ ॥ ॥೫॥

ಭುವನ ಪಟ್ಟವನುಗ್ರಸೇನಗೆ
ಕೊಟ್ಟನ–ಅತಿಶ್ರೇಷ್ಠನ
ಯುವತಿಯರಿಗುದ್ಧವನ ಕಳುಹಿದ
ಜಾಣನ–ಸುಪ್ರವೀಣನ
ವಿವಿಧ ವಿದ್ಯಾ ಕಲೆಗಳೆಲ್ಲವ
ಅರಿತನ–ಶುಭಚರಿತನ
ಜವನ ಶಿಕ್ಷಿಸಿ ದ್ವಿಜನ ಕಂದನ
ತಂದನ–ಆನಂದನ ॥ ॥೬॥

ಕುಮತಿ ಖಳ ಮಾಗಧನ ಯುದ್ಧದಿ
ಗೆದ್ದನ–ಅನವದ್ಯನ
ದ್ಯುಮಣಿ ಸಮುದ್ವಾರಕಿಯ ರಚಿಸಿದ
ಧೀರನ–ಗಂಭೀರನ
ಸುಮತಿ ಮುಚುಕುಂದನೊದ್ದು ಯವನನ
ಸುಟ್ಟನ–ಅತಿ ದಿಟ್ಟನ
ವಿಮಲ ಸುಚರಿತ್ರಾಷ್ಟಮಹಿಷಿಯ
ರಾಳ್ದನ–ನೆರೆ ಬಾಳ್ದನ ॥ ॥೭॥

ಮುರ ನರಕ ಮುಖ್ಯರನು ಚಕ್ರದಿ
ತರಿದನ–ಕರಿವರದನ
ಸುರತರುವ ಸತಿಗಾಗಿ ತಂದ ನ
ಮರ್ದನ–ಜಗತ್ಕರ್ತನ
ದುರುಳ ಶಿಶುಪಾಲಾದಿ ದೈತ್ಯ ಸಂ
ಹಾರನ–ಬಹುಶೂರನ
ಕುರುಕುಲಕೆ ಲಯವಿತ್ತ ಪಾಂಡವ
ಪ್ರಿಯನ–ಕವಿಗೇಯನ ॥ ॥೮॥

ಇಂತು ಇಳೆಯು ಸುಜನರ ಸಲಹುವ
ಕಾಂತನ– ಸಿರಿವಂತನ
ಪಂಥಪ್ರಾಜ್ಞ ಪ್ರಸನ್ನ ಹಯವ
ದನನ– ಮುನಿಮಾನ್ಯನ
ಸಂತತವೀ ಸಾರಕಥೆಯನು
ಕೇಳ್ವರ– ನೆರೆಬಾಳ್ವರ
ಕಂತುಪಿತ ಕಾರುಣ್ಯದಿಂದಲಿ
ಪೊರೆವನು– ಸುಖಗರೆವನು ॥ ॥೯॥



**ಅರ್ಥವಿವರಣೆ :—**

ಶ್ರೀವಾದಿರಾಜ ಗುರುಸಾರ್ವಭೌಮರು ಈ ಕೀರ್ತನೆಯಲ್ಲಿ ಶ್ರೀಕೃಷ್ಣನ ಲೀಲಾವೈಭವವನ್ನು ಸಮಗ್ರವಾಗಿ ಚಿತ್ರಿಸಿರುತ್ತಾರೆ

**ನೀಲನೀರದ** = ನೀಲಮೇಘ ಶ್ಯಾಮ. (ನೀರದ = ನೀರನ್ನು ಕೊಡುವ ಮೇಘಗಳು). **ಗುಣರನ್ನನ** = ಅನಂತ ಕಲ್ಯಾಣಗುಣಗಣ ಪೂರ್ಣನು **ದಯಾಪಾಂಗನ** = ತನ್ನ ಕಡೆಗಣ್ಣಿನ ಕುಡಿ ನೋಟದಿಂದ ಕಾರುಣ್ಯವನ್ನು ಸೂಸುವ. **ಗೋವ್ರಜಕೆ** = ನಂದಗೋಕುಲಕ್ಕೆ, **ಘನ** = ಪ್ರವಾಹದಿಂದ ತುಂಬಿ ಹರಿಯುತ್ತಿದ್ದ, **ಮಾವ** = ಸೋದರಮಾವನಾದ ಕಂಸ. **ಮಾಯಾಶಟವಿಯ** = ಮಾಯಾವಿಯೂ ಸ್ವಭಾವತಃ ದುಷ್ಟಳೂ ಆದ ಪೂತನಿ' ಎಂಬ ರಕ್ಕಸಿ. **ಚಿದಾನಂದನ** = ಅಪ್ರಾಕೃತ ಜ್ಞಾನಾನಂದ ಮಯನ, **ದೇವರಿಪು** = ದೇವತೆಗಳಿಗೆ ಶತ್ರುವಾದ, **ಶಕಟನ** = ಕಂಸನ ಪರಿವಾರದಲ್ಲಿ ಒಬ್ಬ ರಾಕ್ಷಸ. ಬಂಡಿಯ ರೂಪವನ್ನು ತಾಳಿ ಗೋಕುಲಕ್ಕೆ ಬಂದ. ಆ ಬಂಡಿಯ ಬುಡದಲ್ಲಿ ಬಾಲಕೃಷ್ಣನನ್ನು ಯಶೋದೆ ಮಲಗಿಸಿದ್ದಳು. ಕೃಷ್ಣನು ಲೀಲಾಜಾಲವಾಗಿ ತನ್ನ ಅಂಗಾಲಿನಿಂದ ಶಕಟವನ್ನು

ಒದ್ದ. ಆ ಆಘಾತಕ್ಕೆ ಬಂಡಿ ಮುರಿದು, ಶಕಟಾಸುರನು ಸಂಹೃತನಾದ. **ಶ್ರುತಿಸಿದ್ಧನ** = ವೇದಪ್ರತಿಪಾದ್ಯನ. ವೇದಗಳಿಗೆ ಮುಖ್ಯ ವಿಷಯನು ಶ್ರೀಕೃಷ್ಣ.

**ನಾರಿಯರ್ವಸನವನು** = ಗೋಪಿಯರ ಸೀರೆಗಳನ್ನು ಕದ್ದು, ಶ್ರೀಕೃಷ್ಣನು ಮರದಮೇಲೇರಿದನು ಅವರು ಅಂಗಲಾಚಿ ಬೇಡಲು, ಅವರ ಸೀರೆಗಳನ್ನು ಹಿಂದಿರುಗಿಸಿದ ಪ್ರಸಂಗ. **ತುರುಗಾಯ್ದನ** = ಪಸುಗಳನ್ನು ಕಾಯ್ದ ಗೋಪಾಲನ. **ನಾಕಿಯರಿಗರಿ** = ದೇವತೆಗಳಿಗೆ ಶತ್ರುವಾದ (ನಾಕಿಯರಿಗೆ ಸ್ವರ್ಗವಾಸಿಗಳಾದ ದೇವತೆಗಳು). **ಧೇನುಕ** = ಕತ್ತೆಯ ರೂಪವನ್ನು ತಾಳಿ ತನ್ನ ಪರಿವಾರಸಹಿತ ಬೃಂದಾವನದ ಸಮೀಪದಲ್ಲಿದ್ದ ತಾಳೆವನದಲ್ಲಿ ವಾಸಿಸುತ್ತಿದ್ದ ಶ್ರೀಕೃಷ್ಣನು ಬಲರಾಮನಸಹಿತ ಗೋಪಬಾಲಕರೊಡಗೂಡಿ ಆ ವನಕ್ಕೆ ಬಂದ ಧೇನುಕಾಸುರನು ಭಯಂಕರವಾಗಿ ಘರ್ಜಿಸುತ್ತ ಬಲರಾಮನ ಮೇಲೆ ಬಿದ್ದ. ಬಲರಾಮನಲ್ಲಿ ಬಲಾವಿಷ್ಟನಾಗಿದ್ದ ಶ್ರೀಕೃಷ್ಣನಿಂದ ಧೇನುಕಾಸುರ ಸಂಹೃತನಾದನು. **ವತ್ಸ** = ಒಬ್ಬ ರಕ್ಕಸ ಬಲರಾಮಕೃಷ್ಣರು ಯಮುನಾತೀರದಲ್ಲಿ ಆಡುತ್ತಿದ್ದಾಗ ಕರುವಿನ (ವತ್ಸ) ರೂಪ ತಾಳಿ ಕರುಗಳ ಮಂದೆಯನ್ನು ಹೊಕ್ಕ. ಶ್ರೀಕೃಷ್ಣ ಏನೂ ಅರಿಯದವನಂತೆ ಅದರ ಬಳಿಗೆ ಹೋಗಿ ಹಿಂಗಾಲುಗಳನ್ನು ಹಿಡಿದೆತ್ತಿ ನೆಲಕ್ಕೆ ಅಪ್ಪಳಿಸಿ ಆ ವತ್ಸಾಸುರನನ್ನು ಕೊಂದ ಪ್ರಸಂಗ. **ಕಾರುಮತಿ** = ದುಷ್ಟಬುದ್ಧಿಯುಳ್ಳ. **ಕಾಳಿಂಗ** = ಭಯಂಕರ ಸರ್ಪ. ಕಶ್ಯಪಮುನಿಗಳಿಂದ ಕದ್ರುವಿನಲ್ಲಿ ಜನಿಸಿದನು. ರಮಣಕದ್ವೀಪದಲ್ಲಿ ವಾಸವಾಗಿದ್ದ ಗರುಡನ ಕಾಟವನ್ನು ಸಹಿಸಲಾರದೆ ಕಾಳಿಂಗನು ಯಮುನಾನದಿಯ ಮಡುವನ್ನು ಹೊಕ್ಕ. ಸೌಭರಿಋಷಿಗಳ ಶಾಪದ ಕಾರಣದಿಂದ ಗರುಡನು ಅಲ್ಲಿ ಬರಲು ಸಾಧ್ಯವಿರಲಿಲ್ಲ. ಕಾಳಿಂಗನ ವಿಷಜ್ವಾಲೆಯಿಂದ ಆ ಮಡುವಿನ ನೀರೆಲ್ಲವೂ ವಿಷಮಯವಾಯಿತು. ಆ ನೀರನ್ನು ಕುಡಿದ ಗೋವುಗಳು ಮೃತಪಟ್ಟವು. ಶ್ರೀಕೃಷ್ಣನು ಲೀಲಾಜಾಲವಾಗಿ ಆ ಮಡುವಿಗೆ ಧುಮುಕಿ, ಕಾಳಿಂಗನ ಹೆಡೆಗಳ ಮೇಲೆ

ನರ್ತಿಸಿದನು ಕೃಷ್ಣನ ಪಾದಾಘಾತದಿಂದ ಝರ್ಝರಿತನಾದ ಕಾಳಿಂಗ ನೆತ್ತರು ಕಾರಿದ. **ಅವಗೊಲಿದನ** = ನಾಗಕನ್ಯೆಯರು ಶ್ರೀಕೃಷ್ಣನಲ್ಲಿ ಪತಿಭಿಕ್ಷೆ ಬೇಡಲಾಗಿ ಕರುಣಾಮಯನಾದ ಕೃಷ್ಣನು ಕಾಳಿಂಗನನ್ನು ಪಾತಾಳಕ್ಕೆ ಕಳುಹಿಸಿ ಸಂರಕ್ಷಿಸಿದ ಕಥಾಪ್ರಸಂಗ. **ಶೈಲವನು** = ಇಂದ್ರನು ತನಗೆ ಪೂಜೆ ಸಲ್ಲಿಸಲಿಲ್ಲವೆಂಬ ಕೋಪದಿಂದ ಪ್ರಚಂಡ ಮಳೆಯನ್ನು ನಂದಗೋಕುಲದ ಮೇಲೆ ಗರೆದನು. ಆಗ ಸಕಲಗೋಪಾಲರೂ ಪಶುಕರುಗಳೂ ಕಂಗೆಟ್ಟವು. ಆಗ ದಯಾಮಯನಾದ ಆ ದಾಮೋದರನು ಗೋವರ್ಧನಪರ್ವತವನ್ನು ತನ್ನ ಕೈಯಿನ ಕಿರುಬೆರಳಿನಿಂದ ಎತ್ತಿ ಸಕಲರನ್ನು ಸಂರಕ್ಷಿಸಿದನು **ಅಹಿಶಯನ** = ಶೇಷಶಾಯಿಯಾದ ಶ್ರೀಪರಮಾತ್ಮ. **ಆಂತೆಸ** = ಎತ್ತಿ ಕೊಡೆಯಂತೆ ಹಿಡಿದನು.

**ಸೋಳಸಾಸಿರ** = ಹದಿನಾರು ಸಾವಿರ ಗೋಪಕನ್ಯೆಯರು. **ಖರ** = ಕಂಸನ ಪರಿವಾರಭೂತನಾದ ಒಬ್ಬ ದುಷ್ಟರಾಕ್ಷಸ ಬಲರಾಮಕೃಷ್ಣರು ಗೋಪಬಾಲಕರೊಂದಿಗೆ ಗೋವುಗಳನ್ನು ಮೇಯಿಸುತ್ತಿದ್ದಾಗ, ಈತನು ಖರರೂಪದಿಂದ (ಕೊಕ್ಕರೆ) ಕೃಷ್ಣನನ್ನು ನುಂಗಿ, ತನ್ನ ದವಡೆಗಳಲ್ಲಿ ಅಗಿದು ನೆಲಕ್ಕೆ ಉಗುಳಿದ ಕೃಷ್ಣನಿಗೆ ಯಾವವಿಧವಾದ ಗಾಯಗಳೂ ಆಗದಿರುವುದನ್ನು ಕಂಡು, ಕೋಪದಿಂದ ಅವನನ್ನು ತನ್ನ ಕೊಕ್ಕಿನಿಂದ ಕುಕ್ಕಲು ಪ್ರಯತ್ನಿಸಿದನು. ಆಗ ಶ್ರೀಕೃಷ್ಣನು ಬಕಪಕ್ಷಿಯ ಎರಡು ಕೊಕ್ಕುಗಳನ್ನು ಕಚ್ಚಿನಿಜಲ್ಲಿಯನ್ನು ಸೀಳುವಂತೆ ಸೀಳಿಹಾಕಿ ಕೊಂದನು. **ಕೇಶಿ** = ಕಂಸನ ಪರಿವಾರದಲ್ಲಿ ಒಬ್ಬ. ಇವನು ಭಯಂಕರ ಕುದುರೆರೂಪವನ್ನು ತಾಳಿ ಗೋಕುಲಕ್ಕೆ ಬಂದು ಹೇಷಾರವಮಾಡಿದನು. ಕೃಷ್ಣನು ಆ ದೈತ್ಯನನ್ನು ಲೀಲಾಜಾಲವಾಗಿ ಕೊಂದನು. **ಸುರರಾಳ್ದನ** = ಉಪೇಂದ್ರ ರೂಪದಿಂದ ಇಂದ್ರಪದವಿಯನ್ನು ಆಳಿದನು. **ಕುಬುಜೆಗೆ** = ಕಂಸನ ದಾಸೀವರ್ಗದಲ್ಲಿ ಒಬ್ಬಳು ಗೂನುಬೆನ್ನು ವಕ್ರದೇಹದಿಂದ ಕೂಡಿದ್ದ ಕುಬ್ಜೆ ಶ್ರೀಕೃಷ್ಣನು ಬಲರಾಮ ಗೋಪಬಾಲಕರಸಹಿತ ಮಥುರೆಗೆ ಬಂದಾಗ, ಕುಬ್ಜೆಯ ಡೊಂಕನ್ನು ತಿದ್ದಿ ಸುಂದರ ಸ್ತ್ರೀಯನ್ನಾಗಿ ಮಾಡಿದನು. **ಭೂರಿ ಸಂತಸವಿತ್ತನ** = ಅವಳಿಗೆ ತನ್ನ ಅಂಗಸಂಗವನ್ನಿತ್ತು ಸಂತೋಷಪಡಿಸಿದನು. **ವಾರಣವನು** =

ಕುವಲಯಾಪೀಡ ಎಂಬ ಮದ್ದಾನೆಯನ್ನು **ಅಪ್ರತಿಮಲ್ಲನ** = ಚಾಣೂರ ಮುಷ್ಟಿಕಾದಿ ಅತ್ಯಂತ ಬಲಶಾಲಿಗಳಾಗಿದ್ದ ಜೆಟ್ಟಿಗಳನ್ನು ಗೆದ್ದ ಅಸದೃಶ ವೀರನು **ಅತಿ ಚೆಲ್ವನ** = ಅತ್ಯಂತ ಸುಂದರಮೂರ್ತಿಯು.

**ಹುಡಿಗೆಡೆದನ** = ನೆಲಕ್ಕೆ ಬೀಳಿಸಿ ಎದೆಯ ಮೇಲೆ ಕೂತು ಮುಷ್ಟಿ ಪ್ರಹಾರದಿಂದ ಸಂಹರಿಸಿದ ಅಪ್ರತಿಮವೀರ ಶ್ರೀಕೃಷ್ಣ. **ಉಗ್ರಸೇನ** = ಚಂದ್ರವಂಶದ ಅರಸು ಕಂಸಾಸುರನ ತಂದೆ. ಯದುವಂಶದ ಆಹುಕನ ಪುತ್ರ, ಶ್ರೀಕೃಷ್ಣನು ಕಂಸವಧಾನಂತರ ಸೆರೆವಾಸದಲ್ಲಿದ್ದ ಉಗ್ರಸೇನನನ್ನು ಬಂಧನದಿಂದ ಬಿಡಿಸಿ ರಾಜ್ಯಾಭಿಷೇಕಮಾಡಿದನು. **ಉದ್ಧವ** = ಶ್ರೀಕೃಷ್ಣನ ಆಪ್ತಮಿತ್ರ ಹಾಗೂ ಪರಮ ಭಕ್ತ. ಗೋಕುಲದ ಸ್ತ್ರೀಯರಿಗೆ ಸಮಾಧಾನ ಹೇಳಲು ಶ್ರೀಕೃಷ್ಣನು ಮಧುರಾಪಟ್ಟಣದಿಂದ ಗೋಕುಲಕ್ಕೆ ಕಳುಹಿಸಿದನು **ದ್ವಿಜನಕಂದನ** = ಮೃತನಾಗಿದ್ದ ತನ್ನ ಗುರುಪುತ್ರನನ್ನು (ಸಾಂದೀಪನ ಮಗ) ಬದುಕಿಸಿ ಗುರುಕಾಣಿಕೆಯ ರೂಪದಲ್ಲಿ ತಂದ ಪರಮ ಕರುಣಾಸಾಗ ರನು. **ಆನಂದನ** = ಸುಖಪೂರ್ಣನು. **ಮಾಗಧನ** = ಮಗಧ ರಾಜ್ಯದ ಅರಸನಾದ ಜರಾಸಂಧ. ಬೃಹದ್ರಥರಾಜನ ಪುತ್ರ ಈತನ ಮಾತೆ ಯಲ್ಲಿ ಜನಿಸಿದಾಗ ಎರಡು ಸೀಳುಗಳ ರೂಪದಲಿ ಹುಟ್ಟಿದನು. ಜರಾ ಎಂಬ ರಾಕ್ಷಸಿಯು ಆ ಎರಡು ಸೀಳುಗಳನ್ನು ಜೋಡಿಸಿದ್ದರಿಂದ ಜರಾಸಂಧನೆಂಬ ಹೆಸರಾಯಿತು. ಗಿರಿವ್ರಜ ಇವನ ರಾಜಧಾನಿ. ಮಹಾಶಿವಭಕ್ತ ಅಸ್ತಿ ಮತ್ತು ಪ್ರಾಪ್ತಿ ಎಂಬ ಈರ್ವರು ಪುತ್ರಿಯರು ಇಬ್ಬರನ್ನು ಕಂಸನಿಗೆ ಲಗ್ನ ಮಾಡಿಕೊಟ್ಟಿದ್ದ. ಕಂಸಧ್ವಂಸಿಯಾದ ಕೃಷ್ಣನನ್ನು ದ್ವೇಷಿಸಲಾರಂಭಿಸಿದ. ಶ್ರೀಕೃಷ್ಣನು ಭೀಮಾರ್ಜುನರೊಡನೆ ವಿಪ್ರವೇಷದಿಂದ ಅವನ ಪುರ ಪೊಕ್ಕು ಯುದ್ಧ ಭಿಕ್ಷೆ ಬೇಡಿದರು. ಮಲ್ಲ ಯುದ್ಧದಲ್ಲಿ ಭೀಮಸೇನನಿಂದ ಹತನಾದ. **ಅನವದ್ಯನ** = ದೋಷರಹಿತನು. **ದ್ಯುಮಣಿಸಮ** = ಸೂರ್ಯನ ಕಾಂತಿಯನ್ನು ಹೋಲುವ ಸುಂದರ ದ್ವಾರಕಾಪುರವನ್ನು ಸಮುದ್ರದ ಮಧ್ಯೆ ಕಟ್ಟಿಸಿದ. **ಮುಚುಕುಂದ** = ಸೂರ್ಯವಂಶದ ಮಾಂಧಾತರಾಜನ ಪುತ್ರ. ಅಂಬರೀಷ ಮತ್ತು ಪುರುಕುತ್ಸರು ಈತನ ಸಹೋದರರು. ಕಾಲ ಯವನನು ಶ್ರೀಕೃಷ್ಣನನ್ನು ಅಟ್ಟಿಸಿಕೊಂಡು ಗುಹೆಯನ್ನು ಹೊಕ್ಕ. ಅಲ್ಲಿ

ಮುಚುಕುಂದ ಮಲಗಿ ನಿದ್ರಿಸುತ್ತಿದ್ದ. ಕಾಲಯವನನ ಪಾದ ಮುಚುಕುಂದ ನಿಗೆ ಸೋಕಿ ಎಚ್ಚೆತ್ತನು. ತನ್ನ ಕ್ರೂರ ದೃಷ್ಟಿಯಿಂದ ಅವನನ್ನು ದುರುಗುಟ್ಟಿ ನೋಡಿದಾಗ ಕಾಲಯವನನು ಉರಿದು ಬೂದಿಯಾದನು. **ಯವನನ** = ಕಾಲಯವನನು ಯಾದವರ ಪುರೋಹಿತರಾದ ಗರ್ಗಮಹರ್ಷಿಯ ಮಗ ಗರ್ಗನಿಂದ ಅಪ್ಸರಸ್ತ್ರೀಯಲ್ಲಿ ಜನಿಸಿದವನು. ಶ್ರೀಕೃಷ್ಣನ ಮೇಲಿನ ದ್ವೇಷದಿಂದ ಅವನನ್ನು ಬೆನ್ನಟ್ಟಿಹೋದಾಗ ಶ್ರೀಕೃಷ್ಣನು ಗವಿಯೊಂದನ್ನು ಹೊಕ್ಕನು. ಕಾಲಯವನನೂ ಸಹ ಆ ಗುಹಾ ಪ್ರವೇಶಮಾಡಿ ಕತ್ತಲಲ್ಲಿ ಮಲಗಿದ್ದ ಮುಚುಕುಂದನನ್ನು ಕೃಷ್ಣನೆಂದು ತಿಳಿದು ಎಡಗಾಲಿನಿಂದ ಒದ್ದನು. ಆಗ ನಿದ್ರಾಭಂಗದಿಂದ ಎಚ್ಚೆತ್ತ ಮುಚುಕುಂದನ ದೃಷ್ಟಿಪಾತದಿಂದ ಬೂದಿಯಾದನು. **ವಿಮಲ ಸುಚರಿತ್ರ** = ಲವಲೇಶವೂ ದೋಷಗಳಿಲ್ಲದ ಶುದ್ಧ ಚಾರಿತ್ರ್ಯನು. **ಅಷ್ಟಮಹಿಷಿಯರಾಳ್ದನ** = ರುಕ್ಮಿಣೀ-ಸತ್ಯಭಾಮೆ ನೀಲಾದಿಪಟ್ಟಮಹಿಷಿಯರು. ಇಷ್ಟು ಎಂಟುಮಂದಿ ಶ್ರೀಕೃಷ್ಣನ ಅಷ್ಟ ಮಹಿಷಿಯರು.

**ಮುರ** = ನರಕಾಸುರನ ಪರಿವಾರದಲ್ಲಿ ಒಬ್ಬ. ಶ್ರೀಕೃಷ್ಣನಿಂದ ಹತನಾದ ಈ ಕಾರಣದಿಂದ ಶ್ರೀಕೃಷ್ಣನಿಗೆ "ಮುರಾರಿ"-ಎಂಬ ಹೆಸರು ಬಂದಿತು. **ನರಕಾಸುರ** = ವಿಷ್ಣು ವರಾಹಾವತಾರವನ್ನು ತಾಳಿದಾಗ, ಆತನ ದೇಹದಿಂದ ಒಂದು ತೊಟ್ಟು ಬೆವರು ನೆಲದಮೇಲೆ ಬಿತ್ತು. ಅದರಿಂದ ಭೂದೇವಿಯಲ್ಲಿ ಜನಿಸಿದ ಭೂಪುತ್ರನು. ಇವನ ರಾಜಧಾನಿ ಪ್ರಾಗ್ಜ್ಯೋತಿಷಪುರ ಲೋಕಕಂಟಕನಾದ ದುರುಳ. ಇಂದ್ರನ ಶ್ವೇತಚ್ಛತ್ರಗಳನ್ನು ಕದ್ದ. ಇಂದ್ರನ ಜನನಿಯಾದ ಅದಿತಿಯ ಕರ್ಣಕುಂಡಲಗಳನ್ನೂ ಮೇರು ಪರ್ವತದ ಮಣಿ ಶಿಖರವನ್ನು ಅಪಹರಿಸಿದ. ಇಂದ್ರಾದಿ ದೇವತೆಗಳು ಶ್ರೀಕೃಷ್ಣನನ್ನು ಮೊರೆ ಹೊಕ್ಕರು. ಆಗ ಶ್ರೀಕೃಷ್ಣನು ನರಕಾಸುರನನ್ನು ಸಂಹರಿಸಿ ಅವನ ಬಂಧನದಲ್ಲಿದ್ದ ೧೬ ೦೦೦ ಕನ್ಯೆಯರನ್ನು ಸೆರೆಯಿಂದ ಬಿಡಿಸಿದ. ನರಕಾಸುರನನ್ನು ಕೊಂದ ದಿನವೇ 'ನರಕಚತುರ್ದಶಿ' ಎಂದು ಪ್ರಸಿದ್ಧವಾಗಿದೆ. **ಕರಿವರದನ**= ಗಜೇಂದ್ರ ರಕ್ಷಕನು.

**ಸುರತರುವ** = ಇಂದ್ರನ ಗರ್ವಭಂಗಗೈದು, ತನ್ನಪ್ರಿಯಪತ್ನಿ ಸತ್ಯಭಾಮೆಗಾಗಿ ಪಾರಿಜಾತ ವೃಕ್ಷವನ್ನು (ಕಲ್ಪದ್ರುಮ) ತಂದ ಪ್ರಸಂಗ. **ಜಗತ್ಕರ್ತನ**= ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳಿಗೆ ಮುಖ್ಯ ಕಾರಣನು. **ಶಿಶುಪಾಲ** = ಯದುವಂಶದ ಅರಸು. ದಮಘೋಷ ಈತನ ತಂದೆ. ವಸುದೇವನ ತಂಗಿ ಶ್ರುತಶ್ರವೆ ಈತನ ಜನನೀ. ಕುಂತಿ ಮತ್ತು ಶ್ರುತಶ್ರವೆ ಈರ್ವರೂ ಸಹೋದರಿಯರು. ಶ್ರೀಕೃಷ್ಣನ ಸೋದರತ್ತೆಯ ಮಗ. ಹಿರಣ್ಯಕಶಿಪುವಿನ ಅಂಶ. ಜಯ ಮತ್ತು ಹಿರಣ್ಯಕಶಿಪು ಎಂಬ ಜೀವದ್ವಯಾವಿಶಿಷ್ಟನು. ಇವನ ಜನನಕಾಲದಲ್ಲಿ ಇವನಿಗೆ ನಾಲ್ಕು ತೋಳುಗಳು, ಮೂರು ಕಣ್ಣುಗಳೂ ಇದ್ದು ವಿಕಾರರೂಪಿಯಾಗಿದ್ದ. ತಂದೆ-ತಾಯಿಗಳು ಚಿಂತಾಕ್ರಾಂತರಾಗಿರುವಾಗ "ಯಾವ ಮಹಾಮಹಿಮನ ಕರಸ್ಪರ್ಶದಿಂದ ಇವನ ಎರಡು ತೋಳುಗಳೂ, ಹಣೆಯ ಕಣ್ಣೂ ಹೋಗುವುವೋ, ಅವನೇ ಇವನಿಗೆ ಮೃತ್ಯು"- ಎಂದು ಆಕಾಶವಾಣಿ ಹೇಳಿತು. ಒಮ್ಮೆ ಕೃಷ್ಣನು ಮಗುವನ್ನು ಎತ್ತಿಕೊಂಡಾಗ ಆಕಾಶವಾಣಿಯ ನುಡಿ ಸತ್ಯವಾಯಿತು. ಆಗ ಶ್ರುತಶ್ರವೆಯು ಶ್ರೀಕೃಷ್ಣನನ್ನು ಮೊರೆಹೊಕ್ಕಳು. ಶ್ರೀಕೃಷ್ಣನು ಆಕೆಯನ್ನು ಸಮಾಧಾನಪಡಿಸಿ, ಆತನು ನೂರು ಅಪರಾಧಗಳನ್ನು ಮಾಡಿದರೆ ಕ್ಷಮಿಸುವೆನು. ಅದರೆ ನೂರೊಂದು ಅಪರಾಧಗಳಾದಾಗ ಸಂಹರಿಸುವೆ-ಎಂದು ವಚನವಿತ್ತನು. ರಾಜಸೂಯ ಯಾಗದಲ್ಲಿ ಶ್ರೀಕೃಷ್ಣನಿಗೆ ಅಗ್ರಪೂಜೆ ಎಂದು ನಿರ್ಧಾರವಾದಾಗ, ಶಿಶುಪಾಲನು ಶ್ರೀಕೃಷ್ಣನನ್ನು ವಾಚಾಮಗೋಚರವಾಗಿ ನಿಂದಿಸಿದನು. ನೂರು ನಿಂದೆಯವರೆಗೂ ಸಹಿಸಿಕೊಂಡಿದ್ದ ಶ್ರೀಕೃಷ್ಣ, ನಿಂದೆಯನ್ನು ಮುಂದುವರಿಸಲು, ಚಕ್ರದಿಂದ ಅವನ ಶಿರಚ್ಛೇದನ ಮಾಡಿದನು. **ಕುರುಕುಲಕೆ ಲಯವಿತ್ತ** = ಕುರುಕ್ಷೇತ್ರಯುದ್ಧದ ಮುಖ್ಯ ಕಾರಣನೂ ಸಮಗ್ರ ಕುರುಕುಲ ನಾಶಕ್ಕೆ ಕರ್ತನೂ ಆದ ಶ್ರೀಕೃಷ್ಣ. ಕುರುಕುಲಲಯವು ಕೃಷ್ಣಭೀಮರಿಂದಾಯಿತು. (ಹರಿವಾಯುಗಳೇ ಕಾರಣ) **ಕವಿಗಾಯನ** = ಜ್ಞಾನಿಗಳಿಂದ ಸ್ತುತ್ಯನು.

**ಇಳೆಯ ಸುಜನರ** = ಭೂಮಿಯ ಮೇಲಿನ ಸಜ್ಜನರನ್ನು, **ಕಾಂತನ** = ಜಗತ್ಪ್ರಭು. **ಸಿರಿವಂತನ** = ಕಲ್ಯಾಣಗುಣಪರಿಪೂರ್ಣನ

**ಪಂಥವುಳ್ಳ** = ಸತ್ಯಸಂಕಲ್ಪನಾದ. **ಮುನಿಮಾನ್ಯನಾದ** = ಜ್ಞಾನಿಗಳಿಂದ ಪೂಜಿತನಾದ. **ಕಂತುಪಿತ** = ಮನ್ಮಥಜನಕನಾದ ಶ್ರೀಹರಿ **ಪೊರೆವನು** = ಆಪತ್ತುಗಳಿಂದ ಸಂರಕ್ಷಿಸುವನು. **ಸುಖಗರೆವನು** = ಇಹಿಕದಲ್ಲಿ ಸಕಲ ಭೋಗಭಾಗ್ಯಗಳನ್ನಿತ್ತು, ಪರದಲ್ಲಿ ನಿತ್ಯಾನಂದರೂಪವಾದ ಮುಕ್ತಿಸುಖವನ್ನು ಕರುಣಿಸುವನು.



## ೬೦೧

## (ಪುರಂದರವಿಠ್ಠಲಾಂಕಿತ)

**ರಾಗ–ಪೀಲು** **ಆದಿತಾಳ**

ದೇವಕಿಕಂದ ಮುಕುಂದ ॥ ॥ಪ॥

ನಿಗಮೋದ್ಧಾರ ನವನೀತಚೋರ
ಖಗಪತಿವಾಹನ ಜಗದೋದ್ಧಾರ ॥ ॥೧॥

ಶಂಖ–ಚಕ್ರಧರ ಶ್ರೀಗೋವಿಂದ
ಪಂಕಜಲೋಚನ ಪರಮಾನಂದ ॥ ॥೨॥

ಮಕರಕುಂಡಲಧರ ಮೋಹನವೇಷ
ರುಕುಮಿಣಿವಲ್ಲಭ ಪಾಂಡವಪೋಷ ॥ ॥೩॥

ಕಂಸಮರ್ದನ ಕೌಸ್ತುಭಾಭರಣ
ಹಂಸವಾಹನ ಪೂಜಿತ ಚರಣ ॥ ॥೪॥

ವರವೇಲಾಪುರ ಚೆನ್ನ ಪ್ರಸನ್ನ
ಪುರಂದರವಿಠ್ಠಲ ಸಕಲ ಗುಣಪೂರ್ಣ ॥ ॥೫॥

**ಅರ್ಥವಿವರಣೆ :**

ಇದೊಂದು ಸುಂದರವಾದ ಪುರಂದರದಾಸವರ್ಯರ ಕೀರ್ತನೆ. **ದೇವಕಿ ಕಂದ** = ದೇವಕೀಪುತ್ರನಾದ ಶ್ರೀಕೃಷ್ಣ. **ಮುಕುಂದ** = ಮೋಕ್ಷ ಪ್ರದನಾದ ಶ್ರೀಹರಿ. **ನಿಗಮೋದ್ಧಾರ** = ವೇದಗಳನ್ನು ಶರಣರೂಪ ದಲ್ಲಿ ಬ್ರಹ್ಮದೇವರಿಂದ ಕದ್ದು ಸಮುದ್ರಗರ್ಭವನ್ನು ಸೇರಿದ ಸೋಮಕ ಎಂಬ ದೈತ್ಯನನ್ನು ಶ್ರೀಹರಿಯು ಮತ್ಸ್ಯರೂಪದಿಂದ ಕೊಂದು ವೇದಗಳನ್ನು ಪುನಃ ಬ್ರಹ್ಮನಿಗೆ ತಂದಿತ್ತನು. **ನವನೀತಚೋರ** = ಬೆಣ್ಣೆಯ ಕಳ್ಳ ಶ್ರೀಕೃಷ್ಣ. ನವನೀತದಲ್ಲಿ ಶ್ರೀವಾಯುದೇವರು ವಿದ್ಯಮಾನರಾಗಿದ್ದಾರೆ. ಅವರ ಮನೋಪಹಾರಕನಾದ ಶ್ರೀಹರಿಯು ನವನೀತಚೋರನು ಇದು ಅಂತ ರಾರ್ಥ. **ಖಗಪತಿವಾಹನ** = **ಪಕ್ಷಿಶ್ರೇಷ್ಠ**ರಾದ ಗರುಡನನ್ನೇ ವಾಹನ ವನ್ನಾಗಿ ಉಳ್ಳ ಶ್ರೀಕೃಷ್ಣ. **ಜಗದೋದ್ಧಾರ** = ಜಗತ್ತಿನಲ್ಲಿರುವ ಜೀವ ಸಮುದಾಯವನ್ನು ಮಹಾಪ್ರಳಯಕಾಲದಲ್ಲಿ ತನ್ನ ಉದರದಲ್ಲಿ ಧರಿಸುವ ವಿಶ್ವಂಭರನು. **ಶಂಖ** = ಪಾಂಚಜನ್ಯವೆಂಬ ಶಂಖ (ಜ್ಞಾನಪ್ರದ) **ಚಕ್ರ** = ಸುದರ್ಶನವೆಂಬ ಚಕ್ರ (ಅಸುರಶಿಕ್ಷಣ). **ಗೋವಿಂದ** = ವೇದ ಪ್ರತಿಪಾದ್ಯ, ಗೋವುಗಳು ಮತ್ತು ಗೋಪಾಲಕರ ರಕ್ಷಕ. **ಪಂಕಜ ಲೋಚನ** = ಕಮಲದಂತೆ ವಿಸ್ತಾರವಾದ ನೇತ್ರವುಳ್ಳವನು (ಪಂಕ– ಕೆಸರು. ಪಂಕಜ ಕೆಸರಿನಲ್ಲಿ ಹುಟ್ಟುವ ಕಮಲಪುಷ್ಪ). **ಪರಮಾನಂದ**= ಉತ್ಕೃಷ್ಟ ಆನಂದಪೂರ್ಣನು. **ಮಕರಕುಂಡಲಧರ** = ಮೊಸಳೆಯ ಆಕಾರದ ಕರ್ಣಾಭರಣವನ್ನು ಧರಿಸಿರುವ, **ಮೋಹನವೇಷ** = ಸುಂದರ ವಾದ ವೇಷಭೂಷಿತನು. **ಕಂಸಮರ್ದನ** = ಸೋದರಮಾವನಾದ ಕಂಸಾ ಸುರನನ್ನು ಕೊಂದ ಶ್ರೀಕೃಷ್ಣ. **ಹಂಸವಾಹನ ಪೂಜಿತ** = ಹಂಸ ವಾಹನರಾದ ಬ್ರಹ್ಮದೇವರಿಂದ ಪೂಜಿತ ಚಾರುಚರಣವುಳ್ಳವ. **ಬೇಲಾ ಪುರಚೆನ್ನ** = ಬೇಲೂರಿನ ಚೆನ್ನಕೇಶವಸ್ವಾಮಿ.

## ೬೦೨

### (ಪುರಂದರವಿಠ್ಠಲಾಂಕಿತ)

**ರಾಗ–ಶಂಕರಾಭರಣ** **ಅಟತಾಳ**

ಪೋಗಬೇಡಲೋ ರಂಗ–ಬಾಗಿಲಿಂದಾಚೆಗೆ ॥ ॥ಪ॥

ಭಾಗವತರು ಕಂಡರೆತ್ತಿಕೊಂಡೊಯ್ವರೋ ॥ ॥ಅ॥

ಸುರಮುನಿಗಳು ತಮ್ಮ ಹೃದಯಗಹ್ವರದಲ್ಲಿ
ಪರಮಾತ್ಮನ ಕಾಣದರಸುವರೋ
ದೊರಕದ ವಸ್ತುವು ದೊರಕಿತು ತಮಗೆಂದು
ಹರುಷದಿಂದಲಿ ನಿನ್ನ ಕರೆದೆತ್ತಿಕೊಂಬರೊ ॥ ॥೧॥

ಅಗಣಿತಗುಣ ನಿನ್ನ ಜಗದ ನಾರಿಯರೆಲ್ಲ
ಹಗೆಯಾಗಿ ನುಡಿವರೊ ಗೋಪಾಲನೇ
ಮಗುಗಳ ಮಾಣಿಕ್ಯ ತಗಲಿತು ಕರಕೆಂದು
ಬೇಗದಿಂದಲಿ ಬಂದು ಬಿಗಿದಪ್ಪಿಕೊಂಬರೊ ॥ ॥೨॥

ದಿಟ್ಟನಾರಿಯರೆಲ್ಲ ಇಷ್ಟವ ಸಲಿಸೆಂದು
ಅಟ್ಟಟ್ಟಿ ಬೆನ್ನಿಂದೆ ತಿರುಗುವರೊ
ಸೃಷ್ಟೀಶ ಪುರಂದರವಿಠ್ಠಲರಾಯನೆ
ಇಷ್ಟಿಷ್ಟು ಬೆಣ್ಣೆಯ ಕೊಟ್ಟೇನೊ–ರಂಗಯ್ಯ ॥ ॥೩॥

**ಅರ್ಥವಿವರಣೆ :–**

ಪುಟ್ಟ ಬಾಲಕ ತುಂಟ ಕೃಷ್ಣನನ್ನು ಯಶೋದೆಯು ಮನೆಯ ಬಾಗಿಲಿಂದಾಚೆಗೆ ಹೋಗಬಾರದೆಂದು ಕೇಳಿಕೊಳ್ಳುತ್ತಾಳೆ. ಇದೊಂದು ಸುಮಧುರ ಪ್ರಸಂಗ.

**ಭಾಗವತರು** = ಭಗವದ್ಭಕ್ತರು. **ಸುರಮುನಿಗಳು** = ದೇವತೆಗಳು ಮತ್ತು ಜ್ಞಾನಿಗಳಾದ ಋಷಿಪುಂಗವರು. **ಹೃದಯಗಹ್ವರದಲ್ಲಿ** = ಹೃದಯಗುಹಾದಲ್ಲಿ (ಹೃದಯಾಕಾಶಗತ ಹೃತ್ಕಮಲದಲ್ಲಿ). **ಅರಸುವರೋ** = ತಮ್ಮ ಅಂತರಂಗದಲ್ಲಿ ಬಿಂಬನನ್ನು ಕಾಣದೇ ನಿನ್ನನ್ನು ಹುಡುಕುತ್ತಿದ್ದಾರೆ. **ದೊರಕದವಸ್ತುವು** = ಅಲಭ್ಯನಾದ ಶ್ರೀಹರಿಯು. **ಅಗಣಿತಗುಣ** = ಲೆಕ್ಕಕ್ಕೆ ಸಿಗದ ಅನಂತಕಲ್ಯಾಣ ಗುಣಗಣಧಾಮನನ್ನು. **ಹಗೆಯಾಗಿ** = ತಮಗೆ ದಕ್ಕಲಿಲ್ಲ ಎಂಬ ಭಾವನೆಯಿಂದ. **ಮಗುಗಳಮಾಣಿಕ್ಯ** = ಮಕ್ಕಳಲ್ಲಿ ರತ್ನ ಪ್ರಾಯದಂತಿರುವ. **ದಿಟ್ಟನಾರಿಯರೆಲ್ಲ** = ಧೈರ್ಯಶಾಲಿಗಳಾದ ಸ್ತ್ರೀಯರು. **ಬೆನ್ನಿಂದೆ** = ನಿನ್ನನ್ನೇ ಹುಡುಕಿಕೊಂಡು ನಿನ್ನ ಹಿಂದೆಯೇ ಹಿಂಬಾಲಿಸುವರು. **ಸೃಷ್ಟೀಶ** = ಸೃಷ್ಟಿಕರ್ತನೂ ನಿಯಾಮಕನೂ ಆದ.

## ೬೦೩

## (ಪುರಂದರವಿಠ್ಠಲಾಂಕಿತ)

**ರಾಗ–ತೋಡಿ** **ಛಾಪುತಾಳ**

**ಗುಮ್ಮನ ಕರೆಯದಿರೆ ಅಮ್ಮಾ ನೀನು ॥** ॥ಪ॥

ಸುಮ್ಮನೆ ಇದ್ದೇನು–ಅಮ್ಮಿಯ ಬೇಡೆನು
ಮಮ್ಮು ಉಣ್ಣುತೇನೆ–ಅಮ್ಮ ಅಳುವುದಿಲ್ಲ ॥ ॥ಅ॥

ಹೆಣ್ಣುಗಳಿರುವಲ್ಲಿ ಪೋಗಿ ಅವರ
ಕಣ್ಣು ಮುಚ್ಚುವುದಿಲ್ಲವೆ
ಬೆಣ್ಣೆರ ಬಡಿಯೆನು–ಅಣ್ಣನ ಬೈಯೆನು
ಬೆಣ್ಣೆಯ ಬೇಡೆನು–ಮಣ್ಣು ತಿನ್ನುವುದಿಲ್ಲ ॥ ॥೧॥

ಬಾವಿಗೆ ಪೋಗೆ ಕಾಣೆ–ಅಮ್ಮ ನಾನು
ಹಾವಿನೊಳಾಡೆ ಕಾಣೆ
ಆವಿನ ಮೊಲೆಯೂಡೆ–ಕರುಗಳ ಬಿಡೆ–ನೋಡೆ
ದೇವರಂತೆ ಒಂದು ಠಾವಿನಲಿ ಕೂಡುವೆ ॥ ॥೨॥

ಮಗನ ಮಾತಕೇಳಿ–ಗೋಪಿ ದೇವಿ
ಮುಗುಳು ನಗೆಯನಗುತ
ಜಗದೊಡೆಯನ **ಶ್ರೀಪುರಂದರವಿಠ್ಠಲನ**
ಬಿಗಿದಪ್ಪಿಕೊಂಡಳು ಮೋಹದಿಂದಲಾಗ ॥ ॥೩॥

**ಅರ್ಥವಿವರಣೆ:—**

ತುಂಟಕೃಷ್ಣನ ಚೇಷ್ಟೆಗಳನ್ನು ತಾಳಲಾರದೆ, ಒಂದು ದಿನ ಗೋಪಿ "ಗುಮ್ಮನನ್ನು ಕರೆಯುತ್ತೇನೆ"–ಎಂದು ಹೆದರಿಸುತ್ತಾಳೆ. ಅದಕ್ಕೆ ಮುದ್ದು ಕೃಷ್ಣನ ಮುಗ್ಧ ಉತ್ತರವನ್ನು ಪ್ರಸಕ್ತ ಕೀರ್ತನೆಯಲ್ಲಿ ಶ್ರೀಪುರಂದರದಾಸ ವರೇಣ್ಯರು ತಿಳಿಸುತ್ತಾರೆ.

**ಅಮ್ಮಿ** = ಸ್ತನ್ಯಪಾನ. **ಮಮ್ಮು** = ಊಟ (ಮಕ್ಕಳ ಭಾಷೆ) **ಚಿಣ್ಣರ** = ಚಿಕ್ಕಮಕ್ಕಳು. ಕೃಷ್ಣನು ತೊಟ್ಟಿಲಿನಲ್ಲಿ ಮಲಗಿರುತ್ತಿದ್ದ ಶಿಶುಗಳನ್ನು ಚಿವುಟಿ ಅಳಿಸುತ್ತಿದ್ದನು. ಮಕ್ಕಳನ್ನು ಹೊಡೆದು ಗದ್ದಲಮಾಡುತ್ತಿದ್ದನು. **ಅಣ್ಣನ** = ಅಣ್ಣನಾದ ಬಲರಾಮನನ್ನು. **ಹಾವಿನೊಳಾಡೆ** = ಹಾವಿನೊಡನೆ ಸರಸವಾಡುವುದಿಲ್ಲ (ಕಾಳಿಂಗ ಮರ್ದನದ ಪ್ರಸಂಗ). **ಆವಿನ** = ಹಸುವಿನ. **ಮೊಲೆಯೂಡೆ** = ಕೃಷ್ಣನು ಹಸುವಿನ ಹಾಲನ್ನು ಕುಡಿಯಲು ಗೂಟಕ್ಕೆ ಕಟ್ಟಿದ್ದ ಕರುಗಳನ್ನು ಬಿಚ್ಚಿ ಬಿಡುತ್ತಿದ್ದನು. ಇದರಿಂದ ಗೋಪಿ ಸ್ತ್ರೀಯರಿಗೆ ಹಾಲು ದಕ್ಕುತ್ತಿರಲಿಲ್ಲ. **ಠಾವಿನಲಿ** = ಒಂದು ಸ್ಥಳದಲ್ಲಿ ಕದಲದೇ ದೇವರಂತೆ ಕೂತುಬಿಡುತ್ತೇನೆ–ಎನ್ನುತ್ತಾನೆ ದೇವ ದೇವನಾದ ದೇವಕೀಕಂದ.

೬೦೪

## ಪುರಂದರವಿಠ್ಠಲಾಂಕಿತ

**ರಾಗ–ಧನಾಸರಿ** **ಆದಿತಾಳ**

ಅಮ್ಮಾ ಎನ್ನ ಕೂಡಾಡುವ ಮಕ್ಕಳಣಕಿಸುವರೆ ॥ ॥ಪ॥

ಯಾರುಪಡೆದರೆಂಬೋರೇ–ಯಶೋದೆ
ಯಾರು ಹಡೆದರೆಂಬೋರೇ
ಕೇರಿ ಬೆಣ್ಣೆಯನ್ನೆಲ್ಲ ಕದ್ದು ತಿಂದವನೆಂದು
ಸಾರೇರು ದೂರುತಾರೇ–ಅಮ್ಮಯ್ಯ ॥ ॥೧॥

ಮಾತೆ ನೀನಲ್ಲವಂತೆ–ಯಶೋದೆ
ತಾತನಿಲ್ಲಿಲ್ಲವಂತೆ
ಮಾತುಳನ ಬಾಧೆಗೆ ಮಧುರೆಯಿಂದಲಿ ತಂದು
ಖಾತಿಗೆ ಮಾರಿದರಂತೆ–ಅಮ್ಮಯ್ಯ ॥ ॥೨॥

ದೇವಕಿ ತಾಯಿಯಂತೆ–ಅಮ್ಮಾ ವಸು
ದೇವನು ತಂದೆಯಂತೆ
ಕಾವನಯ್ಯ ನಮ್ಮ ಪುರಂದರವಿಠ್ಠಲನ
ಆವಕಾವನೆಂಬೋರೇ–ಯಶೋದೆ ॥ ॥೩॥



**ಅರ್ಥವಿವರಣೆ :**

ಬಾಲಕ ಶ್ರೀಕೃಷ್ಣನು ಆಟವಾಡಿಕೊಂಡು ಮನೆಗೆ ಬರುತ್ತಾನೆ. ಬಿಕ್ಕಿ ಬಿಕ್ಕಿ ಅಳುತ್ತಿರುವ ಮುದ್ದು ಬಾಲಕನನ್ನು ನೋಡಿ ಯಶೋದೆ ಪ್ರೀತಿ

ಯಿಂದ ಹತ್ತಿರಕ್ಕೆ ಕರೆಯುತ್ತಾಳೆ. ಆಗ ದುಃಖಿದೂರನಾದ ಆ ದೇವ ದೇವನು ಯಶೋದೆಯ ಮುಂದೆ ತನ್ನ ದುಃಖವನ್ನು ತೋಡಿ ಕೊಳ್ಳುವ ಶ್ರೀಹರಿಯ ವಿಡಂಬನಾತ್ಮಕ ಪ್ರಸಂಗವಿದು.

**ಕೂಡಾಡುವ** = ನನ್ನ ಜೊತೆ ಆಟವಾಡುವ. **ಅಣಕಿಸುವರೆ** = ಅಣಕದ ಮಾತುಗಳನ್ನಾಡುತ್ತಾರೆ (ಹಿಯ್ಯಾಳಿಸುವರು). **ಯಾರುಪಡೆದ ರೆಂಬೋರೇ** = ನಿನ್ನನ್ನು ಪಡೆದವರು ಯಾರು ? ನೀನು ಯಾರಪುತ್ರ ? (ತಂದೆ). **ನಾರೇರು** = ಗೋಪಸ್ತ್ರೀಯರು. **ಮಾತೆನೀನಲ್ಲವಂತೆ** = ನೀನು ನನ್ನ ತಾಯಿಯಲ್ಲವಂತೆ ! **ತಾತನಿಲ್ಲಿಲ್ಲವಂತೆ** = ನನ್ನ ತಂದೆ ಈ ಊರಲ್ಲಿ ಇಲ್ಲವಂತೆ ! **ಮಾತುಳನ** = ಸೋದರ ಮಾವನಾದ ಕಂಸನ ಹಿಂಸೆಯನ್ನು ತಾಳಲಾರದೆ ಮಥುರಾನಗರದಿಂದ ನನ್ನನ್ನು ಇಲ್ಲಿಗೆ ಕರೆತಂದ ರಂತೆ ! **ಖಾತಿಗೆ** = ಬಿಟ್ಟಿಯಾಗಿ (ಪುಕ್ಕಟ್ಟೆಯಾಗಿ). **ಕಾವನಯ್ಯ** = ಸರ್ವಜೀವರ ರಕ್ಷಕನಾದ. **ಆವಕಾವನೆಂಬೋರೇ** = ಸರ್ವಜಗದ್ರಕ್ಷಕ ನಾದ ನನ್ನನ್ನು ರಕ್ಷಿಸುವವರು ಯಾರಿದ್ದಾರೆ !–ಎಂದು ಹೀಯ್ಯಾಳಿಸುತ್ತಾರೆ– ಎಂದು ಕೃಷ್ಣನ ಆಲಾಪ. (ದನಕಾಯುವವನು ಎಂಬೋರೆ).



**೬೦೫**

**ರಾಗ–ಆರಭಿ** **ಆದಿತಾಳ**

ಆಡಿದನೋ ರಂಗ ಅದ್ಭುತದಿಂದಲಿ
ಕಾಳಿಂಗನ ಫಣೆಯಲಿ ॥ ॥ಪ॥

ಪಾಡಿದವರಿಗೆ ಬೇಡಿದ ವರಗಳ
ನೀಡುತಲೀ–ದಯಮಾಡುತಲೀ ನಲಿ
ಮಾಡುತಲೀ–ಬೆಣ್ಣೆ ಬೇಡುತಲೀ–ಕೃಷ್ಣ ॥ ॥ಅ॥

ಅಂಬುರುಹೋದ್ಭವ ಅಖಿಳ ಸುರರು ಕೂಡಿ
ಅಂಬರದಲಿ ನಿಂತವರ್ ಸ್ತುತಿಸೇ
ರಂಭೆಯೂರ್ವಶೀ ರಮಣಿಯರೆಲ್ಲರು
ಚಂದದಿಂ ಭರತನಾಟ್ಯವ ನಟಿಸೇ ॥

ಝಂತಟ ತಕ ಧಿಮಿ ತಧಿತೋ ಎಂದು
ಝಂಪೆತಾಳದಿ ತುಂಬುರನೊಪ್ಪಿಸೇ ॥

ಧಾ ಮ ಪ ಪಾ ಧ ಸ ರೀ—ಎಂದು ಧ್ವನಿಯಿಂದ
ನಾರದ ತುಂಬುರಗಾಯನ ಮಾಡಲು
ನಂದಿಯು ಮದ್ದಲೆ ಚೆಂದದಿ ಹಾಕಲು ॥ಆಡಿದನೋ॥ ॥೧॥

ಫಣವಮೆಟ್ಟಿ ಬಾಲವ ಕೈಯಲಿ ಪಿಡಿದು
ಫಳಫಳಿಸುತ್ತ ನಾಟ್ಯವ ನಾಡೇ
ಚಂದ್ರಮಂಡಲದಂತೆ ಪೊಳೆಯುವ ಮುಖದೊಳು
ಚಲಿಸುವ ನೀಲಕೇಶಗಳಾಡೇ ॥

ಕಾಲಲಂದಿಗೆ ಗೆಜ್ಜೆ ಘಲು ಘಲು ಘಲುರೆನುತ
ಉಡುಗೆಜ್ಜೆ ಘಂಟೆಗಳಾಡೇ ॥

ದುಷ್ಟಕಾಳಿಂಗನ ಮೆಟ್ಟಿ ಭರದಿಂದ
ಪುಟ್ಟಪಾದವನಿಟ್ಟು ಶ್ರೀಕೃಷ್ಣನು
ಮೆಚ್ಚಿದನು ತಕದಿಮಿ ತಧಿಕೆನುತ ॥ ಆಡಿದನೋ ॥ ॥೨॥

ಸುರರು ಪುಷ್ಪದ ವೃಷ್ಟಿಯ ಕರೆಯಲು
ಸುದತಿಯರೆಲ್ಲರು ಪಾಡಲು
ನಾಗಕನ್ನಿಕೆಯರು ನಾಥನ ಬೇಡಲು
ನಾನಾವಿಧದಿ ಸ್ತುತಿಮಾಡಲು ॥

ರಕ್ಕಸರೆಲ್ಲರು ಕಕ್ಕಸವನೆ ಕಂಡು
ದಿಕ್ಕು ದಿಕ್ಕುಗಳಿಗೆ ಓಡಲೂ ॥

ಚಿಕ್ಕವನಿವನಲ್ಲ ಪುರಂದರವಿಠ್ಠಲ
ವೆಂಕಟರಮಣನ ಬೇಗ ಯಶೋದೆ
ಬಿಂಕದೊಳೆತ್ತಿ ಮುದ್ದಾಡೆ ಶ್ರೀಕೃಷ್ಣನ ॥ ಆಡಿದನೋ ॥ ॥೩॥

**ಅರ್ಥವಿವರಣೆ:-**

ಶ್ರೀ ಕೃಷ್ಣನು ಯಮುನಾನದಿಯ ಮಡುವಿನಲ್ಲಿ ವಿಷವನ್ನು ಕಾರುತ್ತಾ ಹಲವು ಗೋವುಕರುಗಳ ಮರಣಕ್ಕೆ ಕಾರಣನಾಗಿದ್ದ ದುಷ್ಟಕಾಳಿಂಗನೆಂಬ ಸರ್ಪವನ್ನು ಹೆಡೆಯಮೇಲೆ ನಾಟ್ಯಮಾಡಿ ಗರ್ವವನ್ನು ಭಂಗಗೊಳಿಸಿದನು. ಕಾಳಿಂಗ ಮರ್ಧನದ ಸುಂದರ ಚಿತ್ರಣವನ್ನು ಈ ಕೀರ್ತನೆ ಸಾಹಿತ್ಯದಲ್ಲಿ ಮೂಡಿಸಿದ್ದಾರೆ ದಾಸಶ್ರೇಷ್ಠ ಪುರಂದರರು

**ಅದ್ಭುತದಿಂದಲಿ** = ಅತ್ಯಂತ ಆಶ್ಚರ್ಯಕರವಾದ ರೀತಿಯಲ್ಲಿ ಕಾಳಿಂಗನ ಫಣೆಗಳ ಮೇಲೆ ಲಾಸ್ಯವಾಡಿದ ಆ ನಟರಾಜ ಶ್ರೀಕೃಷ್ಣ. **ಪಾಡಿದವರಿಗೆ** = ಆ ನರ್ತನ ಸಮಯದಲ್ಲಿ ತನ್ನನ್ನು ಗಾಯನರೂಪದಿಂದ ಸ್ತೋತ್ರಮಾಡಿದವರಿಗೆಲ್ಲಾ ವರಪ್ರದಾನವಿತ್ತನು ಆ ವಾಸುದೇವ. **ದಯಮಾಡುತಲೀ** = ದಯಾಸಾಗರನಾದ ಆ ದಾಮೋದರನೂ ದೀನರ ಮೇಲೆ ತನ್ನ ಕಾರುಣ್ಯಾತಿಶಯವನ್ನು ಬೀರಿದನು. **ಬೆಣ್ಣೆ ಬೇಡುತಲೀ** = ಬೆಣ್ಣೆ ಕೊಡಿರೆಂದು ಗೋಪಿಕಾಸ್ತ್ರೀಯರನ್ನು ಬೇಡಿದ ಆ ಸ್ವರಮಣ ಮತ್ತು ನಿತ್ಯ ತೃಪ್ತನು **ಅಂಬುರುಹೋದ್ಭವ** = ಶ್ರೀಪರಮಾತ್ಮನ ನಾಭೀಕಮಲದಲ್ಲಿ ಸೃಷ್ಟರಾದ ಚತುರ್ಮುಖ ಬ್ರಹ್ಮದೇವರು. (ಅಂಬುರುಹ= ನೀರನ್ನು ಭೇದಿಸಿ ಕೊಂಡು ಬರುವ ಕಮಲಪುಷ್ಪ–ಉದ್ಭವ–ಅಂತಹ ಕಮಲಸಂಭವರಾದ ಬ್ರಹ್ಮದೇವರು). **ಅಂಬರದಲ್ಲಿ** = ಆಕಾಶಪಥದಲ್ಲಿ **ತುಂಬುರು** = ದೇವಸಭಾಗಾಯಕರಾದ ದೇವಗಂಧರ್ವರು **ಫಣವ ಮೆಟ್ಟಿ** = ತನ್ನ ಪುಟ್ಟ ಪಾದಗಳಿಂದ ಕಾಳಿಂಗನ ಹೆಡೆಗಳನ್ನು ರಭಸವಾಗಿ ತುಳಿಯುತ್ತಾ ಒಂದು ಕೈಯಲ್ಲಿ ಬಾಲವನ್ನು ಹಿಡಿದು ಇನ್ನೊಂದು ಕರದಿಂದ ನಾಟ್ಯ ಭಂಗಿ

ಯಲ್ಲಿ ಲಾಸ್ಯ ಮಾಡುತ್ತಾ. **ನೀಲಕೇಶಗಳಾಡೆ** = ಕಪ್ಪಾದ ತಲೆಗೂದಲು ಗುಂಡಗಿನ **ಮುಖದಮೇಲೆ** ಆಡುತ್ತಿರಲು. **ಕಾಲಲಂದಿಗೆ** = ಪಾದದ ರುಳಿಯ ಗೆಜ್ಜೆಗಳ ನಿನಾದ. **ಉಡುಗೆಜ್ಜೆ** = **ಸೊಂಟದ ಪಟ್ಟಿಯ** ಗೆಜ್ಜೆಗಳು ಧ್ವನಿಗೈಯ್ಯುತ್ತಿರಲಾಗಿ. **ಮೆಟ್ಟಿ ಭರದಿಂದ** = ಪಾದಾಘಾತ ದಿಂದ ಚೆನ್ನಾಗಿ ತುಳಿದು ಮರ್ದಿಸುತ್ತಾ. **ಪುಷ್ಪದ ವೃಷ್ಟಿ** = ಆಕಾಶ ದಲ್ಲಿ ದೇವತಾಸ್ತೋಮ ಹೂವಿನ ಮಳೆಗರೆಯಲು. **ನಾಗಕನ್ನಿಕೆಯರು**= ಕಾಳಿಂಗನ ಪತ್ನಿಯರು ಶ್ರೀಕೃಷ್ಣನನ್ನು ತಮ್ಮ ಪತಿಯ ಪ್ರಾಣಭಿಕ್ಷೆ ಬೇಡುತ್ತಿ ರಲು, **ಕಕ್ಕಸವನೆ** = ಭೀಕರದೃಶ್ಯವನ್ನು, **ಬಿಂಕದೊಳೆತ್ತಿ** = ವೈಯ್ಯಾರದಿಂದೊಡಗೂಡಿದ ಭಾವದಿಂದ ಎತ್ತಿಕೊಂಡು ದೃಷ್ಟಿನಿವಾಳಿಸಿ ಮುದ್ದಾಡಿದಳು.



೬೦೬

(ಪುರಂದರ ವಿಠಲಾಂಕಿತ)

**ರಾಗ–ಹಿಂದೂಸ್ಥಾನಿ ಕಾಪಿ** **ಆದಿತಾಳ**

ಅಳವು ದ್ಯಾತಕೋ ರಂಗ ಅತ್ತರಂಜಿಪ ಗುಮ್ಮ ॥ ॥ಪ॥

ಪುಟ್ಟಿದೇಳು ದಿವಸದಲಿ ದುಷ್ಟ ಪೂತಣಿಯ ಕೊಂದೆ
ಮುಟ್ಟಿ ವಿಷದ ಮೊಲೆಯುಂಡ ಕಾರಣ
ದೃಷ್ಟಿ ತಾಕಿತೇ–ನಿನಗೆ ರಂಗಯ್ಯ ॥ ॥೧॥

ಬಾಲಕತನದಿ ಗೋಪಾಲಕರೊಡಗೂಡಿ
ಕಾಳಿಗ ಮಡುವನು ಕಲಕಿದ ಕಾರಣ
ಕಾಲು ಉಳುಕಿತೇ–ನಿನಗೆ ರಂಗಯ್ಯ ॥ ॥೨॥

ತುರುಮಕ್ಕಳು ಪೋಗೆ ಭರದಿಂದ್ರ ಮಳೆಗರೆಯೆ
ಬೆರಳಲಿ ಬೆಟ್ಟವನೆತ್ತಿದ ಕಾರಣ
ಬೆರಳು ಉಳುಕಿತೇ–ನಿನಗೆ ರಂಗಯ್ಯ ॥ ॥೩॥

ವಸುದೇವಸುತನಾಗಿ ಅಸುರರೆಲ್ಲರ ಮಡುಹಿ
ಹೆಸರಿನ ಮಲ್ಲರ ಮಡುಹಿದ ಕಾರಣ
ಕಿಸರು ತಾಕಿತೇ–ನಿನಗೆ ರಂಗಯ್ಯ ॥ ॥೪॥

ಶರಣು ವೇಲಾಪುರದ ಚೆಲುವ ಚೆನ್ನಿಗರಾಯ
ಪರಿಪರಿವಿಧದಿಂದ ಶರಣರ ಪೊರೆಯುವ
ವರದ **ಪುರಂದರವಿಠಲರಾಯ** ॥ ॥೫॥



**ಅರ್ಥವಿವರಣೆ :**

ಒಮ್ಮೆ ದಿನ ಶ್ರೀಕೃಷ್ಣ ರೊಟ್ಟಿಹಿಡಿದು ಅಳುತ್ತಿದ್ದಾನೆ, ಯಶೋದೆ ಅವನನ್ನು ಸಮಾಧಾನ ಗೊಳಿಸಲು ಅವನ ಮಹಾಮಹಿಮೆಗಳನ್ನು ಒಂದೊಂದಾಗಿ ವರ್ಣಿಸುತ್ತಾಳೆ. ಉತ್ಪ್ರೇಕ್ಷಾರೂಪದಲ್ಲಿರುವ ಯಶೋದೆಯ ಅವಳ ಮಾತಿನಲ್ಲಿಯೇ ಕೇಳೋಣ.

**ರಂಜಿಪ** = ಪ್ರಕಾಶಿಸುತ್ತಿದ್ದಾನೆ ಹೇ ಕೃಷ್ಣಾ ! ಅಳುವುದನ್ನು ನಿಲ್ಲಿಸು. ಯಾವಕಾರಣಕ್ಕಾಗಿ ರಚ್ಚೆಹಿಡಿದಿದ್ದೀಯೆ ? ಹೀಗೆ ಅತ್ತರೆ ಅಲ್ಲಿ ಗುಮ್ಮ ಇದ್ದಾನೆ, ಬಂದು ನಿನ್ನನ್ನು ಎತ್ತಿಕೊಂಡು ಹೋಗುವನು ! ಎಂದು ಬೆದರಿಸುತ್ತಾಳೆ, ಭಯರಹಿತನಾದ ಆ ಭಗವಂತನನ್ನು !

**ಪೂತನಿ** – ಕಂಸನ ಪರಿವಾರಕ್ಕೆ ಸೇರಿದ ಒಬ್ಬ ಕ್ರೂರರಾಕ್ಷಸಿ. ಊರ್ವಶಿಗೆ ಶಾಪ ಬಂದು ಪೂತನಿಯಾಗಿ ಜನಿಸಿದಳು ಪೂತನಿಯಲ್ಲಿ ಜೀವದ್ವಯಾವೇಶ. ಶ್ರೀಕೃಷ್ಣನು ತಾನು ಅವತರಿಸಿದ ಆರನೆಯ ದಿನದಲ್ಲಿ ತನಗೆ

ವಿಷಪೂರಿತವಾದ ಸ್ತನ್ಯಪಾನ ಮಾಡಿಸಲು ಉದ್ಯುಕ್ತಳಾದಳು. ಆಗ ಶಿಶು ಶ್ರೀಕೃಷ್ಣನು ಸ್ತನ್ಯಪಾನಮಾಡುವ ನೆಪದಲ್ಲಿ ಪೂತನಿಯ ಅಸುವನ್ನೇ ಹೀರಿದನು. **ದೃಷ್ಟಿತಾಕಿತೇ** = ಅಂತಹ ದುರುಳ ರಕ್ಕಸಿಯನ್ನು ಕೊಂದ ದ್ದರಿಂದ ನಿನಗೆ ದೃಷ್ಟಿಯಾಯಿತೇನು ? **ಕಾಳಿಂಗ ಮಡುವನು** = ಯಮುನಾನದಿಯ ಮಡುವಿನಲ್ಲಿ ವಿಷದಿಂದ ಘೂತ್ಕರಿಸುತ್ತಿದ್ದ ಕಾಳಿಂಗನೆಂಬ ಸರ್ಪನ ಹೆಡೆಗಳ ಮೇಲೆ ನರ್ತಿಸಿದ ಕಾರಣ ನಿನಗೆ ಕಾಲು ಉಳುಕೀತೇ ? ಅದರಿಂದ ಅಳುತ್ತಿದ್ದೀಯಾ ? **ಭರದೀಂದ್ರ** = ನಂದಗೋಕುಲದ ಜನರು ತನಗೆ ಪ್ರತಿವರ್ಷವೂ ಸಲ್ಲಿಸುತ್ತಿದ್ದ ಗಿರಿಪೂಜೆಯನ್ನು ಮಾಡಲಿಲ್ಲವೆಂಬ ಕಾರಣ ದಿಂದ ಸಿಟ್ಟಾದ ಇಂದ್ರನು ಗೋಕುಲದ ಮೇಲೆ ಕುಂಭದ್ರೋಣ ಮಳೆಗರೆ ದನು. ಆಗ ಕಾರುಣ್ಯಸಾಗರನಾದ ಶ್ರೀಕೃಷ್ಣನು ತನ್ನ ಕೈಯ್ಯಿನ ಕಿರುಬೆರಳಿ ನಿಂದ ಗೋವರ್ಧನ ಪರ್ವತವನ್ನೇ ಎತ್ತಿ, ಗೋವಳರನ್ನು ಸಂರಕ್ಷಿಸಿದನು. ಅದರಿಂದ ನಿನ್ನ ಕಿರುಬೆರಳು ಉಳಿಕಿತೇ ? ರಂಗಯ್ಯ ! ಎನ್ನುತ್ತಾಳೆ ಯಶೋದೆ.

**ಹೆಸರಿನ ಮಲ್ಲರ** = ಕಂಸನ ಆಮಂತ್ರದ ಮೇಲೆ ಮಧುರಾನಗರ ವನ್ನು ಪ್ರವೇಶಿಸಿ, ಕೃಷ್ಣನು ಹೆಸರಾಂತ ಚಾಣೂರ ಮತ್ತು ಮುಷ್ಟಿಕಾ ಎಂಬ ಮಲ್ಲರೊಡನೆ ಸೆಣಸಿ, ಅವರನ್ನು ಲೀಲಾಜಾಲವಾಗಿ ಯಮಸದನಕ್ಕೆ ಅಟ್ಟಿದನು. **ಕಿಸರು** = ಕೆಟ್ಟ ಕಣ್ಣಿನ ದೃಷ್ಟಿ. ಆದರಿಂದ ನಿನಗೆ ಕೆಟ್ಟ ದೃಷ್ಟಿತಾಕಿ ಅಳುತ್ತಿದ್ದೀಯಾ ? ಪುರಂದರದಾಸವರ್ಯರು ಬೇಲೂರಿಗೆ ಹೋಗಿ ಅಲ್ಲಿ ಚೆಲುವ ಚೆನ್ನಿಗರಾಯನನ್ನು ಸಂದರ್ಶಿಸಿದಾಗ ಅವರ ಅಂತ ರಂಗದಿಂದ ಹೊರಹೊಮ್ಮಿದ ಕೀರ್ತನಸಾಹಿತ್ಯವಿದು.



## ೬೦೭

### (ಪುರಂದರವಿಠ್ಠಲಾಂಕಿತ)

ರಾಗ–ಶಂಕರಾಭರಣ ಆದಿತಾಳ

ತಾಳು ತಾಳೆಲೋ–ರಂಗಯ್ಯ–ನೀ
ತಾಳು ತಾಳೆಲೋ–ಕೃಷ್ಣಯ್ಯ ॥ ॥ಪ॥

ನಾಳೆ ನಮ್ಮ ಮನೆಗೆ ಬಂದರೆ–ನಿನ್ನ
ಕಾಲ ಕಂಭಕೆ ಕಟ್ಟಿ–ಪೇಳುವೆ ಗೋಟಿಗೆ ॥ ॥ಅ॥

ದೊರೆಗಳ ಮಗನೆಂಬುದಕೇನೋ–ಆ
ತುರದಿ ಮನೆಪೊಕ್ಕ–ಪರಿಯೇನೋ
ದುರುಳಬುದ್ಧಿ ನಿನಗೆ ತರವೇನೋ–ಹಿಂದೆ
ತಿರುಗಿ ಬೇಡ್ಕೊಂಡದ್ದು ಮರೆತೇನೋ ॥ ॥೧॥

ಚಿಕ್ಕ ಮಕ್ಕಳು ಹೋದರು ಎಂದು–ನೀ ಬಂದು
ಕಕ್ಕುಲತೆಯು ಮಾಡುವರೇನೋ
ಸಿಕ್ಕಿದ ಗೋಪಾಲ ಹಿಡಿ ಹಿಡಿ–ಎಂದರೆ ನೀ
ಬಿಕ್ಕಿ ಬಿಕ್ಕಿ ಅತ್ತರೆ ಬಿಡುವರೇನೋ ॥ ॥೨॥

ಕಟ್ಟಿದಾಕಳ ಮೊಲೆಗಳನುಂಡು–ಕರು
ಬಿಟ್ಟು ಹೇಳುವುದೇನೆಲೋ–ರಂಗ
ಸೃಷ್ಟಿಗೊಡೆಯ ಶ್ರೀಪುರಂದರವಿಠ್ಠಲ–ನೀ
ಕಟ್ಟಲ್ಲಿ ನಿಂತ ಕಾರಣವೇನೋ ರಂಗ ॥ ॥೩॥

**ಪ್ರತಿಪದಾರ್ಥ :-**

ಶ್ರೀಕೃಷ್ಣನ ತುಂಟತನವನ್ನು ತಾಳಲಾರದೇ ಗೋಪಿಕಾಸ್ತ್ರೀಯರು ಅವನನ್ನು ಹಿಡಿದು ಕಟ್ಟಿಹಾಕಿ, ಅವನಿಗೆ ತಕ್ಕ ಬುದ್ಧಿ ಕಲಿಸಬೇಕೆಂಬ ಉದ್ದೇಶದಿಂದ ಆ ಪರಾತ್ಪರನನ್ನು ಕುರಿತು ಹೀಗೆ ಹೇಳುತ್ತಾರೆ.

**ತಾಳು ತಾಳೆಲೋ** = ತಾಳು ತಾಳು ಹೇ ಕೃಷ್ಣ ! **ರಂಗಯ್ಯ** = ಸರ್ವ ಸಜ್ಜನರ ಅಂತರಂಗದಲ್ಲಿ ಕ್ರೀಡಿಸುವ ಬಿಂಬಮೂರ್ತಿಯಾದ ಮಂಗ ಳಾಂಗನು. **ಕಾಲಕಂಭಕೆ** = ನೀನು ನಾಳೆ ನಮ್ಮ ಮನೆಗೆ ಬಂದು ಚೇಷ್ಟೆ ಮಾಡಿದರೆ ನಿನ್ನನ್ನು ಹಿಡಿದು ಮೊಸರು ಕಡೆಯುವ ಕಂಭಕ್ಕೆ ಕಟ್ಟಿಹಾಕು ತ್ತೇನೆ. ನಂತರ ಗೋಪಿಗೆ ಹೇಳುತ್ತೇನೆ–ಎನ್ನುತ್ತಾಳೆ ಒಬ್ಬ ಗೋಪಸ್ತ್ರೀ. **ದೊರೆಗಳ ಮಗನೆಂಬುದಕೇನೋ** = ನಂದಗೋಪನು ಗೋಕುಲದ ಪ್ರಭು ಅವನ ಸಾಕುಮಗನೆಂಬ ಹೆಮ್ಮೆ ನಿನಗೆ–ಎಲೈ ತುಂಟಕೃಷ್ಣ ! **ಆತು ರದಿ ನುನಿಪೊಕ್ಕ** = ಅವಸರದಿಂದ ನಮ್ಮ ಮನೆಗೆ ಬಂದು ತುಂಟತನ ಮಾಡಿ ಸಿಗದೇ ಆತುರದಿಂದ ಓಡಿ ಹೋಗುತ್ತೀಯಾ ! **ದುರುಳೆ ಬುದ್ಧಿ** = ಈ ತುಂಟತನದ ಬುದ್ಧಿ. **ತರವೇನೋ** = ನಿನಗೆ ಸರಿಯೇ ? **ಹಿಂದೆ** = ಹಿಂದಿನ ವಾಮನಾವತಾರದಲ್ಲಿ, **ಬೇಡಿ ಉಂಡದ್ದು** = ಬಲಿ ಯನ್ನು ಮೂರುಪಾದ ಭೂಮಿ ಬೇಡಿ, ರಾಮಾವತಾರದಲ್ಲಿ ವನವನ್ನು ತಿರುಗಿ ಶಬರಿಕೊಟ್ಟ ಫಲಗಳನ್ನು ಉಂಡದ್ದನ್ನು ಮರೆತೆಯಾ ? ಎಂದು ಆ ನಂದನ ಕಂದನ ಹಿಂದಿನ ಅವತಾರಮಹಿಮೆಗಳನ್ನು ತಿಳಿಸುತ್ತಾಳೆ. **ಕಕ್ಕುಲ ತೆಯು** = ಚಿಂತೆ–ಕಳವಳ **ಕಟ್ಟಿದಾಕಳ** = ಎಲೈ ಕೃಷ್ಣ ! ನೀನು ಕಟ್ಟಿದ್ದ ಕರುಗಳನ್ನು ಬಿಚ್ಚಿ, ಆಕಳ ಹತ್ತಿರ ಬಿಟ್ಟು, ಅವು ಪೂರ್ತಿಹಾಲು ಕುಡಿದ ಮೇಲೆ, ನಮಗೆ ತಿಳಿಸುತ್ತೀಯಾ ? **ನೀ ಕಟ್ಟಿಲ್ಲಿ ನಿಂತ** = ಕಟ್ಟಲ್ಪಟ್ಟಾಗ ನಿಂತಿರುವ ಭಂಗಿ ಏನೋ ? ಗೋಪಿಯು ಒರಳಿಗೆ ಕಟ್ಟಿ ಹಾಕಿದ ಪ್ರಸಂಗವನ್ನು ತಿಳಿಸುತ್ತಾರೆ.



## ೬೦೮

## (ಪುರಂದರವಿಠಲಾಂಕಿತ)

**ರಾಗ–ಹಿಂದೂಸ್ಥಾನಿ ಕಾಪಿ** **ಆದಿತಾಳ**

ಜಗದೋದ್ಧಾರನಾ ಆಡಿಸಿದಳೆಶೋದ ॥ ॥ಪ॥

ಜಗದೋದ್ಧಾರನಾ–ಮಗನೆಂದು ತಿಳಿಯುತ
ಸುಗುಣಾಂತರಂಗನ–ಆಡಿಸಿದಳೆಶೋದೆ ॥ ॥ಅ॥

ನಿಗಮಕೆ ಸಿಲುಕದ–ಅಗಣಿತಮಹಿಮನ
ಮಗುಗಳ ಮಾಣಿಕ್ಯನಾ–ಆಡಿಸಿದಳೆಶೋದೆ ॥ ಜಗದೋದ್ಧಾರನಾ ॥ ॥೧॥

ಅಣೋರಣೀಯನಾ ಮಹತೋಮಹೀಯನಾ
ಅಪ್ರಮೇಯನನಾ–ಆಡಿಸಿದಳೆಶೋದೆ ॥ ಜಗದೋದ್ಧಾರನಾ ॥ ॥೨॥

ಪರಮಪುರುಷನಾ–ಪರವಾಸುದೇವನಾ
**ಪುರಂದರವಿಠ್ಠಲನಾ**–ಆಡಿಸಿದಳೆಶೋದೆ ॥ ಜಗದೋದ್ಧಾರನಾ ॥ ॥೩॥



**ಅರ್ಥವಿವರಣೆ :—**

ಅಪಾರಮಹಿಮನೂ ಅಪ್ರಮೇಯನೂ ಆದ ಶ್ರೀಕೃಷ್ಣನನ್ನು ತನ್ನ ಮಗನೆಂಬ ಭಾವದಿಂದ ಆಡಿಸುವ ಯಶೋದೆಯ ಭಾಗ್ಯವನ್ನು ವರ್ಣಿಸುತ್ತಾರೆ ದಾಸಶ್ರೇಷ್ಠ ಪುರಂದರರು.

**ಜಗದೋದ್ಧಾರನ** = ಚತುರ್ದಶ ಭುವನಾತ್ಮಕವಾದ ಚರಾಚರಾತ್ಮಕ ಸಮಗ್ರ ಬ್ರಹ್ಮಾಂಡವನ್ನು ಧರಿಸಿದ, ಅದಕ್ಕೆ ಆಶ್ರಯಭೂತನಾದ ಜಗತ್ಪತಿಯನ್ನು ಆಡಿಸಿದಳಂತೆ–ಯಶೋದೆ ಎನ್ನುತ್ತಾರೆ. **ಸುಗುಣಾಂತ**

**ರಂಗನ**=ಕಲ್ಯಾಣ ಗುಣಗಣಧಾಮನಾದ ಸರ್ವರ ಅಂತರಂಗದಲ್ಲಿ ನಲಿಯುವ ರಂಗನನ್ನು. **ನಿಗಮಕೆ ಸಿಲುಕದ** = ವೇದಾತೀತನಾದ ಮತ್ತು ವೇದಾಭಿಮಾನಿಯಾದ ಶ್ರೀಲಕ್ಷ್ಮೀದೇವಿಯರ ಆಲೋಚನೆಗೂ ಸಾಕಲ್ಯೇನ ಎಟುಕದ. **ಅಗಣಿತ ಮಹಿಮನ** = ಅಪಾರಮಹಿಮಾಸಂಪನ್ನನಾದ ಶ್ರೀಕೃಷ್ಣನನ್ನು. **ಮಗುಗಳ ಮಾಣಿಕ್ಯನ** = ಮಕ್ಕಳಿಗೆಲ್ಲಾ ರತ್ನಪ್ರಾಯನಾದ. **ಅಣೋರಣೀಯನಾ** = ಅಣುವಿಗಿಂತ ಅತ್ಯಣುರೂಪನಾಗಿ (ಸ್ವರೂಪ ದೇಹಾಂತರ್ಗತನಾಗಿ). **ಮಹತೋ ಮಹೀಯನಾ** = ಅತ್ಯಂತ ಬೃಹದ್ವಸ್ತುವಿಗಿಂತಲೂ ದೊಡ್ಡವನಾದ (ಮಹತ್ತನ್ನೂ ವ್ಯಾಪಿಸಿ ಅದಕ್ಕೆ ಆವರಣರೂಪದಲ್ಲಿರುವ). **ಅಪ್ರಮೇಯನ** = ಸಾಕಲ್ಯೇನ ಯಾರಿಂದಲೂ ತಿಳಿಯಲು ಅಶಕ್ಯನಾದ (ಮೇಯ=ತಿಳಿಯಲ್ಪಡುವವನು). **ಪರಮಪುರುಷನಾ** = ಅತ್ಯಂತ ಶ್ರೇಷ್ಠವಸ್ತು-ಸರ್ವೋತ್ತಮನಾದ ಶ್ರೀಹರಿಯನ್ನು. **ಪರವಾಸುದೇವನಾ** = ಶ್ರೀಲಕ್ಷ್ಮೀದೇವಿಗಿಂತ ಅನಂತಾನಂತ ಕೋಟಿಗುಣಗಳಿಂದ ಉತ್ತಮೋತ್ತಮನಾದ ಮುಕ್ತಿಪ್ರದನಾದ ಶ್ರೀವಾಸುದೇವನಾಮಕ ಶ್ರೀಪರಮಾತ್ಮ (ಶ್ರೀರಂಗದಲ್ಲಿರುವ ಭಗವದ್ರೂಪ-ಪರವಾಸುದೇವ).



**೩೦೯**

**(ಪುರಂದರವಿಠಲಾಂಕಿತ)**

**ರಾಗ-ಕಲ್ಯಾಣಿ** **ತ್ರಿಪುಟತಾಳ**

ಪಿಳ್ಳಂಗೋವಿಯ ಚೆಲ್ವಕೃಷ್ಣನ
ಎಲ್ಲಿ ನೋಡಿದಿರೆ-ರಂಗನ ಎಲ್ಲಿ ನೋಡಿದಿರೇ ॥ ॥ಪ॥

ಎಲ್ಲಿ ನೋಡಿದರಲ್ಲಿ ತಾನಿಲ್ಲದಿಲ್ಲವೆಂದು
ಬಲ್ಲ ಜಾಣರು ॥ ॥ಅ॥

ನಂದಗೋಪನ ಮಂದಿರಂಗಳ ಸಂದುಗೊಂದಿನಲಿ
ಚೆಂದ ಚೆಂದದ ಗೋಪಬಾಲರ ವೃಂದ ವೃಂದದಲಿ
ಸುಂದರಾಂಗದ ಸುಂದರಿಯರ ಹಿಂದೆ ಮುಂದೆಯಲಿ
ಅಂದದಾಕಳ ಕಂದ ಕರುಗಳ ಮಂದೆ ಮಂದೆಯಲಿ ॥ ॥೧॥

ಶ್ರೀಗುರೂಕ್ತ ಸದಾ ಸುಮಂಗಳ ಯೋಗ ಯೋಗದಲಿ
ಆಗಮಾರ್ಥದೊಳಗೆ ಮಾಡುವ ಯಾಗದಲಿ
ಶ್ರೀಗೆ ಭಾಗ್ಯನಾಗಿ ವರ್ತಿಪ ಭೋಗ ಭೋಗದಲಿ
ಭಾಗವತರು ಸದಾ ಬಾಗಿ ಪಾಡುವ ರಾಗ ರಾಗದಲಿ ॥ ॥೨॥

ಈ ಚರಾಚರದೊಳಗೆ ಜನಂಗಳಾಚೆ ಈಚೆಯಲಿ
ಖೇಚರೇಂದ್ರನ ಸುತನ ರಥದ ಚೌಕಪೀಠದಲಿ
ನಾಚದೆ ಮಾಧವ ಕೇಶವ ಎಂಬ ವಾಚಂಕಗಳಲಿ
ವೀಚುಕೊಂಡದ ಪುರಂದರವಿಠ್ಠಲನ ಲೋಚನಾಗ್ರದಲಿ ॥ ॥೩॥



**ಅರ್ಥವಿವರಣೆ:-**

ತನ್ನ ಕೊಳಲಿನ ಇಂಚರದಿಂದ ಗೋಕುಲವನ್ನೇ ಭಾವನಾಲಹರಿಯಲ್ಲಿ ಮುಳುಗಿಸುತ್ತಿದ್ದ ಆ ಮುರುಳೀಮನೋಹರನ ಸುಂದರಚಿತ್ರಣವನ್ನು ಬಿಡಿಸಿದ್ದಾರೆ. ಪ್ರಸಕ್ತ ಕೀರ್ತನಸಾಹಿತ್ಯದಲ್ಲಿ ನಾದಬ್ರಹ್ಮರಾದ ಶ್ರೀಪುರಂದರ ದಾಸವರೇಣ್ಯರು.

**ಪಿಳ್ಳಂಗೋವಿ** = ಬಿದಿರಿನಿಂದ ಮಾಡಿದ ಕೊಳಲು (ವೇಣು). **ಚೆಲ್ವ** = ಸುಂದರಕೆ ಸುಂದರನಾದ (ಸಾಕ್ಷಾತ್ ಮನ್ಮಥಮನ್ಮಥಃ). **ತಾನಿಲ್ಲದಿಲ್ಲವೆಂದು** = ಸರ್ವತ್ರವ್ಯಾಪ್ತನು. ಆವನಿಲ್ಲದ ಸ್ಥಳವೇ ಇಲ್ಲ. **ಜಾಣರು** = ಬ್ರಹ್ಮಜ್ಞಾನಿಗಳು **ಸಂದುಗೊಂದಿನಲಿ** = ಇಕ್ಕಟ್ಟಾದ

ಓಣಗಳಲ್ಲಿ. **ವೃಂದ** = ಗೋಪಬಾಲಕ ಗುಂಪು ಗುಂಪಿನಲ್ಲಿ. **ಹಿಂದೆ ಮುಂದೆಯಲಿ** = ಚೆಲುವೆಯರಾದ ಗೋಪಬಾಲೆಯರ ಸುತ್ತಮುತ್ತ. **ಕರುಗಳ** = ಸರ್ವಲಕ್ಷಣಗಳಿಂದ ಶೋಭಿತವಾದ ಪಶುಗಳ ಮುಂದೆಯಲ್ಲಿ ಪುತ್ತು ಕರುಗಳ ಗುಂಪಿನಲ್ಲಿ. **ಶ್ರೀ** = ರಮಾದೇವಿ **ಗುರೂ** = ಬ್ರಹ್ಮ ವಾಯುಗಳು. **ಯೋಗ ಯೋಗದಲಿ** = ಶ್ರೀ ಸೂಕ್ತ ಪವಮಾನಸೂಕ್ತ (ಬಳಿತ್ಥಾ ಸೂಕ್ತ) ಪಠಿಸುತ್ತಿರುವ ಮಂಗಳ ಪರಿಸರದಲ್ಲಿ (ಮಂತ್ರಜಾಲದಲ್ಲಿ) **ಆಗಮಾರ್ಥದೊಳಗೆ** = ಸರ್ವಯಜ್ಞಕ್ಕು ಶ್ರೀಕೃಷ್ಣನೇ ಮುಖ್ಯವಿಷಯನು. ಆವನೇ ಯಜ್ಞನಾಮಕನು. ವೇದೋಕ್ತ ಮಂತ್ರಗಳಿಂದ ವೇದ್ಯನಾಗಿರತಕ್ಕ. **ಶ್ರೀಗೆ ಭಾಗ್ಯನಾಗಿ** = ಶ್ರೀಲಕ್ಷ್ಮೀದೇವಿಗೆ ಮಂಗಳಪ್ರದನಾಗಿ. ಶ್ರೀಹರಿಯಿಂದ ಲಕ್ಷ್ಮೀದೇವಿಗೆ ಆನಂದವೇಹೊರತು, ಅವಳಿಂದ ಅವನಿಗಲ್ಲ. ಸ್ವರಮಣನು. **ಭಾಗವತರು** = ಭಗವದ್ಭಕ್ತರಾದ ಹರಿದಾಸರು. **ರಾಗ ರಾಗದಲಿ** = ಸಂಗೀತದಲ್ಲಿ ರಾಗರೂಪನಾಗಿದ್ದಾನೆ. ಅವನೇ ಸರ್ವಸ್ವರವರ್ಣಶಬ್ದವಾಚ್ಯನು. **ಈ ಚರಾಚರದೊಳಗೆ** = ಜೀವಜಡಗಳಿಂದ ಯುಕ್ತವಾದ ಈ ಬ್ರಹ್ಮಾಂಡದಲ್ಲಿ. **ಖೇಚರೇಂದ್ರನ ಸುತನ** = ಇಂದ್ರನ ಪುತ್ರನಾದ ಪಾರ್ಥನ (ಖೇಚರ = ಆಕಾಶ-ಸಂಚಾರಿಗಳಾದ ಸುರರು ಅವರಿಗೆ ಇಂದ್ರ ಎಂದರೆ ಸುರಾಧಿಪತಿ ಇಂದ್ರದೇವರು) ಪಾರ್ಥಸಾರಥಿಯಿಂದ. **ವಾಚಂಕಗಳಲಿ** = ವಚನ ರೂಪವಾದ ಸ್ತೋತ್ರಗಳಲ್ಲಿ. **ವೀಚುಕೊಂಡದ** = ಸಕಲ ಇಷ್ಟಾರ್ಥಗಳನ್ನು ಕೊಡುವ.

## ೬೧೦

### (ಕಾಗಿನೆಲೆಯಾದಿಕೇಶವಾಂಕಿತ) (ಶ್ರೀಕನಕದಾಸರ ಕೃತಿ)

**ರಾಗ–ಮೋಹನ** **ಆದಿತಾಳ**

ನೆರೆದು ಗೋಪಿಯರೆಲ್ಲರು ಕೃಷ್ಣಯ್ಯನ
ಸೆರಗಪಿಡಿದು ಕೊಂಡು ॥ ॥ಪ॥

ಭರದಿಂದ ಬಂದು ಯಶೋದೆಗೆ ಚಾಡಿಯ
ನರುಹಿದರತಿವೇಗದಿ ॥ ॥ಅ॥

ಬಲು ಕಳ್ಳ ನಿನ್ನ ಮಗ ಗೋಪಮ್ಮ ಕೇಳೆ
ಹಾಲು ಕರೆಯುತಿರಲು
ತೂಲೆಗೆ ನಿಚ್ಚಣಿಕೆಯ ಹಾಕದೆ ಸುರಿದನು
ನೆಲುವಿನ ಪಾಲ್ಮೊಸರ ॥ ॥೧॥

ಅಮ್ಮಯ್ಯ ಇಲ್ಲ ಕಣೆ ಇವಳು–ಎನ್ನ
ಸುಮ್ಮನೆ ದೂರುವಳೆ
ಹಮ್ಮಿಂದ ನಾನವಳಟ್ಟಕ್ಕೆ ನೆಗೆವರೆ
ಬೊಮ್ಮ ಜಟ್ಟಿಗನೇನಮ್ಮ ॥ ॥೨॥

ಮತ್ತೊರ್ವಳೆಂತೆಂದಳು–ನಿನ್ನೀ ಮಗ
ಹತ್ತಿ ಗವಾಕ್ಷಿಯಿಂದ
ಬಚ್ಚಿಟ್ಟ ಬೆಣ್ಣೆಯನೆಲ್ಲವ ಮೆದ್ದನು
ಮಕ್ಕಳಿಗಿಲ್ಲದಂತೆ ॥ ॥೩॥

ಗಡಿಗೆ ಬೆಣ್ಣೆಯ ಮೆಲ್ಲರೆ–ಎನ್ನ ಹೊಟ್ಟೆ
ಕೆರೆ ಭಾವಿಯೇನೇ–ಅಮ್ಮ
ಹುಡುಗರಿಗೆಂದು ಬಚ್ಚಿಟ್ಟ ಬೆಣ್ಣೆಯನೆಲ್ಲ
ಹೊಡೆವರವರ ಮಕ್ಕಳು ॥ ॥೪॥

ಮಲಗೋ ಮಂಚದ ಮೇಲೆ ನಾ ಮಲಗಿರೆ
ಮೊರೆವ ಹಾವನ ಹಿಡಿದು
ಅರಿಯದಂತೆ ಬಂದು ಹುಸುಕಿನೊಳಗೆ ಇಟ್ಟು
ಸರಸರ ಪೋದನಮ್ಮ ॥ ॥೫॥

ಹರನಡರುವ ಹಾವನು ನಾ ಹಿಡಿವರೆ
ತರಳನು ತಡೆಕಾರನೆ
ಹರಕೆಯು ಹೊತ್ತುದನೊಪ್ಪಿಸದಿದ್ದರೆ
ಗುರುತು ತೋರಲಿ ಬಂತೇನೋ ॥ ॥೬॥

ಮಕ್ಕಳು ಪಡೆದವರು ಇಲ್ಲದ ಕಳವಳ
ನಿಕ್ಕಬಹುದೆ ಕೃಷ್ಣಗೆ
ಸಿಕ್ಕಿದ ತಪ್ಪು ಸಹಿತ ಹಿಡಿತಂದರೆ
ತಕ್ಕ ಬುದ್ಧಿಯ ಪೇಳುವೆ ॥ ॥೭॥

ಅಣು ಘನರೂಪ ಕಾಣೇ ನಿನ್ನೀ ಮಗ
ಚಿನುಮಯ ರೂಪ ಕಾಣೆ
ಘನಮಹಿಮನು ಸಿರಿಕಾಗಿನೆಲೆಯಾದಿ
ಕೇಶವರಾಯನ ಆಣೆ ॥ ॥೮॥



**ಅರ್ಥವಿವರಣೆ : –**

ಗೋಪಸ್ತ್ರೀಯರೆಲ್ಲರೂ ನೆರೆದು, ಯಶೋದೆಯ ಬಳಿ ಬಂದಿದ್ದಾರೆ. ಪೋರ ಕೃಷ್ಣನ ಮೇಲೆ ಒಬ್ಬೊಬ್ಬರಾಗಿ ಚಾಡಿ ಹೇಳುತ್ತಾರೆ. ಆದಕ್ಕೆ ಬಾಲಕೃಷ್ಣ ಕೊಡುವ ಸಮಂಜಸವಾದ ಉತ್ತರಗಳು ಪ್ರಸಕ್ತ ಕೀರ್ತನ ಸಾಹಿತ್ಯದಲ್ಲಿವೆ. ಶ್ರೀಕನಕದಾಸರು ತಮ್ಮದೇ ಆದ ಶೈಲಿಯ ವೈಖರಿಯಲ್ಲಿ ಪ್ರಶ್ನೋತ್ತರಗಳ ಸರಮಾಲೆಯನ್ನು ಸುಂದರವಾಗಿ ಹೆಣೆದಿದ್ದಾರೆ.

**ಸೆರಗ**= ಮೇಲುಹೊದಿಕೆ, **ಭರದಿಂದ**=ವೇಗವಾಗಿ, **ನಿಚ್ಚಣಿಕೆ**= ಏಣಿ, **ಹವಣಿಂದ** = ಪೂರ್ವಸಿದ್ಧತೆಯಿಂದ, ಕೃಷ್ಣನ ಉತ್ತರ – ಅಷ್ಟು

ಎತ್ತರದ ಅಟ್ಟಕ್ಕೆ ಏರಲು ನಾನೇನು ದೊಡ್ಡ ಬಲಶಾಲಿಯೋ ? ಚಿಕ್ಕ ಮಗುವಿಗೆ ಅದು ಸಾಧ್ಯವೇ ? ಅವಳ ಮಾತು ಸುಳ್ಳು."

**ಗವಾಕ್ಷಿ**=ಬೆಳಕು ಕಿಂಡಿ, "ಬೆಣ್ಣೆಯನ್ನೆಲ್ಲಾ ತಿನ್ನುವುದಕ್ಕೆ ನನ್ನ ಹೊಟ್ಟೆ ಕೆರೆ ಭಾವಿ ಏನು ?" ಎಂದು ಸವಾಲು ಹಾಕುತ್ತಾನೆ ಪೋರ ಕೃಷ್ಣ ! **ನೊರೆವ**=ಬುಸುಗುಟ್ಟುವ **ಹರನಡರುವ**=ರುದ್ರದೇವರು ಭೂಷಣನಾಗಿ ಹಾಕಿಕೊಂಡಿರುವ ಹಾವು "ಹಾವನ್ನು ಕಂಡರೆ ಮಕ್ಕಳಿಗೆ ಭಯವಲ್ಲವೇ ? ಹರಿವ ಹಾವನ್ನೇ ಯಾರಾದರೂ ಬಾಲಕರು ಹಿಡಿಯುವರೇ ? ಅಮ್ಮ" ಎನ್ನುತ್ತಾನೆ ತುಂಟ ಕೃಷ್ಣ ! **ಸಿಕ್ಕಿದ ತಪ್ಪುಸಹಿತ**= ತಪ್ಪು ಮಾಡುತ್ತಿದ್ದರೆ, ಮಾಲಿನ ಸಹಿತ ಕೃಷ್ಣನನ್ನು ಹಿಡಿದುಕೊಂಡು ಬನ್ನಿ. ಆಗ ಅವನಿಗೆ ತಕ್ಕ ಬುದ್ಧಿ ಕಲಿಸುತ್ತೇನೆ. ಎನ್ನುತ್ತಾಳೆ ಯಶೋದೆ. ಅದಕ್ಕೆ ಗೋಪಸ್ತ್ರೀಯರ ಉತ್ತರ– **ಅಣು ಘನರೂಪ**=ಸೂಕ್ಷ್ಮ, ಬೃಹದ್ರೂಪಿ ನಿನ್ನ ಮಗ. ಅಣುಗಳಲ್ಲಿ ಅತ್ಯಣು ಮಹತ್ತಿಗೆ ಮಹತ್ತು. ಜ್ಞಾನಾನಂದ ಸ್ವರೂಪನು. ಅಪಾರ ಮಹಿಮಾಸಂಪನ್ನನು. ಅವನನ್ನು ಹಿಡಿದು ತರುವುದಾದರೂ ಹೇಗೆ ? – ಎಂಬ ಪ್ರಶ್ನೆ ಮತ್ತು ಸಮಸ್ಯೆ ಅವರದು !



## ೬೧೧

## (ಅಂಕಿತ ಆದಿಕೇಶವ)

**ರಾಗ–ಶಂಕರಾಭರಣ** **ಏಕತಾಳ**

ಇಂದು ಸೈರಿಸಿರಿ ಶ್ರೀಕೃಷ್ಣನ ತಪ್ಪ
ಮುಂದಕೆ ನಿಮ್ಮ ಮನೆಗೆ ಬಾರನಮ್ಮ ‖ ‖೧‖

ಮಗುವು ಬಲ್ಲುವೆ ಇಷ್ಟು ಬೆಣ್ಣೆಯ ಕದ್ದರೆ
ಬಿಗಿಯಬಹುದೇ ಶ್ರೀ ಚರಣವನು

ಅಗಣಿತಮಹಿಮನ ಅಂಜಿಸಬೇಕಮ್ಮ
ಬಗೆಯಬಾರದೆ ನಿಮ್ಮ ಮಕ್ಕಳಂತೆ ॥ ॥೧॥

ಹಸುಮಗುವನು ಕಂಡು ಮುದ್ದಿಸಲೊಲ್ಲದೆ
ಪುಸಿಗ ಕಳ್ಳನೆಂದು ಕಟ್ಟುವಿರಿ
ವಸುಧೆಯೊಳಗೆ ನಾನೊಬ್ಬಳೆ ಪಡೆದೆನೆ ನಿಮ್ಮ
ಹಸು ಮಗುವೆಂದು ಭಾವಿಸಬಾರದೇ ? ॥೨॥

ಎಷ್ಟೊ ಬಾರಿಯು ನಾ ಬೇಡವೆಂದರೂ ಕೇಳ
ದುಷ್ಟ ಮಕ್ಕಳ ಕೂಡ ಒಡನಾಟವ
ಕಟ್ಟಿದ ನೆಲುವಿನ ಬೆಣ್ಣೆಯನೀವೆನು
ಬಿಟ್ಟು ಕಳುಹಿರಮ್ಮ ಆದಿಕೇಶವನ ॥ ॥೩॥



**ಅರ್ಥವಿವರಣೆ : –**

ಮುದ್ದು ಕೃಷ್ಣನ ತುಂಟತನವನ್ನು ಸಹಿಸಲಾರದೇ ಗೋಪಿಯರು ಅವನನ್ನು ತಮ್ಮ ಮನೆಯಲ್ಲಿ ಕಂಬಕ್ಕೆ ಕಟ್ಟಿ ಹಾಕಿದ್ದಾರೆ. ಅದನ್ನು ತಿಳಿದ ಯಶೋದೆ ದುಃಖಿತಳಾಗಿ ಗೋಪಿಕಾಸ್ತ್ರೀಯರಿಗೆ ಹೇಳುವ ಮಾತಿನ ಪ್ರಸಂಗವನ್ನು ಕಣ್ಣಿಗೆ ಕಟ್ಟಿದಂತೆ ಚಿತ್ರಿಸಿರುತ್ತಾರೆ ಕವಿಪುಂಗವ ಕನಕದಾಸರು.

**ಇಂದು ಸೈರಿಸಿರಿ** = ಈಗಿನ ಕೃಷ್ಣನ ತಪ್ಪನ್ನು ತಾಳಿ ಮನ್ನಿಸಿರಿ. **ಮುಂದಕೆ** = ಇನ್ನು ಮೇಲೆ ನಿಮ್ಮ ಮನೆಗೆ ಬಾರದಂತೆ ಮಾಡುತ್ತೇನೆ. **ಬಿಗಿಯಬಹುದೇ** = ಕೃಷ್ಣ ಇನ್ನೂ ಪುಟ್ಟ ಬಾಲಕ. ಸ್ವಲ್ಪ ಬೆಣ್ಣೆ ಕದ್ದುದರಿಂದ ಮಾತ್ರಕ್ಕೆ ಅವನ ಕೋಮಲವಾದ ಕಾಲುಗಳನ್ನು ಹೀಗೆ ನಿಷ್ಕರುಣೆಯಿಂದ ಕಟ್ಟಿ ಹಾಕುತ್ತಾರೆಯೇ ? **ಅಗಣಿತ ಮಹಿಮನ** = ಅಪಾರ ಗುಣ ಸಂಪನ್ನನು ಶ್ರೀಕೃಷ್ಣ. ಅವನನ್ನೇ ಹೆದರಿಸಬಹುದೇ ? **ಬಗೆಯಬಾರದೆ** =

ನಿಮ್ಮ ಮಕ್ಕಳಂತೆ ಅವನೂ ಒಬ್ಬನೆಂದು ಭಾವಿಸಬಾರದೇ ? **ಹಸುಮಗುವನು** = ಎಳೆಯ ಕಂದ ಶ್ರೀಕೃಷ್ಣ. ಅವನನ್ನು ನೋಡಿ ಮುದ್ದಿಸದೇ. **ಪುಸಿಗ** = ಸುಳ್ಳುಗಾರ ಕಳ್ಳನೆಂದು ಕಟ್ಟಿ ಹಾಕುತ್ತೀರಾ ? **ವಸುಧೆಯೊಳಗೆ** = ಈ ಭೂಮಿಯಲ್ಲಿ ನಾನೊಬ್ಬಳೇ ಪಡೆದಿದ್ದೇನೆಯೇ ಈ ಮಗುವನ್ನು ನೀವೆಲ್ಲರೂ ಮಕ್ಕಳ ತಾಯಿಂದಿರಲ್ಲವೇ ? **ಒಡನಾಟ** = ಎಷ್ಟೋ ಬಾರಿ ಹೇಳಿದ್ದೇನೆ. ದುಷ್ಟ ಮಕ್ಕಳ ಸಹವಾಸ ಮಾಡಬೇಡವೆಂದು ಆದರೂ ನನ್ನ ಮಾತನ್ನು ಕೇಳನು. **ಕಟ್ಟಿದ ನೆಲುವಿನ** = ಆದಿಕೇಶವ ನಾಮಕನಾದ ಆ ಅಪ್ರಮೇಯನನ್ನು ಬಿಚ್ಚಿ ಕಳುಹಿಸಿ. ಅವನಿಗೆ ನೆಲುವಿನ ಮೇಲಿಟ್ಟಿರುವ ನವನೀತವನ್ನು ಕೊಡುವನೆನ್ನುತ್ತಾಳೆ ಯಶೋದೆ !

## ೬೧೨

## (ವಿಜಯವಿಠ್ಠಲಾಂಕಿತ)

**ರಾಗ–ಶ್ರೀರಾಗ (ಮಧ್ಯಮಾವತಿ)** **ಆದಿತಾಳ**

ಶ್ರೀಶಾ ಕೊಳಲನೂದಿದನಂದು–ಶ್ರೀಧರ ನಿಂದು ॥ ॥ಪ॥

ವಾಸವವಂದಿತ ವಾತಜ ಸೇವಿತ
ವಾಸುಕಿಶಯನನು ವಾರೆ ನುನೋಟದಿ ॥ ॥ಅ॥

ಬೆರಳ ಸಂದಿಲಿ ಮುರಳಿ ಪಿಡಿದು–ಮುರಾರಿ ತಾನು
ಹರುಷದಿಂದಲಿ ಸ್ವರವ ನುಡಿದು – ವಾರಿಜನೇತ್ರ
ಅರಳು ಮಲ್ಲಿಗೆ ಸರಗಳ ಮುಡಿದು !
ಕೊರಳ ಪದಕ ಹಾರ ಕೌಸ್ತುಭ ಶೋಭಿತ
ಮರುಳು ಮಾಡುತ ಮಡದಿಯರೆಲ್ಲರ ॥ ॥೧॥

ಗೌರೀ ಗಾಂಧಾರಿ ಗೌಳಪಂತು – ಗೌರೀಶಭೂಷಣ
ಶೌರೀ ಸಾರಂಗ ಮೋಹನವಿಂತು – ಸಾವೇರಿ ಸುರುಟಿ
ಭೈರವಿ ಬ್ಯಾಗಡೆ ಊದುತ ನಿಂತು ।
ಮಾರಜನಕ ತಾನಾನಂದದಿಂದಲಿ
ವೀರ ಶ್ರೀಕೃಷ್ಣನು ವಿಧವಿಧ ರಾಗದಿ ॥ ॥೨॥

ನಾರದ ತುಂಬುರ ನಾಟ್ಯವನಾಡೆ – ನಳಿನನಾಭನ
ಗಿರಿಜಾಪತಿಯು ವಂದಿಸಿ ಬೇಡೆ – ಗೋಪಾಲಕೃಷ್ಣನ
ಭಾರತಿಪತಿ ತಾ ಕೊಂಡಾಡೆ ।
ವರಗುರು ವಂದಿತ ವಿಜಯವಿಠ್ಠಲರೇಯ
ಹರುಷವ ಪಡಿಸುತ ವನಿತೆಯರೆಲ್ಲರ ॥ ॥೩॥

**ಅರ್ಥವಿವರಣೆ:–**

ಈ ಕೀರ್ತನ ಸಾಹಿತ್ಯದಲ್ಲಿ **ಶ್ರೀ ವಿಜಯದಾಸವರೇಣ್ಯರು** ಶ್ರೀಕೃಷ್ಣನ ಕರ್ಣರಸಾಯನ ರೂಪವಾದ ವೇಣುನಾದನ ವೈಖರಿಯನ್ನು ಸಾದ್ಯಂತ **ವಾಗಿ ವರ್ಣಿಸುತ್ತಾರೆ.**

**ಶ್ರೀಶ** = ಶ್ರೀ ಲಕ್ಷ್ಮೀದೇವಿಗೂ ನಿಯಾಮಕನಾದ ಶ್ರೀಕೃಷ್ಣ **ಅಂದು** = ಆಗ (ಆ ಗೋಕುಲದಲ್ಲಿ) **ನಿಂದು** = ನಿಂತುಕೊಂಡಿರುವ ಭಂಗಿಯಲ್ಲಿ. **ವಾಸವ ವಂದಿತ** = ಇಂದ್ರನಿಂದ ನಮ್ಯನಾದ. **ವಾತಜ ಸೇವಿತ** = ಶ್ರೀವಾಯುದೇವರಿಂದ ಸಂಸೇವಿತನಾಗಿ. (ಇಲ್ಲಿ ವಂದಿತ ಮತ್ತು ಸೇವಿತದ ಶಬ್ದ ಪ್ರಯೋಗಗಳ ವೈಶಿಷ್ಟ್ಯ ಗಮನಿಸಬೇಕು) **ವಾಸುಕಿ ಶಯನನು** = ಸರ್ಪಶಯನನಾದ ಶ್ರೀಕೃಷ್ಣನು. **ವಾರೆ ಸುನೋಟದಿ** = ತನ್ನ ಕುಡಿಗಣ್ಣಿನ ಕೃಪಾಕಟಾಕ್ಷ ದೃಷ್ಟಿಯಿಂದ.

**ಮುರಳಿ** = ಕೊಳಲುವಾದ್ಯ. **ಮುರಾರಿ** = ಮುರಾರಿ ಎಂಬ ಅಸುರನ ಸಂಹಾರಕನಾದ ಶ್ರೀಕೃಷ್ಣ. **ವಾರಿಜನೇತ್ರ** = ಕಮಲ ಪುಷ್ಪದ ದಳ ದಂತೆ ವಿಶಾಲವಾದ ಕಣ್ಣುಳ್ಳವನು. **ಅರಳು ಮಲ್ಲಿಗೆ** = ಆಗ ತಾನೇ ಬಿರಿದು ಅರಳುತ್ತಿರುವ ಮಲ್ಲಿಗೆಯ ಹಾರ. **ಕೌಸ್ತುಭ** = ಕೌಸ್ತುಭವೆಂಬ ಕಂಠಾ ಭರಣ. **ಮುರಳು ಮಾಡುತ** = ವೇಣುನಾದರಿಂದ ಗೋಕುಲದ ಸ್ತ್ರೀಪುರಷ್ನರೆಲ್ಲಾ ಮೋಹಿಸುತ್ತಾ, **ಗೌರಿ** = ವಿವಿಧ ರಾಗಗಳ ಹೆಸರು. **ಗೌರೀಶಭೂಷಣ** = ಶಂಕರಾಭರಣರಾಗ. **ಮಾರಜನಕ** = ಮನ್ಮಥ ಜನಕನಾದ ಶ್ರೀಕೃಷ್ಣ (ಪ್ರದ್ಯುಮ್ನನು ಮನ್ಮಥನ ಅವತಾರನು, ಅವನೇ ಶ್ರೀಕೃಷ್ಣ ಪುತ್ರ). **ಧೀರ** = ಮಹಾ ಸಮರ್ಥ. **ನಳಿನನಾಭನ** = ಪದ್ಮನಾಭನ. **ಗಿರಿಜಾಪತಿಯು** = ಗೌರಿಪತಿಯಾದ ಶಂಕರನು. **ಭಾರತಿಪತಿ** = ಭಾರತೀರಮಣರಾದ ಶ್ರೀ ವಾಯು ದೇವರು. **ವರಗುರು** = ಶ್ರೇಷ್ಠರಾದ ಗುರುಗಳು. ತ್ರೈಲೋ ದ್ಯಾಕ್ಯಾಚಾರ್ಯರಾದ ಬ್ರಹ್ಮ ವಾಯುಗಳು



## ೬೧೩

## (ವಿಜಯವಿಠ್ಠಲಾಂಕಿತ)

**ರಾಗ–ಯಮುನಾ ಕಲ್ಯಾಣಿ** **ರೂಪಕತಾಳ**

ಕಾದನಾ ವತ್ಸವಾ ಹರಿ ಕಾದನಾ ‖ ‖ಪ‖

ವೇದವೇದ್ಯ ಸಾಧುವಿನಂತೆ ರಾಧಿಕಾರಮಣ ಕೃಷ್ಣ ‖ ‖ಅ‖

ಎಳೆಗರಿಕೆ ಇರುವ ಸ್ಥಳದಿ ನೆರೆದು ವಸ್ತುಗಳನೆ ನಿಲಿಸಿ
ಕೊಳಲು ತನ್ನ ಕೈಲಿ ಪಿಡಿದು ಮುರಳಿಗಾನ ಮಾಡುತ್ತ ‖ ‖೧‖

ತನ್ನ ಶೆರಗು ತೆಗೆದು ಕೃಷ್ಣ ಕರುಗಳನ್ನೆ ಬೆನ್ನೊರೆಸಿ
ತಿನ್ನು ತಿನ್ನು ಪುಲ್ಲು ಎನುತ ಘನ್ನ ಕರಗಳೊತ್ತುತ ॥ ॥೨॥

ಉಡುಗಳಂತೆ ಕರುಗಳ ನಡುವೆ ಚಂದ್ರ ಧರೆಯೊಳು
ಪೊಡವಿಯೊಳಗೆ ಬೆಳಗಲು ಆ ಮೃಡನು ಕೊಂಡಾಡಲು ॥ ॥೩॥

ಒಂದು ತಿಂಗಳ ಕರುಗಳು ಇಂದಿರೇಶನು ಮೇಯಿಸಲು
ಒಂದು ವರುಷ ಕರುಗಳಂತೆ ಆನಂದದಿಂದ ಬೆಳೆದವು ॥ ॥೪॥

ಕನಕ ರಜತ ಸರಪಳಿ ದನಕರುಗಳ ಕೊರಳಲಿ
ಮಿನುಗುತಿಪ್ಪ ಅರಳೆಲೆ ಅನೇಕ ನಾದದಿಂದಲಿ ॥ ॥೫॥

ಅಜಗಳಂತಿದ್ದ ಕರುಗಳು ಗಜಗಳಂತೆ ಆದವು
ತ್ರಿಜಗದೊಡೆಯ ವಿಜಯವಿಠ್ಠಲ ವ್ರಜಕೆ ಧೊರೆಯಾಳುವ॥ ॥೬॥



**ಅರ್ಥವಿವರಣೆ : –**

ಗೋಕುಲದಲ್ಲಿ ಶ್ರೀಕೃಷ್ಣನು ಗೋಪಾಲಕನಾಗಿ ಗೋವುಗಳನ್ನು ಮತ್ತು ಕರುಗಳನ್ನು ಪಾಲನಮಾಡಿದ ಚಿತ್ರಣವನ್ನು ಕೊಟ್ಟಿದ್ದಾರೆ ಪ್ರಸಕ್ತ ಕೀರ್ತನೆಯಲ್ಲಿ ವರಕವಿ ವಿಜಯದಾಸರು.

**ಕಾದನಾ** = ಪಾಲಿಸಿದನು. **ವತ್ಸನಾ** = ಗೋವಿನ ಕರುಗಳನ್ನು, **ರಾಧಿಕಾರಮಣ** = ರಾಧಾರಮಣನಾದ ಶ್ರೀಕೃಷ್ಣ. **ಎಳೆಯುಗರಿಕೆ** = ಆಗತಾನೇ ಬೆಳೆಯುತ್ತಿರುವ ಹುಲ್ಲಿನ ಗರಿಕೆ. **ಶೆರಗು ತೆಗೆದು** = ಶ್ರೀಕೃಷ್ಣನು ತಾನು ಹೊದುಕೊಂಡಿದ್ದ ಮೇಲ್ವಸ್ತ್ರವನ್ನೇ ತೆಗೆದು, ಕರುಗಳ ಬೆನ್ನನ್ನು ಒರೆಸಿದನು ಕರುಗಳ ಮೇಲೆ ಅದೆಂತಹ ವಾತ್ಸಲ್ಯ ! **ಘನ್ನ ಕರಗಳೊತ್ತುವ** = ತನ್ನ ಕೈಗಳಿಂದ ಕರುಗಳ ಬೆನ್ನನ್ನು ನೀವುತ್ತಾ,

**ಉಡುಗಳಂತೆ** = ನಕ್ಷತ್ರಗಳಂತೆ. ಆ ಕರುಗಳು ನಕ್ಷತ್ರಗಳಂತೆ ಗೋಚರಿಸಿದರೆ, ಆ ವತ್ಸವೃಂದಗಳ ನಡುವೆ ಉಡುಪನಾದ ಚಂದ್ರನಂತೆ ಪರಿಶೋಭಿಸುತ್ತಿದ್ದನು ಪರಮಪುರುಷ ಶ್ರೀಕೃಷ್ಣ. **ಮೃಡನು** = ಚಂದ್ರಶೇಖರನಾದ ಶಂಕರನು ಸ್ತುತಿಸುತ್ತಿರಲು. **ಕನಕ ರಜಕ ಸರಪಳಿ** = ಚಿನ್ನ ಮತ್ತು ಬೆಳ್ಳಿಯಿಂದ ಮಾಡಿದ ಸರಪಳಿಗಳು ದನ ಕರುಗಳ ಕೊರಳುಗಳಲ್ಲಿ ಶೋಭಿಸುತ್ತಿರಲು, **ಅರಳೆಲೆ** = ಅರಳೀ ಪತ್ರದ ಆಕಾರದಂತಿರುವ ಒಡವೆ. **ಅಜಗಳಂತಿದ್ದ** = ಮೇಕೆಯಂತೆ ಬಡಕಲಾಗಿದ್ದ ಕರುಗಳು ಶ್ರೀಕೃಷ್ಣನ ಹಾರೈಕೆಯಿಂದ ಗಜಗಳಂತೆ ಆದವು. **ವ್ರಜಕೆ** = ನಂದ ಗೋಕುಲಕ್ಕೆ ಪ್ರಭುವಾದ.

೬೧೪

## (ಅಂಕಿತ–ಮಹೀಪತಿ)

## ಶ್ರೀರಾಮ ಕೃಷ್ಣರ ಪರವಾದ ಸ್ತೋತ್ರ ಪದ

ರಾಮಚಂದ್ರನೆ ನಮ್ಮ ಪರದೈವನೋ
ಶ್ಯಾಮಸುಂದರ ಕೃಷ್ಣ ಪರದೈವನಯ್ಯ ॥ ॥ಪ॥

ರಾಮಭಕ್ತನಿದ್ದೆಡೆಗೆ ಯದುಕುಲ
ಸ್ವಾಮಿಯ ಭಕ್ತನು ಬಂದ ಕೀರ್ತಿಸುತೆ
ಪ್ರೇಮದಲೀರ್ವರ ಭಕ್ತಿಯವಾದವು
ನೇಮದಿ ಬೆಳೆಯಿತು ಕೇಳಿ ಸಜ್ಜನರು ॥ ॥೧॥

ಚಿಕ್ಕತನದಿ ತಾಟಕಿ ಕೊಂದು ಮುನಿಮುಖ
ಅಕ್ಕರದಲಿ ಕಾಯ್ದ ನಮ್ಮ ರಾಮಯ್ಯ
ತಕ್ಕಿಸಿ ಬಂದು ಪೂತನಿ ಅಸು ಹೀರಿ
ಜನಕ ಅಭಯವಿತ್ತ ನಮ್ಮ ಕೃಷ್ಣಯ್ಯ ॥ ॥೨॥

ಚರಣ ಸೋಂಕಿಸಿ ಸಿಲೆ ಹೆಣ್ಣನ ಮಾಡುತ
ಪರಧನು ಮುರಿದನು ನಮ್ಮ ರಾಮಯ್ಯ
ಮರಗಳಾದವರನುದ್ಧರಿಸುತ ಕಂಸಾ
ಸುರ ಧನುಹಬ್ಬವ ಗೆದ್ದ ಕೃಷ್ಣಯ್ಯ ॥ ॥೩॥

ನೆರೆದಿಹ ದೇವದಾನವರನು ದಂಡಿಸಿ
ಧರಣಿಸುತೆಯ ತಂದ ನಮ್ಮ ರಾಮಯ್ಯ
ವರಭೇದ್ಯಘೋಷರ ಭಂಗಿಸಿ ರುಕ್ಮಿಣಿ
ಕರವಿಡಿದಿಹನೊ ನಮ್ಮ ಕೃಷ್ಣಯ್ಯ ॥ ॥೪॥

ವನದೊಳು ಹಣ್ಣವನಿತ್ತ ಶಬರಿಗೆ
ಚಿನುಮಯ ಪದವಿತ್ತ ನಮ್ಮ ರಾಮಯ್ಯ
ಅನುವರದಲಿ ದ್ರೌಪದಿಯ ಶಾಕದಳ
ವನೆ ಕೊಂಡು ಸುಖವಿತ್ತ ನಮ್ಮ ಕೃಷ್ಣಯ್ಯ ॥ ॥೫॥

ಜಲಧಿಯೊಳಗೆ ಸೇತು ಕಟ್ಟಿಸಿ ವಾನರ
ದಳ ನಡೆಸಿದ ನಮ್ಮ ವೀರ ರಾಮಯ್ಯ
ಘಳಿಗೆಯೊಳಗೆ ಮಳಿಗರೆದು ಮಧುರಿಜನ
ನೆಲೆಮಾಡಿ ನೀರೊಳಗಿಟ್ಟ ಕೃಷ್ಣಯ್ಯ ॥ ॥೬॥

ರಾವಣ ಕುಂಭಕರ್ಣರ ಕೊಂದು ಸ್ಥಿರಪದ
ಆ ವಿಭೀಷಣಗಿತ್ತ ನಮ್ಮ ರಾಮಯ್ಯ
ತೀವಿದ ಕೌರವರ ಮಡುಹಿ ಪಾಂಡವರಿಗೆ
ಈ ವಸುಧೆಯ ಪದವಿತ್ತ ಕೃಷ್ಣಯ್ಯ ॥ ॥೭॥

ಸಾಮ್ರಾಜ್ಯವಾಳುತ ಆಯೋಧ್ಯಾ ವೈಕುಂಠ
ಸೀಮೆಗೆ ಒಯ್ದ ನಮ್ಮ ರಾಮಯ್ಯ

ಆ ಮುಕುತಿಯು ಪುರದುತ್ಪಥ ನಿತ್ಯದಿ
ಈ ಮಹಿಯಲಿ ಮೋರಿ ಪೊರೆದ ಕೃಷ್ಣಯ್ಯ ॥ ॥೮॥

ಸಮ್ಮೋಹಿಪರಿವಾರವ ಮಾಡುತಲೀರ್ವರು
ಘಮ್ಮಸಪ್ಪಿಕೊಂಡರು ಹರುಷದಲಿ
ನಮ್ಮ ನಿಮ್ಮ ದೈವರೊಂದೆನಿಸುವ ಪರ
ಬೊಮ್ಮ ಮೂರುತಿ ಮಹೀಪತಿಸುತ ಸ್ವಾಮಿ ॥ ॥೯॥

**ಅರ್ಥವಿವರಣೆ : –**

ಶ್ರೀ ಕಾಖಂಡಕಿಯ **ಶ್ರೀಮಹೀಪತಿ** ದಾಸರು ಈ ಕೀರ್ತನಸಾಹಿತ್ಯದಲ್ಲಿ ರಾಮಭಕ್ತ ಮತ್ತು ಕೃಷ್ಣಭಕ್ತರೀರ್ವರ ಸಂಭಾಷಣಾ ರೂಪದಲ್ಲಿ ಶ್ರೀರಾಮ ಹಾಗೂ ಕೃಷ್ಣರ ಮಹಿಮಾತಿಶಯಗಳನ್ನು ಸಂದರ್ಭೋಚಿತವಾಗಿ ವರ್ಣಿಸುತ್ತಾರೆ.

**ಶ್ಯಾಮಸುಂದರ** = ನೀಲಮೇಘಶ್ಯಾಮನಾದ ಶ್ರೀಕೃಷ್ಣ. **ಪರದೈವ** = ಸರ್ವೋತ್ತಮ ದೇವತಾ, **ಯದುಕುಲ ಸ್ವಾಮಿಯ ಭಕ್ತನು** = ಯದುಕುಲೋದ್ಭವನಾದ ಶ್ರೀಕೃಷ್ಣನ ಭಕ್ತ. **ಮುನಿ ಮುಖ** = ವಿಶ್ವಾಮಿತ್ರ ಮುನಿಯ ಯಾಗವನ್ನು ಸಂರಕ್ಷಿಸಿದ ಶ್ರೀರಾಮ– ಚಿಕ್ಕತನದಲ್ಲಿ

**ತಕ್ಕಸಿ ಬಂದ** = ಮೋಸದಿಂದ ಬಂದ. ಶ್ರೀಕೃಷ್ಣನು ಚಿಕ್ಕ ಮಗುವಾಗಿದ್ದಾಗಲೇ ಪೂತನಿಯ ಪ್ರಾಣಾಪಹರಣ ಮಾಡಿದ. **(ಅಸು ಹೀರಿ)**. **ಶೀಲೆ** = ಗೌತಮರ ಶಾಪದಿಂದ ಶಿಲಾ ರೂಪದಲ್ಲಿದ್ದ ಅಹಲ್ಯೆಯನ್ನು ತನ್ನ ಪಾದ ಸ್ಪರ್ಶದಿಂದ ಪವಿತ್ರೀಕರಿಸಿದ ಶ್ರೀರಾಮ. **ಹರಧನುವನು** =

ಸೀತಾಸ್ವಯಂವರದಲ್ಲಿ ಪಣವಾಗಿ ಇಟ್ಟಿದ್ದ ಶಿವಧನುಸ್ಸನ್ನು ಲೀಲಾಜಾಲವಾಗಿ ಭಂಗಿಸಿದ–ಸೀತಾಪತಿಯಾದ ಜಾನಕೀರಮಣ. **ಮರಗಳಾದವರನು** = ಶಾಪದಿಂದ ಮರಗಳಾಗಿ ಜನಿಸಿದ್ದ ನಳಕೂಬರ ಮತ್ತು ಮಣಿಗ್ರೀವರನ್ನು ಶಾಪವಿಮುಕ್ತರನ್ನಾಗಿ ಮಾಡಿದ ಬಾಲಕ ಶ್ರೀಕೃಷ್ಣ. **ಕಂಸಾಸುರಧನು** = ಅಲ್ಲಿ ಶ್ರೀರಾಮ ಶಿವಧನುಸ್ಸನ್ನು ಮುರಿದರೆ, ಶ್ರೀಕೃಷ್ಣ ಬಿಲ್ಲಿನ ಹಬ್ಬದ ನೆವದಲಿ ಕಂಸನನ್ನೇ ಧ್ವಂಸಮಾಡಿದ. **ಧರಣಿಸುತೆಯನು** = ಸೀತಾದೇವಿ ಯನ್ನು ಕಪಿ ಭಲ್ಲೂಕಗಳಾಗಿ ಅವತರಿಸಿದ್ದ ಸಕಲ ದೇವತಾಗಣ, ರಾವಣಾದಿ ರಾಕ್ಷಸವರ್ಗ ಇವರೀರ್ವರ ಯುದ್ಧದಲ್ಲಿ ರಾವಣಾರಿ ಶ್ರೀರಾಮನು ಭೂಪುತ್ರಿ ಯಾದ ಸೀತೆಯನ್ನು ಅಗ್ನಿದ್ವಾರಾ ಪರಿಗ್ರಹಿಸಿದನು. **ವರಭೇದ್ಯ ಘೋಷರ** = ಅತ್ಯಂತ ಪರಾಕ್ರಮಶಾಲಿಗಳಾಗಿದ್ದ ಶಿಶುಪಾಲ, ರುಕ್ಮಿ ಇವರುಗಳನ್ನು ಭಂಗಿಸಿ, ರುಕ್ಮಿಣಿಯ ಕರಪಿಡಿದ ಶ್ರೀಕೃಷ್ಣ ವನದಲ್ಲಿ ಶ್ರೀರಾಮನಿಗೆ ಫಲಗಳನ್ನು ಇತ್ತ ಶಬರಿಗೆ ಮೋಕ್ಷವನ್ನು ಕರುಣಿಸಿದ ಶ್ರೀರಾಮ. ಅಕ್ಷಯ ಪಾತ್ರೆಯಲ್ಲಿ ಶಾಳಕದವನ್ನು ತನ್ನ ಕೃಪಾಕಟಾಕ್ಷ ದೃಷ್ಟಿಯಿಂದ ಸೃಷ್ಟಿಸಿ, ದ್ರೌಪದಿ ಹಾಗೂ ಪಾಂಡವರ ಮಾನ ಕಾಯ್ದ ಶ್ರೀಕೃಷ್ಣ. ಸಮುದ್ರಕ್ಕೆ ಸೇತುವೆ ಕಟ್ಟಿಸಿ, ಲಂಕಾನಗರಿಗೆ ವಾನರಸೈನ್ಯ ಶ್ರೀರಾಮ ನುಗ್ಗಿಸಿದರೆ, ಸಮುದ್ರದಲ್ಲಿ ದ್ವಾರಕಾಪುರವನ್ನು ನಿರ್ಮಿಸಿ, ಮಥುರಾಪುರಿಯ ಜನರನ್ನು ಅಲ್ಲಿ ನೆಲೆಗೊಳಿಸಿದ ಮಥುರಾಪುರಿಯ ಶ್ರೀಕೃಷ್ಣ. ರಾವಣ ಕುಂಭಕರ್ಣರನ್ನು ವಧಿಸಿ, ವರವಿಭೀಷಣನಿಗೆ ಲಂಕಾಪದವಿಯನ್ನಿತ್ತ ಶ್ರೀರಾಮ ದುರುಳ ಕೌರವರ ಹನನಗೈಸಿ, ಪಾಂಡವರಿಗೆ ವಸುಧೆಪದವಿಯನಿತ್ತ ವಾಸುದೇವ, ರಾಮರಾಜ್ಯದಲ್ಲಿ ಅಯೋಧ್ಯೆ ವೈಕುಂಠ ಸದೃಶವಾಯಿತು. ಸಕಲರಿಗೂ ವೈಕುಂಠಾರೋಹಣ ಮಾಡಿಸಿ, ಮುಕ್ತಿ ಕೊಟ್ಟ ಶ್ರೀರಾಮ. ಮುಕ್ತಿಧಾಮಕ್ಕೆ ಕರೆದೊಯ್ದ ಪಂಚಪಾಂಡವರನ್ನು ಪಾಂಚಾಲಿ ವರದ ಶ್ರೀಕೃಷ್ಣ. ಹೀಗೆ ಇಬ್ಬರು ಭಕ್ತರ ವಾದ—ಶ್ರೀರಾಮಕೃಷ್ಣರು ಶ್ರೀಮನ್ನಾರಾಯಣನ ಅವತಾರಭೂತರು. ಸರ್ವೋತ್ತಮ ದೇವತೆಯೆಂದು ನಿರ್ಣಯಿಸಿ, ಪರಸ್ಪರ ಕೊಂಡಾಡಿದರು.



## ೬೧೫

**(ಅಂಕಿತ–ಮಹಿಪತಿನಂದನ) (ಮಹಿಪತಿದಾಸರ ಪುತ್ರರ ಕೃತಿ)**

**ರಾಗ–ತಿಲಂಗ** **ತ್ರಿಪುಟತಾಳ**

ಇಂದು ಕಂಡೆ ಚರಣಾ – ಶ್ರೀಕೃಷ್ಣನಾ ॥ ॥ಪ॥

ಕೊಳಲ ಧ್ವನಿಗೈವನಾ
ಚೆಲುವಿಕಿ ಗೆದ್ದ ಕಾಮನಾ ॥ ॥೧॥

ಹೆಡೆಯಲಿ ಕಾಳಿಂಗನಾ
ಒಡನೆ ಕುಣಿದ ರಂಗನಾ ॥ ॥೨॥

ಗೋವರ್ಧನೆತ್ತಿದನಾ
ಗೋವಳರ ಕಾಯ್ದನಾ ॥ ॥೩॥

ಬಾಲಕ ಲೀಲಾಲೋಲನಾ
ಮೂಲೋಕ ಜೀವನ ಪಾಲನಾ ॥ ॥೪॥

ಮಹಿಪತಿನಂದನ ಜೀವನಾ
ಸಹಕಾರಿ ಪಾವನನ್ನ ॥ ॥೫॥



**ಅರ್ಥವಿವರಣೆ :–**

ಈ ಕೀರ್ತನ ಸಾಹಿತ್ಯದ ಕರ್ತೃಗಳು ಪೂಜ್ಯ ಮಹೀಪತಿ ದಾಸವರ್ಯರ

ಪುತ್ರರಾದ ಶ್ರೀಕೃಷ್ಣರಾಯರು (ಶ್ರೀಕೃಷ್ಣದಾಸರು). ಅವರ ಅಂಕಿತ– **ಮಹಿಪತಿಸುತ (ನಂದನ)**.

**ಚೆಲುವಿಕೆ ಗೆದ್ದ** = ಸುಂದರಕೆ ಸುಂದರನು. (ಸಾಕ್ಷಾತ್ ಮನ್ಮಥ ಮನ್ಮಥಃ) **ಕಾವನಾ** = ಸರ್ವ ಜೀವರ ಪಾಲಕನು (ರಕ್ಷಕನು). **ಗೋವಳೆರ** = ಗೋಕುಲವಾಸಿಗಳಾದ ಗೋಪಾಲಕರನ್ನೆಲ್ಲಾ, **ಲೀಲಾಲೋಲನಾ** = ಬಾಲ್ಯದಲ್ಲಿಯೇ ಅಪಾರವಾದ ಲೀಲಾವಿಶೇಷ ರೂಪವಾದ ಮಹಾಮಹಿಮೆ ಗಳನ್ನು ತೋರಿಸಿದ ಶ್ರೀಕೃಷ್ಣ. **ಮೂಲೋಕ** = ಭೂ–ಸ್ವರ್ಗ–ಪಾತಾಳ ಗಳೆಂಬ ಲೋಕತ್ರಯಗಳಲ್ಲಿರುವ ಜೀವರು. **ಜೀವನ ಪಾಲನಾ** = ಚೇತನ ರನ್ನು ರಕ್ಷಿಸುವವನ. **ಮಹಿಪತಿನಂದನ** = ಮಹಿಪತಿದಾಸರಪುತ್ರ. (ಕೃಷ್ಣರಾಯರ ಅಂಕಿತ). **ಜೀವನಾ** = ಜೀವರಿಗೆ ಆದಂತೆ ಜೀವನಾಗಿರುವ, ಬಿಂಬಮೂರ್ತಿ. **ಸಹಕಾರಿ** = ಪ್ರತಿಬಿಂಬ ಭೂತರಾದ ಜೀವರನ್ನು ಎಡಬಿಡದ ನಿತ್ಯಾವಿಯೋಗಿಯಾದ ಬಿಂಬ. **ಪಾವನ್ನನಾ** = ಅತ್ಯಂತ ಪವಿತ್ರ ವಸ್ತು. (ನಿರ್ದೋಷನು).



## ೩೧೬

## (ಅಂಕಿತ–ಪ್ರಸನ್ನ ವೆಂಕಟ)

**ರಾಗ–ಮೋಹನ** **ಆದಿತಾಳ**

ಆವ ಪುಣ್ಯವೋ–ಗೋಪಿಗಾವ ಭಾಗ್ಯವೋ ॥ ॥ಪ॥

ಆವ ಪರಬೊಮ್ಮ ತನ್ನ ಕುವರನೆಂದು ಕರೆಮುದ್ದೈಯ್ಯ
ಮಾರು ಬೀಸಿ ಬಿಗಿದಪ್ಪಿ ಮೋರೆ ನೋಡಿ ಮೊಲೆಯ ಕೊಡುವಾ ॥ ॥೧॥

ಸಪ್ತಸಪ್ತಭುವನಜನಕ ಸುಪ್ತಿಯಿಲ್ಲದೆ ಚರಿಸುವವಗೆ
ಸುಪ್ತಿಕಾಲವೆಂದು ತಾನು ಗುಪ್ತದಿಂದ ಸ್ತನವ ಕೊಡುವಾ ॥ ॥೨॥

ಆನೆಗೊಲಿದು ಎಂಟು ದಿಕ್ಕು ಆನೆಯೊಳ್ದ ಅಪ್ರತಿಮ ವ
ಯಾಸಿಧಿಯು ಕುಳ್ಳಿರಿಸಿ ಆನೆ ಬಂತೆಂದಾಡಿಸುವ ॥ ॥೩॥

ಅನ್ನನಾಮನು ಬೊಮ್ಮಾದ್ಯರಿಗೆ–ಅನ್ನಕಲ್ಪಕಂಗೆ ಪರ
ಮಾನ್ನ ಬೆಣ್ಣೆ ಪಾಲ್ಕುಡಿಸಿ – ಅನ್ನಪ್ರಾಶನೇ ಮಾಡಿಸುವಾ ॥ ॥೪॥

ಚಿನ್ಮಯ ಮುಕ್ತಾಮುಕ್ತಾ – ಚಿನ್ನರರಾಡಿಸುವನಿಗೆ
ಚಿನ್ನ ತಾ ಹೊನ್ನ ಗುಬ್ಬಿ – ಚಿನ್ನ ಗೊಂಬೆಂದಾಡಿಸುವ ॥ ॥೫॥

ದಟ್ಟವಾದ ಜೀವಜಲದ – ದಟ್ಟುಳಿಯ ಕರಣಂಗೆ
ವಟ್ಟಿದಟ್ಟ ರಂಗೈಯುಂದು – ದಟ್ಟಸಾಲನಿಕ್ಕಿಸುವ ॥ ॥೬॥

ತಾರಕಾ ಉಪದೇಶಕರಿಗೆ – ತಾರಕನಾಗಿರುವ ಕೃಷ್ಣಗೆ
ತಾರಕ್ಕ ಬಿಂದಿಗಿ ಎಂದು – ತಾರಕಾರಿ ಅಜ್ಜನಾಡಿಸುವ ॥ ॥೭॥

ಆಲದೆಲೆಯ ಆಲಯಂಗೆ – ಆಲದೆಲೆಯ ತೊಟ್ಟಿಲು ಉ-
ಯ್ಯಾಲೆನಿಟ್ಟು ಮುದ್ದು ಮಾತು–ಲಾಲಿಸಿ ಜೋಗುಳ ಪಾಡುವಾ ॥ ॥೮॥

ತನ್ನ ಮಗನ ನಡೆಯ ನುಡಿಯ – ತನ್ನ ಪತಿಗೆ ಹೇಳಿ ಹಿಗ್ಗಿ
ತನ್ನ ಭಾಗ್ಯ ಲಕ್ಷ್ಮೀಶ – **ಪ್ರಸನ್ನವೆಂಕಟ**ನಾಡಿಸುವ ॥ ॥೯॥



**ಅರ್ಥವಿವರಣೆ : –**

ಪ್ರಸನ್ನವೆಂಕಟದಾಸವರ್ಯರು, – ಅಪಾರಮಹಿಮಾಸಂಪನ್ನನೂ, ಅಪ್ರಮೇಯನೂ ಆದ ಆ ಅಚ್ಯುತನಾಮಕ ಶ್ರೀಕೃಷ್ಣನನ್ನು ಆಡಿಸುವ ಪುಣ್ಯದ ಭಾಗ್ಯ ಅದೆಂತಹುದೆಂದು ಬಣ್ಣಿಸುತ್ತಾರೆ. **ಪರಬೊಮ್ಮ** = ಪರ ಬ್ರಹ್ಮನಾದ ಶ್ರೀಕೃಷ್ಣ. **ಮೂರು ಬೀಸಿ** = ತನ್ನೆರಡು ಕರಗಳನ್ನು

ಉಗ್ರವಾಗಿ ಚಾಚಿ, ಕಂದನನ್ನು ಬಾಚಿ ತಬ್ಬಿಕೊಳ್ಳುವ ಪುಣ್ಯ ! **ಮೋರ ನೋಡಿ** = ಕಂದ ಕೃಷ್ಣನ ವದನಾರವಿಂದವನ್ನು ನೋಡುತ್ತಾ, ಸ್ತನ್ಯಪಾನ ಮಾಡಿಸುತ್ತಾಳೆ. **ಸಪ್ತಸಪ್ತ ಭುವನ ಜನಕ** = ಹದಿನಾಲ್ಕು ಲೋಕಗಳ ಸೃಷ್ಟಿಕರ್ತ (ಸಪ್ತ ಸಪ್ತ = 7 + 7 = 14). **ಸುಪ್ತಿಯಿಲ್ಲದೆ** = ನಿದ್ರೆಯಿಲ್ಲದ (ಅನಿದ್ರನವನು) **ಸುಪ್ತಿಕಾಲವೆಂದು** = ಮಲಗಿಕೊಳ್ಳುವ ಸಮಯವೆಂದು, **ಆನೆಗೊಲಿದು** = ಗಜೇಂದ್ರನನ್ನು ಸಂರಕ್ಷಿಸಿ, (ಕರಿವರದ), **ಎಂಟು ದಿಕ್ಕು ಆನೆಯಾಳ್ದ** = ಅಷ್ಟ ದಿಕ್ಕುಗಳಲ್ಲಿರುವ ಅಷ್ಟ ಗಜಗಳ ಶಿರಗಳ ಮೇಲೆ ಈ ಭೂಮಿ ನಿಂತಿದೆ. ಅಂತಹ ಭೂಮಿಗೆ ಒಡೆಯನಾದ (ಭೂರಮಣ). **ಅನ್ನಮಯನು** = ಬ್ರಹ್ಮಾದಿದೇವತೆಗಳಿಗೆ ಅನ್ನಶಬ್ದ ವಾಚ್ಯನಾಗಿದ್ದಾನೆ (ಅನ್ನ – ಅನ್ನದ – ಅನ್ನಾದ). **ಅನ್ನ ಕಲ್ಪಂಗೆ** = ಅನ್ನದಾತನೂ ಅನ್ನ ಭೋಕ್ತನೂ ಆದ. (ಸರ್ವನಾರ ಭೋಕ್ತ) **ಅನ್ನಪ್ರಾಶನ** = ಅಂತಹ ಅನ್ನನಾಮಕನಿಗೆ ಅನ್ನಪ್ರಾಶನ – ಇದೆಂತಹ ವಿಪರ್ಯಾಸ ! **ಚಿನ್ಮಯಾ** = ಜ್ಞಾನಮಯ, **ಮುಕ್ತಾ ಮುಕ್ತ ಚೇತನ** – ಮುಕ್ತ ಜೀವರು ಮತ್ತು ಅಮುಕ್ತ ಚೇತನರನ್ನು ಲೀಲಾ ಮಾತ್ರದಿಂದ ಆಡಿಸುವವನಿಗೆ. **ತಾರಕ ಉಪದೇಶಕರಿಗೆ** = ಭವ ಸಮುದ್ರವನ್ನು ದಾಟಿಸುವ ಶ್ರೀ ಹರಿನಾಮ ಮಂತ್ರೋಪದೇಶಕರಿಗೆ. **ತಾರಕ ನಾಗಿರುವ** = ಸಂಸಾರತಾರಣ ಮಾಡಿಸುವ. **ತಾರಕಾರಿ ಅಜ್ಜ** = ತಾರಕಾಸುರ ಸಂಹಾರನಾದ ಷಣ್ಮುಖನ ತಾತನಾದ ಶ್ರೀಕೃಷ್ಣ. (ಷಣ್ಮುಖನ ಪಿತ – ಶ್ರೀ ರುದ್ರದೇವರು. ಶ್ರೀ ರುದ್ರದೇವರ ಅವತಾರ ಭೂತರಾದ ಶುಕಾಚಾರ್ಯರ ಜನಕ–ಶ್ರೀ ವೇದವ್ಯಾಸರು–ವಾಸಿಷ್ಠ ಶ್ರೀಕೃಷ್ಣ). **ದಟ್ಟ ನಾದ ಜೀವಜಲದ** = ಅಪಾರವಾದ ಅನಂತ ಜೀವರಾಶಿಗಳ ಸಮೂಹ. **ದಟ್ಟೈಳೀಯ ಶರಣಂಗೆ** = ದಾಪುಗಾಲು ಹಾಕುತ್ತಾ ಭವಸಾಗರವನ್ನು ದಾಟಿಸುವ ಶ್ರೀಹರಿಗೆ. **ದಟ್ಟೆ ದಟ್ಟೆ** = ಪುಟ್ಟ ಪುಟ್ಟ ಹೆಜ್ಜೆ ಇಡು – ರಂಗಯ್ಯನೆಂದು. **ದಟ್ಟೆ ಸಾಲ** = ಹೆಜ್ಜೆ ಹಾಕಿಸುವುದು. **ಆಲದೆಲೆಯ ಆಲಯಂಗೆ** = ಮಹಾಪ್ರಳಯ ಕಾಲದಲ್ಲಿ ವಟದೆಲೆಯ ಮೇಲೆ ಮಲಗಿದ

ಶ್ರೀ ಪರಮಾತ್ಮನಿಗೆ. **ಜೋಗುಳ** = ತೊಟ್ಟಿಲಿನಲ್ಲಿ ಹಾಕಿ, ತೂಗಿ ಜೋಗುಳ ಪಾಡುವುದೆಂತು ಪುಣ್ಯ ! **ನಡೆಯ ನುಡಿಯ** =ಆಟಪಾಟಗಳು ಮತ್ತು ಮುದ್ದು ಮಾತುಗಳನ್ನು, **ತನ್ನಪತಿಗೆ ಹೇಳಿ** = ತನ್ನ ಪತಿಯಾದ ನಂದಗೋಪನಿಗೆ ಹೇಳಿ. ಆನಂದದಿಂದ ಹಿಗ್ಗುತ್ತಿರುವ ಗೋಪಿಯ ಭಾಗ್ಯ **ಕ್ಕೆಣೆಯುಂಟೇ** !–ಎಂದು ಉದ್ಗರಿಸುತ್ತಾರೆ–ದಾಸರಾಯರು !

೬೧೭

(ಪ್ರಸನ್ನವೆಂಕಟರ ಭಾಗವತದಿಂದ ಆಯ್ದ ಕೀರ್ತನೆ)

**ರಾಗ–ನಾಟಿ** **ಝಂಪೆತಾಳ**

ಶ್ರೀ ದೇವಿಯಾಹ್ಲಾದ ಶ್ರೀವೇದೈಕವೇದ್ಯ ಜಯ
ವೇದಗರ್ಭನುತ ಶ್ರೀಪಾದಾಬ್ಜಯುಗ್ಮ ಜಯ
ಯಾದವಕುಲಾಬ್ಧಿಗಾಹ್ಲಾದಕರ ಚಂದ್ರ ಜಯ
ಶ್ರೀಧೇನುಗಿರೀಶ ಸನಕಾದಿ ಮುನಿವಂದ್ಯ ಜಯ ಜಯ ॥ ॥೧॥

ಭೂಪತಿಯ ಭಾರಕೆ ವಿನಾಶಕಾರಣನೆ ಜಯ
ಪೋಷಕಾಧಾರಕ ಪರೇಶ ಕೇಶವನೆ ಜಯ
ಶೇಷಶಯನ ವೈಕುಂಠಾನಂತಾಸನ ಜಯ
ಈಶೇಂದ್ರ ಸುರಮುನಿಪ ಸಂಸೇವ್ಯ ಭವ್ಯ ಜಯ ಜಯ ॥ ॥೨॥

ದಾಶರಥಿ ದಾಶಾರ್ಹ ವಾಸಿಷ್ಠ ಕೃಷ್ಣ ಜಯ
ಗೋಸಮೂಹ ದ್ವಿಜದೇವ ದ್ವೇಷಕುಲಹರಣ ಜಯ
ದಾಸ ಕಪಿವರ ಭೀಮ ಶ್ರೀ ಸುಖಮುನೀಶ ಜಯ
ಪೇಶಲಚರಿತ್ರ **ಶ್ರೀ ಪ್ರಸನ್ನ ವೆಂಕಟೇಶ** ಜಯ ಜಯ ॥ ॥೩॥

**ಅರ್ಥವಿವರಣೆ : —**

ಈ ಕೀರ್ತನೆಯು ಶ್ರೀ ಪ್ರಸನ್ನವೆಂಕಟದಾಸರಿಂದ ರಚಿತವಾದ **ಭಾಗವತ ದಶಮಸ್ಕಂಧದ ಪೂರ್ವಾರ್ಧ**ದ ನಾಂದೀ ಪದ.

**ಶ್ರೀದೇವಿಯಾಳ್ದ** = ಶ್ರೀ ಲಕ್ಷ್ಮೀದೇವಿಗೆ ನಿಯಾಮಕನಾದ ಇಂದಿರಾಪತಿ ಶ್ರೀಹರಿ **ಶ್ರೀ** = ಪರಮ ಮಂಗಳಮೂರ್ತಿ, **ವೇದ್ಯೈಕವೇದ್ಯ** = ಸದಾಗಮಗಳಿಂದಲೇ ತಿಳಿಯಲ್ಪಡುವವನು, **ಜಯ** = ನಮಗೆ ಜಯವನ್ನುಂಟುಮಾಡು (ಅನಿಷ್ಟ ಪರಿಹಾರ ದ್ವಾರಾ ಇಷ್ಟ ಪ್ರಾಪ್ತಿಯನ್ನು ಅನುಗ್ರಹಿಸು. ಅವನಿಗೆ "ಜಯವಾಗಲಿ ಎಂದರ್ಥವಲ್ಲ. ಅವನು ಸದಾ ಜಯವಂತನೇ. ಅವನ ನಾಮಸ್ಮರಣೆಯಿಂದ ದುರಿತಬಾಧಿತರಾದ ನಮಗೆ ಜಯ ಪ್ರಾಪ್ತಿ).

**ವೇದಗರ್ಭನುತ** = ಬ್ರಹ್ಮನಿಂದ ಸ್ತುತ್ಯನಾದವ. **ಶ್ರೀಪಾದಾಬ್ಜಯುಗ್ಮ** = ಪರಮ ಶುಭಕರವಾದ ಪಾದ ಕಮಲಗಳುಳ್ಳವನು. **ಯಾದವಕುಲಾಬ್ಧಿಗೆ ಆಹ್ಲಾದಕರ** = ಯದುವಂಶವೆಂಬ ಸಮುದ್ರಕ್ಕೆ ಆನಂದದಾಯಕನಾದ ಚಂದ್ರ ಸದೃಶನು. **ಶ್ರೀ ಧೇನುವಗಿರೀಶ** = ಗೋವರ್ಧನ ಪರ್ವತದ ಅಭಿಮಾನಿ ದೇವತೆಗೆ ನಿಯಾಮಕನು (ಗೋಕುಲಾಧೀಶ).

**ಭೂಸತಿಯ ಭಾರಕೆ** = ಭೂವರಹಾದೇವರ ಪತ್ನಿ ಭೂದೇವಿ. ದುಷ್ಟರ ಭಾರದಿಂದ ಭೂದೇವಿ ಕುಂದಿದ್ದಾಳೆ. ಭೂಭಾರಹರಣನಾದ ಶ್ರೀ ಕೃಷ್ಣನೇ ಜಯಪ್ರದನಾಗು. **ಪೋಷಕ ಧಾರಕ** = ತನ್ನಿಂದ ಸೃಷ್ಟವಾದ ಜಗತ್ತನ್ನೇ ಪಾಲಿಸುವವನು. ಮತ್ತು ಚರಾತ್ಮಕವಾದ ಜಗತ್ತಿನ ಆಧಾರಭೂತನು (ಆಶ್ರಯದಾತನು). **ಪರೇಶ** = ಪರನಾಮಕಳಾದ ಲಕ್ಷ್ಮೀದೇವಿಗೆ ನಿಯಾಮಕ. **ಕೇಶವನೆ** = ಕ + ಈಶ + ವ = ಕ–ಬ್ರಹ್ಮದೇವರು. **ಈಶ–ಈಶಾನ್ಯಾಧಿಪತಿ ರುದ್ರ**–ಇವರಿಗಿಂತ ವರಿಷ್ಠನು, ಅಂದರೆ

ರಮಾ ಬ್ರಹ್ಮ ಭವಾದಿಗಳಿಗಿಂತ ಸರ್ವೋತ್ತಮನು. (ಇಲ್ಲಿ ಪದಪ್ರಯೋಗ ಚಮತ್ಕಾರ ಹೇಗಿದೆ ಗಮನಿಸಬೇಕು). **ಶೇಷಶಯನ** = ಶೇಷದೇವರ ಮೇಲೆ ಮಲಗಿರುವ ಶ್ರೀಹರಿ. **ವೈಕುಂಠ ಅನಂತಾಸನ** = ವೈಕುಂಠ–ಅನಂತಾಸನ–ಶ್ವೇತದ್ವೀಪಗಳೆಂಬ ಮುಕ್ತಿ ಧಾಮ ತ್ರಯಗಳನ್ನು ಉಳ್ಳವನು. **ಈಶೇಂದ್ರ** = ಈಶ + ಇಂದ್ರ = ರುದ್ರ–ಇಂದ್ರ. **ಸುರಮುನಿಪ** = ಸಮಸ್ತ ದೇವತಾಗಣ, ಮುನಿವರ್ಗ–ಇವರಿಂದ ಸಂಸೇವ್ಯಮಾನನು, **ಭವ್ಯ**. = ಅತ್ಯಂತ ಶ್ರೇಷ್ಠ (ಸರ್ವೋತ್ತಮ).

**ದಾಶರಥಿ** = ದಶರಥನ ಪುತ್ರ ಶ್ರೀ ರಾಮಚಂದ್ರ. **ದಶಾರ್ಹ** = ದಾಶಾರ್ಹನೆಂಬ ಯಾದವ ಕುಲದಲ್ಲಿ ಹುಟ್ಟಿದ ಶ್ರೀಕೃಷ್ಣ. **ವಾಸಿಷ್ಠ ಕೃಷ್ಣ** = ವೇದವ್ಯಾಸರು. **ಗೋಸಮೂಹ ಕುಲಹರಣ** = ಗೋವುಗಳ (ವೇದಗಳು), ಬ್ರಾಹ್ಮಣರು, ದೇವತಾವೃಂದ–ಇವರ ಅಜಸ್ರದ್ವೇಷಿಗಳಾದ ದುಷ್ಟದೈತ್ಯ ಕುಲವನ್ನು ಸಂಹಾರ ಮಾಡಿದ ಧರ್ಮಸ್ವರೂಪನು, **ದಾಸ** = ದಾಸ ಶ್ರೇಷ್ಠರಾದ. **ಕಪಿವರ** = ವಾನರ ಶ್ರೇಷ್ಠನಾದ ಶ್ರೀಹನುಮಂತ, **ಭೀಮ** = ಭೀಮಸೇನದೇವರು, **ಶ್ರೀಸುಖಮುನೀಶ** = ಮುನಿಪುಂಗವರಾದ ಆನಂದತೀರ್ಥ ನಾಮಕರಾದ ಗುರುಮಧ್ವರು ಇವರಿಗೆ ಪ್ರಭುವಾದವ. (ಹನುಮ ಭೀಮ ಮಧ್ವೇಶ) **ಪೇಶಲಚರಿತ್ರ** = ಶುದ್ಧವಾದ (ಅಕಳಂಕ). ಚಾರಿತ್ರವುಳ್ಳವರು. ಪೇಶಲ – ಬಿಳಿಬಣ್ಣ. ನಿರ್ದೋಷನೆಂದರ್ಥ).

❋

## ೬೧೮

## (ಪ್ರಸನ್ನವೆಂಕಟಾಂಕಿತ)

**ರಾಗ–ಶುಭಪಂತುವರಾಳಿ** **ಆದಿತಾಳ**

ಕೆಣಕಿ ಕೆಟ್ಟಳು ಪೂತನಿಯು ಹರಿಗೆ
ಸ್ತನವ ಕೊಟ್ಟು ಕೊಂಡೆನೆಂಬ ಹವಣಿಕೆಯಿಂ ॥ ॥ಪ॥

ವನಜಭವಾಂಡ ನುಂಗುವನ ಹೃದ್
ವನಜದಿ ಮುನಿಗಳಿಗ್ಹೊಳೆದು ತೋರುವನ
ನೆನೆದವರಘಕುಲಹರನ ಭಗವ
ಜ್ಜನರು ಸಜ್ಜನರಿಗೆ ಸುಲಭನೆನಿಪನ ॥ ॥೧॥

ಶ್ರೀಲೋಲನವಳೆದೆ ಮೇಲೆ ಬಾಲ
ಲೀಲೆಯು ತೋರ್ದು ಇಕ್ಕಿದನು ಚಪ್ಪಾಳಿ
ಶೈಲೇಂದ್ರನಂತೆ ಬಿದ್ದವಳ ಕಂಡು
ಗೋಳಿಟ್ಟಿತ್ತಾಗ ಗೋಪಾಲರ ಮೇಳ ॥ ॥೨॥

ಎತ್ತಿಕೊಂಡಪ್ಪಿದಳು ಮಗನ ಗೋಪಿ
ಕರ್ತ ಸೋಜಿಗವೆಂದುತ್ಪಾತ ಗೆಲಿದನ
ಪುತ್ರಂಗೆ ಗವ್ಯಾಮೃತದಲಿ ಸಚಿ-
ಸುತ್ತ ಗೋಖುರವಾಂಸು ಇಟ್ಟು ಘಣೆಯಲಿ ॥ ॥೩॥

ಸತ್ಪಾತ್ರರಿಗೆ ಸರ್ವಸ್ವವನು ಕೊಟ್ಟು
ಸೂಕ್ತಗಳಿಂದಾಶೀರ್ವೋಕ್ತಿ ಪಡೆದನು
ಮುಕ್ತಾಮುಕ್ತರ ಒಡೆಯನಿಗೆ ಯೋಗಿ
ಹೃತ್ಪೀಠದಲಿ ರಾಜಿಸುವ ಮಹಿಮಗೆ ॥ ॥೪॥

ರಕ್ಕಸಿಗಗ್ನಿಯು ಕೊಡಲು ಆಕೆ
ಯಕ್ಕಾಯ ಧೂಮ ಮೋದವಾಗಿರಲು
ಚಿಕ್ಕ ರಂಗನ ಬಾಯಿ ಮುಚ್ಚಿ ಇ
ದ್ಧಕಾರಣ ಪ್ರಸನ್ನವೆಂಕಟನ ಸೃಷ್ಟಿ ॥ ॥೫॥

**ಅರ್ಥವಿವರಣೆ :**

ಮೇಲ್ಕಂಡ ಕೀರ್ತನ ಸಾಹಿತ್ಯವು **ಶ್ರೀ ಪ್ರಸನ್ನ ವೆಂಕಟದಾಸರ ಭಾಗವತ ದಶಮಸ್ಕಂಧದಿಂದ** ಆರಿಸಲ್ಪಟ್ಟಿದೆ. ಶಿಶುವಾಗಿದ್ದ ಶ್ರೀಕೃಷ್ಣನನ್ನು ಸಂಹರಿಸಲು ಕಂಸನಿಂದ ಪ್ರೇರಿತಳಾಗಿ ಪೂತನಿಯು ಗೋಕುಲಕ್ಕೆ ಆಗಮಿಸುತ್ತಾಳೆ. ರತ್ನಾಲಂಕಾರ ಯುಕ್ತವಾದ ಸುವರ್ಣತೊಟ್ಟಿಲಿನಲ್ಲಿ ಪುಟ್ಟ ಕಂದನನ್ನು ಮಲಗಿಸಿದ್ದಾರೆ. ನವಲಾವಣ್ಯದಿಂದ ಪರಿಶೋಭಿಸುತ್ತಾ ವೈಯ್ಯಾರ ಬೀರುತ್ತಾ, ಬಂದ ಪೂತನಿಯನ್ನು ಯಾರೂ ಗಮನಿಸಲಿಲ್ಲ. ಗೋಪಿ ಅನ್ಯ ಕೆಲಸಕ್ಕಾಗಿ ಒಳಗೆ ಹೋದಾಗ, ಪೂತನಿ ತೊಟ್ಟಿಲಿನಲ್ಲಿ ಮಲಗಿದ್ದ ತೋಯಜಾಕ್ಷನನ್ನು ಎತ್ತಿ, ಸ್ತನ್ಯಪಾನ ಮಾಡಿಸಲು ಉದ್ಯುಕ್ತಳಾಗುತ್ತಾಳೆ. ವಿಷ ಪೂರಿತವಾದ ಆ ದುಷ್ಟ ರಕ್ಕಸಿಯ ಮೊಲೆಯ ಹಾಲನ್ನು ಹೀರುವ ನೆಪದಲ್ಲಿ ವಿಶ್ವಭುಕ್ ನಾಮಕನಾದ ಆ ವಿಶ್ವೇಶ, ಅವಳ ಅಸುವನ್ನೇ ಹೀರುತ್ತಾನೆ. ಪ್ರಾಣ ಭಯದಿಂದ ತತ್ತರಿಸುತ್ತಾ, ನೆಲದ ಮೇಲೆ ಪರ್ವತ ಬಿದ್ದಂತೆ ಬೀಳುತ್ತಾಳೆ ಪೂತನಿ. ಅದನ್ನು ಕಂಡು ಗಾಭರಿಯಾದ ಗೋಪಿ ಮತ್ತು ಇತರ ಸ್ತ್ರೀಯರು ಕಂದ ಕೃಷ್ಣನನ್ನು ಉಪಚರಿಸುವ ರೀತಿಯನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ ದಾಸರಾಯರು

**ಕೆಣಕಿ ಕೆಟ್ಟಳು** = ಶ್ರೀಕೃಷ್ಣನನ್ನೇ ಕೊಲ್ಲಬೇಕೆಂದು ಹವಣಿಸಿ, ತಾನೇ **ಮೃತ್ಯು**ವಿಗೆ ಬಲಿಯಾದಳು ಪೂತನಿ. **ಹವಣಿಕೆಯಿಂ** = ಪೂರ್ವ ಯೋಜಿತ ಆಲೋಚನೆಯಿಂದ. **ವನಜಭವಾಂಡ ನುಂಗುವನ** = ಮಹಾ ಪ್ರಳಯಕಾಲದಲ್ಲಿ ತನ್ನಿಂದಲೇ ಸೃಷ್ಟವಾದ ಜಗತ್ತನ್ನು ನುಂಗುವ ವಿಶ್ವಭುಕ್ ನಾಮಕನ. **ಹೃತ್‌ವನಜದಿ** = ಹೃತ್ಕಮಲದಲ್ಲಿ ಮುನಿಗಳಿಗೆ ಹೊಳೆದು ಬಿಂಬ ದರ್ಶನವನ್ನು ಕೊಡುವವನ, **ನೆನೆವರಘಕುಲಹರನ** = ತನ್ನನ್ನು ಸದಾ ಅಂತರಂಗದಲ್ಲಿ ಸ್ಮರಿಸುವವರ ಪಾಪಸಮೂಹಗಳನ್ನು ನಾಶ ಮಾಡುವವನು. **ಸುಲಭನೆನಿಪನ** = ಸಜ್ಜನರ ಪಾಲಿಗೆ ಸುಲಭನು. ದುರ್ಜನರ ಪಾಲಿಗೆ **ಮೃತ್ಯು**ಸ್ವರೂಪನು.

**ಅವಳೆದೆ ಮೇಲೆ** = ಪುಟ್ಟ ಕಂದ ಶ್ರೀಕೃಷ್ಣನು ಪೂತನಿಯ ಎದೆಯ ಮೇಲೆ ಕುಳಿತು, ಬಾಲಲೀಲೆಯನ್ನು ತೋರುತ್ತಿದ್ದಾನೆ. **ಶೈಲೇಂದ್ರನಂತೆ** = ಪರ್ವತರಾಜನಂತೆ ಪೂತನಿಯು ಪರ್ವತಾಕಾರವಾಗಿ ನೆಲದ ಮೇಲೆ ಅಸುನೀಗಿ ಬಿದ್ದ ಪ್ರಸಂಗ. **ಗೋಪಾಲರ ಮೇಳ** = ಆ ಭಯಂಕರ ದೃಶ್ಯವನ್ನು ಕಂಡ ಗೋಪಾಲರ ಹಿಂಡು, ಕಂದನಿಗೆ ಏನಾದರೂ ಆಯಿತೇನೋ ಎಂದು ದುಃಖಪಟ್ಟರು

**ಉತ್ಪಾದ ಗೆಲಿದನ** = ಬಂದ ಗಂಡಾಂತರವನ್ನೇ ಗೆದ್ದವನ, **ಗವ್ಯಾವೃತದಲಿ** = ಪಂಚ್ಯಗವ್ಯದಿಂದ, **ಸಿಂಚಿಸುತ್ತ** = ಸಿಂಪಡಿಸುತ್ತಾ. **ಗೋಖುರಪಾಂಸು** = ಆಕಳಿನ ಗೊರಸಿಗೆ ಅಂಟಿಕೊಂಡಿರುವ ಧೂಳು' ಅದನ್ನು ಕಂದನ ಹಣೆಗೆ ಹಚ್ಚಿ, ದೃಷ್ಟಿ ನಿವಾಳಿಸಿದಳು ಯಶೋದೆ.

**ಮುಕ್ತಾಮುಕ್ತರ ಒಡೆಯನಿಗೆ** = ಮುಕ್ತವರ್ಗ ಮತ್ತು ಅಮುಕ್ತವರ್ಗದ ಸಕಲ ಜೀವರಾಶಿಗಳಿಗೆ ಪ್ರಭುವಾದ, ಯೋಗಿಗಳ ಹೃತ್ಪೀಠಸ್ಥಿತನಾದ ಭಗವಂತನನ್ನು.

**ರಕ್ಕಸಿಗೆ ಅಗ್ನಿಯ ಕೊಡಲು** = ಪರ್ವತಾಕಾರವಾದ ಅವಳ ದೇಹವನ್ನು ಅಗ್ನಿಗೆ ಆಹುತಿ ಕೊಡಲು **ಆಕೆಯ ಕಾಯ** = ಅವಳ ಶರೀರದಿಂದ ಹೊರಟ ಧೂಮವು ಅಂತರಿಕ್ಷಕ್ಕಡರುತಿರಲು, (ಅದನ್ನು ನೋಡುವುದೇ ಒಂದು ಮೋದ). **ಚಿಕ್ಕರಂಗನ ಬಾಯಿ ಮುಚ್ಚಿ** = ವಿಷಲೇಪಿತ ಸ್ತನ್ಯವನ್ನು ಬಾಯಿಂದ ಚೀಪಿದ ಕಂದನ ಬಾಯಿಯನ್ನು ಪುನಃ ಪುನಃ ಪರೀಕ್ಷಿಸಿದಳು ಆ ಗೋಪಿ **ಇದಕ್ಕಾರಣ** = ಸಜ್ಜನರ ರಕ್ಷಣೆ ದುರ್ಜನರ ದಮನ ಧರ್ಮ ಸಂಸ್ಥಾಪನೆಯೇ – ಶ್ರೀಹರಿಯ ಅವತಾರದ ಉದ್ದೇಶ್ಯ.

## ೬೧೯

### (ಗೋಪಾಲವಿಠ್ಠಲಾಂಕಿತ)

ರಾಗ–ಆರಭಿ ಆದಿತಾಳ

ಶ್ರೀ ಯದುವರಕುಲತೋಯಧಿ ಹಿಮಕರಾಶ್ರಿತಜನ ಮಂದಾರ
ಮಾಯಾಪೂತನೀ ಹಾರ ವೇದೋದ್ಧಾರ ಮಂದರಶೈಲಧರ || ||ಪ||

ಗಂಗೋದ್ಭವ ಬಲಿ ವ್ಯಾಸ ಪರಾಶರ ಪುಂಗವನುತ ಚರಣ
ಮಂಗಳಾಂಗ ಕುಂತಿಸುತ ಪಾಲನ ಮೌನಿ ಹೃದಯ ಸದನ
ತುಂಗ ಚತುರ್ಭುಜ ಶಂಖಚಕ್ರಧ್ಧರ ದನುಜವಂಶದಹನ
ಅಂಗಜಜನಕ ಕಾಳಿಂಗಗರ್ವಹರ ಅಂಬುಜಾಕ್ಷ ಕರುಣ || ||೧||

ಭೂಸುರಪಕ್ಷ ವಿಭೂಷಣಧರ ಕಂಸಾಸುರ ಮುರಮಥನ
ವಾಸವಾದಿ ಕಮಲಾಸನಪೂಜಿತ ವೈನತೇಯಗಮನ
ಶ್ರೀ ಶುಕ ಶೌನಕ ಸನಕ ಸನಂದನಸೇವಿತ ಪಯುವದನ
ದಾಸಕಲುಷವಿನಾಶ ತ್ರಿಭುವನಾಧೀಶ ಶೇಷಶಯನ || ||೨||

ಶರಣಾಗತಪೋಷಣ ಮೃದುಭಾಷಣ ಶಕಟಾಸುರಹರಣ
ಕರಿವರರಿಪುಹರ ಕನಕಾಂಬರಧರ ಶರನಿಧಿ ಮದಹರಣ
ನರಹರಿ ವೇಲಾಪುರಿ ಕೇಶವ ಶ್ರೀಧರ ಕೌಸ್ತುಭಾಭರಣ
ಕರುಣಾಸಾಗರ ಶ್ರೀಗೋಪಾಲವಿಠ್ಠಲ ಕಮಲಾಚಲ ರಮಣ ||೩||

**ಅರ್ಥವಿವರಣೆ :**

**ಶ್ರೀ ಯದುಕುಲ ... ಮಂದಾರ** = ಮಂಗಳಕರವಾದ ಯದು ಕುಲವೆಂಬ ಸಮುದ್ರಕ್ಕೆ (ತೋಯಧಿ) ಚಂದ್ರಸದೃಶನಾಗಿರುವ (ಹಿಮಕರ)

ಮತ್ತು ಮೊರೆಹೊಕ್ಕ ಜನರಿಗೆ ಕಲ್ಪವೃಕ್ಷ ಸದೃಶನಾಗಿರುವ (ಮಂದಾರ) **ಮಾಯಾಪೂತನೀಹಾರ** = ಮಾಯಾವಿಯಾದ (ಸುಂದರ ಸ್ತ್ರೀವೇಷದಿಂದ ಗೋಕುಲಕ್ಕೆ ಬಂದ) ಪೂತನಿಯ ಅಸುವನ್ನು ಹೀರಿದ ಶ್ರೀಕೃಷ್ಣ.

**ವೇದೋದ್ಧಾರ** = ಮತ್ಸ್ಯರೂಪದಿಂದ ವೇದಗಳನ್ನು ರಕ್ಷಿಸಿದ, **ಮಂದರ ಶೈಲಧರ** = ಮಂದರ ಗಿರಿಯನ್ನೆತ್ತಿದ ಕೂರ್ಮರೂಪಿ ಶ್ರೀಹರಿ.

**ಗಂಗೋದ್ಭವ** = ಗಂಗಾಜನಕನಾದ ತ್ರಿವಿಕ್ರಮ **ಪರಾಶರ** = ವ್ಯಾಸರ ತಂದೆ. **ಅಂಗಜಜನಕ** = ಮನ್ಮಥನ ತಂದೆ. (ಪ್ರದ್ಯುಮ್ನನ ಜನಕ ಶ್ರೀಕೃಷ್ಣ) **ಅಂಬರೀಷ ಕರುಣ** = ಅಂಬರೀಷನ ಮೇಲೆ ಕಾರುಣ್ಯ ತೋರಿಸಿದ ಶ್ರೀಹರಿ. (ಅಂಬರೀಷ ವರದ)

**ಭೂಸುರ ಪತ್ನಿ ವಿಭೂಷಣ ಧರ** = ತನ್ನ ಗುರುಗಳಾದ ಸಾಂದೀಪನ (ಭೂಸುರ) ಪತ್ನಿ ಅಂದರೆ ಗುರು ಪತ್ನಿಯ ಪುತ್ರನನ್ನು (ವಿಭೂಷಣ–ಕುಲ ಭೂಷಣನಾದ ಮಗ) ನ ಬದುಕಿಸಿ ತಂದ ಶ್ರೀಕೃಷ್ಣ. **ವಾಸವಾದಿ ಕಮಲಾಸನ ಪೂಜಿತ** = ಇಂದ್ರನೇ ಮೊದಲಾಗಿ ಸಮಸ್ತ ದೇವತಾ ವರ್ಗ ಮತ್ತು ಬ್ರಹ್ಮನಿಂದ ಪೂಜಿತನಾದ **ದಾಸರ ಕಲುಷ ವಿನಾಶ** = ದಾಸಜನರ ದೋಷಗಳನ್ನು ಕಳೆಯುವವನು **ಕರಿವರರಿಪುಹರ** = ಗಜರಾಜನನ್ನು ಮಡುವಿನಲ್ಲಿ ಹಿಡಿದು ಮೊಸಳೆಯನ್ನು ತನ್ನ ಚಕ್ರದಿಂದ ಸೀಳಿದ.

**ಕನಕಾಂಬರಧರ** = ಪೀತಾಂಬರಧಾರಿ (ಕನಕ –ಚಿನ್ನ ಅಂಬರ–ವಸ್ತ್ರ) **ಶರನಿಧಿ ಮದಹರಣ** = ಸಮುದ್ರರಾಜನ ಗರ್ವವನ್ನು ಭಂಗಮಾಡಿದ ಶ್ರೀರಾಮ. **ವೇಲಾಪುರಿ** = ಬೇಲೂರಿನ ಚೆನ್ನಕೇಶವಸ್ವಾಮಿ. **ಕಮಲಾಚಲ ರಮಣ** = ನಿತ್ಯಮುಕ್ತಳಾದ ನಿರ್ವಿಕಾರಳಾದ (ಅಚಲ) ಇಂದಿರಾ ಪತಿ ಶ್ರೀಮನ್ನಾರಾಯಣನು.

## ೬೨೦

### (ಗೋಪಾಲವಿಠ್ಠಲಾಂಕಿತ)

#### ಉಗಾಭೋಗ

ಬಾಪದೊನಮಾಲೆ ಧರಿಸಿ ಕೊರಳಲ್ಲಿ
ನೋಡಿ ನೋಡದ ಹಾಗೆ ಪೋದನಪ್ಪ
ಆಡುವ ಧ್ವನಿ ಕೇಳಿ ಪಾಡುವ ಪೊಗಳುವ
ನಾಡೊಳಗಪ್ರತಿಪುರುಷನಪ್ಪ
ನೋಡಿವ ಪ್ಯಾರಿಪನ ಮನಸು ಅನ್ಯತ್ರರವು
ನೋಡವು ವಿಚ್ಛರಿಕೆ ವಿಕಪವ್ವಾ
ಮಾಡವಲ್ಲದು ಒಂದು ಕರ್ಮವು ಕರ[illegible] ಡಲ್ಲವು
ಆಡುವ ವಚನಗಳ ಕೇಳಲೊಲ್ಲವು ಕರ್ಣ
ನೋಡಿ ಬೆರಗಾಗುತಿಪೆ ಏನಪ್ಪ
ರೂಢಿಯೊಳಗತಿ ಚೆಲುವನೀತನಪ್ಪ
ನೋಡಿದರೆ ಮನವ ಆಘವಡಗಿತಪ್ಪ
ಗಾಡಿಕಾರ ಚೆಲುವ ಗೋಪಾಲವಿಠ್ಠಲ
ಆಡಬಂದಿದ್ದನ್ನೆ ಅಂಗಳದೊಳಗೆ.

## ೬೨೧

### (ಗೋಪಾಲವಿಠ್ಠಲಾಂಕಿತ)

ರಾಗ–ಬೇಗಡೆ ಆದಿತಾಳ

ಬುದ್ಧಿ ಹೇಳಬಾರದೇನೆ ಗೋಪ್ಯಮ್ಮ ಕೃಷ್ಣಗೆ
ಮುದ್ದು ಮಾಡುವುದ್ಯಾಕೆ ಜಾಣೆ ॥ ॥ಪ॥

ಬುದ್ಧಿ ಪೇಳದಿದ್ದ ಕಾರಣ ಸದ್ದು ಮಾಡದೆ ಮುದ್ದು ಕೃಷ್ಣನು
ಕದ್ದು ಬೆಣ್ಣೆಯು ಮೆದ್ದು ಮನೆಯೊಳಿದ್ದ ಬಾಂಡಗಳೊದ್ದು ಕೆಡಹಿದ ॥೮॥

ಮಿಕ್ಕ ಮಕ್ಕಳಂದದಿ ಕೃಷ್ಣನು ಚಿಕ್ಕವನೇನೆ
ಅಕ್ಕರದಿ ಕುಚಗಳ ಪಿಡಿದು ಸಿಕ್ಕದೋಡುವನೆ
ದಕ್ಕದಿರುವ ರಕ್ಕಸರುಗಳ ಸೊಕ್ಕು ಮುರಿದ ಸಿಕ್ಕೊಗಾರ ಕೇ-
ಳಕ್ಕ ಕೃಷ್ಣಗೆ ತಕ್ಕ ನೀತಿಯು ಪಕ್ಕನೆ ಪೇಳ್ ಧಿಕ್ಕರಿಸಿ ನೀ ॥ ॥೧॥

ಸೀರೆ ದಡದಮ್ಯಾಲಿಟ್ಟು ನೀರಿನಾಟಗಳ ಮಾಡೆ ನಾವೆಲ್ಲರೂ ಪೋಗಿ
ದಾರಿಯೊಳಿರಲು ಚೋರ ನಿನ್ನ ಕಿಶೋರ ಅಲ್ಲಿದ್ದ
ಸೀರೆಗಳನಪಹಾರ ಮಾಡಿದ ಜಾರ ಇವನ ಅ-
ಪಾರ ಲೂಟಿಗಳ ಪೇಳಲಳವೆ ನೀರಜಾಕ್ಷಿ ॥ ॥೨॥

ಕೇಳು ಕೃಷ್ಣನ ದುಡುಕುಗಳನು ವಿಶಾಲ ನೇತ್ರೆಯೊಳೆ
ಜಾಲ ಮಾಡುವುದ್ಯಾತಕೆ ಈ ಪರಿ ಲೋಲಹಾರಳೆ
ಬಾಲಕನ ಘನ ದಾಳಿಗಳೀಗ ತಾಳಲಾರದೆ ಕಾಲಿಗೆರಗುವೆ
ಪೇಳಿದ ನುಡಿಯಲಾಲಿಸಿ ಈ ಚಾಳಿ ಬಿಡಿಸೆ **ಗೋಪಾಲವಿಠ್ಠಲಗೆ** ॥೩॥



**ಅರ್ಥವಿವರಣೆ : –**

ಶ್ರೀಗೋಪಾಲ ದಾಸವರ್ಯರ ಈ ಕೀರ್ತನ ಸಾಹಿತ್ಯದಲ್ಲಿ ಗೋಪಿಕಾ ಸ್ತ್ರೀಯರು ಯಶೋದೆಗೆ, ಬಾಲ ಶ್ರೀಕೃಷ್ಣನ ನಾನಾಪರಿಯ ಚೇಷ್ಟೆ ಲೀಲಾ ವಿಶೇಷಗಳನ್ನು ಚಾಡಿರೂಪದಲ್ಲಿ ಹೇಳುವ ಪ್ರಸಂಗವನ್ನು ಚಿತ್ರಿಸಿದ್ದಾರೆ.

ಅದ್ದಗಿ = ನಮ್ಮ ಮನೆಗಳನ್ನು ಪ್ರವೇಶಿಸಿ, ಬೆಣ್ಣೆ ಕದ್ದು ಮೆದ್ದು, ಖಾಲಿಯಾದ ಗಡಿಗೆಯನ್ನು (ಬಾಂಢ) ಕಾಲಿನಲ್ಲಿ ಒದ್ದು ಚೂರು ಚೂರು

ಮಾಡಿದ **ಸಿಕ್ಕುಗಾರ** = ಕೈಗೆ ಸಿಕ್ಕದೆ ಓಡಿಹೋಗುವ. **ಘಕ್ಕನೆ**= ಕೂಡಲೇ (ತಡಮಾಡದೆ) **ನೀರಿನಾಟಗಳ** = ಜಲವಿಹಾರ (ಜಲಕ್ರೀಡೆ) **ವಾರಿಯೊಳಿರಲು** = ನೀರಿನಲ್ಲಿದ್ದಾಗ, **ಕಿಶೋರ** = ಬಾಲಕನಾದ ಶ್ರೀ ಕೃಷ್ಣ. **ನೀರಜಾಕ್ಷ**= ಪದ್ಮದ ದಳದಂತೆ ವಿಸ್ತಾರ ನೇತ್ರವುಳ್ಳ. **ದುಡುಕು ಗಳ**= ಹಿಂದೆ ಮುಂದೆ ನೋಡದೆ ಮಾಡುವ ಬಾಲ ಚೇಷ್ಟೆಗಳು. **ಜಾಲ**= ಮೋಹ (ಮಂಕು) **ಲೋಲಹಾರಳ**= ಓಲಾಡುತ್ತಿರುವ ಹಾರವನ್ನು ಧರಿಸಿರುವ ಯಶೋದೆ **ಘನಧಾಳಿ** = ಬಲವಾದ ತುಂಟತನ. (ಗೋಳಾಡಿಸುವುದು) **ಚಾಳಿ** = ಕೆಟ್ಟನಡತೆ.



## ೬೨೨

## (ಗೋಪಾಲವಿಠ್ಠಲಾಂಕಿತ)

**ರಾಗ–ಮೋಹನ** **ಆದಿತಾಳ**

ನಾಳೆ ಬರುವನೆಂದು ಹೇಳಿ ಮಧುರೆಗೆ ಪೋದ ಬ–
ಹಳ ದಿನವಾಯಿತಲ್ಲೋ ಉದ್ಧವ ॥ ॥ಪ॥

ಕೇಳಿದ್ಯಾ ನೀ ಬಾಹ ವೇಳೆಯಲಿ ಕೃಷ್ಣನ
ಆಲೋಚನೆಯೊಳಿದ್ದವೋ ॥ ॥ಅ॥

ಪಳ್ಳಿವಾಸಿಗಳು ನಾವು ಪರಿಪರಿ ಅಲಂಕರಿಸಿ ಒಲಿಸಿಕೊಂಬುದನರಿಯೆವೊ
ಗೊಲ್ಲಸತಿಯರು ಸದಾ ಗೋರಕ್ಷಕರು ಮೈಯಲ(ಹೊಲೆ)ತೊಳೆಯ್ಯರಿಯೆವೋ
ಬಲ್ಲಿದನ ಸಹವಾಸ ಮಾಡ್ಯವನ ಮಹಿಮೆಯನೆಲ್ಲ ತಿಳಿಹಿಸಿಕೊಂಡೆವೋ
ಚಲ್ಲಿಗಂಗಳ ಚಪಲೆಯರು ಮಧುರೆನಾರಿಯರ ಒಲುವಿಗೆ ನಾವೆ
ದೂರೇನೋ ॥ ॥೧॥

ಚೊಕ್ಕನಾದ ನಿತ್ಯತೃಪ್ತನಿಗೆ ಬೆಣ್ಣೆ ಕಳವಿಕ್ಕಿದೆವಲ್ಲವ್ವೊ
ಸಿಕ್ಕಿಸಿಕೊಂಡು ರಾಸಕ್ರೀಡೆಯೊಳವಗೆ ಸೊಕ್ಕಿನುಕ್ತಿಯ ನುಡಿದೆವ್ವೊ
ಕಕ್ಕುಲಾತಿಲಿ ಕಾಮಾಸಕ್ತರಿಗಿವ ನಮಗೆ ದಕ್ಕಿದನು ಎಂತಿದ್ದೆವ್ವೊ
ವಕ್ರಗತಿಯಾಗಿ ಅಕ್ರೂರ ಬಂದ್ಯೆಮ್ಮ ಚಕ್ರಧರನಗಲಿಸಿದನೋ ॥ ॥೨॥

ಧೀರ ಸ್ವರಮಣ ದೋಷದೂರನ್ನ ಅಲ್ಪ ಬಹು ಜಾರನೆಂದರಿತೆವಲ್ಲೋ
ಆರಾರ ಮನಕ್ಕಿನ್ನು ತೋರದವನ ನಮ್ಮ ಓರಗೆಯವನೆಂದರಿದೆವ್ವೋ
ಮುರಾರಿ ಅಜಪರಿವಾರದೊಡೆಯನ ನಾವು ಪೋರನೆಂದಾಡಿಸಿದೆವ್ವೋ
ನಾರಿಯರು ನಾವಲ್ಪ ದಾರದ್ರ್ಯರಿಗೆ ಶ್ರೀರಮಣನೆಂತೊದಗುವನೋ ॥ ॥೩॥

ನಿಧಿಯ ಬದಿಲಿದ್ದರು ವಿಧಿಸುವುದನರಿಯದೆ ಮದಡೆಯರಾದೆವ್ವೋ
ಮದನನಾಟಕ ಮನವಿಕ್ಕಿ ಆವನಿಂದೊಂದು ತತ್ವ ತಿಳಿಯಲಿಲ್ಲೋ
ಚದುರೆಯರು ನಮ್ಮ ಬಿಟ್ಟು ಕದಲನಿವನೆಂತೆಂಬ ಮದದಿ ಮೋಸ
ಹೋದೆವ್ವೋ
ಮಧುರೆಯಿಂದೆಮ್ಮ ತಮ್ಮ ಹೃದಯನೊಳಿಪ್ಪನೆಂದು ಚದುರ ಪೇಳಿಹ-
ನಂತೆಲೋ ॥ ॥೪॥

ಮತಿತಪ್ಪಿದೆವ್ವೊ ನಾವು ಸತಿಯರೆಲ್ಲೊಂದಾಗಿ ರಥವ ನಿಲ್ಲಿಸದೆ ಪೋದೆವ್ವೋ
ಹಿತರಾರು ನಮಗೆ ಸಾರಥಿ ನಿನ್ನ ಸಹಾಯ ದೊರೆತರೆತನವ ಮಾಳ್ಪೆವ್ವೋ
ಪಥವ ತೋರಿಸೊ ನಮಗೆ ಮುಂದೆಮ್ಮ ಚೆಲ್ವ ಶ್ರೀಪತಿಯು ಬಂದೊದಗು
ವಂತೆ ಗತಿಯಾರೊ ಆವನ್ಯೊರತು ಗೋಪಾಲವಿಠ್ಠಲ ಅಚ್ಯುತನ ಮಹಿಮೆ
ಕಾಣೆವ್ವೋ ॥ ೫॥

**ಅರ್ಥವಿವರಣೆ :-**

ಗೋಕುಲಕ್ಕೆ ಆಗಮಿಸಿದ ಉದ್ಧವನ ಸಮಾಗಮವಾಗಿದೆ – ಗೋಪಿಕಾ ಸ್ತ್ರೀಯರಿಗೆ. ಮಧುರೆಗೆ ಬಿಲ್ಲು ಹಬ್ಬದ ನೆಪದಲ್ಲಿ ಅಕ್ರೂರನೊಡನೆ ಹೋದ ಶ್ರೀಕೃಷ್ಣನ ವಿರಹತಾಪದಿಂದ ತಪ್ತಹೃದಯರಾದ ಗೋಪಿಯರು ಉದ್ಧವನನ್ನು ಕುರಿತು. ಅವನಲ್ಲಿ ತಮ್ಮ ದುಃಖವನ್ನು ತೋಡಿಕೊಳ್ಳುವ ಪ್ರಸಂಗ ವಿಶೇಷವನ್ನು ಭಕ್ತಿಯಲ್ಲಿ ಭಾಗಣ್ಣನೆಂದು ಖ್ಯಾತನಾಮರಾದ ಶ್ರೀ ಗೋಪಾಲದಾಸವರ್ಯರು ಚಿತ್ರಿಸಿದ್ದಾರೆ.

**ನೀ ಬಾಹವೇಳೆಯಲಿ** = ಉದ್ಧವ! ನೀನು ಗೋಕುಲಕ್ಕೆ ಆಗಮಿಸುವ ಸಮಯದಲ್ಲಿ ನಾವು ಶ್ರೀಕೃಷ್ಣನ ಆಲೋಚನೆಯಲ್ಲಿಯೇ ಇದ್ದೆವು. **ಪಳ್ಳಿ ವಾಸಿಗಳು** = ಪಳ್ಳಿಯ ನಿವಾಸಿಗಳು. ನಾವು ಗ್ರಾಮವಾಸಿಗಳು. ಸಂಸ್ಕೃತಿಯನ್ನರಿಯದ ಮುಗ್ಧೆಯರು. ಗೊಲ್ಲಸತಿಯರು ನಾವು. ಸದಾ ಗೋವುಗಳ ರಕ್ಷಣೆಯಲ್ಲಿ ನಿರತರು. **ಬಲ್ಲಿದನ ಸಹವಾಸ** = ಪರಮ ಜ್ಞಾನಿಯಾದ ಶ್ರೀ ಕೃಷ್ಣನ ಸಂಗವನ್ನು ಬಯಸುವ ಆತುರದಲ್ಲಿ,ಆತನ ಅಪಾರ ಮಹಿಮೆಗಳನ್ನು ತಿಳಿಯದೇ ಹೋದೆವು. **ಚೆಲ್ಲೆಗಂಗಳ ಚಪಲೆಯರು** = ಸುಂದರವಾದ ನೇತ್ರಗಳುಳ್ಳ ಚಂಚಲ ಮನೋವೃತ್ತಿಯುಳ್ಳ ಸ್ತ್ರೀಯರಾದ ನಾವು. **ಒಲುಪಿಗೆ** = ಸುಸಂಸ್ಕೃತರಾದ ನಗರವಾಸಿಗಳ ಮಧುರಾಪಟ್ಟಣದ ಸ್ತ್ರೀಯರಿಗೆ ನಾವು ಸದೃಶರೇ ? **ಚೊಕ್ಕನಾದ** = ನಿರ್ದೋಷನಾದ. **ನಿತ್ಯತೃಪ್ತನಿಗೆ** = ಶ್ರೀಕೃಷ್ಣನು ಸ್ವರಮಣನು. ಸದಾ ಆನಂದಮಯನು. ಇತರರಿಂದ ಅವನಿಗೆ ಏನೂ ಆಗಬೇಕಾದ್ದಿಲ್ಲ. **ಸೊಕ್ಕಿನುಕ್ತಿಯನು** = ಅಹಂಕಾರದ ಮಾತುಗಳನ್ನು (ನಮ್ಮ ರೂಪಲಾವಣ್ಯಗಳಿಂದ ಶ್ರೀಕೃಷ್ಣನು ಮೋಹಿತನಾಗಿದ್ದಾನೆಂದು ಭ್ರಾಂತಿ ಭಾವ). **ಕಕ್ಕುಲಾತಿಲಿ** = ಮೋಹಕ್ಕೆ ವಶರಾಗಿ. **ದಕ್ಕಿದನು** = ಕೃಷ್ಣನು ನಮಗೆ ದೊರೆತನು ಎಂಬ ಮೋಹಭಾವನೆ **ವಕ್ರಗತಿಯಾಗಿ**ವಕ್ರ ಬುದ್ಧಿಯವನಾದ ಅಕ್ರೂರ. **ಧೀರ** = ಜಗದೇಕ

ಮಲ್ಲ, **ಸ್ವರಮಣ** = ತನ್ನ ಭಗವದ್ರೂಪಗಳಲ್ಲಿ ತಾನೇ ಕ್ರೀಡೆಯಾಡು ವವನು **ಜಾರ** = ಪರಸ್ತ್ರೀಮನ. **ಓರಗೆ** = ನಮಗೆ ಸಮಾನ ಸ್ಕಂಧನೆಂದು. **ಅಜ ಪರಿವಾರದೊಡೆಯನ** = ಬ್ರಹ್ಮಾದಿದೇವತಾ ವರ್ಗವನ್ನೇ ಸ್ವಪರಿವಾರವುಳ್ಳ ಶ್ರೀಹರಿ. **ಪೋರ** = ತುಂಟ ಬಾಲಕ. **ನಾವಲ್ಪ ದಾರಿದ್ರ್ಯರಿಗೆ** = ಅಲ್ಪ ಶಕ್ತರಾದ ನಮಗೆ ಶ್ರೀ ರಮಣನೆಂತು ದಕ್ಕುವನು-? **ನಿಧಿಯು ಬದಿಲಿದ್ದರು** = ದೊಡ್ಡ ಆಸ್ತಿ ಸಮೀಪ ದಲ್ಲಿದ್ದರೂ. **ಮದಡ** = ಮಂಕುಬುದ್ಧಿಯುಳ್ಳವರಾದೆವು. **ಮದನ ನಾಟಕಕೆ** = ಕಾಮನ ಕ್ರೀಡೆಗೆ. **ಚದುರೆಯರು** = ಬುದ್ಧಿವಂತರಾದ ನಮ್ಮನ್ನು (ಶ್ರೀಕೃಷ್ಣನನ್ನು ನಮ್ಮ ಮೋಹದ ಜಾಲದಲ್ಲಿ ಸೆರೆಹಿಡಿದೆವು-ಎಂಬ ಬುದ್ಧಿಯುಕ್ತರಾದ) **ರಥವ ನಿಲಿಸದೆ**= ಮಧುರೆಗೆ ಹೊರಟ್ಟಿದ್ದ ಅಕ್ರೂರನ ರಥವನ್ನು ನಿಲ್ಲಿಸದೇ ಕೆಟ್ಟೆವು. **ಪಥವ ತೋರಿಸೋ** = ನಮಗೆ ಮುಂದಿನ ದಾರಿಯನ್ನು ತೋರಿಸೆಂದು ಉದ್ಧವನನ್ನು ಕೇಳುತ್ತಾರೆ.

❋❋❋

## ೬೨೨

### (ಜಗನ್ನಾಥವಿಠಲಾಂಕಿತ)

**ರಾಗ-ಶಂಕರಾಭರಣ** **ಅಟ್ಟತಾಳ**

ಕೃಷ್ಣರಾಯನೆ ನಿನ್ನ ಕೃತ್ಯಗಳನೆಲ್ಲ
ಸೃಷ್ಟಿಯೊಳಗೆ ನಾ ಬೀರಲ್ಯಾ ॥ ॥ಪ॥

ಪಿಷ್ಮರೊಳಗಿಟ್ಟು ಚಿರಕಾಲದಲೆನ್ನ
ಕಷ್ಟ ಬಿಡಿಸದೆ ಸುಮ್ಮನಿದ್ದೆಯಾ ಸ್ವಾಮಿ ॥ ॥ಅ॥

ಜನನ ಮರಣಶೂನ್ಯನೆನಿಸಿಕೊಂಡು ಗೋಪಿ
ತನಯನಾಗಿದ್ದುದು ಹೇಳಲ್ಯಾ

ಸನಕಾದಿಸೇವ್ಯ ಪೂಜ್ಯನೆ ತುರುಗಳ ಹಿಂಡು
ವನದಲ್ಲಿ ಕಾಯ್ದದ್ದು ಹೇಳಲ್ಯಾ ನಾನು ॥ ॥೧॥

ಧನುಜಭಂಜನನಾದ ಘನಮಹಿಮನೆ ಮಾಗ
ಧನಿಗಂಜಿ ಓಡಿದ್ದು ಹೇಳಲ್ಯಾ
ಎಣೆಯಿಲ್ಲದಾ ಶೂರ ರಣದೊಳು ಪಾರ್ಥನಿಗೆ
ಅನುಗನಾಗಿದ್ದದ್ದು ಹೇಳಲ್ಯಾ ನಾನು ॥ ॥೨॥

ಸತತ ತೃಪ್ತನಾಗಿ ಕ್ಷಿತಿಯೊಳು ಬೆಣ್ಣೆಯ
ಮಿತವಾಗಿ ಕದ್ದದ್ದು ಹೇಳಲ್ಯಾ
ಕೃತಿದೇವಿರಮಣನೆ ಅತಿ ಪ್ರೀತಿಯಲಿ ಗೋಪ
ಸತಿಯರ ಕೂಡಿದ್ದು ಹೇಳಲ್ಯಾ ನಾನು ॥ ॥೩॥

ಶ್ರುತಿತತಿಗಳಿಗಭೇದ್ಯ ಪ್ರತಿಯಿಲ್ಲದ ದೇವ
ಸತಿಗೊಲಿದಾದದ್ದು ಹೇಳಲ್ಯಾ
ಶತಕ್ರತು ವಿಧಿವಂದ್ಯ ಸುತರಾಪೇಕ್ಷಿಸಿ ಭೂತ
ಪತಿಯನ್ನು ಬೇಡಿದ್ದು ಹೇಳಲ್ಯಾ ನಾನು ॥ ॥೪॥

ಭೂತಳದೊಳು ದೇವತೆಗಳೊಡನೆ ಇಂಥ
ರೀತಿಲಿ ಚರಿಸಿದ್ದು ಹೇಳಲ್ಯಾ
ಭೀತಿರಹಿತ ಜನನ್ನಾಥವಿಠ್ಠಲನೆ ಅ
ದ್ಭುತ ಮಹಿಮನೆಂದು ಹೇಳಲ್ಯಾ ನಾನು ॥ ॥೫॥



**ಅರ್ಥವಿವರಣೆ:–**

ಈ ಕೃತಿಯಲ್ಲಿ ಅಪರೋಕ್ಷೀಕೃತಶ್ರೀಶರಾದ ಶ್ರೀಜಗನ್ನಾಥದಾಸ ವರ್ಯರು, ಶ್ರೀಕೃಷ್ಣನ ಅದ್ಭುತವ್ಯಾಪಾರ ವಿಶೇಷಗಳನ್ನು ನಿಂದಾಸ್ತುತಿ ರೂಪದಲ್ಲಿ ಕೊಂಡಾಡಿದ್ದಾರೆ.

**ಕೃತ್ಯಗಳನೆಲ್ಲ** = ವ್ಯಾಪಾರವಿಶೇಷಗಳನ್ನು, **ಬೀರಲ್ಯಾ** = ಎಲ್ಲೆಲ್ಲಿಯೂ ಪ್ರಕಟಿಸಲೇನು ? **ಶಿಷ್ಟರೊಳು** = ಸಜ್ಜನರ ಸಂಗದಲ್ಲಿ ನನ್ನನ್ನು ಇಡದೆ ಉದಾಸೀನಮಾಡಿದರೆ, ನಾನು ಸುಮ್ಮನಿರುವವನಲ್ಲ. **ಗೋಪೀ ತನಯನಾಗಿದ್ದುದು** = ನೀನು ಜನನ ಮರಣವಿದೂರ. ಅನಾದ್ಯನಂತ ಕಾಲದಿಂದಲೂ ನಿತ್ಯ ಹಾಗೂ ಶಾಶ್ವತ. ಅಂತಹ ಅಚ್ಯುತನಾದ ನೀನು ಗೋಪಿಯ ಸಾಕುಮಗನಾಗಿದ್ದ ವಿಚಾರ ತಿಳಿಸಲಾ ? **ತುರುಗಳಹಿಂಡು** = ಸನಕಾದಿ ಮಹಾ ಮುನಿಗಳಿಂದ ಸಂಸೇವ್ಯಮಾನನಾದ ನೀನು ಕೇವಲ ಗೊಲ್ಲನಾಗಿ ಗೋಕುಲದಲ್ಲಿ ದನಗಳನ್ನು ಕಾಯ್ದ ವಿಚಾರ ಪ್ರಕಟಿಸಲಾ ? **ಮಾಗಧನಿಗಂಜಿ** = ನೀನು ಅಸುರಾಂತಕ. ನಿನ್ನ ದರ್ಶನಮಾತ್ರದಿಂದ ಅಸುರರ ಹೃದಯ ನಡುಗುವುದು. ಅಂತಹ ಅಸಮಪರಾಕ್ರಮ ನೀನು ಮಗಧ ದೇಶಾಧಿಪತಿಯಾದ ಜರಾಸಂಧನಿಗೆ ಪರಾಜಿತನಾಗಿ ಪಲಾಯನಗೈದ ವಿಷಯ ವಿಸ್ತರಿಸಲಾ ? **ಪಾರ್ಥಗೆ ಅನುಗನಾಗಿದ್ದುದ್ದು** = ನೀನು ಅಸಮ ಶೂರನು. ಕುರುಕ್ಷೇತ್ರದಲ್ಲಿ ಪಾರ್ಥನಿಗೆ ಬಂಡಿಬೋವನಾಗಿ ರಥವನ್ನು ನಡೆಸಿದ ವಿಷಯ ತಿಳಿಸಲೇನು ? **ಸತತತೃಪನಾಗಿ** =ನೀನು ನಿತ್ಯತೃಪ್ತ. ಸ್ವರಮಣನು. ಹಾಗಿದ್ದರೂ ಗೋಪಿಯರ ಮನೆಗಳಲ್ಲಿ ಹಾಲು ಬೆಣ್ಣೆ ಕದ್ದು ಮೆದ್ದದನ್ನು ಹೇಳಲೇನು ? **ಕೃತಿದೇವಿರಮಣನೆ** = ಕೃತಿನಾಮಕಳಾದ ಶ್ರೀಲಕ್ಷ್ಮೀಪತಿಯಾದ ಪ್ರದ್ಯುಮ್ನನೆ, **ಗೋಪಸತಿಯರ ಕೂಡಿದ್ದು** = ಲಕ್ಷ್ಮೀಬಾಹುಲತಾಂಗಿತನಾದ ನೀನು ಗೋಪಸ್ತ್ರೀಯರನ್ನು ಕೂಡಿದ ಸ್ತೋಜಿ ಗದ ವಿಷಯವನ್ನು ಸಾರಲಾ ? **ಶ್ರುತಿತತಿಗಳಿಗೆ ಅಭೇದ್ಯ** = ಅನಂತ ವಾದ ವೇದರಾಶಿಗಳಿಂದಲೂ ಅತೀತನಾದ. **ಸತಿಗೊಳನಾಗಿದ್ದು** = **ಲಕ್ಷ್ಮಿಯು ವೇದಾಭಿಮಾನಿಯು.** ಲಕ್ಷ್ಮಿಗೂ ಸಹ ಸಾಕಲ್ಯೇನ ಶ್ರೀಹರಿಯು

ಗುಣಾತಿಶಯುಗಳನ್ನು ತಿಳಿಯುಲು ಸಾಧ್ಯವಿಲ್ಲ. ಅಂತಹ ನಿತ್ಯನೂತನನು ಲಕ್ಷ್ಮೀಅವತಾರ ಭೂತಳಾದ ಸತ್ಯಭಾಮೆಯು ಪ್ರಾರ್ಥನೆಗೆ ಸೋತು, ಪಾರಿಜಾತವೃಕ್ಷವನ್ನು ತಂದ ಪ್ರಸಂಗವನ್ನು ಪ್ರಕಟಿಸಲಾ ? **ಶತಕ್ರತು** = ೧೦೦ ಅಶ್ವಮೇಧಯಾಗಗಳನ್ನು ಮಾಡಿದ ಇಂದ್ರ ದೇವರು. **ವಿಧಿವಂದ್ಯ** = ಬ್ರಹ್ಮದೇವರಿಂದ ವಂದನೀಯನಾದ ಸರ್ವೋತ್ತಮನಾದ ನೀನು. **ಸುತರಾಪೇಕ್ಷಿಸಿ** = ಪುತ್ರರನ್ನು ಅಪೇಕ್ಷಿಸಿ. **ಭೂತಪತಿಯನ್ನು** = ರುದ್ರದೇವರನ್ನು ಪುತ್ರಪ್ರಾಪ್ತಿಗಾಗಿ ಬೇಡಿದ ವಿಡಂಬನೆಯನ್ನು ಹೇಳಲ್ಯಾ ? **ಭೀತಿರಹಿತ** =ಯಾರಿಂದಲೂ ಭೀತಿ ಇಲ್ಲದ (ನಿರ್ಭೀತ ವಸ್ತು). **ಅದ್ಭುತ ಮಹಿಮನೆಂದು** = ಕೊನೆಯಲ್ಲಿ ದಾಸರಾಯರು ನಿರ್ಭೀತನಾದ ಆ ನಿರಂಜನನ್ನು ಅಚಿಂತ್ಯಾದ್ಭುತ ಮಹಿಮಾವಂತನೆಂದು ಕೊಂಡಾಡಿದ್ದಾರೆ.

❁❁❁

## ೬೨೩

## (ಪ್ರಾಣೇಶವಿಠ್ಠಲಾಂಕಿತ)

**ರಾಗ–ಮೋಹನ** **ಆದಿತಾಳ**

ಪಾಲಿಸಿರಪ್ಪಣೆ ಮಧುರೆಗೀಗಲು
ಶಿಲಾಂಶ ಚಿಂತಿಸಬೇಡಿರೆಲೆ ॥ ॥ಪ॥

ನಾರಿಯರೆ ನಾನೆಲ್ಲಿ ಪೋಗುವೆ ಕೋಮಲ
ಮೋರೆಯ ಬಾಡಿಸಬ್ಯಾಡಿರೆಲೆ ॥ ॥೧॥

ಯಾತರಗೋಸುಗ ಖಿನ್ನರಾಗುವಿರೆನ್ನ
ಮಾತು ಮನಸಿಗೆ ತನ್ನಿರೆಲೆ ॥ ॥೨॥

ಕಂಧರ ಉಬ್ಬಿದ್ವಯಕಂಗಳುವಕಪ್ರೊತ್ತಿ
ಮಂದಮತಿಗಳ್ಯಾಕಾದಿರೆಲೆ ॥ ॥೩॥

ದೊಡ್ಡ ಕಾರ್ಯಕ್ಕೆ ಹೋಗುವೆನೀಗ ಈ ಪರಿ
ಅಡ್ಡಾಗಬಾರದು ಕೇಳಿರೆಲೆ ॥ ॥೪॥

ಬಲುದೂರ ಬಂದರೆ ಜವ ಬಾಹೋಣಾಗದು
ತಿಳಿದು ಮನೆಗೆ ದಯಮಾಡಿರೆಲೆ ॥ ॥೫॥

ತ್ವರದಿಂದ ವೈರಿಯಗಲಿದಿಲ್ಲಿ ಬಹದೆಂದು
ತಿಳಿದು ಮನೆಗೆ ದಯಮಾಡಿರೆಲೆ ॥ ॥೬॥

ಪ್ರಾಣೇಶವಿಠ್ಠಲನೆಂದಾಕ್ಷಣ ತಡಿಯದೆ
ನಾ ನಿಮ್ಮಲ್ಲಿಹನೆಂದು ತಿಳಿಯರೆಲೇ ॥ ॥೭॥



**ಪ್ರತಿಪದಾರ್ಥ :-**

ಶ್ರೀರಾಮಕೃಷ್ಣರನ್ನು ಅಕ್ರೂರನು ಮಥುರೆಗೆ ಕರೆದೊಯ್ಯಲು ಬಂದಿದ್ದಾನೆ ಆಗ ಶ್ರೀಕೃಷ್ಣನ ವಿರಹವನ್ನು ತಾಳಲಾರದ ಗೋಪಿಕಾಸ್ತ್ರೀಯರನ್ನು ಶ್ರೀಕೃಷ್ಣನು ಸಂತೈಸುವ ಪ್ರಸಂಗವನ್ನು **ಶ್ರೀಪ್ರಾಣೇಶದಾಸಾರ್ಯರು** ಬಹು ಹೃದಯಂಗಮವಾಗಿ ಚಿತ್ರಿಸಿರುತ್ತಾರೆ.

**ಪಾಲಿಸಿರೆಪ್ಪಣೆ** = ಗೋಪಸ್ತ್ರೀಯರನ್ನು ತಾನು ಮಥುರೆಗೆ ಹೋಗಲು ಒಪ್ಪಿಗೆ ನೀಡಬೇಕೆಂದು ಕೋರುತ್ತಿದ್ದಾನೆ ಶ್ರೀಕೃಷ್ಣ. **ತಿಲಾಂಶ** = ನಾನು ಹೋಗುತ್ತಿದ್ದೇನೆಂದು ನೀವು ಎಳ್ಳಷ್ಟೂ ಚಿಂತಿಸಬೇಡಿ **ಕೋಮಲ ಮೋರೆಯ** = ನಿಮ್ಮ ಸುಂದರವಾದ ಕೋಮಲವಾದ ಮುಖಾರವಿಂದವು ಬಾಡುತ್ತಿದೆ. ಬಾಡಿಸದೆ ಮಂದಸ್ಮಿತ

ವದನೆಯರಾಗಿ ನನ್ನನ್ನು ಬೀಳ್ಕೊಡಿರೆಂದು ಕೇಳಿಕೊಳ್ಳುತ್ತಾನೆ. ಆ ಗೋಪೀ ಮನೋಹಾರನು. **ಯಾತರಗೋಸುಗ** = ಯಾವ ಕಾರಣಕ್ಕಾಗಿ ನೀವು ಖಿನ್ನರಾಗುತ್ತಿದ್ದೀರಿ? ನನ್ನ ಮಾತುಗಳನ್ನು ನಿಮ್ಮ ಮನಸ್ಸಿಗೆ ತಂದುಕೊಳ್ಳಿ. **ಕಂಧರ ಉಬ್ಬಿ** = ವಿರಹ ವ್ಯಥೆಯಿಂದ ನಿಮ್ಮ ಕುತ್ತಿಗೆಯ ನರಗಳು ಉಬ್ಬಿವೆ **ದ್ವಯಕಂಗಳ ಉದಕವೊತ್ತಿ** = ಎರಡು ಕಣ್ಣುಗಳಿಂದ ದುಃಖಾಶ್ರು ಉಕ್ಕಿ ಬರುತ್ತದೆ. **ಮಂದಮತಿಗಳಾಗದಲೆ** = ನೀವು ಬುದ್ಧಿಗೇಡಿಗಳಂತೆ ವರ್ತಿಸಬೇಡಿ. **ದೊಡ್ಡಕಾರ್ಯಕೆ** = ಕಂಸಾಸುರನ ವಧೆಗಾಗಿ **ಅಡ್ಡಾಗಬಾರದು** = ಈ ಮಹಾಕಾರ್ಯಕ್ಕೆ ನೀವು ಅಡ್ಡ ಬರಬಾರದು. **ಬಲು ದೂರಬಂದರೆ** = ನನ್ನೊಡನೆ ಊರಿನಿಂದ ಬಹಳ ದೂರ ಬಂದರ. **ಜವ ಬಾಹೋಣಾಗದು** = ಬೇಗನೆ ನಿಮ್ಮ ಮನಗೆ ಸೇರಲು ಸಾಧ್ಯವಿಲ್ಲ (ಜವ=ತ್ವರಿತವಾಗಿ). **ತ್ವರಿತದಿಂದ ವೈರಿಯ ಗೆಲಿದು ಇಲ್ಲಿ** = ಅತ್ಯಂತ ಶೀಘ್ರವಾಗಿ ಶತ್ರುವಾದ ಕಂಸನನ್ನು ಸಂಹರಿಸಿ, ನಿಮ್ಮಲಿಗೇ ಬೇಗ ಬರುತ್ತೇನೆ. **ನಾ ನಿಮ್ಮಲ್ಲಿಹೆನೆಂದು** = ನಿಮ್ಮಲ್ಲಿಯೇ ಹೃದ್ಗುಹಾದಲ್ಲಿ ಅಂತರ್ಯಾಮಿಯಾಗಿದ್ದೇನೆ. ನಾನಿಲ್ಲದ ಸ್ಥಳವಿಲ್ಲ. ಜಗದ್ವ್ಯಾಪಕನಾಗಿದ್ದೇನೆ. ನುಮ್ಮನೆ ಕೊರಗಬೇಡಿರೆಂದು-ಸಂತೈಸುತ್ತಾನೆ ಸಂತನದ ಸವಿಮಾತುಗಳಿಂದ.



## ೬೨೪

## (ಶ್ರೀರಾಮಸುಂದರವಿಠಲಾಂಕಿತ)

**ರಾಗ-ಮೋಹನ** **ತ್ರಿಪುಟತಾಳ**

ಪೋಗಿ ಬರುವೆ ಗೋಪ ನಾಗವೇಣಿಯರೆ ಚ
ನ್ನಾಗಿ ಮಮತಾ ಪೂರ್ಣವಾಗಿರಲಿ ॥ ॥ಪ॥

ಜಾಗುಮಾಡದೆ ಮುಂದೆ ವೇಗದಿಂದಲಿ ಎನ್ನ
ನಾಗೀಸೀ-ಪತಿಗಳ ಕೂಡೆ ಭೋಗಿಸೀ
ತತ್ಸೇವೆ ಮಾಡಲು-ಪೋಗುವುದು ಪಾ-
ಪೌಘವೆಲ್ಲವು-ನೀಗುವುದು ಹೃದ್ರೋಗ-ಪುಂಗಳ
ವಾಗುವುದು ಲೇಸಾಗಿ ಹರುಷಿತ
ರಾಗಿ ಕಳುಹಿರಿ-ಈಗ ಮಧುರೆಗೆ ॥ ॥೮॥

ಬಾಲಕತನದಿ ನಿಮ್ಮಾಲಯವನೆ ಪೊಕ್ಕು
ಪಾಲು ಮೊಸರು ಬೆಣ್ಣೆ ಕದ್ದು-ಮೆದ್ದು
ಜಾಲದಿಂದಲಿ ನಿಮ್ಮ ಬಾಲರುತಿಂದರೆಂದ್ಹೇಳಿದೇ-
ವೃಷವಾಡಿ ನಾ ಬಾಳಿದೇ-ಮೇಲಿಟ್ಟ ಭಾಂಡವ ನೀಳಿದೇ
ಮಥಿಸುವ ಸುಪಾತ್ರೆಯು ಕಾಲಿಲೊದ್ದು
ಬೀಳಕೆಡಹಿದನೆ-ನವನೀತವನು ಮಾ-
ರ್ಜಾಲ ಮರ್ಕಟಪಾಲಮಾಡಿದೇ
ನೀವಿಟ್ಟ ಮೀಸಲ ಶೀಲದಧಿಕೆನೆ
ಪಾಲ ಕೆಡಿಸಿದೆನೇ ॥

ಹೀಗುಚಿತವಲ್ಲೆಂದ್ಹೇಳಿದರೆ ಕೇಳದಲೆ ನಾನತಿ
ಹೇಳನೆಯ ಬಲು ಧಾಳಿಮಾಡಲು
ತಾಳಿ ಎನ್ನನು ಪಾಲಿಸಿದಿರಿ ಕೃ-
ಪಾಳುಗಳೆ ನಿಮ್ಮ ಗುಣಪೇಳಲೊಶವೆ ॥ ॥೯॥

ಪುಲ್ಲಲೋಚನೆಯರೆ-ನಿಮ್ಮೆಲ್ಲರ ಮನಸು ಎ-
ನಲ್ಲಿಟ್ಟಿರುವುದ ಬಲ್ಲೆ ಕೇಳಿ
ಇಲ್ಲೇ ನಿಮ್ಮನು ಬಿಟ್ಟು-ಎಲ್ಲೋ ಪೋಗುವೆ ನೆನ್ನ
ಸಲ್ಲಾದೇ-ಕಾರ್ಯವೇ ಮುಖ್ಯವಲ್ಲಾದೇ
ಬರುವೆನೆ ಅಲ್ಲಿ ನಿಲ್ಲಾದೇ-

ಬ್ರಹ್ಮಾಂಡದೊಳಗಾವಲ್ಲಿ ನೆನೆಸಿದರಲ್ಲಿ ನಾನಿರುವೇ
ನಾನಿಲ್ಲದಾ ಸ್ಥಳವಿಲ್ಲ–ಜಗದೊಳಗೆಲ್ಲ ತುಂಬಿರುವೇ
ಆದರಿಸಿ ಕರೆದವರಲ್ಲಿ ಅತಿ ತ್ವರಿತದಲ್ಲಿ ಬರುತಿರುವೆ ॥
ಈ ವಿಧದಿ ಪೇಳ್ವುದು ಸುಳ್ಳು ಮಾತುಗಳಲ್ಲ
ಆಗಮದಲ್ಲಿ ಪೇಳಿದ ಸೊಲ್ಲು ಎಂದಿದರಲ್ಲಿ ಸಂಶಯು
ವಿಲ್ಲದೆಲೆ ನೀವೆಲ್ಲ ಸ್ಮರಿಸಿದಲ್ಲಿ ಬಂದೊದಗುವೆ ॥ ॥೨॥

ಓಂದಕ್ಕೆ ಒಂದಿನ ನಿಂದು ಕೊಳಲೂದೆ ಸ್ತ್ರೀ
ವೃಂದ ಕೇಳುತಲೀ–ಆನಂದದಿಂದಾ
ಅಂದು ಬರುತಿರೆ–ನಿಮ್ಮ ಬಂಧುಗಳೆಲ್ಲ ನಿರ್ಬಂಧೀಸೀ
ಜೇಡೆನ್ನಲವರ ನಿಂದಿಸೀ–ಎನ್ನೊಳು ಮನಸು ಪೊಂದಿಸೀ
ಜಳದಿಂಗಳೊಳು ತ್ವರಿತದಿಂದ ಎನ್ನನು
ಬಂದು ಕೂಡಿದಿರೇ–ರಾಸೋತ್ಸವದಿ ಧಿಂ ಧಿಂ
ಧಿಮಿಕೆಂದು ಆಡಿದಿರೇ–ಕೀರ್ತಿಯನು ಪದ ಗತಿಯಿಂದ
ಸುಖಕರದಿಂದ ಪಾಡಿದಿರೇ ॥
ಒಲ್‌ಪರಿಯಲಿ ಎನ್ನಿಂದ ಬಂದ
ನಿಂದೆ ಕುಂದುಗಳೊಂದು ಎಣಿಸದೆ
ಪೊಂದಿದಿರಿ ಎಂತೆಂದು ಶ್ರೀರಾಮ
ಸುಂದರ ವಿಠ್ಠಲನು ಇಂದುಮುಖಿಯರಿ
ಗೆಂದು ಮೋದದಿ ॥ಪೋಗಿಬರುವೇ॥ ॥೩॥

**ಅರ್ಥವಿವರಣೆ : –**

**ಶ್ರೀರಾಮಸುಂದರವಿಠ್ಠಲಾಂಕಿತ** ದಾಸವರ್ಯರು ಪ್ರಾಚೀನದಾಸ ಕೂಟಪರಂಪರೆಗೆ ಸೇರಿದವರು. ಆವಾನಿ ಅವರ ಸ್ಥಳ–ಎಂದು ತಿಳಿದು ಬಂದಿದೆ. ಶ್ರೀಜಗನ್ನಾಥದಾಸವರ್ಯರ ಕಾಲದವರೆಂದು ಗೊತ್ತಾಗಿದೆ. ಶ್ರೀಮದ್ಭಾಗವತ ದಶಮಸ್ಕಂಧದ ಕಥಾಪ್ರಸಂಗವನ್ನು ವಿವಿಧ ಹಂತಗಳಲ್ಲಿ

ಸುಂದರವಾದ ಕೀರ್ತನೆಗಳ ರೂಪದಲ್ಲಿ ರಚಿಸಿರುತ್ತಾರೆ. ಕೀರ್ತನಸಾಹಿತ್ಯ ಸುಂದರವಾಗಿದ್ದು, ಶೈಲಿ ಹೃನ್ಮನಗಳನ್ನು ಸೂರೆಗೊಳ್ಳುವುದು. ಕಥಾ ಪ್ರಸಂಗವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸಿರುವ ಇವರ ಕೀರ್ತನ ಸಾಹಿತ್ಯದ ರಚನಾಕೌಶಲ್ಯ ಪರಮಾದ್ಭುತ. ಪ್ರಸಕ್ತ ಕೀರ್ತನೆಯಲ್ಲಿ ಶ್ರೀಕೃಷ್ಣನನ್ನು ಬಲರಾಮನ ಸಂಗಡ ಬಿಲ್ಲು ಹಬ್ಬದ ನೆಪದಲ್ಲಿ ಮಧುರೆಗೆ ಬರುವಂತೆ ಅಕ್ರೂರನ ದ್ವಾರಾ ಕಂಸ ಆಹ್ವಾನಿಸಿದ್ದಾನೆ. ಶ್ರೀಕೃಷ್ಣನ ವಿರಹವ್ಯಥೆಯನ್ನು ಸಹಿಸಲಾರದೆ ಗೋಪಿಕಾಸ್ತ್ರೀಯರು ಬಂದು ಮುತ್ತಿ ಅವರು ಮಧುರೆಗೆ ಖಂಡಿತ ಹೋಗಕೂಡದೆಂದು ಒತ್ತಾಯಿಸುತ್ತಿದ್ದಾರೆ. ಆಗ ಆ ಪರಾತ್ಪರನು ಅವರನ್ನು ಸಾಂತ್ವನಗೊಳಿಸುವ ಪ್ರಸಂಗವೇ ಕೀರ್ತನೆಯ ವಸ್ತು.

**ಪೋಗಿಬರುವೆ** = ಮಧುರಾನಗರಿಗೆ ಹೋಗಿ ಕಾರ್ಯಾನಂತರ ಅತಿ ಶೀಘ್ರವಾಗಿ ಹಿಂದಿರುಗುತ್ತೇನೆ-ಎಂದು ಶ್ರೀಕೃಷ್ಣನ ಸಾಂತ್ವನ ನುಡಿ. **ನಾಗವೇಣಿಯರಿ** = ಹಾವಿನ ಶರೀರದಂತೆ ನೀಳವಾದ ಜಡೆಯುಳ್ಳ ಸುಂದರ ಗೋಪಿಕಾಸ್ತ್ರೀಯರು. **ನುಮತಾ** = ನಿಮ್ಮ ಅಂತಃಕರಣ ಪೂರಿತವಾದ ಅನುರಾಗ (ಭಕ್ತಿಯರೂಪ). **ಜಾಗು** = ವಿಳಂಬ. ನೀವು ವಿಳಂಬಮಾಡದೆ ನನ್ನನ್ನು ವಿಶ್ವಾಸದಿಂದ ಬೇಗನೆ ಕಳುಹಿಸಿಕೊಡಿ. **ಪತಿಗಳ ಕೂಡೆ ಭೋಗಿಸೀ** = ಪತ್ಯಂತರ್ಗತ ಶ್ರೀಪರಮಾತ್ಮನನ್ನು ಭಜಿಸುತ್ತಾ, **ಪಾಪೌಘವೆಲ್ಲವು** = ಪಾಪಸಮೂಹಗಳು ದೂರವಾಗುವುವು. ಪತಿಯ ಸೇವೆ ಪರಮಾತ್ಮನ ಪ್ರೀತಿಗೆ ಕಾರಣ-ಎಂಬ ತತ್ತ್ವವನ್ನು ಶ್ರೀಕೃಷ್ಣನು ಗೋಪಸ್ತ್ರೀಯರಿಗೆ ಬೋಧಿಸುತ್ತಾನೆ. **ಹೃದ್ರೋಗ** = ನಿಮ್ಮ ಮನಸ್ಸಿನ ತಾಪಗಳು (ವಿರಹ ವ್ಯಥಾರೂಪವಾದ) ಬಿಟ್ಟು ಹೋಗುವುವು. **ಮಂಗಳವಾಗುವುದು** = ನಿಮಗೆ ಶುಭವಾಗುವುದು. **ಲೇಸಾಗಿ** = ಒಳ್ಳೆಯ ಮನಸ್ಸಿನಿಂದ.

**ಬಾಲಕತನದಿ** = ತನ್ನ ಬಾಲಲೀಲಾ ವೈಭವವನ್ನು ಶ್ರೀಕೃಷ್ಣನು ಗೋಪಸ್ತ್ರೀಯರಿಗೆ ಜ್ಞಾಪಿಸುತ್ತಾನೆ. ಚಿಕ್ಕಂದಿನಲ್ಲಿ ಅವರ ಮನೆಗಳನ್ನು ಹೊಕ್ಕು ಅಲ್ಲಿದ್ದ ಹಾಲು ಮೊಸರು ಬೆಣ್ಣೆಗಳನ್ನು ಕದ್ದು ತಿಂದ ಪ್ರಸಂಗ.

**ಜಾಲದಿಂದಲಿ** = ಕಪಟ ಅಥವಾ ಮೋಸದಿಂದ. **ನೃಷವಾಡಿ** - ಸುಳ್ಳು ಹೇಳಿ. ತಾನು ಹಾಲು-ಮೊಸರನ್ನು ತಿಂದು, ಅವರ ಮಕ್ಕಳು ತಿಂದರೆಂದು ಹೇಳಿ, ಸುಳ್ಳು ಆಡಿದ ಪ್ರಸಂಗ. **ಭಾಂಡವ** = ಮೊಸರಿನ ಮಡಕೆ. **ಮಥಿಸುವ** = ಕಡೆಯುವ. ಮೇಲಕ್ಕೆ ಹತ್ತಿ ನೆಲುವಿನಟ್ಟಿದ್ದ ಮಡಕೆಯನ್ನು ಕೋಲಿನಿಂದ ಹೊಡೆದು ಸೀಳಿ, ಸುರಿಯುತ್ತಿದ್ದ ಹಾಲು ಮತ್ತು ಮೊಸರನ್ನು ಕುಡಿಯುತ್ತಿದ್ದನು. ಮೊಸರನ್ನು ಕಡೆಯುವ ಪಾತ್ರೆಯನ್ನೇ ಕಾಲಿನಲ್ಲಿ ಒದ್ದು ಬೀಳಿಸಿದನು. **ನವನೀತವನು . . ಮಾಡಿದೆನೇ** - ಗಡಿಗೆಯಲ್ಲಿ ಇಟ್ಟಿದ್ದ ಬೆಣ್ಣೆಯನ್ನು ತಾನುಂಡು, ಉಳಿದಿದ್ದನ್ನು ಬೆಕ್ಕು (ಮಾರ್ಜಾಲ) ಮತ್ತು ಕೋತಿ (ಮರ್ಕಟ) ಗಳಿಗೆ ತಿನ್ನಿಸುತ್ತಿದ್ದ. **ಮೀಸಲು .... . ಕೆಡಿಸಿದೆನೇ** = ದೇವರಿಗೆ ನೈವೇದ್ಯಕ್ಕಾಗಿ ಮೀಸಲಾಗಿಟ್ಟಿದ್ದ ಶುದ್ಧವಾದ ಮೊಸರು ಮತ್ತು ಕೆನೆಗಟ್ಟಿದ ಹಾಲನ್ನು ತಾನೇ ಕುಡಿದು, ನೈವೇದ್ಯಕ್ಕಿಲ್ಲದಂತೆ ಮಾಡಿದ. **ಹೀಗುಚಿತವಲ್ಲೆಂದು .. . . .** = ಎಲೈ ತುಂಟ ಕೃಷ್ಣ ! ನೀನು ಮಾಡುತ್ತಿರುವುದು ಯೋಗ್ಯವಲ್ಲ ಎಂದು ನೀವು ಹೇಳಿದರೂ ಕೇಳದೆ ನಾನು ಧಾಳಿ ಮಾಡಿದೆ. ಆದರೂ ನಿಮ್ಮ ಸಹನಾ ಗುಣ ಶ್ಲಾಘನೀಯ. ನನ್ನನ್ನು ಕ್ಷಮಿಸಿ, ಪಾಲಿಸಿದಿರಿ. ಕೃಪಾಳುಗಳು ನೀವು. ನಿಮ್ಮ ಸುಗುಣ ವರ್ಣಿಸಲು ನನ್ನಿಂದ ಸಾಧ್ಯವೇ ?

**ಫುಲ್ಲಲೋಚನೆಯರೇ** = ವಿಶಾಲವಾದ ನೇತ್ರವುಳ್ಳ ಗೋಪಿಕಾ ಸ್ತ್ರೀಯರು. **ನಿಮ್ಮೆಲ್ಲರ .... ... .** = ನಿಮ್ಮೆಲ್ಲರ ಮನಸ್ಸು ನನ್ನಲ್ಲಿಯೇ ಇಟ್ಟಿರುವ ವಿಷಯ ನನಗೆ ಚೆನ್ನಾಗಿ ಗೊತ್ತು. **ಇಲ್ಲೇ ನಿಮ್ಮನ್ನು .** = ನಂದ ಗೋಕುಲದಲ್ಲಿಯೇ ನಿಮ್ಮನ್ನು ಬಿಟ್ಟು, ನಾನು ಎಲ್ಲಿಗೋ ಹೋಗುತ್ತಿದ್ದೇನೆಂದು ನೀವು ಭಾವಿಸಬಾರದು ಅದು ನಿಮಗೆ ಸಲ್ಲದು. **ಅಲ್ಲಿ ನಿಲ್ಲದೇ** = ಮಧುರಾನಗರಕ್ಕೆ ಹೋಗಿ, ಕಾರ್ಯಾನಂತರ ಅಲ್ಲಿ ನಿಲ್ಲದೇ ಶೀಘ್ರವಾಗಿ ಓಡಿಬರುವೆ. **ಕಾರ್ಯವೆ ಮುಖ್ಯವಲ್ಲಾದೇ** = ಕಂಸಾಸುರನ ಸಂಹಾರ ಅತ್ಯಂತ ಮುಖ್ಯವಾದ ಕಾರ್ಯ. **ಬ್ರಹ್ಮಾಂಡದೊಳಗೆ . . ..,** = ಈ ಜಗತ್ತಿನಲ್ಲಿ ನಾನಿಲ್ಲದ ಸ್ಥಳವಿಲ್ಲ. ಸಕಲ ವಸ್ತು

ಗಿರಿ ಅಣು ರೇಣು ತೃಣಕಾಷ್ಠ ಪರಿಪೂರ್ಣನಾಗಿದ್ದೇನೆ. **ಆದರಿಸಿ ಕರೆದ ವರಲ್ಲಿ** = ಭಕ್ತಿಯಿಂದ ನನ್ನನ್ನು ಯಾರು ಕರೆಯುತ್ತಾರೋ ಅವರಲ್ಲಿಗೆ ಅತಿ ತ್ವರಿತವಾಗಿ ಬರುತ್ತೇನೆ. **ಆಗಮದಲ್ಲಿ ಹೇಳಿದ** = ವೇದಗಳಲ್ಲಿ ಹೇಳಿದಂತೆ. **ಸೊಲ್ಲು** = ವೇದವಾಕ್ಯ.

**ಹಿಂದಕ್ಕೆ ಒಂದಿನ** = ರಾಸಕ್ರೀಡಾ ಪ್ರಸಂಗವನ್ನು ಜ್ಞಾಪಿಸುತ್ತಾನೆ ಗೋಪಸ್ತ್ರೀಯರಿಗೆ **ನಿಮ್ಮ ಬಂಧುಗಳೆಲ್ಲಾ ನಿರ್ಬಂಧಿಸೀ** = ಶ್ರೀಕೃಷ್ಣನ ಮುರಳಿಯ ನಾದ ಗೋಪಸ್ತ್ರೀಯರ ಅಂತರಂಗಕ್ಕೆ ಮುಟ್ಟಿತು. ಆದರಿಂದ ಪರವಶರಾದ ಅವರು ಶ್ರೀಕೃಷ್ಣನಿದ್ದೆಡೆಗೆ ಧಾವಿಸಿ ಬರುತ್ತಿದ್ದಾರೆ. ಅವರ ಪತಿ ಮತ್ತು ಬಂಧುಗಳು ಹೋಗಬೇಡಿರೆಂದು ನಿರ್ಬಂಧಿಸುತ್ತಿದ್ದಾರೆ. ಅವರ ಮಾತನ್ನು ಲಕ್ಷಿಸದೇ, ಶ್ರೀಕೃಷ್ಣನಲ್ಲಿಯೇ ನ್ಯಸ್ತಮನಸ್ಕರಾಗಿ, ಪ್ರಶಾಂತವಾದ ಬೆಳದಿಂಗಳಿನಲ್ಲಿ ರಾಸೋತ್ಸವದಿ ಶ್ರೀಕೃಷ್ಣನನ್ನು ಕೂಡಿದ್ದಾರೆ. ಲಯಬದ್ಧವಾದ ತಾಳಗತಿಗಳಿಂದ ನೃತ್ಯವಾಡಿದ್ದಾರೆ. ಸುಮಧುರವಾದ ಕಂಠದಿಂದ ಮನದಣಿಯ ಹಾಡಿ ನಲಿದಾಡಿದ್ದಾರೆ. **ಬತ್ ಪರಿಯಲಿ** ನಾನಾಪ್ರಕಾರವಾಗಿ ನನ್ನಿಂದ ಬಂದ ನಿಂದೆ ನಿಷ್ಠೂರಗಳನ್ನು ಬಂಧು ಬಾಂಧವರಿಂದ ಸಹಿಸಿಕೊಂಡು, ನನ್ನನ್ನು ಕೂಡಿ, ಆನಂದಿಸಿದಿರಿ ಈಗ ಅಷ್ಟೇ ತುಂಬಿದ ಹೃದಯದಿಂದ ನನ್ನನ್ನು ಮಥುರೆಗೆ ಬೀಳ್ಕೊಡಿ ಎನ್ನುತ್ತಿದ್ದಾನೆ ಆ ಮುರಳೀ ಮನೋಹರ. ಭಾಗವತ ದಶಮಸ್ಕಂಧದಲ್ಲಿನ ಬಹು ಸುಂದರವಾದ ದೃಶ್ಯದ ಚಿತ್ರಣ ಈ ಕೀರ್ತನಸಾಹಿತ್ಯದಲ್ಲಿದೆ.



೬೨೫

(ಶ್ರೀದವಿಠ್ಠಲಾಂಕಿತ)

ರಾಗ–ಭಾಗ್ಯಶ್ರೀ ಆದಿತಾಳ

ಭಯಕೃದ್ಭಯ ಹಾರೀ–ರಾಧಾನಯನ ಮನೋಹಾರೀ ॥ ॥ ಪ॥

ತಾಪತ್ರಯ ಪರಿಹಾರಕ ರಂಗಾ
ಗೋಪೀಜನ ಹೃತ್ಪದ್ಮ ಪತಂಗಾ ॥ ॥೧॥

ಸುಂದರ ಸುಸ್ಮಿತಶೋಭಿತ ವದನಾ
ಮಂದರಧರ ಮಾಧವ ಜಿತಮದನಾ ॥ ॥೨॥

ದುಷ್ಟಕುಲಾಂತಕ ಈ ಧರೆಯೊಳು ಶ್ರೀದ
ವಿಠ್ಠಲ ವಿಧಿಭವವಂದಿತ ಪಾದಾ ॥ ॥೩॥

**ಅರ್ಥವಿವರಣೆ : –**

ಶ್ರೀದವಿಠ್ಠಲಾಂಕಿತ ಕರ್ಜಗಿ ದಾಸಪ್ಪನವರು ಶ್ರೀ ಜಗನ್ನಾಥದಾಸವ ರ್ಯರ ದ್ವಿತೀಯ ಶಿಷ್ಯರು. ಪ್ರಸಕ್ತ ಕೀರ್ತನ ಸಾಹಿತ್ಯದಲ್ಲಿ ಶ್ರೀಕೃಷ್ಣನ ಸ್ತೋತ್ರವನ್ನು ಭಕ್ತಿಪರವಶರಾಗಿ ಮಾಡಿದ್ದಾರೆ. **ಭಯಕೃತ ಭಯಹಾರೀ** = ಭಯವನ್ನೇ ಹುಟ್ಟಿಸಿ, ನಂತರ ಅದನ್ನು ಪರಿಹರಿಸುವ ಪರಮಕರುಣಾಳು **ರಾಧ** = ಯದುವಂಶದ ವೃಷಭಭಾನುವಿನಿಂದ ಕಲಾವತಿಯೆಂಬುವಳಲ್ಲಿ ಜನಿಸಿದ ಪುತ್ರಿ. ಕೃಷ್ಣನ ಪರಮಪ್ರಿಯಸಖಿ. **ನಯನಮನೋಹಾರೀ**

= ತನ್ನ ನೇತ್ರಗಳಿಂದ ನೋಡುವುದರಿಂದಲೇ ರಾಧೆಯ ಮನಸ್ಸನ್ನು ಅಪಹರಿಸಿದ ಶ್ರೀಕೃಷ್ಣ. **ತಾಪತ್ರಯ** = ಆಧಿಭೌತಿಕ ಆಧಿದೈವಕ ಮತ್ತು ಆಧ್ಯಾತ್ಮಿಕ–ಎಂಬ ಮೂರು ವಿಧವಾದ ಕ್ಲೇಶಗಳನ್ನು ಪರಿಹರಿಸುವನು. **ರಂಗಾ** = ಜೀವರ ಅಂತರಂಗದಲ್ಲಿ ನಲಿದಾಡುವ ಆತ್ಮ ಸ್ವರೂಪಿ. **ಹೃತ್ಪದ್ಮ ಪತಂಗಾ** = ಗೋಪಿಕಾಸ್ತ್ರೀಯರ ಹೃದಯವೆಂಬ ಕಮಲವನ್ನು ಅರಳಿಸುವ ಸೂರ್ಯಸದೃಶನು (ಪತಂಗಾ = ಸೂರ್ಯ). **ಸುಸ್ಮಿತ ಶೋಭಿತವದನಾ** = ಮಂದಹಾಸದಿಂದ ಪರಿಶೋಭಿತವಾದ ಮುಖವುಳ್ಳವನು. **ಮಂದರ ಧರ** = ಮಂದರ ಪರ್ವತವನ್ನು ಎತ್ತಿದ ಕೂರ್ಮರೂಪೀ ಶ್ರೀಹರಿ. **ಮಾಧವ** = ರಮಾಪತಿ (ಮಾ–ಲಕ್ಷ್ಮೀದೇವಿಯ ಧವಪತಿ) **ಜಿತಮದನಾ** = ಸ್ವರಮಣನು (ತನ್ನಲ್ಲಿಯೇ ತಾನು ರಮಿಸುವವನು–ಇತರರಿಂದ ಭೋಗಾಪೇಕ್ಷದವನಲ್ಲ). **ದುಷ್ಟಕುಲಾಂತಕ** = ದುರುಳರಾದ ದೈತ್ಯರ ವಂಶಕ್ಕೆ ಮೃತ್ಯುಸ್ವರೂಪನು (ಅಂತಕ–ಯಮಸದೃಶನು) **ವಿಧಿಭವ ವಂದಿತಪಾದಾ** = ಬ್ರಹ್ಮ ರುದ್ರಾದಿಗಳಿಂದ ವಂದಿತ ಚರಣಾರವಿಂದನು.



## ೬೨೬

## (ಗುರುಗೋಪಾಲವಿಠ್ಠಲಾಂಕಿತ)

**ರಾಗ–ಮೋಹನ** **ಝಂಪೆತಾಳ**

ನಂದವ್ರಜ ಮಧುರೆ ದ್ವಾರಕಾಪುರಿ ಬಿಟ್ಟು
ಬಂದದ್ದೆ ಬಹುಲಾಭವೋ ॥ ॥ಪ॥

ಇಂದಿರಾಪತಿ ದಯಾಸಿಂಧು-ಸುಖಪೂರ್ಣ ಗೋ-
ವಿಂದ ಲಾಲಿಸೋ ಬಿನ್ನಪ-ಕೃಷ್ಣ ॥ ॥ಅ॥

ಪುಟ್ಟಿದಾಗಲೆ ರಾತ್ರಿ ಮಳೆಯೊಳಗೆ ನಿನ್ನ ಎ-
ಬ್ಬಟ್ಟಿದರೂ ಪರಸದನಕೆ
ಕೊಟ್ಟಳೊಬ್ಬಳು ವಿಷದ ಸ್ತನವ ಬಂಡಿಯು ಬಡದ-
ಲಿಟ್ಟು ನಿನ್ನನು ಮರೆತರೊ
ಕಟ್ಟು ಮಾಡಿ ತುರುವ ಕಾಯಿಸಿ ಬೆರಳಿಂದ
ಬೆಟ್ಟವನು ಹೊರೆಸಿದರಲಾ
ಕೃಷ್ಣ ಉತ್ಕೃಷ್ಟ ಬಲನಾದ ಕಾರಣ ಇಷ್ಟು
ಅಟ್ಟುಳಿಯ ಜರಿದು ಮೆರೆದೇ-ಕೃಷ್ಣಾ ॥ ॥೧॥

ಹಾಲು ಬೆಣ್ಣೆ ಕಳ್ಳನೆಂದೂ ಒರಳಿಗೆ ಕಟ್ಟಿ
ಕೋಲಲಿ ಬಡಿಬಂದರೋ
ಶ್ರೀಲಕುಮಿಪತಿ ನಿನ್ನ ಜಾರನೆಂದೆನುತ ತ-
ಮ್ಮಾಲಯಕೆ ಬರಗೊಡರಲಾ
ಕಾಲು ತೊಳೆಸಿ-ಮಣೆಯನಿಡಿಸೀ-ರಥವನೆ ಹೊಡೆಸೀ
ಊಳಿಗರೆ ಮಾಡಿದರಲಾ
ಪೇಳಲೇನಿನ್ನು ನಿನಗವರು ಮಾಡಿದ್ದು ಕೃ-
ಪಾಳು ತ್ರೈಲೋಕ್ಯನಾಥಾ-ಕೃಷ್ಣಾ ॥ ॥೨॥

ಪರಮಾತ್ಮನೆಂದು ಬಿನ್ನೈಸಿದೆನೊ ನಿನಗೆ ಇದು
ಇರತಕ್ಕ ರಮ್ಯಸ್ಥಳವೋ
ಕರೆಸು ಸತಿ ಸುತ ಪರಿವಾರ ಜನರೆಲ್ಲರನು
ಸ್ಥಿರವಾಗಿ ವಾಸಮಾಡೋ
ಮರಳಿ ನೀನಾಸ್ಥಳಕೆ ಪೋದರೆ ಹಿಂದಿನಾ
ತೆರದಿ ಮಾಡದೆ ಬಿಡರಲಾ

ಗುರುವರ್ಯ ವೆಂಕಟರಾಮಾರ್ಯರು ನಿನ್ನ
ಪರಿಪರಿ ಪೂಜಿಸುವರೋ ಕೃಷ್ಣ ॥ ॥೩॥

ಮಣೆಗಾರನಂತೆ ಅದು ಇದು ಕೊಡು ಎಂದು
ದಣಿಸಿ ಬೇಡುವವನಲ್ಲವೋ
ಋಣತ್ರಯದೊಳಗೆರಡು ತಿದ್ದಿಹೆರು–ಇನ್ನೊಂದು
ಋಣ ಅವರಿಗುಳಿದಿಹುದೋ
ಗುಣನಿಧಿಯೆ ಆದ ನೀನಿತ್ತು ಪಾಲಿಸಿ ನಿನ್ನ
ಘನತೆ ಲೋಕದಿ ಮೆರೆವುದೋ
ದನುಜದಲ್ಲಣ ವಿಘ್ನತತಿಗಳೆದುರೆ ನಿನಗೆ
ಪ್ರಣತಾರ್ತಿಹರ ಕಾಮದಾ–ಕೃಷ್ಣ ॥೪॥

ನೀನಿದ್ದ ಸ್ಥಾನದಲಿ ಸಕಲ ತೀರ್ಥಗಳುಂಟು
ನೀನಿದ್ದುದೇ ಕ್ಷೇತ್ರವೋ
ನೀನು ಎಲ್ಲಿರಲಲ್ಲಿ ಬ್ರಹ್ಮಾದಿ ದಿವಿಜರಾ–
ಸ್ಥಾನದಲಿನೆರೆಸಿಪ್ಪರೋ
ನೀನಿದ್ದ ಸ್ಥಾನವೇ ವೈಕುಂಠವೆಂದೆನಿಸಿ
ಮೌನಿಗಳು ಸೇವಿಸುವರೋ
ಪ್ರಾಣಪತಿ ಶ್ರೀಗುರುಗೋಪಾಲವಿಠ್ಠಲ
ಆನಂದನಿಲಯವಾಸಾ–ಕೃಷ್ಣ ॥ ॥೫॥



**ಅರ್ಥವಿವರಣೆ :—**

ಗುರು ವೆಂಕಟರಾಮಾಚಾರ್ಯರು ವ್ಯಾಸತತ್ತ್ವಜ್ಞರೆಂಬ ಐಜಿ ಸ್ವಾಮಿಗಳು. ವಾಸುದೇವವಿಠ್ಠಲಾಂಕಿತರು. ಅವರು ವೇಣುಗೋಪಾಲ ವಿಗ್ರಹವನ್ನು ಗೋಪಾಲದಾಸರಿಗೆ ಕೊಟ್ಟ ಸಮಯದಲ್ಲಿ ಅವರ ಸೋದರ ರಾದ **ಗುರುಗೋಪಾಲವಿಠ್ಠಲಾಂಕಿತ** ದಾಸವರ್ಯರು ರಚಿಸಿದ ಕೀರ್ತನೆ ಇದು.

**ನಂದವ್ರಜ** = ನಂದಗೋಕುಲ (ಬಾಲ್ಯದಲ್ಲಿ ಶ್ರೀಕೃಷ್ಣನು ಕಳೆದ ಸ್ಥಳ), ಮಥುರೆ–ಮಥುರಾಪಟ್ಟಣ, ದ್ವಾರಕಾಪುರಿ–ರಾಜನಾದ ನಂತರ ಸಮುದ್ರ ಮಧ್ಯದಲ್ಲಿ ಕಟ್ಟಿದ ದ್ವಾರಕಾನಗರಿ. **ಬಹುಲಾಭವೋ** = **ಈ** ಮೂರು ಸ್ಥಳಗಳನ್ನು ಬಿಟ್ಟು, ನೀನು ಇಲ್ಲಿಗೆ ಬಂದದ್ದು ಅತ್ಯಂತ ಯುಕ್ತವಾದುದು ಎಂದು ಹೇಳುತ್ತಾರೆ.

**ಸುಖಪೂರ್ಣ** = ಆನಂದಪರಿಪೂರ್ಣ. **ಬಿನ್ನಪ** = ನಮ್ಮ ಪ್ರಾರ್ಥನೆಯನ್ನು ಕೇಳು **ಪುಟ್ಟಿದಾಗಲೆ** = ನೀನು ದೇವಕಿ ಜಠರದಲ್ಲಿ ಅವತರಿಸಿದಾಗಲೇ ನಿನ್ನನ್ನು ವಸುದೇವನು ಸುರಿಯುತ್ತಿರುವ ಮಳೆಯಲ್ಲಿ ಯಮುನಾ ನದಿಯನ್ನು ದಾಟಿ, ನಂದಗೋಕುಲಕ್ಕೆ ಒಯ್ದ ಪ್ರಸಂಗ. **ಎಬ್ಬಿಟ್ಟದರೋ ಪೆರಸದನಕೆ**=ಬೇರೆ ಸ್ಥಳವಾದ ನಂದಗೋಕುಲಕ್ಕೆ ಒಯ್ದರು. **ವಿಷದಸ್ತನವ**= ಪೂತನಿಯು ನಿನಗೆ ವಿಷಪೂರಿತವಾದ ಸ್ತನವನ್ನು ಕೊಟ್ಟಳು. **ಬಂಡಿಯು** = ಸಣ್ಣ ಶಿಶುವಾಗಿದ್ದಾಗ ನಿನ್ನನ್ನು ಬಂಡಿಯ ಕೆಳಗೆ ಮಲಗಿಸಿ ಮರೆತರು. ಆಗ ಶಕಟಾಸುರನ ಸಂಹಾರ. **ಕಟ್ಟುಮಾಡಿ**=ನಿರ್ಬಂಧ ದಿಂದ ನಿನ್ನನ್ನು ದನ ಕಾಯುವುದಕ್ಕೆ ನಿಯಮಿಸಿದರು. **ಬೆರಳಿಂದ** = ತನ್ನ ಕಿರುಬೆರಳಿನ ತುದಿಯಿಂದ ಗೋವರ್ಧನಪರ್ವತವನ್ನೆತ್ತಿ ಗೋಕುಲ ವನ್ನು ಮಳೆಯ ಅಬ್ಬರದಿಂದ ರಕ್ಷಿಸಿದ ಪ್ರಸಂಗ. **ಉತ್ಕೃಷ್ಟಬಲನಾದ** ಹೇ ಕೃಷ್ಣ ! ನೀನು ಸರ್ವೋತ್ತಮನು. ಅಸದೃಶ ಪರಾಕ್ರಮಿ. ಅದರಿಂದ

ಆವರಿಂದ ಬಂದ ಶ್ರಮಸಹಿಸಿದೆ. **ಅಟ್ಟೌಳಿಯ ಜರಿದು** = ಹಿಂಸೆಯನ್ನು ಲಕ್ಷ್ಯಕ್ಕೆ ತಾರದೇ. **ಮೆರಿದೆ** = ವೈಭವಮೂರ್ತಿಯಾದೆ.

**ಶ್ರೀಲಕುಮಿಪತಿ ನಿನ್ನ** = ರಮಾ ಬ್ರಹ್ಮಾದಿ ವಂದ್ಯನು ನೀನು. ಸ್ವರಮಣ ನಿತ್ಯತೃಪ್ತ. ಆಪ್ತಕಾಮನಾದ ನಿನ್ನನ್ನು ಹಾಲು ಬೆಣ್ಣೆ ಕಳ್ಳನೆಂದು ಗೋಪಿಕಾಸ್ತ್ರೀಯರು ಕಟ್ಟಿ ಹೊಡೆಯಲು ಯತ್ನಿಸಿದರು ರಮಾರಮಣ ನಾದ ನಿನ್ನನ್ನು ಜಾರನೆಂದು ದೂರಿದರು ಅವರ ಮನೆಗೆ ಸೇರಿಸಲೊಲ್ಲರು. **ಊಳಿಗಕೆ ಮಾಡಿದರಲಾ** = ನಿನ್ನಿಂದ ಪರಿಪರಿಯ ಸೇವೆಯನ್ನು ಮಾಡಿಸಿ ಕೊಂಡರು **ತ್ರೈಲೋಕ್ಯನಾಥಾ** = ಮೂರುಲೋಕದ ಪ್ರಭು. ನಿನಗವರು ಮಾಡಿದ ಅನ್ಯಾಯ ಒಂದೇ ಎರಡೇ ?

**ರಮ್ಯಸ್ಥಳವೋ** = ನೀನು ವಾಸಮಾಡಲು ಇದು ಸುಂದರವಾದ ಸ್ಥಾನ. **ಸತಿಸುತ** = ನಿನ್ನ ಪರಿವಾರಭೂತರಾದ ಪತ್ನಿಯರು ಪುತ್ರ ರನ್ನೆಲ್ಲಾ ಇಲ್ಲಿಗೇ ಕರೆಯಿಸು. ಇಲ್ಲೇ ಸ್ಥಿರವಾಗಿ ನೆಲೆಸು. **ಹಿಂದಿನಾ ಕೆರದಿ** = ನೀನು ಪುನಃ ನಿನ್ನ ಸ್ಥಳಕ್ಕೆ ಹೋದರೆ. ಹಿಂದಿನಂತೆಯೇ ಖಂಡಿತಾ ಮಾಡದೇ ಬಿಡರು ಇದು ಖಂಡಿತ. **ಗುರುವರ್ಯವೆಂಕಟ ರಾಮಾರ್ಯರು** = ವಿಜಯವೆಂಕಟನರಸಿಂಹಾಚಾರ್ಯರ ಏಕಮಾತ್ರ ಪುತ್ರರು. ಗೋಪಾಲದಾಸರ ಅನುಗ್ರಹಕ್ಕೆ ಪಾತ್ರರಾಗಿ ಯತ್ಯಾಶ್ರಮ ಸ್ವೀಕರಿಸಿ ವ್ಯಾಸತತ್ತ್ವಜ್ಞರೆಂಬ ಸನ್ಯಾಸಿಶ್ರೇಷ್ಠರಾದರು. ಮಠದ ಸಂಸ್ಥಾನವನ್ನು ಅಪೇಕ್ಷಿಸದೆ, ವಾಸುದೇವವಿಠ್ಠಲನೆಂಬ ಅಂಕಿತಾಭಿಧಾನದಿಂದ ಶ್ರೇಷ್ಠ ಹರಿದಾಸರಾದರು.

**ಮಣೆಗಾರನಂತೆ** = ಗ್ರಾಮಾಧಿಕಾರಿಯಂತೆ, **ದಣಿಸಿ** = ಅದು ಕೊಡು–ಇದು ನೀಡು ಎಂದು ನಿನ್ನನ್ನು ಪೀಡಿಸುವುದಿಲ್ಲ, **ಋಣತ್ರಯ ದೊಳಗೆ** = ಪ್ರತಿಯೊಬ್ಬರಿಗೂ ಮೂರು ವಿಧವಾದ ಋಣಗಳಿವೆ. (೧) ದೇವಋಣ. (೨) ಋಷಿಋಣ. ಮತ್ತು (೩) ಪಿತೃಋಣ.

**ಎರಡು ತಿದ್ದಿದರು** = ಆ ಋಣತ್ರಯಗಳಲ್ಲಿ ಋಷಿಋಣ ಮತ್ತು ಪಿತೃ ಋಣ ತೀರಿವೆ. ಉಳಿದ ದೇವಋಣ ರೂಪವಾದ ದೇವತಾಪೂಜಾಕ್ರಮ –ಸ್ತೋತ್ರ–ಭಜನೆ ಇತ್ಯಾದಿಗಳನ್ನು ನೀನಿತ್ತು ನನ್ನನ್ನು ಋಣಮುಕ್ತನನ್ನಾಗಿ ಮಾಡು. **ನಿನ್ನ ಘನತೆ** = ನಿನ್ನ ಸ್ಮರಣೆ–ಧ್ಯಾನಭಾಗ್ಯವನ್ನು ನೀಡಿದರೆ ನಿನ್ನ ಮಹಿಮಾತಿಶಯವು ಪ್ರಕಟವಾಗುವುದು. **ದನುಜದಲ್ಲಣ** = ದೈತ್ಯರ ಸಂಹಾರಕ. **ವಿಘ್ನಪತಿಗಳು** = ಪ್ರತಿಬಂಧಕಗಳು ನಿನಗೆ ಎದುರೇ ಸರ್ವಶಕ್ತನೇ ! . **ಪ್ರಣತಾರ್ತಿಹರ** = ಶರಣಾಗತರ ದುಃಖ ಪರಿಹಾರಕನಾದ ನೀನು (ಪ್ರಣತ–ಶರಣಾಗತರು, ಆರ್ತಿ–ದುಃಖ)**ಕಾಮದಾ** = ಭಕ್ತರ ಅಭೀಷ್ಟಗಳನ್ನು ನೀಡುವವನು.

**ಬ್ರಹ್ಮಾದಿ ದಿವಿಜರೂ** = ನೀನಿಲ್ಲದ ಸ್ಥಳವಿಲ್ಲ. ನಿನ್ನ ಸನ್ನಿಧಾನ ವಿಶೇಷದಿಂದ ಆ ಸ್ಥಳವೇ ಪರಮ ಪುಣ್ಯಕ್ಷೇತ್ರವು. ಬ್ರಹ್ಮಾದಿ ಸಕಲ ದೇವತಾ ವರ್ಗ ನಿನ್ನ ಸನ್ನಿಧಾನದಲ್ಲಿಯೇ ನೆಲೆಸಿರುವರು. ನೀನಿದ್ದ ಸ್ಥಳವೇ ವೈಕುಂಠ –ಶ್ವೇತದ್ವೀಪ–ಅನಂತಾಸನಗಳೆಂಬ ಮುಕ್ತಿಧಾಮಗಳು. ಸಕಲ ಮುನಿ ವರ್ಗದವರಿಂದ ಸಂಸೇವ್ಯ ಮಾನನು.

**ಪ್ರಾಣಪತಿ** = ಮುಖ್ಯಪ್ರಾಣದೇವರ ಪ್ರಭು. **ಆನಂದನಿಲಯ ವಾಸ** = ಮೋಕ್ಷಸ್ಥಳದಲ್ಲಿ ವಿರಾಜಮಾನನಾಗಿರುವನು. ಈ ಸ್ಥಳವೇ ಭೂಲೋಕದ ವೈಕುಂಠವೆನಿಸಿರುವ ತಿರುಪತಿ ಪುಣ್ಯಕ್ಷೇತ್ರವು.



## ೬೨೭

## (ಗುರು ಜಗನ್ನಾಥವಿಠ್ಠಲಾಂಕಿತ)

**ರಾಗ-ಮೋಹನ** **ಆದಿತಾಳ**

ಕಟ್ಟಿಪೋದಳು ಮಗನಾ ಚೆನ್ನಾಗಿ ತಾ ॥ ॥ಪ॥

ಕಟ್ಟಿ ಪೋದಳತಿ ಸಿಟ್ಟಲಿ ಒರಳಿಗೆ
ಪುಟ್ಟನಿವನಿಗೆ ಇಷ್ಟೆ ಸಾಕೆನುತಲಿ ॥ ॥ಅ॥

ಪಟ್ಟದರಸಿ ಪರಮೇಷ್ಠಿ ಪ್ರಮುಖರಿಗೆ
ಥಟ್ಟನೆ ದೊರೆಯದ ಕೃಷ್ಣನ ಈ ಪರಿ ॥ ॥೧॥

ಜ್ಞಾನಿಜನರ ವರಧ್ಯಾನಕೆ ನಿಲುಕದ ಮ-
ಹಾನುಭಾವನ ತಾ ಸಾನುರಾಗದಲಿ ॥ ॥೨॥

ಮಾತೆಯು ನಾನಿವ ಪೋತನು ಎಂದೂ
ದಾತ ಗುರು ಜಗನ್ನಾಥವಿಠ್ಠಲನಾ ॥ ॥೩॥

**ಅರ್ಥವಿವರಣೆ :–**

ಕೋಸಗಿ ಸ್ವಾಮಿರಾಮಾಚಾರ್ಯರು (ಗುರು ಜಗನ್ನಾಥವಿಠ್ಠಲಾಂಕಿತರು) ಪ್ರಸಕ್ತ ಕೀರ್ತನ ಸಾಹಿತ್ಯದಲ್ಲಿ ಯಶೋದೆಯು ಶ್ರೀಕೃಷ್ಣನ ತುಂಟತನವನ್ನು ತಾಳಲಾರದೇ ಮಗುವಾದ ಶ್ರೀಕೃಷ್ಣನನ್ನು ಒರಳಿಗೆ ಕಟ್ಟಿಹಾಕುವ ಪ್ರಸಂಗವನ್ನು ವರ್ಣಿಸುತ್ತಾರೆ. ಈ ಕೀರ್ತನ ಸಾಹಿತ್ಯವನ್ನು ಅವರ "ಶ್ರೀಕೃಷ್ಣಲೀಲಾ" ಎಂಬ ಆರ್ಯಾವೃತ್ತದಿಂದ ಆರಿಸಲಾಗಿದೆ.

**ಕಟ್ಟಿ ಪೋದಳು** = ಶ್ರೀಕೃಷ್ಣ ಕಿಶೋರನನ್ನು ಒರಳಿಗೆ ಕಟ್ಟಿ ಹೋದಳು ಯಶೋದೆ. **ಸಿಟ್ಟಲಿ** = ಶ್ರೀಕೃಷ್ಣನ ತುಂಟತನವನ್ನು ಸಹಿಸಲಾರದೇ ಹೋದಳು ಯಶೋದೆ. ಅಲ್ಲದೆ ಗೋಪಿಕಾಸ್ತ್ರೀಯರ ಚಾಡಿ ಮಾತುಗಳನ್ನು ಕೇಳಿ ರೋಸಿಹೋಗಿದ್ದಾಳೆ. ಸಿಟ್ಟನಿಂದ ಶ್ರೀಕೃಷ್ಣನನ್ನು ಒರಳಿಗೆ ಕಟ್ಟಿದಳು. **ಪುಟ್ಟನು ಇವನಿಗೆ ಇಷ್ಟೆ ಸಾಕೆನುತಲಿ** = ಶ್ರೀಕೃಷ್ಣನು ಪುಟ್ಟ ಮಗು, ಇವನು ಯಾರ ಮನೆಗೂ ಹೋಗಬಾರದೆಂಬ ಉದ್ದೇಶದಿಂದ ಯಶೋದೆ ಇಷ್ಟೇ ಸಾಕು ಎಂದು ಭಾವಿಸಿದಳು. **ಪಟ್ಟದರಸಿ** = ಶ್ರೀಕೃಷ್ಣನ ಪಟ್ಟಮಹಿಷಿ ಶ್ರೀಲಕ್ಷ್ಮೀದೇವಿ. **ಪರಮೇಷ್ಠಿ ಪ್ರಮುಖರಿಗೆ** = ಬ್ರಹ್ಮಾದಿ ಪ್ರಮುಖ ದೇವತೆಗಳಿಗೂ. **ಥಟ್ಟನೆ ದೊರೆಯದ** = ನಿಲುಕದ ಅಪಾರ ಮಹಿಮಾಸಂಪನ್ನನನ್ನು ಈ ಪರಿ ಕಟ್ಟಿ ಹಾಕಿದಳು. ಏನಾಶ್ಚರ್ಯ! **ನಿಲುಕದ** = ಬ್ರಹ್ಮಜ್ಞಾನಿಗಳನೇಕರ ಶ್ರೇಷ್ಠ ಉಪಾಸನೆ – ತಪಸ್ಸು – ಧ್ಯಾನಗಳಿಗೆ ವಶನಾಗದ ಅಗಮ್ಯ ಮಹಿಮನಾದ ಆ ಅಪ್ರಮೇಯನನ್ನು ಭಕ್ತಿಪಾಶವೆಂಬ ಹಗ್ಗದಿಂದ ಕಟ್ಟಿದಳು. **ಮಾತೆಯನಾ** = ನಾನಿವನ ತಾಯಿ. ಇವ **ಪೋರನು** = ಶ್ರೀಕೃಷ್ಣನು ಪೋರನು (ಚಿಕ್ಕವನು) ಈ ರೀತಿ ಯಶೋದೆಯ ಭಾವನೆ.



೬೨೮

(ಶ್ಯಾಮಸುಂದರಾಂಕಿತ)

**ರಾಗ–ಸಾರಂಗ** **ಆದಿತಾಳ**

ಕಾಯೋ ಕಾಯೋ ಕಾಯೋ ಕಾಯೋ ಕಂಸಾರಿ ನಿನ್ನ ಪದ
ತೋಯಜಕೆರಗುವೆ–ಕಾಯಜಜನಕ ॥ ॥ಪ॥

ಪಾಥಜಭವ ವಿಧಾತ ಸುಮನಸ
ವ್ರಾತವಿನುತ ಮಾನಾಥನೆ ನಿರುತ ॥ ॥೧॥

ಭದ್ರಮೂರುತಿ ಬಲಭದ್ರಾನುಜ ಮಂದ
ರಾದ್ರಿ ಪಾಣಿ ಸಮುದ್ರಶಯನ ॥ ॥೨॥

ಖೇಟವರೂಢ ಕಿರೀಟಿಸೂತ ಶತ
ಕೋಟಿ ದಿನಪನಿಭ ಘೋಟಕವದನ ॥ ॥೩॥

ಕಂತು ಜನಕ ಮಾವಾಂತಕ ಮಾನವ
ದಂತಿವೈರಿ ಜಗದಂತರಿಯಾಮಿ ॥ ॥೪॥

ಸಾಮಗಾನ ಪ್ರಿಯ ಶ್ಯಾಮಸುಂದರ
ವ್ಯೋಮನೃಪನ ಜಾಮಾತನೆ ಜವದಿ ॥ ॥೫॥



**ಅರ್ಥವಿವರಣೆ:-**

**ಕಂಸಾರಿ** = ಕಂಸಾಸುರನನ್ನು ಸಂಹರಿಸಿದ ಶ್ರೀಕೃಷ್ಣ. **ಪದ ಶೋಯುಜ** = ಚರಣಕಮಲ. **ಕಾಯಜಜನಕ** = ಮನ್ಮಥನ ತಂದೆ- ಶ್ರೀಹರಿಯ ಮನಸ್ಸಿನಿಂದ ಮನ್ಮಥನು ಜನಿಸಿದನು. ಪ್ರದ್ಯುಮ್ನನು ಮನ್ಮಥನ ಅವತಾರನು. ಅವನು ಶ್ರೀಕೃಷ್ಣನ ಪುತ್ರನು. **ಪಾಥಜಭವ** = ಕಮಲೋದ್ಭವರಾದ ಬ್ರಹ್ಮದೇವರು (ಪಾಥ-ನೀರು. ಪಾಥಜ-ನೀರಿನಲ್ಲಿ ಹುಟ್ಟುವ ಕಮಲ. ಪಾಥಜಭವ-ಕಮಲೋದ್ಭವ) **ವಿಧಾತ** = ಬ್ರಹ್ಮದೇವರು. **ಸುಮನಸವ್ರಾತ** = ದೇವತಾವರ್ಗ. **ಮಾನಾಥ** = ಲಕ್ಷ್ಮೀಪತಿಯಾದ ಶ್ರೀಕೃಷ್ಣ (ಮಾ-ಲಕ್ಷ್ಮೀ). **ಭದ್ರಮೂರುತಿ** = ಮಂಗಳವಿಗ್ರಹ. **ಬಲಭದ್ರಾನುಜ** = ಬಲರಾಮನ ತಮ್ಮನಾದ

ಶ್ರೀಕೃಷ್ಣ. **ಮಂದರಾದ್ರಿಪಾಣಿ** = ಮಂದರ ಪರ್ವತವನ್ನು ಎತ್ತಿದ ಕೂರ್ಮರೂಪೀ ಶ್ರೀಹರಿ (ಪಾಣಿ–ಎತ್ತಿದ ಎಂದರ್ಥ) **ಸಮುದ್ರಶಯನ** = ಕ್ಷೀರಸಾಗರದಲ್ಲಿ ಮಲಗಿರುವ ಶ್ರೀಹರಿ. **ಖೇಟವರೂಥ** = ಗರುಡ ವಾಹನ (ಖೇಟ–ಪಕ್ಷಿ ಶ್ರೇಷ್ಠರಾದ ಗರುಡ. ವರೂಥ-ರಥ) **ಕಿರೀಟಿಸೂತ** = ಪಾರ್ಥಸಾರಥಿ. **ಶತಕೋಟಿ ದಿನಪನಿಭ** = ನೂರುಕೋಟಿ ಸೂರ್ಯ ಪ್ರಕಾಶವುಳ್ಳವನು (ಶತಕೋಟಿ–ಅನಂತಸಂಖ್ಯೆ) **ಘೋಟಕವದನ** = ಹಯವದನ (ಘೋಟಕ–ಕುದುರೆ) **ಕಂತುಜನಕ** = ಮನ್ಮಥನ ತಂದೆ (ಕಂತು–ಮನ್ಮಥ). **ಮಾವಾಂತಕ** = ಸೋದರ ಮಾವನಾದ ಕಂಸಾ ಸುರನನ್ನು ಕೊಂದ ಶ್ರೀಕೃಷ್ಣ (ಅಂತಕ–ಮೃತ್ಯುಸ್ವರೂಪ–ಯಮ ಸಂಹಾರಕ). **ಮಾನವದಂತಿವೈರಿ** = ನರಸಿಂಹರೂಪೀ. (ಮಾನವ–ನರ. ದಂತೀ–ಆನೆ. ದಂತೀವೈರಿ–ಗಜವೈರಿಯಾದ ಸಿಂಹ. ಅಂದರೆ ನರಸಿಂಹ ನೆಂಬ ಗಮಕ). **ವ್ಯೋಮನೃಪನ**= ಆಕಾಶರಾಜನ (ವ್ಯೋಮ–ಆಕಾಶ) **ಜಾಮಾತನೆ** = ಅಳಿಯನೆ. ಆಕಾಶನೃಪನ ಪುತ್ರಿ ಪದ್ಮಾವತಿಯನ್ನು ಲಗ್ನವಾದ ಶ್ರೀನಿವಾಸನು ವ್ಯೋಮನೃಪನ ಜಾಮಾತನು. **ಜವದಿ** = ತ್ವರಿತವಾಗಿ.



## ೬೨೯

## ಶ್ರೀ ರಾಮಕೃಷ್ಣರಭಜನಮಾಲಾ

## (ವರದೇಶವಿಠ್ಠಲಾಂಕಿತ)

**ರಾಗ–ಭೀಮಪಲಾಸ್** **ಆದಿತಾಳ**

ಜೈ ಜೈರಾಮ ಹರೇ– ಜೈ ಜೈ ಶ್ರೀಕೃಷ್ಣ ಹರೇ ॥ ॥ಪ॥

ರಾಮ ಹರೇ–ಹರೇ ರಾಮ ಹರೇ
ಕೃಷ್ಣ ಹರೇ–ಹರೇ ಕೃಷ್ಣ ಹರೇ ॥ ॥ಅ॥

ಕೌಸಲ್ಯಜ ವರವಂಶೋದ್ಭವ ಸುರಸಂವೇವಿತಪದ ರಾಮ ಹರೇ
ಕಂಸಾದ್ಯಸುರರ ಧ್ವಂಸಗೈಯ್ದ ಯದುವಂಶೋದ್ಭವ
ಶ್ರೀಕೃಷ್ಣ ಹರೇ ॥ ॥೧॥

ಮುನಿಮುಖರಕ್ಷಕ ದನುಜನ ಶಿಕ್ಷಕ ಫಣಿಧರ ಸನ್ನುತ
ರಾಮ ಹರೇ
ಘನವರ್ಣಾಂಗ ಸುಮನಸರೊಡೆಯ ಶ್ರೀವನಜಾಸನಪಿತ
ಶ್ರೀಕೃಷ್ಣ ಹೇರೆ॥ ॥೨॥

ತಾಟಕ ಖರ ಮಧು ಕೈಟಭಾರಿ ಪಾಪಾಟವಿ ಸುರಮುಖ ರಾಮ ಹರೇ
ಆಟದಿ ಫಣಿ ಮ್ಯಾಲ್ನಾಟ್ಯವನಾಡಿದ ಖೇಟವಾಹ ಶ್ರೀಕೃಷ್ಣ
ಹರೇ ॥ ॥೩॥

ಶಿಲೆಯ ಪಾದರಜದಲಿ ಸ್ತ್ರೀ ಮಾಡಿದ ಸುಲಲಿತ ಮಹಿಮ
ಶ್ರೀರಾಮ ಹರೇ
ಬಲುವಕ್ರವಾಗಿದ್ದ ಅಬಲೆಯ ಕ್ಷಣದಲಿ ಚೆಲುವೆಯ ಮಾಡಿದ
ಕೃಷ್ಣ ಹರೇ ॥೪॥

ಹರಧನು ಭಂಗಿಸಿ ಹರುಷದಿ ಜಾನಕೀಕರಾವ ಪಿಡಿದ ಶ್ರೀರಾಮ ಹರೇ
ಸಿರಿ ರುಕ್ಮಿಣಿಯನು ತ್ವರದಲಿ ವರಿಸಿದ ಕರುಣಾಕರ ಶ್ರೀಕೃಷ್ಣ
ಹರೇ ॥ ॥೫॥

ಜನಕ ಪೇಳೆ ಲಕ್ಷ್ಮಣ ಸಹಿತಾ ಸಹ ವನಕೆ ತೆರಳಿದ ರಾಮ ಹರೇ
ವನಕೆ ಪೋಗಿ ತನ್ನಣುಗರೊಡನೆ ಗೋವನು ಪಾಲಿಪ
ಶ್ರೀಕೃಷ್ಣ ಹರೇ ॥ ॥೬॥

ಚದುರೆ ಶಬರಿಯಿತ್ತ ಬದರಿಯ ಫಲವನು ಮುದದಿ ಸೇವಿಸಿದ
ಶ್ರೀರಾಮ ಹರೇ
ವಿದುರನ ಕ್ಷೀರಕೆ ಒದಗಿಪೋದ ಪದುಮನಾಭ ಶ್ರೀಕೃಷ್ಣ ಹರೇ ॥ ॥೭॥

ಸೇವಿತ ಹನುಮ ಸುಗ್ರೀವನ ಸಖ ಜಗತ್ಪಾವನ ಪರತರ
ರಾಮ ಹರೇ
ದೇವಕೀ ವಸುದೇವರ ಸೆರೆ ಬಿಡಿಸಿದ ದೇವದೇವ
ಶ್ರೀಕೃಷ್ಣ ಹರೇ ॥ ॥೮॥

ಧರೆಯೊಳಜ್ಞ ಜನರ ಮೋಹಿಪುದಕೆ ಹರನ ಪೂಜಿಸಿದ
ಶ್ರೀರಾಮ ಹರೇ
ಹರನ ಪ್ರಾರ್ಥಿಸಿ ವರವನು ಪಡೆದ ಚರಿತೆ ಅಗಾಧವು
ಶ್ರೀಕೃಷ್ಣ ಹರೇ ॥ ॥೯॥

ಗಿರಿಗಳಿಂದ ವರಶರಧಿಯ ಬಂಧಿಸಿದ ಪರಮ ಸಮರ್ಥ
ಶ್ರೀರಾಮ ಹರೇ
ಗಿರಿಯನು ತನ್ನ ಕಿರಿ ಬೆರಳಲೆತ್ತಿ ಗೋಪರನು ಕಾಯ್ದ
ಶ್ರೀಕೃಷ್ಣ ಹರೇ ॥ ॥೧೦॥

ಖಂಡಿಸಿ ದಶಶಿರ ಚೆಂಡಾಡಿದ ಕೋದಂಡಪಾಣಿ ಶ್ರೀರಾಮ ಹರೇ
ಪಾಂಡುತನಯರಿಂ ಚಂಡಕೌರವರ ದಿಂಡುಗೆಡುಹಿಸಿದ
ಶ್ರೀಕೃಷ್ಣ ಹರೇ ॥ ॥೧೧॥

ತವಕದಲಯೋಧ್ಯಾ ಪುರಕೈದಿದ ತನ್ನ್ಯುವತಿಯೊಡನೆ
ಶ್ರೀರಾಮ ಹರೇ
ರವಿಸುತತನಯಗೆ ಪಟ್ಟವಗಟ್ಟಿದ ಭವತಾರಕ
ಶ್ರೀಕೃಷ್ಣ ಹರೇ ॥ ॥೧೨॥

ಭರತನು ಪ್ರಾರ್ಥಿಸಲ್ ಅರಸತ್ವವ ಸ್ವೀಕರಿಸಿದ ತ್ವರದಲಿ
ಶ್ರೀರಾಮ ಹರೇ
ವರ ಧರ್ಮಾದ್ಯರ ಧರೆಯೊಳು ಮೆರೆಸಿದ ಪರಮ ಕೃಪಾಕರ
ಶ್ರೀಕೃಷ್ಣ ಹರೇ ॥ ॥೧೩॥

ಅತುಳಮಹಿಮ ಸದ್ಯತಿಗಳ ಹೃದಯದಿ ಸತತ ವಿರಾಜಿಪ
ಶ್ರೀರಾಮ ಹರೇ
ಸಿತವಾಹನಸಾರಥಿ ಎನಿಸಿದ ಸುರರತಿ ಪೂಜಿಪಪದ
ಶ್ರೀಕೃಷ್ಣ ಹರೇ ॥ ॥೧೪॥

ರಾಮ ರಾಮ ಎಂದು ನೇಮದಿ ಭಜಿಪರ ಕಾಮಿತ ಫಲದ
ಶ್ರೀರಾಮ ಹರೇ
ಪ್ರೇಮದಿ ಭಕ್ತರ ಪಾಲಿಪ ಶ್ರೀವರದೇಶವಿಠ್ಠಲ
ಶ್ರೀಕೃಷ್ಣ ಹರೇ ॥ ॥೧೫॥



**ಅರ್ಥವಿವರಣೆ :-**

ಪೂಜ್ಯ ಗುರು ಜಗನ್ನಾಥವಿಠ್ಠಲ ದಾಸವರ್ಯರ ಶಿಷ್ಯರಾದ್ಮಲಿಂಗಸುಸೂಗೂರಿನ ಶ್ರೀವರದೇಶವಿಠ್ಠಲಾಂಕಿತ ದಾಸವರೇಣ್ಯರು ಪ್ರಸಕ್ತ ಕೀರ್ತನ ಸಾಹಿತ್ಯದಲ್ಲಿ ಶ್ರೀರಾಮದೇವರು ಮತ್ತು ಶ್ರೀಕೃಷ್ಣ ದೇವರು ಇವರಿಬ್ಬರ ಮಹಿಮಾತಿಶಯಗಳನ್ನು ತುಲನಾತ್ಮಕವಾಗಿ ವಿವೇಚಿಸಿದ್ದಾರೆ.

**ಕೌಸಲ್ಯಜ** = ಕೌಸಲ್ಯಾ ದೇವಿಯಲ್ಲಿ ಅವತರಿಸಿದ ಶ್ರೀರಾಮಚಂದ್ರ.
**ವರವಂಶೋದ್ಭವ** = ಸೂರ್ಯವಂಶೋದ್ಭವ (ಇಕ್ಷ್ವಾಕುವಂಶಲಲಾಮ)
**ಯದುವಂಶೋದ್ಭವ** = ಶ್ರೀಕೃಷ್ಣನಾದರೋ ಚಂದ್ರವಂಶದಲ್ಲಿ

ಯದುಕುಲಸಂಜಾತನು **ಮುನಿಮುಖರಕ್ಷಕ** = ವಿಶ್ವಾಮಿತ್ರರ ಯಜ್ಞವನ್ನು ರಕ್ಷಿಸಿದ ಶ್ರೀರಾಮ (ಮಖ-ಯಜ್ಞ, ಮುನಿ-ವಿಶ್ವಾಮಿತ್ರ ಮಹರ್ಷಿ) **ಫಣಿಧರಸನ್ನುತ** = ರುದ್ರದೇವರಿಂದ ಸ್ತುತ್ಯನಾದವ. (ಫಣಿ-ಸರ್ಪ, ಧರ-ಧರಿಸಿದ ಸರ್ಪಭೂಷಣನಾದ ರುದ್ರ) **ಘನವರ್ಣಾಂಗ** = ನೀಲ ಮೇಘಶ್ಯಾಮನಾದ ಶ್ರೀಕೃಷ್ಣ. **ಸುಮನಸರೊಡೆಯ** = ದೇವತೆಗಳಿಗೆ ಪ್ರಭು (ದೇವತಾಸಾರ್ವಭೌಮ) **ವನಜಾಸನಪಿತ** = ಬ್ರಹ್ಮನ ತಂದೆ (ವನಜಾಸನ-ಕಮಲಾಸನರಾದ ಬ್ರಹ್ಮದೇವರು) **ಪಾಪಾಟವಿಸುರಮುಖ** = ಪಾಪಗಳೆಂಬ ಅರಣ್ಯಕ್ಕೆ ಅಗ್ನಿ ಸದೃಶನು. (ಅಟವಿ-ಅರಣ್ಯ. ಸುರಮುಖ-ಅಮರಾಸ್ಯನೆಂಬ ಅಗ್ನಿ). **ಫಣಿವ್ಯಾಳಿ** = ಕಾಳಿಂಗ ಸರ್ಪದ ಹೆಡೆಯಮೇಲೆ ನಾಟ್ಯವಾಡಿದ ಶ್ರೀಕೃಷ್ಣ. **ಖೇಟವಾಹ** = ಗರುಡವಾಹನ ಶ್ರೀಕೃಷ್ಣ (ಖೇಟ-ಆಕಾಶದಲ್ಲಿ ಸಂಚರಿಸುವ ಪಕ್ಷಿ ಶ್ರೇಷ್ಠನಾದ ಗರುಡವಾಹನ) **ಪಾದರಜದಲಿ** = ಪಾದಸ್ಪರ್ಶಮಾತ್ರದಿಂದ. **ಸ್ತ್ರೀಮಾಡಿದ** = ಶಿಲಾರೂಪದಲ್ಲಿದ್ದ ಅಹಲ್ಯೆಯನ್ನು ಉದ್ಧರಿಸಿದ ಶ್ರೀರಾಮ. **ವಕ್ರವಾಗಿದ್ದ ಅಬಲೆಯ** = ಮಧುರಾನಗರದಲ್ಲಿ ದೇಹ ವಕ್ರವಾಗಿದ್ದ ಕುಬ್ಜೆಯನ್ನು ತಿದ್ದಿ ಸುಂದರ ಸ್ತ್ರೀಯನ್ನಾಗಿಸಿದ ಶ್ರೀಕೃಷ್ಣ. **ಹರಧನು** = ಸ್ವಯಂವರದಲ್ಲಿ ಪಣವಾಗಿಟ್ಟಿದ್ದ ಶಿವಧನುಸ್ಸನ್ನು ಮುರಿದು ಸೀತೆಯನ್ನು ಪಾಣಿಗ್ರಹಣ ಮಾಡಿಕೊಂಡ ಶ್ರೀರಾಮ. **ತ್ವರದಲಿ** = ಶಿಶುಪಾಲ, ರುಕ್ಮ ಮೊದಲಾದ ದುಷ್ಟರನ್ನು ಯುದ್ಧದಲ್ಲಿ ಸೋಲಿಸಿ, ರುಕ್ಮಿಣಿಯನ್ನು ವರಿಸಿದ ಶ್ರೀಕೃಷ್ಣ. **ಜನಪ ಪೇಳೆ** = ತಂದೆಯಾದ ದಶರಥನ ಅಭಿಪ್ರಾಯದಂತೆ. **ತನ್ನಣುಗರೊಡನೆ** = ತನ್ನ ಗೆಳೆಯರಾದ ಗೋಪಬಾಲಕರೊಡಗೂಡಿ ವನಕ್ಕೆ ತೆರಳಿ, ಗೋವನ್ನು ಕಾಯ್ದ ಗೋಪಾಲಕೃಷ್ಣ. **ಚೆದುರೆ ಶಬರಿಯಿತ್ತ** = ಭಕ್ತಳಾದ ಶಬರಿಗೆ ಒಲಿದು ಆವಳಿತ್ತ ಕಂದಮೂಲಫಲಗಳನ್ನು ಸೇವಿಸಿ, ಸದ್ಗತಿಯನ್ನಿತ್ತ ಶ್ರೀರಾಮ. **ವಿದುರನ ಕ್ಷೀರಕೆ** = ವಿದುರನ ಗೃಹಕ್ಕೆ ತೆರಳಿ ಅವನು ಭಕ್ತಿಯಿಂದಿತ್ತ ಕುಡಿಕೆ ಹಾಲನ್ನು ಸೇವಿಸಿ ಕ್ಷೀರದ ಕಾಲುವೆಯನ್ನು ಹರಿಸಿದ

ಶ್ರೀಕೃಷ್ಣ **ಜಗತ್ಪಾವನ** = ಜಗತ್ತಿಗೆ ಪರಮ ಪವಿತ್ರನಾದ. **ಪರತರ** = ಪರನಾಮಕಳಾದ ಶ್ರೀಲಕ್ಷ್ಮೀದೇವಿಗಿಂತ ಅನಂತಕೋಟಿಗುಣದಿಂದ ಅಧಿಕನಾದ ಶ್ರೀರಾಮರೂಪೀ ಶ್ರೀಹರಿ. **ದೇವಕಿ ವಸುದೇವರ** = ಕಂಸನನ್ನು ಸಂಹರಿಸಿ, ತುರಂಗವಾಸದಲ್ಲಿದ್ದ ದೇವಕೀ ವಸುದೇವರನ್ನು ಸೆರೆಯಿಂದ ಬಿಡಿಸಿದ ಕರುಣಾಳು ಶ್ರೀಕೃಷ್ಣ. **ದೇವದೇವ** - ಸರ್ವೋತ್ತಮ. **ಅಜ್ಞ ಜನರ ಮೋಹಿಪುರದಕೆ** = ಅಸುರರ ಮೋಹನಾರ್ಥವಾಗಿ, **ಹರನ ಪೂಜಿಸಿದ** = ಸೇತುಮುಖದಲ್ಲಿ ರಾಮಲಿಂಗವನ್ನು ಪ್ರತಿಷ್ಠಿಸಿ, ಪೂಜೆಮಾಡಿದವನಂತೆ ನಟಿಸಿದ ಶ್ರೀರಾಮ. (ಇದರಿಂದ ರುದ್ರದೇವರ ಬ್ರಹ್ಮಹತ್ಯಾದೋಷ ಪರಿಹಾರವಾಯಿತು) **ಹರನ ಪ್ರಾರ್ಥಿಸಿ** = ರುದ್ರದೇವರನ್ನು ಪ್ರಾರ್ಥಿಸಿ ವರ ಪಡೆದಂತೆ ವಿಡಂಬನ ಮಾಡಿದ ಶ್ರೀಕೃಷ್ಣ. **ಚಿಂತೆ ಅಗಾಧವು** = ನಿನ್ನ ಚರಿತ್ರೆ ಪರಮಾದ್ಭುತವು ! ಸೋಜಿಗದ ಮಹಾಮಹಿಮನು **ಗಿರಿಗಳಿಂದ** = ಬೆಟ್ಟದ ಕಲ್ಲುಗಳಿಂದ ವಾನರರ ದ್ವಾರಾ ದಕ್ಷಿಣಸಮುದ್ರಕ್ಕೆ ಸೇತುವೆ ಕಟ್ಟಿಸಿದ ಶ್ರೀರಾಮ. **ಗಿರಿಯನು ತನ್ನ ಕಿರ್ರು ಬೆರಳಲೆತ್ತಿ** = ಗೋವರ್ಧನಪರ್ವತವನ್ನು ತನ್ನ ಕಿರು ಬೆರಳಿನಿಂದಎತ್ತಿ. ಸಕಲ ಗೋಪಾಲಕರನ್ನು ಗೋವುಗಳನ್ನು ಸಂರಕ್ಷಿಸಿದ ಶ್ರೀಕೃಷ್ಣ. **ಖಂಡಿಸಿ ದಶಶಿರ** = ಹತ್ತುತಲೆ ರಾವಣನನ್ನು ಸಂಹರಿಸಿ, ಕೋಂದಡ ದೀಕ್ಷಾಬದ್ಧನಾಗಿ ಮೆರೆದ ಶ್ರೀರಾಮ. **ಚೆಂಡಕೌರವರ** = ಪಾಂಡವರದ್ವಾರಾ, ದುರುಳ ಕೌರವರ ಶಿರಚೆಂಡಾಡಿಸಿದ ಧೀರ ಶ್ರೀಕೃಷ್ಣ, (ಮಹಾಭಾರತ ಯುದ್ಧ ಶ್ರೀಕೃಷ್ಣ, ಭೀಮಸೇನರದ್ದು, ಶ್ರೀ ಹರಿ ವಾಯುಗಳ ವ್ಯಾಪಾರ) **ತವಕದಲಿ ಅಯೋಧ್ಯಾಪುರ** = ಸೀತೆಯನ್ನು ಪಾವಕನ ದ್ವಾರಾ ಪರಿಗ್ರಹಿಸಿ ಶೀಘ್ರವಾಗಿ ಪುಷ್ಪಕವಿಮಾನದಲ್ಲಿ ಅಯೋಧ್ಯೆಗೆ ತೆರಳಿದ ಶ್ರೀರಾಮ.

**ತನ್ನಪತಿಯೊಡನೆ** = ತನ್ನ ಪತ್ನಿಯಾದ ಸೀತಾದೇವಿಯೊಡನೆ. **ರವಿಸುತತನಯಗೆ** = ಸೂರ್ಯಪುತ್ರನು ಯಮಧರ್ಮನು. ಅವನ ವರಬಲದಿಂದ ಜನಿಸಿದ ಧರ್ಮರಾಯನು ರವಿಸುತತನಯನು. ಧರ್ಮರಾಯನಿಗೆ ಪಟ್ಟ ಕಟ್ಟಿದ ಶ್ರೀಕೃಷ್ಣ. **ಭವತಾರಕ** = ಸಂಸಾರವೆಂಬ ದುಸ್ತರ

ಸಾಗರವನ್ನು ದಾಟಿಸುವ ಶ್ರೀಹರಿ. **ಅರಸತ್ವವ ಸ್ವೀಕರಿಸಿದ** = ನಂದೀ ಗ್ರಾಮದಲ್ಲಿದ್ದ ಭರತನ ಪ್ರಾರ್ಥನೆಯಂತೆ ರಾಜ್ಯವನ್ನು ಸ್ವೀಕರಿಸಿ, ಅಯೋಧ್ಯಾಪತಿಯಾದ ಶ್ರೀರಾಮ. **ವರಧರ್ಮಾದ್ಯರ** = ಶ್ರೇಷ್ಠರಾದ ಧರ್ಮರಾಯಾದಿ ಪಂಚಪಾಂಡವರನ್ನು ಭೂಮಿಯಮೇಲೆ ವೈಭವದಿಂದ ಮೆರೆಸಿದ ಶ್ರೀಕೃಷ್ಣ, **ಸದ್ಯತಿಗಳ ಹೃದಯದಿ** = ಜ್ಞಾನಿಗಳಾದ ಯತಿ ಪುಂಗವರ ಹೃದ್ಗುಹಾವಾಸಿಯಾಗಿ ಸತತ ವಿರಾಜಮಾನನಾಗಿರುವ ಶ್ರೀರಾಮಚಂದ್ರಮೂರ್ತಿ. **ಸಿತವಾಹನಸಾರಥಿ** = ಪಾರ್ಥನ ಸಾರಥಿ ಎಂದೆನಿಸಿದ ಶ್ರೀಕೃಷ್ಣ. (ಸಿತ-ಬಿಳಿಯ ಆನೆ ಐರಾವತ. ಅದನ್ನೇ ವಾಹನ ವನ್ನಾಗಿ ಉಳ್ಳವನು ದೇವೇಂದ್ರ. ಅವನ ಅಂಶಜನು ಅರ್ಜುನ). **ಸುರರತಿ ಪೂಜಿಪಪದ** = ವಿಶೇಷ ಭಕ್ತಿಯಿಂದ ದೇವತಾ ಗಣದಿಂದ ಪೂಜಿತವಾದ ಪಾದಪದ್ಮವುಳ್ಳವನು ಶ್ರೀಕೃಷ್ಣ **ಕಾಮಿತ ಫಲದ** = ರಾಮನಾಮ ಸಂಸ್ಮರಣೆ ಭಕ್ತರ ಸಕಲಾಭೀಷ್ಟ ಪ್ರದವು.

## ೬೩೦

## (ಕಾರ್ಪರನರಹರಿ-ಅಂಕಿತ)

## ಕಲ್ಲೂರ ಶ್ರೀಗೋಪಾಲಕೃಷ್ಣ ದೇವರ ಸ್ತೋತ್ರ

**ರಾಗ-ಆನಂದಭೈರವಿ** **ಛಾಪುತಾಳ**

ಚರಣಕಮಲ ಭಜಿಸೋ-ಗೋಪಾಲಕೃಷ್ಣನ ॥ ॥ಪ॥

ಮುರಲೀವಾದ್ಯದಲಿ ಗೋಪರನ-ತರುಣಿಯರ ಮನವನು
ಮರುಳುಗೊಳಿಸಿದ ಪರಮ ಸುಂದರನ
ಧರೆಯೊಳಗೆ ಭಾಸ್ಕರಪುರ ಸುಮಂದಿರನೆಂದು ಕರೆಸುವನ
ಕರಿರಾಜವರದನ ॥ ॥೧॥

ಕ್ಷೋಣೀ ಗೀರ್ವಾಣರಿಂದಲಿ ಪೂಜೆಗೊಂಡುವನಾ
ಮಾನಸದಿ ತನ್ನನು ಧೇನಿಪರ ಸುರಧೇನು ಎನಿಸುವನಾ
ಗಾನವನು ಕೇಳುವಧೇನುವತ್ಸಗಳಿಂದ ಶೋಭಿತನಾ
ವೇಣುಗೋಪಾಲನ ॥ ॥೧॥

ವಂದನೆಯುಮಾಳ್ಪರ ಬಂಧ, ಬಿಡಿಸ್ಯಾನಂದ ನೀಡುವನು
ಮಂದಿರದಿ ಗಣಪತಿ ಗಂಧವಾಹನರಿಂದ ವಂದಿತನಾ
ಮಂದಜಾಸನ ಮುಖ್ಯ ಸುರಗಣದಿಂದ ಸೇವಿತನಾ
ಸಿಂಧೂರವರದನಾ ॥ ॥೨॥

ಕೃಷ್ಣ ಅಷ್ಟಮಿಯ ಉತ್ಸವಮಾಳ್ಪ ಭಕುತರನಾ
ಸೃಷ್ಟೀಶನಿವನೆಂದರಿದು ಮಹಿಮೆಯ ಪಾಡಿ ಪೊಗಳುವನ
ಕಷ್ಟವನು ಪರಿಹರಿಸ್ಯವರ ಸಕಲಾಭೀಷ್ಟಗರಿಯುವನಾ
ಪರಮೇಷ್ಠಿ ಜನಕನಾ ॥ ॥೩॥

ಹರಿಮಹಿಮೆ ತಿಳಿಯದೆ ಸುರಪತಿಯು ಮಳೆಗರೆಯೆ ಗೋಗಳನಾ
ರಕ್ಷಣೆಯ ಮಾಡಲು ಕಿರಿಯ ಬೆರಳಲಿ ಗಿರಿಯ ಧರಿಸಿದನಾ
ಇದನರಿತು ಸುರಪನು ಸುರಭಿ ಸಹ ಬಂದೆರಗಿ ಕೃಷ್ಣನ್ನ
ಪೂಜಿಸಲು ಒಲಿದನಾ ॥ ॥೪॥

ಶರಣಾಗತ ಜನರ ಪೊರೆಯಲು ಬಂದು ನಿಂದಿಹನಾ
ಕಾರ್ಪರಕ್ಷೇತ್ರದಿ ಮೆರೆವ ತರುಪಿಪ್ಪಲ ಸುಮಂದಿರನ
ಸುರವಿನುತ ಸಿರಿ ನರಹರಿಯ ರೂಪಾತ್ಮಕನು ಎನಿಸುವನ
ತುರುಪಾಲಕೃಷ್ಣನಾ ॥ ॥೫॥



**ಅರ್ಥವಿವರಣೆ :**

ರಾಯಚೂರಿನ ಸಮೀಪದಲ್ಲಿರುವ ಕಲ್ಲೂರು ಕ್ಷೇತ್ರಸ್ಥ ಶ್ರೀ ಗೋಪಾಲ ಕೃಷ್ಣದೇವರ ಪರವಾದ ಸ್ತೋತ್ರಪದವನ್ನು ರಚಿಸಿದವರು ಪೂಜ್ಯ ಗಿರಿಯಾ ಚಾರ್ಯ ಅರ್ಚಕರು ಕೊಪ್ಪರಕ್ಷೇತ್ರ (ದೇವದುರ್ಗ ತಾಲ್ಲೂಕ-ರಾಯಚೂರು ಜಿಲ್ಲೆ).

**ಭಾಸ್ಕರಪುರ**= ಕಲ್ಲೂರು ಕ್ಷೇತ್ರವು ಭಾಸ್ಕರಪುರವೆಂದು ಹೆಸರಾಗಿದೆ. **ಕ್ಷೋಣೀಗೀರ್ವಾಣರಿಂದಲಿ** = ಭೂಸುರದಿಂದ (ವಿಪ್ರರು) **ಸುರಧೇನು** = ಕಾಮಧೇನು ಸದೃಶನು, **ಧೇನು ವತ್ಸಗಳಿಂದ** = ಗೋವು ಮತ್ತು ಗೋವಿನ ಕರುಗಳ ಸಮೂಹದಿಂದ ಶೋಭಿತನಾದವನು. **ಬಂಧಬಿಡಿಸಿ** = ಕರ್ಮವಿಮೋಚನೆ ಮಾಡಿ, **ಗಂಧವಾಹನರಿಂದ** = ವಾಯು ದೇವ ರಿಂದ, **ಮಂದಜಾಸನ** = ಕಮಲಾಸನರಾದ ಬ್ರಹ್ಮದೇವರು (ಮಂದ-ನೀರು ಮಂದಜ-ನೀರಿನಲ್ಲಿ ಉತ್ಪನ್ನವಾಗುವ ಕಮಲ) **ಸುರಗಣದಿಂದ** = ದೇವತಾ ವರ್ಗದಿಂದ. **ಸಿಂಧೂರವರದನಾ** = ಗಜೇಂದ್ರನನ್ನು ಸಲಹಿದ ವನು (ಸಿಂಧೂರ-ಆನೆ) **ಪರಮೇಷ್ಠಿ ಜನಕನ** = ಬ್ರಹ್ಮದೇವರ ತಂದೆ ಯಾದ ಶ್ರೀ ಹರಿ. **ಸುರಪತಿಯು** = ದೇವತೆಗಳ ರಾಜನಾದ ಇಂದ್ರನು, **ಮಳೆಗರೆಯೆ** = ನಂದಗೋಕುಲದ ಮೇಲೆ ಭಾರೀ ಮಳೆಕರೆಯಲು, **ಗಿರಿಯ** = ಕಿರುಬೆರಳಿನಿಂದ ಗೋವರ್ಧನ ಪರ್ವತವನ್ನು ಎತ್ತಿ ಸಲಹಿದ ಶ್ರೀಕೃಷ್ಣನು. **ಸುರಭಿಸಹ** = ಕಾಮಧೇನುವಿನ ವತ್ಸದೊಡನೆ ಬಂದು. **ತರುಪಿಪ್ಪಲ** = ಕೊಪ್ಪರ ಕ್ಷೇತ್ರವು ಪವಿತ್ರವಾದ ಕೃಷ್ಣಾ ನದಿಯ ತೀರ ದಲ್ಲಿದೆ. ಅಶ್ವತ್ಥ ವೃಕ್ಷದಲ್ಲಿ ಸಾಲಿಗ್ರಾಮ ರೂಪದಿಂದ ನರಸಿಂಹ ದೇವರು ಅಭಿವ್ಯಕ್ತನಾಗಿದ್ದಾನೆ **ತುರುಪಾಲ** = ಗೋಪಾಲಕನಾದ ಶ್ರೀಕೃಷ್ಣ.

## ೬೩೧

## (ಕಮಲೇಶವಿಠ್ಠಲಾಂಕಿತ)

ರಾಗ–ಬೇಹಾಗ್ ತ್ರಿಪುಟತಾಳ

ಉಡುಪಿಯ ಕೃಷ್ಣನ ಸಡಗರನೋಡುವ
ನಡಿಯೋ ನಾರೀಮಣಿ

ಪೊಡವಿಗೆ ಉಡುಗೆಯ ಪಡುವಲಗಡಲದ
ದಡದಲಿ ನೆಲೆಸಿರುವ ಚೆಲುವ ॥ ॥ಪ॥

ಆಲವಬೋಧಮುನಿಗಳ ಪ್ರೀತಿಲಿ ತನ
ಬಲದಲಿ ನಿಲಿಸಿರುವ–ಚೆಲುವ
ಹಲವು ಪೂಜೆಗಳ ಸಲಿಸುವ ಯತಿಗಳ
ಒಳಗೆ ಹೊರಗೇ ಇರುವಾ–ಚೆಲುವಾ ॥ ॥೧॥

ನವನವಪೂಜೆಯ ವಿವಿಧಾಲಂಕಾರದಿ
ತಾ ಮಾಡಿಸಿಕೊಳ್ಳುವ
ಭುವನಮೋಹನರೂಪವ ನೋಡುವರಿಗೆ
ವಿವರದಿ ಕಾಣಿಸುವಾ–ಚೆಲುವಾ ॥ ॥೨॥

ಶ್ರೀಕಮಲೇಶವಿಠ್ಠಲರಾಯನು ತಾ
ಬೇಕಾಗಿಲ್ಲಿರುವ
ಈ ಕಲಿಯುಗದೊಳಗಿದೆ ಕೈವಲ್ಯವು
ತಾ ಕಾಮಿತ ಕೊಡುವಾ–ಚೆಲುವಾ ॥ ॥೩॥



**ಅರ್ಥವಿವರಣೆ : —**

ಕಮಲೇಶವಿಠ್ಠಲಾಂಕಿತ ಸುರಪುರದ ಆನಂದದಾಸರು ಸಂಚಾರತ್ವೇನ ಉಡುಪಿಕ್ಷೇತ್ರಕ್ಕೆ ಆಗಮಿಸಿದ್ದಾರೆ. ಅಲ್ಲಿ ದಿವ್ಯಸುಂದರನಾದ ಶ್ರೀಕೃಷ್ಣನನ್ನು ಸಂದರ್ಶಿಸಿದ್ದಾರೆ. ಆ ಮಂಗಳ ವಿಗ್ರಹವನ್ನು ಭಕ್ತ್ಯುದ್ರೇಕದಿಂದ ವರ್ಣಿಸುತ್ತಾರೆ.

**ಸಡಗರ** = ವೈಭವ. **ಪೊಡವಿಗೆ** = ಭೂಮಿಗೆ, **ಉಡುಗೆಯು** = ವಸ್ತ್ರ ರೂಪದಲ್ಲಿರುವ. **ಪಡುಗಡಲದ** = ಪಶ್ಚಿಮ ಕರಾವಳಿಯ ಸಮುದ್ರ ತೀರದಲ್ಲಿರುವ, ಸೌಂದರ್ಯ ನಿಧಿ ಸುಧಾಮಸಖ ಶ್ರೀಕೃಷ್ಣನು. ಸುತ್ತಲೂ ವ್ಯಾಪಿಸಿರುವ ವಿಶಾಲವಾದ ಸಮುದ್ರವು ಮಧ್ಯಗತ ಭೂಮಿಗೆ ವಸ್ತ್ರ (ಹೊದಿಕೆ) ರೂಪದಲ್ಲಿದೆ. **ಅಲವಬೋಧಮುನಿಗಳ** = ಪೂರ್ಣಬೋಧರ (ಗುರುಮಧ್ವಮುನಿಗಳ, ಲವ–ಸ್ವಲ್ಪ ಅಲವ–ಪೂರ್ಣ) **ಪ್ರೀತಿಲಿ** = ಗುರುಮಧ್ವರು ಭಕ್ತಿಯಿಂದ ಸಂಸ್ಥಾಪಿಸಿರುವ ಶ್ರೀಕೃಷ್ಣ ವಿಗ್ರಹ. **ಹಲವು ಪೂಜೆಗಳ** = ದಿನವಿಡೀ ನಾನಾ ಪರಿಯಲ್ಲಿ ಪೂಜೆ–ಸೇವೆಗಳು ಶ್ರೀಕೃಷ್ಣನಿಗೆ ಪರ್ಯಾಯ ಪೀಠಸ್ಥ ಯತಿಗಳಿಂದ ವೈಭವಯುತವಾಗಿ ನಡೆಯುವುವು. **ನವನವಪೂಜೆಯ** = ಹೊಸ ಹೊಸ ಪರಿಯ ಪೂಜೆಗಳು. **ವಿವಿಧಾಲಂಕಾರ** = ಪ್ರತಿ ಸೇವೆಗೂ ತಕ್ಕಂತೆ ನಾನಾ ಪರಿಯ ಅಲಂಕಾರಗಳಿಂದ ಪರಿಶೋಭಿತನಾಗುತ್ತಾನೆ ಶ್ರೀಕೃಷ್ಣನು, **ಭುವನ ಮೋಹನ ರೂಪವ** = ಜಗತ್ತನ್ನೇ ಮೋಹಗೊಳಿಸುವ ರೂಪಾತಿಶಯ. **ವಿವರದಿ** = ಸ್ಫುಟವಾಗಿ (ಸ್ಪಷ್ಟವಾಗಿ) **ತಾ ಬೇಕಾಗಿಲ್ಲಿರುವ** = ಭಕ್ತ ಜನರಿಗೆ ಕಾಮಿತಾರ್ಥ ಪ್ರದನಾಗಿ ತಾನೇ ಈ ಕ್ಷೇತ್ರದಲ್ಲಿ ವಿದ್ಯಮಾನವನಾಗಿದ್ದಾನೆ. **ಕೈವಲ್ಯವು** = ಮುಕ್ತಧಾಮವು. ವೈಕುಂಠ–ಶ್ವೇತದೀಪ –ಅನಂತಾಸನ ಎಂಬ ಮೂರು ಮುಕ್ತ-ಧಾಮಗಳು. ಕಾಂಚನ ಬ್ರಹ್ಮನಾದ ಶ್ರೀನಿವಾಸನ ಕ್ಷೇತ್ರ ತಿರುಪತಿಯು ಭೂವೈಕುಂಠ. ಶಬ್ದಬ್ರಹ್ಮನಾದ ಪಾಂಡುರಂಗನ ಕ್ಷೇತ್ರ ಪಂಢರಾಪುರವು ಭೂಶ್ವೇತದ್ವೀಪ. ಅನ್ನಬ್ರಹ್ಮನಾಮಕ

ನಾದ ಶ್ರೀಕೃಷ್ಣನ ಉಡುಪಿಕ್ಷೇತ್ರ ಭೂಅಸಂತಾಸನ **ಕಾಮಿತ** = ಭಕ್ತರ ಮನೋಭೀಷ್ಟೆಗಳು. **ಕೊಡುವಾ** = ಸಲ್ಲಿಸುವ ಶುಭಾಂಗನು.



## ೬೩೨

## (ಶ್ರೀಕರವಿಠ್ಠಲಾಂಕಿತ)

**ರಾಗ–ಯಮುನಾ** **ಆದಿತಾಳ**

ಇಂದು ಕಂಡೆ ನಾ ಇಂದುಧರಸುತ
ನಂದನ ಕಂದ ಮುಕುಂದನಾ ॥ ॥ಪ॥

ಮಂದರೋದ್ಧರ ಇಂದಿರಾವರ
ತಂದೆ ಉಡುಪಿಯ ಕೃಷ್ಣನ ॥ ॥ಅ॥

ಕಾವಲೊಳು ಪುಟ್ಟಿರುವಾ–ಆವಪಳ್ಳಿಲಿ ಬೆಳೆದನಾ
ಕಾವಗೋಪಳ ರಾಯನಾ–ದೇವಕಿತನುಜಾತನಾ ॥ ॥೧॥

ಪಡಗಡಲಿ ನಡೆತಂದನಾ–ಕಡಗೋಲ್ನೇಣನ ಪಿಡಿದನಾ
ಕಪಲ ಪಡದಲಿ ನಿಂದನಾ–ನಡುಮನೆ ಸುತಗೊಲಿದನಾ ॥ ॥೨॥

ಭಾಮೆ ರುಕ್ಮಿಣಿ ಕರದಲರ್ಚನೆ–ಪ್ರೇಮದಿಂದಲಿ ಕೈಗೊಂಡನಾ
ಕಾಮನಯ್ಯ ಸುದಾಮಸಖ ಮಮ ಸ್ವಾಮಿ **ಶ್ರೀಕರವಿಠ್ಠಲನಾ** ॥೩॥



**ಅರ್ಥವಿವರಣೆ : –**

ರಾಯಚೂರಿನ ಸಮೀಪದಲ್ಲಿರುವ ಕಲ್ಲೂರು ಗ್ರಾಮವಾಸಿಗಳಾಗಿದ್ದ ಶ್ರೀಕರವಿಠ್ಠಲಾಂಕಿತ ಶ್ರೀಸುಬ್ಬಣ್ಣದಾಸರು ಸಂಚಾರತ್ವೇನ ಉಡುಪಿ ಕ್ಷೇತ್ರಕ್ಕೆ ಆಗಮಿಸಿ, ಕ್ಷೇತ್ರಸ್ಥಮೂರ್ತಿ ಶ್ರೀಕೃಷ್ಣನನ್ನು ಕಣ್ತುಂಬಾ ನೋಡಿದಾಗ, ಅವರ ವದನಾರವಿಂದ ಹೊರ ಹೊಮ್ಮಿದ ಕೀರ್ತನ ಸಾಹಿತ್ಯವಿದು.

**ಇಂದುಧರನುತ** = ಚಂದ್ರನನ್ನು ಶಿರದಲ್ಲಿ ಧರಿಸಿರುವ ರುದ್ರ ದೇವರಿಂದ ಸ್ತುತ್ಯಮಾನವನಾದ ಶ್ರೀಕೃಷ್ಣ. **ನಂದನಕಂದ** = ನಂದಗೋಪನ ಸಾಕುಪುತ್ರ. **ಮುಕುಂದನಾ** = ಮೋಕ್ಷಪ್ರದನಾದ ಶ್ರೀ ಹರಿ. **ಮಂದರೋದ್ಧರ** = ಕೂರ್ಮಾವತಾರದಿಂದ ಮಂದರಗಿರಿಯನ್ನು ತನ್ನ ಬೆನ್ನಿನ ಮೇಲೆ ಹೊತ್ತ ಶ್ರೀಹರಿ. **ಇಂದಿರಾವರ** = ಲಕ್ಷ್ಮೀಪತಿ. ಲಕ್ಷ್ಮಿಗಿಂತ ಅನಂತಕೋಟಿ ಗುಣಗಳಿಂದ ಉತ್ತಮನಾದವನು. **ಕಾವಲೊಳು** = ಕಾವಲಿದ್ದ ಸೆರೆ ಮನೆಯಲ್ಲಿ ಶ್ರೀಕೃಷ್ಣನ ಜನನ. **ಆವಪಳ್ಳಿಲಿ** = ಗೋಕುಲದಲ್ಲಿ (ಆವ–ಗೋವುಗಳ ಪಳ್ಳಿ–ಹಳ್ಳಿ) **ಗೋವಳರಾಯನ** = ಗೋಸಂರಕ್ಷಕನಾದ ಗೋಪಾಲಕೃಷ್ಣ. **ತನುಜಾತನ** = ದೇವಕೀಯ ಗರ್ಭವಲ್ಲಿ ಅವತರಿಸಿದ ಶ್ರೀಕೃಷ್ಣ. **ಹಡಗದಲಿ** = ಶ್ರೀಮನ್ಮಧ್ವ ಮುನಿಗಳಿಂದ ಹಡಗಿನಲ್ಲಿದ್ದ ಗೋಪೀಚಂದನದ ಗೆಡ್ಡೆಯಲ್ಲಿ ಗೋಚರಿಸಿದ ಶ್ರೀಕೃಷ್ಣ ಪ್ರತಿಮಾ. **ಕಡಗೋಲು** = ಮೊಸರನ್ನು ಕಡಿಯುವ ಕಡಗೋಲು. **ನೇಣನು** = ಕಡಗೋಲಿಗೆ ಕಟ್ಟುವ ಹಗ್ಗ, **ಕಡಲದಡದಲಿ** = ಪಶ್ಚಿಮ ಸಮುದ್ರದ ಕರಾವಳಿಯಲ್ಲಿ ಉಡುಪಿಯಲ್ಲಿ (ರಜತಪೀಠಪುರ) ಶ್ರೀ ಗುರು ಮಧ್ವರಿಂದ ಸಂಸ್ಥಾಪಿತನಾದ ಶ್ರೀಕೃಷ್ಣನು. **ನಡುಮನೆಯ ಸುತನೆನಿಗೆ** = ಮಧ್ಯಗೇಹಭಟ್ಟರೆಂಬ ಹೆಸರಿನ ನಾರಾಯಣಾಚಾರ್ಯರು. ಅವರ ಪತ್ನೀ ವೇದವತಿಯರಲ್ಲಿ ಆವಿರ್ಭವಿಸಿದ ವಾಸುದೇವನಾಮಕ ಶ್ರೀಮದಾನಂದ ತೀರ್ಥರು. **ಭಾಮೆ ರುಕ್ಮಿಣಿ**=ಸತ್ಯಭಾಮ ಮತ್ತು ರುಕ್ಮಿಣಿ-ಇವರುಗಳಿಂದ ಅರ್ಚಿತನಾದ ಶ್ರೀಕೃಷ್ಣ, **ಕಾಮನಯ್ಯ** = ಮನ್ಮಥನ ತಂದೆ.

**ಸುಧಾಮಸಖ**= ಕುಚೇಲನ ಮಿತ್ರ. **ಮಮ ಸ್ವಾಮಿ** =ನನ್ನ ಹೃತ್ಪದ್ಮದಲ್ಲಿ ನೆಲೆಸಿರುವ ಮಮ ಬಿಂಬಮೂರುತಿ (ನನ್ನ ಪ್ರಭು).

**೫೩೩**

(ಕರಿಗಿರೀಶಾಂಕಿತ)

**ರಾಗ–ಬಿಲಹರಿ** **ಆದಿತಾಳ**

ಕಂಡೆ ಕಂಡೆನು ಸ್ವಾಮಿಯ–ಸುಪ್ರೇಮಿಯ ॥ ॥ಪ॥

ಕಂಡೆ ಕಂಡೆನು ಕೃಷ್ಣರಾಯನ
ಪುಂಡರೀಕದಳಾಯತಾಕ್ಷನ
ಪಾಂಡವಪ್ರಿಯ ಪಾರ್ಥಸಖನ ಉ–
ದ್ದಂಡಮಹಿಮ ಸುರೇಂದ್ರವಂದ್ಯನ ॥ ॥ಅ॥

ಕನಕನವಮಣಿ ಖಚಿತ
ವಾಗಿಹ ಸಿಂಹಾಸನದೊಳು ಸಲೆಶೋಭಿತ
ಸುರಚಿರ ದಿವ್ಯ ಘನನೀಲ ನಿಭರಂಜಿತ
ನಿರ್ಮಲಗಾತ್ರ ಕನಕರನ್ನ ಕಿರೀಟಕುಂಡಲ ॥
ಮಣಿಗಣದಹಾರಾದಿ ಬ್ರಹ್ಮ ಭೂ
ಷಣಗಳನು ಪರಮಕಾಂತಿಯಿಂದಲಿ
ಮಿನುಗುಪತಿ ಲಾವಣ್ಯಮೂರ್ತಿಯ ॥ ॥೧॥

ಕೋಟಿ ಮನ್ಮಥರೂಪನ–ಶ್ರೀಕೃಷ್ಣನ
ಹಾಟಕಾಂಬರಧಾರನ
ಕರುಣಾಮಯ ನೋಟದಿಂದಲಿ ನೋಳ್ಪನ
ಕಂಬುಕಂಠನ–ಆಟಮಾತ್ರದಿ ಪ್ರಬಲದೈತ್ಯಮ

ದಾಟವಿಯು ನಿರ್ಘೋಷವು ಗೈದನ
ಖೇಟವಾಹನನೆನಿಪ ತ್ರಿಜಗದಿ
ಸಾಟಿಯಿಲ್ಲದ ದೇವದೇವನ ॥ ॥೨॥

ಮೆರೆವ ದ್ವಾರಕಾಧೀಶನ
ದ್ರೌಪದಿದೇವಿ ಮೊರೆ ಕೇಳಿ ಸಲಹಿದನ
ಭಜಿಪರ ಅವಸರಕೊದಗುವ ದೇವನ ಶ್ರೀಕೃಷ್ಣನ ॥
ತರಳತನದಲಿ ಗೋಕುಲದಿತಾ
ಪರಿಪರಿ ಲೀಲೆಗಳ ತೋರಿದ
**ಪರಮಪುರುಷ ಕರಿಗಿರೀಶನ**
ಸರಿಯಧಿಕರಿಲ್ಲದ ಸುರೇಶನ–ಕಂಡೆ ಕಂಡೇ ॥ ॥೩॥



**ಅರ್ಥವಿವರಣೆ :**

ಪಂಡಿತೋತ್ತಮರೂ ಕನ್ನಡಸಾಹಿತ್ಯತಿಲಕರೂ ಆಗಿದ್ದ **ಶ್ರೀವರವಣಿ ರಾಮರಾಯರು ಕರಿಗಿರೀಶ**-ಎಂಬ ಅವರ ಕುಲದೈವನಾದ ವೆಂಕಟೇಶನ ನಾಮಾಂಕಿತದಲ್ಲಿ ಅನೇಕ ಪ್ರಮೇಯಗರ್ಭಿತವಾದ ಕೀರ್ತನೆಗಳನ್ನು ರಚಿಸಿದ್ದಾರೆ. ಉಡುಪಿಕ್ಷೇತ್ರಮೂರ್ತಿ ಮುದ್ದು ಶ್ರೀಕೃಷ್ಣನನ್ನು ಸಂದರ್ಶಿಸಿದಾಗ ರಚಿತವಾದ ಭಕ್ತಿರಸಯುಕ್ತವಾದ ಸಾಹಿತ್ಯವಿದು.

**ಸುಪ್ರೇಮಿಯೂ** = ಭಕ್ತವತ್ಸಲನು. **ಪುಂಡರೀಕದಳಾಯತಾಕ್ಷನ** = ಕಮಲದ ದಳಗಳಂತೆ ವಿಸ್ತಾರವಾದ ಕಣ್ಣುಳ್ಳ, **ಪಾಂಡವಪ್ರಿಯ** = ಪಾಂಡವರಿಗೆ ಅತ್ಯಂತ ಪ್ರೀತಿಯ ವಿಷಯನು. **ಉದ್ದಂಡಮಹಿಮ** = ಅತ್ಯಂತ ಶ್ರೇಷ್ಠವಾದ ಮಹಿಮಾಸಂಪನ್ನನು. **ಸುರೇಂದ್ರವಂದ್ಯನ** = ದೇವಾಧಿಪತಿಯಾದ ಇಂದ್ರನಿಂದ ವಂದ್ಯಮಾನನಾದ. **ಕನಕ ನವಮಣಿ ಖಚಿತ** = ನವರತ್ನಗಳಿಂದ ಅಲಂಕೃತವಾದ ಸುವರ್ಣ

ಸಿಂಹಾಸನ. **ಸಲೆ ಶೋಭಿತ** = ಚೆನ್ನಾಗಿ ಶೋಭಾಯಮಾನನಾಗಿರುದ. **ಸುರಚಿರ** = ಅತ್ಯಂತ ಮನೋಹರವಾದ. **ದಿವ್ಯಘನನೀಲ** = ಶ್ರೇಷ್ಠವಾದ ಸಾಂದ್ರವಾದ ನೀಲಮಣಿಯು. **ನಿಭರಂಜಿತ** = ಕಾಂತಿಯಿಂದ ಶೋಭಿತವಾದ. **ನಿರ್ಮಲಗಾತ್ರ** = ಅತ್ಯಂತ ಪರಿಶುದ್ಧವಾದ ದೇಹ (ಸಚ್ಚಿದಾನಂದ ವಿಗ್ರಹನು). **ಕನಕರತ್ನಕಿರೀಟ** = ರತ್ನಖಚಿತವಾದ ಚಿನ್ನದ ಕಿರೀಟ **ಕುಂಡಲ** = ಕರ್ಣಾಭರಣ. **ಮಣಿಗಣದ ಹಾರಾದಿ** = ಮಣಿಗಳ ಸಮೂಹದಿಂದ ಪೋಣಿಸಲ್ಪಟ್ಟ ಹಾರಗಳಿಂದ. **ಅತಿ ಲಾವಣ್ಯಮೂರ್ತಿಯ** = ಅತಿಶಯವಾದ ರೂಪಸೌಂದರ್ಯವಂತನಾದ ಶ್ರೀಕೃಷ್ಣನನ್ನು.

**ಕೋಟಿ ಮನ್ಮಥನ** = ಕೋಟಿಮನ್ಮಥನ ಸದೃಶನ. **ಹಾಟಕಾಂಬರಧಾರನ** = ಪೀತಾಂಬರವನ್ನು ಧರಿಸಿದ (ಹಾಟಕ–ಚಿನ್ನ, ಅಂಬರ–ವಸ್ತ್ರ) **ಕಂಬುಕಂಠನ** = ಕಡೆದ ಶಂಖದಂತೆ ಕತ್ತನ್ನು ಉಳ್ಳ **ಆಟಮಾತ್ರದಿ**= ಲೀಲಾಜಾಲವಾಗಿ (ಏನೇನೂ ಶ್ರಮವಿಲ್ಲದೆ–ನಿರಾಯಾಸವಾಗಿ. **ದೈತ್ಯಮಹಾಟವಿಯ** = ಪ್ರಬಲವಾದ ದೈತ್ಯರೆಂಬ ಮಹಾ ಅರಣ್ಯವನ್ನು. **ನಿರ್ಧೂಮಗೈದನ** = ಸುಟ್ಟು ಬೂದಿಮಾಡುವವನ, **ಖೇಟವಾಹನ** = ಗರುಡವಾಹನ (ಖೇ–ಆಕಾಶದಲ್ಲಿ ಟ–ಸಂಚರಿಸುವ ಪಕ್ಷಿಗಳು ಪಕ್ಷಿಶ್ರೇಷ್ಠನಾದ ಗರುಡನು). **ತ್ರಿಜಗದಿ** = ಸ್ವರ್ಗ–ಮರ್ತ್ಯ––ಪಾತಾಳ ಎಂಬ ಮೂರುಲೋಕಗಳಲಿ. **ಸಾಟಿಯಿಲ್ಲದ** = ಸರಿಸಮಾನರಿಲ್ಲದ

**ಅವಸರಕೆ** = ಭಕ್ತರ ಆಪತ್ತಿನ ಸಮಯಕ್ಕೆ. **ಒದಗುವ** = ಬಂದು ಸಂರಕ್ಷಿಸುವ ದೀನಜನಬಂಧು. **ತರಳತನದಲಿ** = ಬಾಲ್ಯದಲ್ಲಿ **ಪರಮಪುರುಷನ** = ಸರ್ವೋತ್ತಮ. **ಸರಿಯಧಿಕರಿಲ್ಲದ** = ಸಮರೂ ಅಧಿಕರೂ ಇಲ್ಲದ (ಸಮಾಭ್ಯಧಿಕಶೂನ್ಯನು). **ಸುರೇಶನ** = ದೇವತಾ ಸಾರ್ವಭೌಮನ.



## ೬೩೪

## (ಅಂಕಿತ–ಪ್ರಸನ್ನ)

**ರಾಗ–ಕಾಪಿ** **ಆದಿತಾಳ**

ಎಂಥಾ ಪುಣ್ಯ ಎಂಥಾ ಭಾಗ್ಯ ॥ ॥ಪ॥

ಕಂತುಜನಕ ಶ್ರೀಕಾಂತನ ದರುಶನ ॥ ॥ಅ॥

ಜಗಜಗಿಸುವ ದಿವ್ಯಾಭರಣಂಗಳ
ಸೊಗಸಲಿ ಧರಿಸುತ ನಗುವನ ದರುಶನ ॥ ॥೧॥

ಹೇರುಫಲಗಳನು ಸೂರೆಯು ಮಾಡುವ
ಚಾರುವದನ ನಮ್ಮ ಶೌರಿಯ ದರುಶನ ॥ ॥೨॥

ದೇಶತಿರುಗಿ ಆಯಾಸವೇತಕೆ
ಶ್ರೀಶ **ಪ್ರಸನ್ನ** ಶ್ರೀಕೃಷ್ಣನ ದರುಶನ ॥ ॥೩॥

**ಅರ್ಥವಿವರಣೆ : –**

ಶ್ರೀಮದ್ವ್ಯಾಸರಾಜ ಮಠಾಧೀಶರಾಗಿದ್ದ ಶ್ರೀವಿದ್ಯಾಪ್ರಸನ್ನತೀರ್ಥ ಶ್ರೀಪಾದಂಗಳವರು **ಪ್ರಸನ್ನ**–ಎಂಬ ಅಂಕಿತನಾಮದಿಂದ ರಚಿಸಿರುವ ಸುಂದರ ಕೀರ್ತನಸಾಹಿತ್ಯವಿದು.

**ಕಂತುಜನಕ** = ಮನ್ಮಥನ ತಂದೆ. **ಹೇರು ಫಲಗಳನು** = ಸಮೃದ್ಧಿಯಾದ ಪುಣ್ಯಫಲಗಳನ್ನು. **ಸೂರೆ ಮಾಡುವ** = ಇಟ್ಟಾಡುವ (ಉದಾರವಾಗಿ ನೀಡುವ). **ಚಾರುವದನ** = ಸುಂದರ ಮುಖಾರವಿಂದ

ವುಳ್ಳ. **ಶೌರಿ** = ಶ್ರೀಕೃಷ್ಣನ. **ಆಯಾಸವೇಕೆ** = ದೇಶದೇಶಸುತ್ತಿ ಆಯಾಸಪಡಲೇಕೆ ? **ಶ್ರೀಶ** = ಲಕ್ಷ್ಮೀಪತಿಯಾದ (ಲಕ್ಷ್ಮಿಗೂ ನಿಯಾಮಕನಾದ). **ಪ್ರಸನ್ನ** = ಪರಮಾನುಗ್ರಹ ಮಾಡುವ ಶ್ರೀಹರಿ.



**೭೩೫**

**(ಅಂಕಿತ–ಪ್ರಸನ್ನ)**

**ರಾಗಮಾಲಿಕೆ** **ಆದಿತಾಳ**

**ರಾಗ–ಜಂಜೂಟಿ**

ಕುಣಿ ಕುಣಿಯೆಲೋ ಬಾಲಗೋಪಾಲ ॥ ॥ಪ॥

ಗೋಪಾಲಾ ನೀರದನೀಲ ॥ ॥ಅ॥

ಯಮುನಾತೀರದಿ ಹಿಮಕಿರಣನು ತಾ
ಮಮತೆಯ ತೋರಲು ಬೆಳಗುತಿಹ
ಘಮಘಮಿಸುವ ಈ ಸುಮಗಳು ಸೂಸಿರೆ
ಪ್ರಮದೆಯರೆಲ್ಲರ ಪ್ರೇಮಾಂಗಣದಿ ॥ ॥೧॥

**ರೀತಿಗೌಳ**

ಗಂಧವ ಮಾರುತ ಬೀರುತಲಿಹನು
ಇಂದಿರೆ ಕೊಳಲಿನ ರೂಪದಲಿ
ಚೆಂದದಿ ನಾದವ ತುಂಬಲು ಪರಮಾ–
ನಂದವ್ಪೂ ಮಾನಸಮಂದಿರದಲಿ ನೀ ॥ ॥೨॥

ಪುನ್ನಾಗವರಾಳಿ–

ಕಾಯುವು ರೋಮಾಂಚಿತವಾಯ್ತೋ
ಮಾಯವಾದವೋ ಮೋಹಗಳು
ತಾಯಿಮಳಲು ಸೇರಿದ ಶಿಶುವಂದದಿ
ಹಾಯುವೆನಿಸಿತೋ ಜೀವನಯಾತ್ರೆಯು ॥

ನಾಟ್ಯವಾಡೋ ನೀ ನಾಟ್ಯವಾಡೋ
ಹೊಸ ನಾಟ್ಯವಾಡೋ ಹಸನಾದಿ ಮನದಿ

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಬಿಡಿಸೋ
ಸ್ವಾಮಿ ನಿನ್ನ ಪಾದಯುಗಳವೇ–ಕ್ಷೇಮವೆನಿಸೋ ॥
ಸಾರಾಸಾರ ವಿವೇಕದಿ ಮೋಕ್ಷದ ಕೋರಿಕೆ ಪುಟ್ಟಿನೋ
ನಾರಾಯಣ ನಿನ್ನ ಕರುಣವು ಭವಪಾರವ ತೋರುವುದೋ
ಸಾರದ ಕರುಣಕೆ ಕಾರಣ ಬಿಂಬದ ಮೂರುತಿ ವರುಶವೂ ॥

ಭಾರತಿರಮಣನ ಮಂಗಳಶಾಸ್ತ್ರವಿಚಾರವಿದಕೆ ಮೂಲ
ಭಕುತ ಜನ ಪ್ರಸನ್ನ ಲಕುಮಿ ರಮಣ ಇನ್ನು–ತಕಿಟ ತಕಿಟ ಎಂದು ॥ ॥೩॥



**ಅರ್ಥವಿವರಣೆ :–**

ಪ್ರಸಕ್ತ ಕೀರ್ತನಸಾಹಿತ್ಯದಲ್ಲಿ ಶ್ರೀವಿದ್ಯಾಪ್ರಸನ್ನತೀರ್ಥರು ಶ್ರೀಕೃಷ್ಣನ ರಾಸಕ್ರೀಡೆ ಮತ್ತು ನಾಟ್ಯಭಂಗಿಯ ವೈಭವವನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಭಕ್ತಿಭಾವದಿಂದ ತುಂಬಿ ತುಳುಕುತ್ತಿರುವ ಈ ಕೀರ್ತನೆ ಪಾಡಲೂ ಚೆನ್ನ, ಕೇಳಲು ಇನ್ನು ಚೆನ್ನ

ನೀರದನೀಲ = ನೀಲಮೇಘಶ್ಯಾಮನು. (ನೀರದ–ಮೇಘ. ನೀಲ — ನೀಲವರ್ಣದ ಮೇಘದಂತೆ ದೇಹಕಾಂತಿವುಳ್ಳವನು). ಹಿಮ

**ಕಿರಣನು** = ತಂಪಾದ ಕಿರಣಗಳನ್ನು ಹೊರಚೆಲ್ಲುವ ಚಂದ್ರ. **ಬೆಳಗು ತಿಹ** – ಶ್ರೀಕೃಷ್ಣನು ಗೋಪಿಕಾಸ್ತ್ರೀಯರೊಡನೆ ಕೂಡಿ ರಾಸಕ್ರೀಡೆ ಯಾಡುತ್ತಿರುವಾಗ ಎಲ್ಲೆಲ್ಲೂ ಹಿಟ್ಟು ಚೆಲ್ಲಿದಂತೆ ಚಂದ್ರನ ತಂಪಾದ ಬೆಳ ದಿಂಗಳು. **ಈ ಸುಮಂಗಳಂ** – ಈ ಮನೋಹರವಾದ ಬೆಳದಿಂಗಳ ಕಾಂತಿ ಜುಲ್ಲಿ ಪರಿಮಳಯುಕ್ತವಾದ ಪುಷ್ಪಗಳು ತಮ್ಮ ಸುವಾಸನೆಯನ್ನು ಪ್ರಸರಿ ಸುತ್ತಿರುವ ಸನ್ನಿವೇಶ. **ಪ್ರಮದೆಯರೆಲ್ಲರ** = ಶ್ರೀಕೃಷ್ಣನ ಪ್ರೇಯಸಿಯ ರಾದ ಗೋಪಿಕಾಸ್ತ್ರೀಯರ. **ಪ್ರೇಮಾಂಗಣದಲಿ** – ಪ್ರೀತಿ ಎಂಬ ವೇದಿಕೆಯ ಮೇಲೆ ಶ್ರೀಕೃಷ್ಣನ ಲಾಸ್ಯವೈಭವ, **ಮಾರುತ** = ಗಂಧ ವಾಹನವಾದ ವಾಯುದೇವರು ಸುಮಗಳ ಸುಗಂಧವನ್ನು ಎಲ್ಲೆಲ್ಲಿಯೂ ಬೀರುತ್ತಲಿರುವನು. **ಇಂದಿರೆ ಕೊರಳಿನ** = ಸಾಕ್ಷಾತ್ ಲಕ್ಷ್ಮೀದೇವಿಯೇ ವೇಣುರೂಪದಲ್ಲಿ ಶ್ರೀಕೃಷ್ಣನ ಕರಗತಳಾಗಿದ್ದಾಳೆ. **ಮಾನಸ ಮಂದಿರ ದಲಿ** = ಶ್ರೀಕೃಷ್ಣನ ಮುರಳೀನಾದದಿಂದ ವನಪ್ರಾಂತಾರವೆಲ್ಲ ತುಂಬಿ, ಆ ವೇಣುನಾದದಲಿ ತರಂಗಗಳು ಮನಸ್ಸಿನ ಮಂದಿರದಲ್ಲಿ ಆನಂದೋದ್ರೇಕ ವನ್ನುಂಟುಮಾಡುತ್ತವೆ. **ಕಾಯವು** = ವೇಣುನಾದದಿಂದ ಮತ್ತು ಶ್ರೀಕೃಷ್ಣನ ಲಾಸ್ಯದಿಂದ ದೇಹವು ರೋಮಾಂಚಿತವಾಗಿ ಪುಲಕಾಂಕಿತ ವಾಯಿತು. **ಮೋಹಗಳು** — ನಾನು–ನನ್ನದು ಎಂಬ ಮೋಹಭಾವವು ದೂರವಾಯ್ತು. **ತಾಯಿಮಳಲು** = ತಾಯಿ ಮಡಿಲನ್ನು ಸೇರಿದ ಶಿಶುವಿ ನಂತೆ. **ಹಾಯುವೆನಿಸಿತೋ** - ಜೀವನವು ಶಾಂತಿ ಸಂತೋಷಗಳಿಂದ ತುಂಬಿತು. **ಹಸನಾದ ಮನದಿ** = ಅನುಗ್ರಹ ಪೂರ್ವಕವಾದ ಮನಸ್ಸಿ ನಿಂದ. **ಕಾಮನು . .. ..** = ಕಾಮ ಕ್ರೋಧಾದಿ ಅರಿಷಡ್ವರ್ಗ ಗಳನ್ನು ದೂರವಿರಿಸೋ. **ಸ್ವಾಮಿ** = ಹೇ ಜಗತ್ಪ್ರಭುವೇ ಶ್ರೀಕೃಷ್ಣ ! **ಪಾದಯುಗಳವೇ** — ಚರಣದ್ವಂದ್ವಗಳೇ. **ಕ್ಷೇಮ** = ಅಂತಹ ಪರಿ ಪೂರ್ಣನಾದ ಶ್ರೀಕೃಷ್ಣನ ಪಾದಾಶ್ರಯವು ಜೀವರಿಗೆ ಕ್ಷೇಮಪ್ರದವು. **ಸಾರಾಸಾರ ವಿವೇಕದಿ** = ಇದುಸಾರ–ಇದುಅಸಾರ (ಗ್ರಾಹ್ಯ–ತ್ಯಾಜ್ಯ) ಎಂಬ ವಿವೇಚನಾ ಶಕ್ತಿಯಿಂದ. **ಮೋಕ್ಷದ ಕೋರಿಕೆ** = ನಿತ್ಯಾನಂದ ರೂಪವಾದ ಮುಕ್ತಿಯ ಅಪೇಕ್ಷೆಯನ್ನು ನನ್ನಲ್ಲಿ ಹುಟ್ಟುವಂತೆ ಮಾಡು. **ಭವಪಾರವ** = ಸಂಸಾರಸಮುದ್ರ ದಡ[illegible]ರ. ಶ್ರೀಹರಿಯ ಕರುಣದಿಂದ

ಭವಸಾಗರದಿಂದ ಸಜ್ಜನರು ದಾಟುವರು **ಸಾರದಕರುಣ** = ಶ್ರೀಹರಿಯ ಪರಮಾನುಗ್ರಹರೂಪವಾದ ಕಾರುಣ್ಯವಿಶೇಷವು ಬಿಂಬ ದರ್ಶನಕ್ಕೆ ಮುಖ್ಯ ಕಾರಣವು (ಅವನೇ ತಾನಾಗಿ ಒಲಿದರೆ ಜೀವನಿಗೆ ಕರ್ಮವಿಮೋಚನ ದ್ವಾರಾ ನಿತ್ಯಾನಂದರೂಪವಾದ ಮೋಕ್ಷಪ್ರಾಪ್ತಿ). **ಭಾರತಿರಮಣನ** = ಮುಖ್ಯ ಪ್ರಾಣದೇವರ ತೃತೀಯಾವತಾರ ಸಂಭೂತವಾದ ಗುರುಮಧ್ವರ ಶಾಸ್ತ್ರಗಳು ಮಂಗಳಶಾಸ್ತ್ರಗಳು, ಮೋಕ್ಷಪ್ರದಶಾಸ್ತ್ರಗಳು (ಆನಂದತೀರ್ಥರು–ಎಂಬ ಅಭಿಧಾನದ ಅರ್ಥ). **ಮೂಲ** = ಬಿಂಬದರ್ಶನಕ್ಕೆ ಶ್ರೀಮನ್ಮಧ್ವ ಸಿದ್ಧಾಂತರೂಪವಾದ ಶಾಸ್ತ್ರಗಳ ಅಧ್ಯಯನ (ವಿಚಾರವಿಗಕೆ) ವೇ ಮುಖ್ಯ ಕಾರಣವು ಶಾಸ್ತ್ರಾಧ್ಯಯನದಿಂದ ಶ್ರೀಹರಿಯ ಅನುಗ್ರಹಪ್ರಾಪ್ತಿ, ತನ್ಮೂಲಕ ಮೋಕ್ಷಪ್ರಾಪ್ತಿ. **ಭಕುತಜನ ಪ್ರಸನ್ನ** = ನಿಜ ಭಕ್ತರಿಗೆ ಸದಾ ಪ್ರಸನ್ನನಾಗಿರುವ ಭಕ್ತವತ್ಸಲನಾದ ಶ್ರೀಹರಿ

❋❋❋

## ೬೩೬

## (ಅಂಕಿತ–ಪ್ರಸನ್ನ)

**ರಾಗ–ಜಂಜೂಟಿ** **ಆದಿತಾಳ**

ಏನು ವಿನೋದವಿದು ನಮ್ಮ
ಶ್ರೀನಿಲಯನ ಗುಣ ಗಾನ ಮಾಡುವುದು ॥ ॥ಪ॥

ಮಾನಸಮಂದಿರದಲಿ ಶ್ರೀಕೃಷ್ಣನ
ಕಾಣಲು ಬಯಸುವ ಜನಕೆ ವಿಧಾನ ॥ ॥ಅ॥

ಶಾಸ್ತ್ರವಿಚಾರ ಶ್ರೋತ್ರವಿಹಾರ
ಶ್ರೋತೃಜನಕೆ ಇದು ಪರಮಾಧಾರ ॥ ॥೧॥

ಶ್ರೀಶನ ನೋಟ ಭೂಸುರಕೂಟ
ದಾಸಜನಕೆ ಇದು ಭೂವೈಕುಂಠ ॥ ॥೨॥

ವೇದ ಸುಘೋಷ ವಾದ್ಯದ ಹರ್ಷ
ಸಾಧುಜನಕೆ ಇದು ಬಲು ಸಂತೋಷ ॥ ॥೩॥

ಸಿಕ್ಕಿತು ಕಾಂತಿ ಹೊಕ್ಕಿತು ಶಾಂತಿ
ಭಕ್ತ **ಪ್ರಸನ್ನನು** ಬಿಡಿಸಿದ ಭ್ರಾಂತಿ ॥ ॥೪॥

**ಅರ್ಥವಿವರಣೆ :–**

**ವಿನೋದ ವಿದು** = ಮನಸ್ಸಿಗೆ ಆನಂದಪ್ರದವಾದ ಸನ್ನಿವೇಶ. **ಶ್ರೀನಿಲಯನ** = ಲಕ್ಷ್ಮೀದೇವಿಯನ್ನು ವಕ್ಷಸ್ಥಳದಲ್ಲಿ ಧರಿಸಿರುವ ಶ್ರೀಧರನು. **ಮಾನಸಮಂದಿರದಲಿ** = ಮನಸ್ಸೆಂಬ ಗೃಹದಲ್ಲಿ. **ಕಾಣಲು ಬಯಸುವ** = ಹೃನ್ಮಂದಿರದಲ್ಲಿ ಬಿಂಬಮೂರುತಿಯ ದರ್ಶನ ವನ್ನು ಮಾಡಬೇಕೆಂಬ ಅಪೇಕ್ಷೆಯುಳ್ಳ ಜನರು. **ಶಾಸ್ತ್ರವಿಚಾರ** = ಸಚ್ಛಾಸ್ತ್ರಗಳ ಅಧ್ಯಯನ ಅಧ್ಯಾಪನ ತತ್ತ್ವಚರ್ಚೆ ಇತ್ಯಾದಿ ಕ್ರಿಯಾದಿಗಳು **ಶ್ರೋತ್ರವಿಹಾರ** = ಕರ್ಣಾನಂದಕರವಾದ ಸದ್ವಿಚಾರಗಳು. **ಪರಮಾಧಾರ** = ಸಾಧಕರಿಗೆ ಇದು ಅಂತ್ಯದಗುರಿ. **ಶ್ರೀಶನ ನೋಟ** = ಶ್ರೀಲಕ್ಷ್ಮೀಪತಿಯ ಕೃಪಾಕಟಾಕ್ಷವೀಕ್ಷಣ. **ಭೂಸುರಕೂಟ** = ಜ್ಞಾನಿಗಳ ಸಮೂಹ **ಸಿಕ್ಕಿತುಕಾಂತಿ** = ಪ್ರಕಾಶಮಾನವಾದ ಶ್ರೀಹರಿಯ ದರ್ಶನ **ಹೊಕ್ಕಿತು ಶಾಂತಿ** =ಮನಸ್ಸಿನ ಕ್ಲೇಶಪರಿಹಾರವಾಗಿ ನೆಮ್ಮದಿ ದೊರೆಯಿತು. **ಭ್ರಾಂತಿ** =ಮಮತಾದಿ ಸಂಸಾರದ ಮೋಹವನ್ನು ಪರಿಹರಿಸಿದ (ಮೋಹಮಮತಾ ದೂರನಾದ).



## ೬೩೭

## (ಶ್ಯಾಮಸುಂದರವಿಠ್ಠಲಾಂಕಿತ)

ರಾಗ–ಭೈರವಿ ತ್ರಿಪುಟತಾಳ

ಎಂದು ಕಾಂಬೆನು ನಂದಗೋಪನ ಕಂದ ಗೋವಿಂದನ
ಮಂದರಾಚಲಧರ ಯದುಕುಲಚಂದ್ರ ಗುಣಗಣಸಾಂದ್ರನ ॥ ॥ಪ॥

ವಿಜಯಸೂತನ ವಿಶ್ವಪಾಲನ ಭುಜಗವರ ಪರ್ಯಂಕನ
ರಜನಿಚರರಳಿದಿನಜನ ಜನಕನ ತ್ರಿಜಗಪತಿ
ದ್ವಿಜಗಮನ ॥ ॥೧॥

ಪಾಲುದಧಿ ನವನೀತಚೋರನ ಬಾಲಕೃಷ್ಣ ಗೋಪಾಲನ
ವೈಲ ಬೆರಳಲಿ ತಾಳಿ ಗೋಕುಲ ಪಾಲಿಸಿದ ಪರಮಾತ್ಮನಾ ॥ ॥೨॥

ಭಾಮೆ ರುಕ್ಮಿಣಿರಮಣ ರಂಗನ ಸಾಮಗಾನವಿಲೋಲನ
ಪ್ರೇಮಪಾನಂದಮುನಿಕರಾರ್ಚಿತ ಶ್ಯಾಮಸುಂದರ
ವಿಠ್ಠಲನಾ ॥ ॥೩॥

❋❋

ಅರ್ಥವಿವರಣೆ:–

**ನಂದಗೋಪನ ಕಂದ** = ನಂದಗೋಪನ ಸಾಕು ಪುತ್ರನಾದ ಶ್ರೀಕೃಷ್ಣ. **ಮಂದರಾಚಲಧರ** = ಮಂದರ ಪರ್ವತವನ್ನು ತನ್ನ ಬೆನ್ನಿನ

ಡುಬ್ಬದ ಮೇಲೆ ಹೊತ್ತ ಕೂರ್ಮಾವತಾರಿ ಶ್ರೀ ಹರಿ. **ವಿಜಯಸೂತನ** = ಪಾರ್ಥ ಸಾರಥಿಯಾದ ಶ್ರೀಕೃಷ್ಣ (ವಿಜಯ–ಅರ್ಜುನನ ನಾಮಾಂತರ) **ಭುಜಗವರಪರ್ಯಂಕನ** = ಸರ್ಪಶ್ರೇಷ್ಠರಾದ ಶೇಷದೇವರ ಮೇಲೆ ಶಯನ ಮಾಡಿರುವ ಶ್ರೀಮನ್ನಾರಾಯಣ. **ರಜನಿಚರಳಿದನ** = ದೈತ್ಯರ ಸಂಹಾರಿಯಾದ (ರಜನಿಚರರು–ನಿಶಾಚರರಾದ ದೈತ್ಯರು) **ದ್ವಿಜ ಗಮನನ** = ಗರುಡವಾಹನನಾದ ಶ್ರೀಕೃಷ್ಣ (ದ್ವಿಜ–ಪಕ್ಷಿ ರಾಜನಾದ ಗರುಡ) **ಶೈಲ ಬೆರಳಲಿ** = ಗೋವರ್ಧನ ಪರ್ವತವನ್ನು ತನ್ನ ಕೈಯ್ಯ ಕಿರುಬೆರಳಿನಿಂದ ಮೇಲೆತ್ತಿ ಸಮಸ್ತ ಗೋಪಾಲಕರನ್ನೂ ಮತ್ತು ಗೋವು ಗಳನ್ನು ಸಂರಕ್ಷಿಸಿದ ಗೋವರ್ಧನೋದ್ಧಾರಿ ಗೋವಿಂದನು. **ಭಾಮೆ** = ಸತ್ಯಭಾಮೆ **ಶ್ರೀಮದಾನಂದಮುನಿಕರಾರ್ಚಿತ** = ಗುರುಮಧ್ವ ರಿಂದ ಅರ್ಚಿತನಾದ ಕಡಲುದಡದ ಉಡುಪಿಯ ಶ್ರೀಕೃಷ್ಣ.

## ೬೩೮

## (ಶ್ರೀದವಿಠ್ಠಲಾಂಕಿತ)

**ರಾಗ–ಮೋಹನ** **ಆದಿತಾಳ**

ರಥವೋಗದಾ ಮುನ್ನ ಗೋಕುಲಕೆ ಮನ್ಮನೋ-
ರಥ ಹೋಗಿರುವುದೇನೆಂಬೇ ॥ ॥ಪ॥

ಅತಿ ಕೌತುಕವದಾಯ್ತು ಖರಾಯನೊಲಿದು ಯದು
ಪತಿಯು ಕರೆತರುವುದುದೆಂದೆನಗೆ ಪೇಳಿರಲಿಕ್ಕೆ ॥ ॥ಅ॥

ಪತಿತರ್ಗೆ ನಾಮ ಸುಲಭವಲಾ ಎನಗೆ ಶ್ರೀ-
ಪತಿ ಸೇವೆ ತಾನಾಗಿ ದೊರೆತಿತು
ಶತಸಹಸ್ರಾನಂತ ಜನುಮಗಳ ಸು
ಕೃತಕೆ ಫಲವಾಯಿತೆಂದರಿದೆ ॥

ಗತಕಿಲ್ಬಿಷನಾದೆನೆಂಬುವಕಿದೇ ಸಾಕ್ಷಿ
ಪಥದೊಳಗೆ ತಾಪ ಮುಂದುವರಿದೂ
ವಿಶ್ರಮಿಸ್ವಲಿ ಪುನಾ ಶಕುನಂಗಳಾಗುತಿವೆ
ಪ್ರತಿ ಇಲ್ಲಿಯೇ ಶುಭೋದಯಕೆ-ಸೂರ್ಯೋದಯಕೆ ॥ ॥೧॥

ಶ್ರೀ ಪದ್ಮಜಾದಿಗಳು ಸೇವಿಸುವ ಚರಣ ಯಮು-
ನಾಪುಳಿನದಲಿ ಮೆರೆವ ಚರಣಾ
ಗೋಪೀಜನರ ಪೀನಕುಚಕುಂಕುಮಾಂಕಿತ ಚರಣ
ತಾಪತ್ರಯಾಪಹ ಚರಣಾ ॥

ಗೋಪುರದ ಓಲತ್ಕೃಣಾಂಕುರುಹ ತೋರುವ ಚರಣ
ಆಪತ್ಬಾಂಧವನ ಚರಣಾ
ನಾ ಪೇಳಲೇನು ಭಕ್ತರ ವತ್ಸಲಾನು ಕರು-
ಣಾ ಪೂರ್ಣ ಎನಗಭಯ ಕೊಡುವಾ-ಪಿಡಿವಾ ॥ ॥೨॥

ನೋಡುವೆನು ಶ್ರೀವತ್ಸ ಸುಸುಂದರನ ಕೊಂ-
ಡಾಡುವೆನು ಕವಿಗೇಯನೆಂದೂ
ಮಾಡುವೆನು ಸಾಷ್ಟಾಂಗದಂಡಪ್ರಣಾಮ ಕೊಂ-
ಡಾಡುವೆನು ಕೈ ಮುಗಿದು ಇಂದೂ ॥

ಬೇಡುವೆನು ಭುವನೈಕಪಿತನೆಂದಪ್ಪಿ ಕೊಂ-
ಡಾಡುವೆನು ಪಾಪ ಪೋಕೆಂದೂ
ಈಡಿಲ್ಲದಿಂದಿನಾ ಮನಕೆನ್ನ ಬಯಕೆ ಕೈ-
ಗೂಡುವುದು ನಿನ್ನಿಂದೇವ-ದೈವ ಸಹಾಯ ॥ ॥೩॥

ಇರುವನೋ ಏಕಾಂತದೊಳಗಿರುವ ಕೇಳದಿರು
ಬರುವನೋ ಬಂದವನ ಕಂಡೂ
ಕರೆವನೋ ಕಿರಿಯನುಯ್ಯ ಬಾರೆಂದು ಬಿಗಿದಪ್ಪಿ
ಬೆರೆವನೋ ಬೆರಸಿಯುದನುಂಡೂ ॥

ಪರೆವನೋ ಒಡಲ ಧರ್ಮವನೆಲ್ಲ
ವರಗಿಸೀ ಜರಿಯುವನೋ
ಜಗದೀಶ ಪಗೆಯುವನೆನುತ ಬಗೆಯೂ ॥ ॥೪॥

ಗೋಧೂಳಿಲಗ್ನಕೆ ಗೋಕುಲಕೆ ಬಂದು ಬೆರ-
ಗಾಗಿ ಹೆಜ್ಜೆಗಳ ನೋಡಿ
ಭೂದೇವಿಗಾಭರಣವೆನುತ ತೇರಿಳಿದು ಶ್ರೀ-
ಪಾದರಜದೊಳಗೆ ಪೊರಳಾಡೀ ॥

ಗೋದೋಪವನದೊಳಿದ್ದ ರಾಮಕೃಷ್ಣರ ಕಂಡು
ನಾ ಧನ್ಯ ಧನ್ಯನೆಂದಾಡೀ
ಶ್ರೀದವಿಠ್ಠಲ ಎರಗುವನಿತರೊಳು ಬಿಗಿದಪ್ಪಿ
ಸಾದರಿಸಿದನು ಇದೆ ಸದನದಲಿ-ಸ್ವಪ್ನದಲಿ ॥ ॥೫॥



**ಅರ್ಥವಿವರಣೆ :—**

ಬಿಲ್ಲು ಹಬ್ಬದ ನೆಪದಲ್ಲಿ ಕ್ರೂರನಾದ ಕಂಸಾಸುರನು ಶ್ರೀ ರಾಮಕೃಷ್ಣರನ್ನು ಮಥುರಾ ಪಟ್ಟಣಕ್ಕೆ ಕರೆದುಕೊಂಡು ಬರುವಂತೆ, ಅಕ್ರೂರನನ್ನು ಗೋಕುಲಕ್ಕೆ ಕಳುಹಿಸಿದ್ದಾನೆ !

**ಅಕ್ರೂರನು** = ಯದುವಂಶದ ಶ್ವಫಲ್ಕನೆಂಬುವನ ಮಗನು. ಈತನ ತಾಯಿ ಗಾಂದಿನಿ ಕಂಸನ ಅಷ್ಟಮಂತ್ರಿಗಳಲ್ಲಿ ಒಬ್ಬನು. ಆಹುಕನ ಪುತ್ರಿಯಾದ ಸುತನುವೆಂಬಾಕೆಯನ್ನು ಲಗ್ನವಾಗಿದ್ದನು. ಶ್ರೀಕೃಷ್ಣನ **ಭಕ್ತನು.**

ರಥವನ್ನೇರಿ ಗೋಕುಲಕ್ಕೆ ಆಗಮಿಸಿದ್ದಾನೆ ಅಕ್ರೂರ. ರಥ **ಗೋಕುಲ**ವನ್ನು ಸೇರುವುದಕ್ಕೆ ಮುಂಚೆಯೇ ಅಕ್ರೂರನ ಮನಸ್ಸು ಶ್ರೀರಾಮಕೃಷ್ಣರಲ್ಲಿ ಹೋಗಿದೆ. **ಕೌತುಕವಾಯ್ತು** ಬಹಳ ಸೋಜಿಗವಾಗಿದೆ. **ಖಳರಾಯನು ಒಲಿದು** = ಕ್ರೂರನಾದ ಕಂಸಾಸುರನು ನನಗೇ **ಈ** ಕೆಲಸವನ್ನು ವಹಿಸಿರುವುದು ಬಲು ಸೋಜಿಗದ ಸಂಗತಿ ಎಂದು ಅಕ್ರೂರನ ಭಾವನೆ. ಇದು ನನ್ನ ಪಾಲಿನ ಪುಣ್ಯವೆಂದು ಅಕ್ರೂರ ತಿಳಿದಿದ್ದಾನೆ. **ಪತಿತರ್ಗೆ** = ಪಾಪಿಷ್ಠರಾದವರಿಗೆ, **ನಾಮದುರ್ಲಭವೆಲಾ** = ಶ್ರೀ ಹರಿಯ ನಾಮಸ್ಮರಣೆ ದುರ್ಲಭವಲ್ಲವೇ ? **ಶತಸಹಸ್ರಾನಂತ** = ಶ್ರೀಕೃಷ್ಣನ ಸೇವೆ ನನಗೆ ಅನಾಯಾಸವಾಗಿ ಲಭ್ಯವಾಗಿದೆ. ಇದು ನನ್ನ ಅನೇಕ ಜನ್ಮಗಳ **ಪುಣ್ಯ** ಫಲವೆಂದುಕೊಳ್ಳುತ್ತಾನೆ, ಅಕ್ರೂರ. **ಗತಕಿಲ್ಬಿಷನಾದೆ** = ನಾನು ಪಾಪದೂರನಾದೆ. (ಕಿಲ್ಬಿಷ = ದೋಷ-ಪಾಪ). **ಇದೇ ಸಾಕ್ಷಿ** = ಕಂಸನು ನನಗೆ ಈ ಕಾರ್ಯವನ್ನು ವಹಿಸಿರುವುದೇ ಇದಕ್ಕೆ ಸಾಕ್ಷಿ. **ಮಹಾಶಕುನಂಗಳಾಗುತಿವೆ** = ದಾರಿಯುದ್ದಕ್ಕೂ ಅಕ್ರೂರನು ಅನೇಕ ಶುಭಶಕುನಗಳನ್ನು ನೋಡುತ್ತಿದ್ದಾನೆ. ಅವೆಲ್ಲವೂ ಶುಭ ಸೂಚಕಗಳು. **ಶುಭೋದಯಕೆ** = ಇಂದಿನ ಸೂರ್ಯೋದಯವು ಶುಭಕೆ ನಾಂದಿಯಾಗಿದೆ,

**ಶ್ರೀ ಪದ್ಮಜಾದಿಗಳು** = ಲಕ್ಷ್ಮೀದೇವಿ, ಬ್ರಹ್ಮದೇವರು ಇತ್ಯಾದಿಗಳು (ಶ್ರೀಲಕ್ಷ್ಮೀದೇವಿ. ಪದ್ಮಜ= ಕಮಲೋದ್ಭವರಾದ ಬ್ರಹ್ಮದೇವರು).

**ಯಮುನಾಪುಳಿನದಲಿ** = ಯಮುನಾನದಿಯ ತೀರದ ಉದ್ದಕ್ಕೂ ಹರಡಿರುವ ಮರಳಿನಲ್ಲಿನ. ಶ್ರೀಕೃಷ್ಣನ ಚರಣಗಳ ಚಿಹ್ನೆಗಳು ಸ್ಪಷ್ಟವಾಗಿ ಮೂಡಿವೆ. **ಪೀನಕುಚಕುಂಕುಮಾಂಕಿತಚರಣ** = ಗೋಪಿಕಾ ಸ್ತ್ರೀಯರ ಕುಂಕುಮದಿಂದ ಅಲಂಕೃತವಾದ ಶ್ರೀಕೃಷ್ಣನ ಚರಣದ್ವಯಗಳು. **ತಾಪತ್ರಯಹಾವಳಿವ** = ಆಧ್ಯಾತ್ಮಿಕ-ಆಧಿದೈವಿಕ ಆಧಿಭೌತಿಕ ಎಂಬ ತಾಪತ್ರಯಗಳನ್ನು ಪರಿಹರಿಸುವ ಪವಿತ್ರಚರಣ. ಅಕ್ರೂರನು ಯಮುನಾತೀರದ ಮರಳಿನಲ್ಲಿ ಶ್ರೀಕೃಷ್ಣನ ಚರಣಚಿಹ್ನೆಗಳನ್ನು ಸಂದರ್ಶಿಸಿದನು. ಭಕ್ತ್ಯತಿರೇಕದಿಂದ ಆ ಮರಳಿನಲ್ಲಿ ಹೊರಳಾಡಿದ, ಆ ಪಾದಧೂಳಿಯನ್ನು ತಲೆಯ ಮೇಲೆ ಎರಚಿಕೊಂಡ. ಶರೀರಕ್ಕೆಲ್ಲಾ ಲೇಪಿಸಿಕೊಂಡ. **ನೀರದಶ್ಯಾಮಸುಂದರನ** = ನೀಲಮೇಘಶ್ಯಾಮನಾದ ಆ ಮಂಗಳ ಮೂರ್ತಿಯನ್ನು ಮನಸಾ ಸ್ಮರಿಸಿದನು. (ನೀರದ-ನೀರನ್ನು ಕೊಡುವ ಮೇಘಗಳು, ಶ್ಯಾಮ-ನೀಲವರ್ಣ). **ಕವೀಗೇಯನೆಂದೂ** - ಜ್ಞಾನಿಗಳಿಂದ ಗೇಗೀಯಮಾನ ನಾದವನು. (ಕವಿ-ಜ್ಞಾನಿಗಳು) **ಭುವನೈಕದಾತನೆಂದು** = ಇಡೀ ಜಗತ್ತಿನಲ್ಲಿ ಭಕ್ತರ ಕಾಮಿತಾರ್ಥಗಳನ್ನು ಸಲ್ಲಿಸುವ ಏಕೈಕ ಪುರುಷನೆಂದರೆ ಶ್ರೀಕೃಷ್ಣನು. **ದಾಸ್ಯಬೇಕೆಂದೂ** = ಶ್ರೀಹರಿಯ ದಾಸತ್ವವನ್ನು (ಕೈಂಕರ್ಯ) ಬೇಡುವೆನು. **ಇರುವನೋ**= ಶ್ರೀಕೃಷ್ಣನು ಈಗ ಎಲ್ಲಿರುತ್ತಾನೋ-ಹೇಗಿರುತ್ತಾನೋ-ಎಂದು ಕಲ್ಪಿಸಿಕೊಳ್ಳುತ್ತಾನೆ ನಾನಾ ಪರಿಯಲ್ಲಿ ಅಕ್ರೂರನು. ಶ್ರೀಕೃಷ್ಣನು ನನ್ನನ್ನು ಕಂಡು ಆದರಿಸುತ್ತಾನೆಯೋ ಅಥವಾ ತಿರಸ್ಕರಿಸುತ್ತಾನೋ, ಚಿಕ್ಕಪ್ಪನೆಂದು (ಕಿರಿಯಯ್ಯ) ನನ್ನನ್ನು ಬಿಗಿದಪ್ಪಿ ಸತ್ಕರಿಸುತ್ತಾನಯೋ, ಅಥವಾ ಶತ್ರುಪಕ್ಷದವನೆಂದು (ಹಗೆಯವನೆನುತ) ಜರಿಯುತ್ತಾನೋ ಎಂದು ಗೊಂದಲಕ್ಕೆ ಸಿಕ್ಕಿವೆ ಅಕ್ರೂರನ ಮನಸ್ಸಿನ ತರಂಗಗಳು. **ಗೋದೋಹನದೊಳಿದ್ದ** = ಹಸುವಿನ ಕೆಚ್ಚಲಿನಿಂದ ಹಾಲನ್ನು ಕರೆಯುತ್ತಿದ್ದ ಶ್ರೀರಾಮ-ಕೃಷ್ಣರನ್ನು ಸಂದರ್ಶಿಸಿದ್ದಾನೆ ಸಜ್ಜನನಾದ

ಅಕ್ರೂರ. ನಾ ಧನ್ಯ ಧನ್ಯ = ಭಗವದ್ದರ್ಶನದಿಂದ ಪುಲಕಿತಾಂತಃಕರಣನಾಗಿ, ತಾನು ಪರಮಧನ್ಯನೆಂದು ಆನಂದತುಂದಿಲನಾದ.



**೭೩೯**

**(ಶ್ರೀನಿವಾಸವಿಠ್ಠಲಾಂಕಿತ)**

**ರಾಗ–ಖರಹರಪ್ರಿಯ** **ಆದಿತಾಳ**

ದೂರದಿರೋ ಹರಿಯಾ–ಮುರಾರಿಯಾ ॥ ॥ಪ॥

ದೂರದಿರೋ ಅಘದೂರ ಪರಾತ್ಪರ
ಪಾರಗಾಣದ ಗುಣಸಾಗರ ಶೌರಿಯಾ ॥ ॥ಅ॥

ಶುದ್ಧಾತ್ಮನು ನಮ್ಮ ಸದನಗಳಿಗೆ ಬಂದು
ಕದ್ದು ಬೆಣ್ಣೆಯನೆಲ್ಲ–ಮೆದ್ದು ಪೋದನೆಂದು ॥ ॥೧॥

ಪಾಲವಾರಿಧಿಯಲಿ ಜಲಾಡುತಿರುವ
ಬಾಲಕನಂತೆ–ಹಾಲು ಸವಿದನೆಂದು ॥ ॥೨॥

ದಾಸಜನರ ಮನದಾಶೆ ಪೂರೈಸುವ
ಈಶ–ಶ್ರೀನಿವಾಸವಿಠ್ಠಲರಾಯನ ॥ ದೂರದಿರೋ ॥ ॥೩॥



**ಅರ್ಥವಿವರಣೆ :–**

**ದೂರದಿರೋ** = ಅನಂತಕಲ್ಯಾಣಗುಣಗಣಪರಿಪೂರ್ಣನೂ, ಸಮಸ್ತ ದೋಷವಿದೂರನು ಆದ ಶ್ರೀಹರಿಯನ್ನು ಜಾರ–ಚೋರನೆಂದು ದೂರಬಾರದೆಂದು ಎಚ್ಚರಿಸುತ್ತಾರೆ ದಾಸರಾಯರು. **ಮುರಾರಿಯಾ** = ಮುರಾ–ಎಂಬ ದೈತ್ಯನನ್ನು ಸಂಹರಿಸಿದ ಶ್ರೀಕೃಷ್ಣ. **ಅಘದೂರ** ಸಕಲದೋಷ ವಿದೂರ. **ಪರಾತ್ಪರ** = ಪರಾಶಕ್ತಿಯಾದ ಶ್ರೀಲಕ್ಷ್ಮೀದೇವಿಗಿಂತಲೂ ಅನಂತಕೋಟಿಗುಣಗಳಿಂದ ಅಧಿಕನು. (ಪರಾತ್ + ಪರಃ) **ಪಾರ ಗಾಣದ ಗುಣಸಾಗರ** = ಆವನ ಅನಂತಗುಣಸಮೂಹವನ್ನು ಸಾಕಲ್ಯೇನ ಯಾರು ಅರಿಯಲಾರರು. **ಶುದ್ಧಾತ್ಮನು** = ಅತ್ಯಂತ ಪರಿಶುದ್ಧ ಸ್ವರೂಪನಾದ (ಸಕಲಲೋಕವಿಲಕ್ಷಣನಾದ) ಶ್ರೀಹರಿಯು, **ನಮ್ಮ ಸದನಗಳಿಗೆ ಬಂದು** = ಗೋಪಿಕಾಸ್ತ್ರೀಯರುಗಳ ಮನೆಗಳಿಗೆ ಬಂದು, ಹಾಲು–ಮೊಸರು–ಬೆಣ್ಣೆ ಕದ್ದನೆಂದು ದೂರದಿರಿ. "ಈಶಾವಾಸ್ಯಮಿದಂ ಸರ್ವಂ"– ಎನ್ನುವಂತೆ ಲೋಕದಲ್ಲಿರುವ ಸಮಸ್ತ ವಸ್ತುಗಳೂ ಶ್ರೀಹರಿಗೇ ಸೇರಿದ್ದು. ಆವನಿಗೆ ಸೇರಿದ ವಸ್ತುಗಳನ್ನು ಆವನು ಸ್ವೀಕರಿಸಿದರೆ, ಅದು ಚೌರ್ಯವೆನಿಸುವುದಿಲ್ಲ. ಸ್ವರಮಣನೂ, ಸರ್ವಸಾರಭೋಕ್ತನೂ ಆದ ಸರ್ವೇಶನು ಪ್ರತಿವಸ್ತುವಂತರ್ಗತ ತನ್ನ ಭಗವದ್ರೂಪಗಳಲ್ಲಿಯೇ ತಾನು ರಮಿಸುತ್ತಾನೆ. ಅನ್ಯ ಪದಾರ್ಥಗಳಿಂದ ಅವನಿಗೆ ಆಗಬೇಕಾದ ಪ್ರಯೋಜನವೇನೂ ಇಲ್ಲ. ಸ್ವಪ್ರಯೋಜನರಹಿತನು ಮತ್ತು ನಿತ್ಯತೃಪ್ತನಿಗೆ ಹಾಲು ಮೊಸರು–ಬೆಣ್ಣೆ ಇವುಗಳ ಸೇವನೆಯಿಂದ ತೃಪ್ತಿಯಾಗಬೇಕಾದ ಅಗತ್ಯವೇ ಇಲ್ಲ. **ಪಾಲ ವಾರಿಧಿಯಲಿ** = ಕ್ಷೀರಸಾಗರದಲ್ಲಿ, **ಜಲಾಡುವ** = ವಿಹರಿಸುವ. ಕ್ಷೀರ ಸಮುದ್ರವೇ ಆತನ ನಿಲಯ. ಇನ್ನು ಹಾಲು ಕದ್ದನವನೆಂದರೆ ಉಚಿತವೆ? **ದಾಸಜನರ ಮನದಾಶೆ** = ತನ್ನ ಭಕ್ತರ ಮನೋಭೀಷ್ಟಗಳನ್ನು ಪೂರೈಸುವ ಕಾಮಿತಾರ್ಥಪ್ರದನು ಆ ಶ್ರೀಕೃಷ್ಣ !

೬೪೦

(ಭೀಮೇಶವಿಠ್ಠಲಾಂಕಿತ)

**ರಾಗ–ಬೇಹಾಗ್** **ಅಟ್ಟತಾಳ**

ಇಂದೀವರನಯನೆ ಗೋವಿಂದನ್ಯಾಕೆ ಬಾರನೇ ॥ ॥ಪ॥

ಗೋವಿಂದನ್ಯಾಕೆ ಬಾರನೇ–ಗೋಪಾಲನ್ಯಾಕೆ ಬಾರನೆ ॥ ॥ಅ॥

ಜನಕ ಜನನಿಯರ ಮುನಿಸು ನೋಡಿದೆವೆ
ತನುಮನಧನಗಳ ತನಗೆ ನೀಡಿದೆವೆ ॥ ॥೧॥

ಪರಮಪುರುಷನೊಳು ಸರಸವಾಡಿದೆವೆ
ಸಿರಿಪತಿ ಎನ್ನೊಳು ವಿರಸವಾಡಿದೆವೆ ॥ ॥೨॥

ಸೋಮವದನೆಯರ ತಾಮರೆದಿಹನೇ
ಭೀಮೇಶವಿಠ್ಠಲನ ಪಾದ ನಂಬಿದೆವೇ ॥ ॥೩॥

**ಅರ್ಥವಿವರಣೆ :**

**ಭೀಮೇಶವಿಠ್ಠಲಾಂಕಿತ** ದಾಸವರ್ಯರು ಶ್ರೀ ಜಗನ್ನಾಥದಾಸಪ ರೇಣ್ಯರ ಶಿಷ್ಯಪರಂಪರೆಗೆ ಸೇರಿದವರು. ಶ್ರೀ ಜಗನ್ನಾಥದಾಸವರ್ಯರ ಅಮರ ಕೃತಿ ರತ್ನ – ಶ್ರೀಮದ್ಧರಿಕಥಾಮೃತಸಾರಕ್ಕೆ **ಫಲಸ್ತುತಿಯನ್ನು** ಬರೆದಿರುತ್ತಾರೆ.

ಒಮ್ಮೆ ಶ್ರೀಕೃಷ್ಣನು ಗೋಪಿಯರ ಸದನಕ್ಕೆ ಬರಲಿಲ್ಲ, ಆಗ ಗೋಪ ಸ್ತ್ರೀಯರು ತಮ್ಮ ತಮ್ಮಲ್ಲಿ ಶ್ರೀಕೃಷ್ಣನು ಬರದಿದ್ದ ಕಾರಣವನ್ನು ತಿಳಿಯಲು ಪರಸ್ಪರ ವಿಚಾರವಿನಮಯ ಮಾಡಿಕೊಳ್ಳುವರು

**ಇಂದೀವರನಯನೆ** = ಕನ್ನೈದಿಲೆಯ ಪುಷ್ಪದ ದಳದಂತೆ ವಿಶಾಲ ವಾದ ನೇತ್ರವುಳ್ಳವಳು. **ಗೋವಿಂದ** = ವೇದಪ್ರತಿಪಾದ್ಯನಾದ ಶ್ರೀಕೃಷ್ಣನು. **ಮುನಿಸು** = ನಮ್ಮ ತಂದೆ ತಾಯಂದಿರ ಸಿಟ್ಟನ್ನು ಲಕ್ಷ್ಯ ಮಾಡಿದೆವೇ ? ಅವರ ಮುನಿಸನ್ನು ಲಕ್ಷ್ಯಕ್ಕೆ ತಾರದೇ, ಶ್ರೀಕೃಷ್ಣನನ್ನು ಕೂಡಿಕೊಂಡರು. **ಪರಮಪುರುಷನೊಳು** = ಶ್ರೀಕೃಷ್ಣನು ಸರ್ವೋತ್ತ ಮನು. ಅವನ ಸರ್ವೋತ್ತಮತ್ವವನ್ನು ಅರಿಯದೇ, ಕೇವಲ ಮೋಹದಿಂದ ಅವನೊಡನೆ ಸರಸವಾಡಿದೆವೇ ? **ಸಿರಿಪತಿಯೊಳು** = ಅವನು ಲಕ್ಷ್ಮೀ ಪತಿಯು. ಸ್ವರಮಣನಾದ ಶ್ರೀಹರಿಗೆ ಲಕ್ಷ್ಮೀದೇವಿಯಿಂದಲೂ ಏನೂ ಆಗಬೇಕಾಗಿಲ್ಲ, ಅವಳಿಗೆ ಆನಂದವನ್ನು ಕೊಡುವುದಕ್ಕಾಗಿ, ಲಕ್ಷ್ಮ್ಯಾಲಿಂಗಿತ ನಾಗಿದ್ದಾನೆ. ಅಂತಹ ಆಪ್ತಕಾಮನಲ್ಲಿ ವಿರಸವಾಡಿದೆವಲ್ಲೇ ?—ಎಂದು ಹಲುಬುತ್ತಾರೆ. **ಸೋಮವದನೆಯರ** = ಪೂರ್ಣಚಂದ್ರಬಿಂಬದಂತೆ ಸುಂದರಮುಖವುಳ್ಳ ಸ್ತ್ರೀಯರ, **ತಾ ಮರೆದಿಹನೇ** = ನಮ್ಮನ್ನು ಮರೆತು ಬಿಟ್ಟಿದ್ದಾನೆಯೋ ?



## ೩೪೧

### (ಭಾಗ್ಯನಿಧಿವಿಠ್ಠಲಾಂಕಿತ)

**ರಾಗ–ಕಾಪಿ** **ಝಾಪುತಾಳ**

ಕರುಣಾನಿಧಿ ಕಾಣುವನೇನೇ ॥ ॥ಪ॥

ಕಾಣುವನೇನೇ ಸಖಿ ವೇಣುಗೋಪಾಲನು
ಜಾಣೆಯರನಗಲಿದನೇನೇ ॥ ॥ಅ॥

ಪರಿಪರಿ ಮೋಹಿಸಿ ಕರಗಿಸಿ ಮನೋರಥ
ತ್ವರಿತದಿ ನಡಸಿವನೇನೇ ॥ ॥೧॥

ವರ್ಣಿಸಿ ಬಾರೀತ [illegible]ಸುತಾಧರ ।
ಉಣ್ಣುತಲೋಡಿದನೇನೇ ॥ ॥೨॥

ದಿಟ್ಟ ಭಾಗ್ಯನಿಧಿವಿಠ್ಠಲ ಮಧುರಾ-
ಪಟ್ಟಣ ಮುಟ್ಟಿದನೇನೇ ॥ ॥೩॥

**ಅರ್ಥವಿವರಣೆ : –**

ತಮ್ಮನ್ನಗಲಿ ಮಧುರಾನಗರಿಗೆ ತೆರಳಿದ ಶ್ರೀಕೃಷ್ಣನ ವಿರಹ ವ್ಯಥೆಯನ್ನು ತಾಳಲಾರದೇ ಗೋಪಿಕಾಸ್ತ್ರೀಯರ ಆಲಾಪವಿದು.

ಅಭುಜಭವಾಂಡದಿ ಪ್ರಭುವೆಂದೂ ನಿನ-
ಗಭಿವಂದಿಪೆ ಎನಗಭಯು ಪಾಲಿಸೈ
ಇಭರಾಜವರದ ಶುಭಚರಿತಾ ಈ
ಕುಭವಜ್ಞಜನ ಸಭಾಮಧ್ಯದೀ || ||೧||

ದುರುಳನು ಎನ್ನನು ಶೆರಗು ಪಿಡಿದು ಬಲು
ಕರಕರೆಗೊಳಿಸುತಿರುವನು ಹರಿಯೇ
ಅರಿತವಳಲ್ಲ ಪರಿಭವಣಯು ಯದು-
ವರನೇ-ದ್ವಾರಾಪುರಮಂದಿರನೇ || ||೨||

ಭಂಡ ಎನ್ನ ಮೂಕೊಂಡೊಯ್ದು ನೆರದ
ಹಿಂಡು ಮಂದಿಯೊಳ್ ಭಂಡುಮಾಳ್ಪನೆಂ-
ದಂಡಲಿಯುತ ಹೆಮ್ಮಂಡೆ ಬಾಗಿ ಬೂ-
ಮ್ಮಾಂಡದೊಡೆಯ ಕೇಳ್-ಪಂಢರಿರಾಯಾ || ||೩||

ಅನ್ಯನಲ್ಲ ಎನಗಣ್ಣ ನೀನು ಸಂ-
ಪನ್ನನೆ ತ್ರಿಜಗನ್ಮಾನ್ಯ ಮಾನದಾ
ಪನ್ನರಕ್ಷಕ ಕಾರುಣ್ಯಾಂಬುಧೆ ಈ
ಬನ್ನ ಬಿಡಿಸುವರು ನಿನ್ಹೊರತುಂಟೇ || ||೪||

ಪತಿಗಳೈವರೂ ಚ್ಯುತಬಲರಾದರು
ಕ್ಷಿತಿಯೊಳು ನಿನಗೆ ಸಮ್ಮತವಾವದೊ ಅದೇ
ಹಿತವೆಂದರಿತು ಸುಮ್ಮನೆ ಕುಳಿತಿಹರು
ರತಿಪತಿಪಿತನೆ ಭಾರತೀಪತಿಪ್ರಿಯಾ || ||೫||

ಮಂಗಳಮಹಿಮ ಶುಭಾಂಗ ಸೌಖ್ಯದಾ
ನಂಗಜನಕ ಕಾಳಿಂಗಮಥನ
ತುಂಗವಿಕ್ರಮ ಭುಜಂಗಗಿರಿನಿಲಯ
ರಂಗನೆ ಈ ಕ್ರಮ ಹಿಂಗಿಸು ಮುಗದೇ ॥ ॥೬॥

ಶ್ರೀ ಪದ್ಮಜ ಭವರಾಪತ್ತಿಗಸೆಂ-
ದೀಪರಿ ತಿಳಿದು ನಾ ಪೊಗಮುಡುವೇ
ನೀ ಪಾಲಿಸು ಬಂದಾವತ್ತುಕಳೆದು
**ಶ್ರೀಪತಿವಿಠ್ಠಲ** ಸುರಾಪಗಸೇವ್ಯ ॥ ॥೭॥



**ಅರ್ಥವಿವರಣೆ :-**

ತುಂಬಿದ ಸಭೆಯಲ್ಲಿ ದುರ್ಯೋಧನನ ಆದೇಶದಂತೆ, ದುರುಳ ದುಶ್ಯಾಸನನು ಪತಿವ್ರತಾಶಿರೋಮಣಿ ದ್ರೌಪದಿಯನ್ನು ಎಳೆತಂದು ಮಾನಾಪಹರಣ ಮಾಡುವ ಆಪತ್ತಿನ ಸನ್ನಿವೇಶದಲ್ಲಿ ಆಪದ್ಬಾಂಧವನಾದ ದ್ವಾರಕಾವಾಸನನ್ನು ಮಾನಸಂರಕ್ಷಣೆಗಾಗಿ ಮೊರೆ ಇಡುತ್ತಾಳೆ. ಈ ಪ್ರಸಂಗವನ್ನು **ಶ್ರೀಪತಿವಿಠ್ಠಲಾಂಕಿತದಾಸವರ್ಯರು** ಹೃದಯ ಕರಗುವಂತೆ ಪ್ರಸಕ್ತ ಕೀರ್ತನಸಾಹಿತ್ಯದಲ್ಲಿ ಚಿತ್ರಿಸಿದ್ದಾರೆ.

**ವೀಕ್ಷಿಸು** = ಕೃಪಾದೃಷ್ಟಿಯಿಂದ ನನ್ನೆಡೆ ನೋಡು. ಹೇ ಕಮಲದಳಾಯತಾಕ್ಷ ! **ಉಪೇಕ್ಷೆ ಮಾಡದೆ** = ಈ ಆಪತ್ತಿನ ಸಮಯದಲ್ಲಿ ನನ್ನನ್ನು ಅಲಕ್ಷಿಸಬೇಡ ಹೇ ಲಕ್ಷ್ಮೀವಲ್ಲಭ ! **ಅಬುಜಭವಾಂಡದಿ** = ಬ್ರಹ್ಮಾಂಡದಲ್ಲಿ (ಅಬುಜ-ನೀರಿನಲ್ಲಿ ಉತ್ಪತ್ತಿಯಾಗುವ ಕಮಲ. ಅಬುಜಭವ-ಕಮಲೋದ್ಭವರಾದ ಬ್ರಹ್ಮದೇವರು) **ಪ್ರಭು** = ಸರ್ವನಿಯಾಮಕನೆಂದು ನಿನ್ನಲ್ಲಿ ಪ್ರಾರ್ಥಿಸುತ್ತಿದ್ದೇನೆ. **ಅಭಿವಂದಿಸಿ** = ಸಾಷ್ಟಾಂಗ

ಪೂರ್ವಕ ನಮಸ್ಕರಿಸುತ್ತೇನೆ. **ರಕ್ಷಿಸು** = ನನಗೆ ರಕ್ಷಣೆ ನೀಡು **ಇಭರಾಜವರದ** = ಗಜೇಂದ್ರವರದನೇ. **ಶುಭಚರಿತಾ** = ಮಂಗಳ ಚರಿತ್ರೆಯುಳ್ಳವ (ಕಥೆಯುಳ್ಳವನೆ). **ಈ ಕುಂಭಸಜ್ಜ ಜನಾ ಸಭಾ ಮಧ್ಯದಿ** = ದುರ್ಗುಣಗಳಿಂದ ಯುಕ್ತರಾದ ಈ ದುಷ್ಟ ಜನರ ಮಧ್ಯದಲ್ಲಿ (ಕುಹಕ ಮನಸ್ಸಿನ ಜನರುಗಳು) **ಘೋರಖಳನು** = ದುಷ್ಟನಾದ ದುಶ್ಶಾಸನನು. **ಸೆಳೆಸೆಳೆದೀಗ ಸೀರೆ ಸೆಳೆವ** ಪರಿಪರಿ ಪೀಡಿಸುತ್ತಿರುವನು. **ಅರಿತವಳಲ್ಲ** = ಇಂಥ ಪರಿಭವವನ್ನು (ದುಸ್ಥಿತಿ) ಎಂದಿಗೂ ಅನುಭವಿಸಿದವಳಲ್ಲ ನಾನು! **ಯದುಕುಲಪತಿ** = ಯದುಕುಲ ತಿಲಕ ಹೇ ಕೃಷ್ಣಾ! **ಭಂಡ** = ಮೂರ್ಖನಾದ ದುರುಳನು. **ಮುಂಕೊಂಡೊಯ್ದು** = ಮುಂದಕ್ಕೆ ದಬ್ಬಿಕೊಂಡು ಸಭೆಗೆ ತಂದು, **ಭಂಡು ಮಾಳ್ಪನೆಂದು** = ಮಾನಭಂಗಗೊಳಿಸುವೆನೆಂದು **ಮುದದಲಿ ಬರುವನ** = ಮುದದಿಂದ ಬರುತ್ತಾ, **ಹೆರಳನು ಜಗ್ಗಿ** = ಹಿಂಬದಿಯ ಕೂದಲನ್ನು ಜಗ್ಗಿ ಎಳೆದು. **ಬೊಮ್ಮಾಂಡದೊಡೆಯ** = ಬ್ರಹ್ಮಾಂಡದ ಪ್ರಭುವೇ ನನ್ನ ಮೊರೆ ಕೇಳಿಸು! **ಅನ್ಯನಲ್ಲ** = ನೀನು ನನಗೆ ಬೇರೆಯಲ್ಲ, ನನ್ನ ಅಣ್ಣನಾಗಿದ್ದೀಯ. **ಸಂಪನ್ನನೆ** = ಅನಂತಕಲ್ಯಾಣಗುಣಮಂದಿರನೆ. **ಜಗನ್ಮಾನ್ಯ** = ಸಮಸ್ತ ಜಗತ್ತಿನಲ್ಲೇ ಮಾನ್ಯನಾದವನು (ಸರ್ವ ಶ್ರೇಷ್ಠನು), **ಮಾನದಾ** = ನಿನ್ನ ಭಕ್ತರ ಮಾನರಕ್ಷಣೆಮಾಡುವ ಮಾಧವನೇ, **ಅನನ್ಯರಕ್ಷಕ** = ಶರಣಾಗತರ ಪರಿಪಾಲಕನೆ, **ಈ ಬನ್ನ ಬಡಿಸುವರು** ನನಗೆ ಒದಗಿರುವಂತಹ ಈ ಕಷ್ಟವನ್ನು ಪರಿಹರಿಸುವವರು. **ನಿನ್ನೊರತುಂಟೇ** = ನಿನ್ನನ್ನು ಬಿಟ್ಟು ಉಳಿದವರು ಯಾರಿದ್ದಾರೆ? **ಚ್ಯುತಬಲರಾದರು** ನನ್ನ ಪತಿಗಳು ಪಂಚಪಾಂಡವರು ಮಹಾ ಪರಾಕ್ರಮಿಗಳು. ಆದರೆ ಜೂಜಿನಲ್ಲಿ ಸೋತು ಅಸಹಾಯಕರಾಗಿದ್ದಾರೆ. **ಕ್ಷಿತಿಯೊಳು** = ಈ ಭೂಮಿಯ ಮೇಲೆ. **ನಿನಗೆ ಸಮ್ಮತವಾದರೋ** = ನಿನ್ನ ಇಚ್ಛೆ ಏನಿದೆಯೋ ಅದರಂತಾಗಲಿ ನಾನು ನಿನ್ನ ಸಂಕಲ್ಪಕ್ಕೆ ಶರಣಾಗಿದ್ದೇನೆ. **ರತಿಪತಿಪಿತನೆ** = ಮನ್ಮಥನ ತಂದೆಯೇ (ರತಿಪತಿ–ರತಿಯ ಗಂಡ ಮನ್ಮಥ). **ಮಂಗಳಮಹಿಮ** - ಶುಭ ಮಹಿಮಾಸಂಪನ್ನನೇ.

**ಶುಭಾಂಗ** = ಜ್ಞಾನಾನಂದ ಪರಿಪೂರ್ಣ ದೇಹವುಳ್ಳವನೇ, **ಅನಂಗಜನಕ** = ಮನ್ಮಥನ ತಂದೆ. **ತುಂಗವಿಕ್ರಮ** = ಮಹಾಸಮರ್ಥನೇ, **ಭುಜಂಗಗಿರಿನಿಲಯ** = ಶೇಷಗಿರಿವಾಸ ಶ್ರೀವೆಂಕಟೇಶನೆ. **ಈಕ್ಷಿಸು** = ನನ್ನೀ ಕಷ್ಟವನ್ನು. **ಹಿಂಗಿಸು** = ಪರಿಹರಿ ರಕ್ಷಿಸು. **ಶ್ರೀ ಪದ್ಮಜ ಭವ** = ರಮಾ, ಕಮಲೋದ್ಭವರಾದ ಬ್ರಹ್ಮದೇವರು. **ಆಪತ್ಯಗ ನೆಂದು** = ಇವರನ್ನು ಪುತ್ರ ರತ್ನಗಳನ್ನಾಗಿ ಪಡೆದಿರುವ ನೀನೆಂದು. (ಅಪತ್ಯ = ಮಗ). **ನಾ ಪ್ರಣಮಿಸುವೆ** = ನಾನು ನಿನಗೆ ನಮಸ್ಕರಿಸುತ್ತೇನೆ. **ಸುರಾಪಗಸೇವ್ಯ** = ಸುರಗಣದಿಂದ ಸಂಸೇವ್ಯಮಾನನಾದವನೇ.

೬೨೩

## (ಶ್ರೀಕೃಷ್ಣಪಾರಿಜಾತ)

**ರಾಗ–ಫರಜು (ನಾದನಾಮಕ್ರಿಯ)** **ಆದಿತಾಳ**

**(ಮಧ್ವೇಶವಿಠಲಾಂಕಿತ)**

ರಂಗ ರಾಜಧಾನಿಗ್ಹೋದನೇ–ರಾಜವದನೇ ॥ ॥ಪ॥

**ಶ್ಲೋಕ**

ಸಖೀ ಕೃಷ್ಣನಾ ಸಂದು ವಂದಿಷ್ಟು ಕಾಣೆ
ಮುಖಾ ನಿಮ್ಮಗೂ ಮುನುಕಿತ್ತಾತಕೆ ಜಾಣೆ
ಸುಖಾ ಎನ್ನೊಳು ಸುಖಿಸಲಿಲ್ಲಾ ನಿನ್ನಾಣೆ
ಸಖನೆಲ್ಲಿಗೇ ಸಾಗಿಪೋದನೇ ಕೃಪಾಣೆ ॥

## ಪದ

ಮಥುರಿಯಿಂದ ಒಬ್ಬ ಬಂದನೇ–ಹಬ್ಬವೆಂದನೇ–
ಕದಲೀರಿ ಎಂದಾನೇ
ಪದುಮನಾಭನು ರಥ ತರಿಸಿದ–ಅನುನರಿಸಿದಾ–
ಬಲರಾಮನೇರಿಸಿದಾ ॥
ಉದಕನೆವದಿ ಪೋಗಿ ಕಂಡೆವೇ–ಮುಕ್ತಿಕೊಂಡವೇ–
ಕಳವಳಗೊಂಡೆವೇ
ಚದುರ ನಮ್ಮನು ಬಿಗಿದಪ್ಪಿದಾ–ಮುದ್ದು ಗುಪ್ಪಿದಾ–
ನಿನಗೇವೆ ತಪ್ಪಿದಾ ॥ ॥೧॥

## ಶ್ಲೋಕ

ನೆರೇಲಿಪ್ಪಳೇ ನೆಚ್ಚಿಯಿದ್ದೇನೆ ನಿನ್ನಾ
ಕರೀಬಾರದೇ ಕಾಂತ ಪೋವಾಗ ಎನ್ನಾ
ಆರೀತಿದ್ದರೆ ಅಟ್ಟಿಪೋಗುವೆ ಬೆನ್ನಾ
ಹರಿ ಮಾಡಿದಾ ಹರುಷ ವಿಶ್ವಾಸ ಘನ್ನಾ ॥

## ಪದ

ಕುಂಭವಿಳಿಸಿ ನಾರಿಯರು ಕೂಡೀ–ಕಾಂತನ ನೋಡೀ–
ಯೋಚನೆಗಳ ಮಾಡೀ
ಅಂಬುಜಾಕ್ಷನ ಬೆನ್ನ ಬಿದ್ದೆವೇ-ಬಿಡದಿದ್ದೇವೇ–ಮನದೊಳು
ಕುದ್ದೇವೇ
ರಂಭೆರೊಬ್ಬೊಬ್ಬರ ಕರೆದನೇ–ಅಪ್ಪಿ ಮೆರದಾನೇ–
ಕುಚ ನಖದಿಂದಿರಿದನೇ
ಚುಂಬಿಸಿ ತಾಂಬೂಲನೀಡಿದಾ–ಮರುಳು ಮಾಡಿದಾ–
ಮರೆಯದ್ಹಾಗೆ ಮಾಡಿಧಾ ॥ ॥೨॥

### ಶ್ಲೋಕ

ವನಕ್ರೀಡೆಗೇ ಒಬ್ಬಳಾ ಕರೆಸಿ ಅಂದೂ
ವನಜಾಕ್ಷನು ವಾಕ್ಯ ಕೊಟ್ಟಿದ್ದ ಬಂದೂ
ನೆನೆಸಿದರೇ ನೆನೆವೆ ನಾ ನಿನಗೆ ಬಂಧೂ
ಘನಶ್ಯಾಮನು ಘಾತಮಾಡಿದನೆಂದೂ ॥

### ಪದ

ಅಂದಿಗೆ ಹಾಗೆ ಅಂತಿದ್ದನೇ–ಅಬದ್ಧನೇಕಾ–ಲೋಚಿತಕ್ಕೈದಾನೇ–
ಹಿಂದಿನ ಮಾತು ಹಂಗಿಸಲಾಗ–ನೋಡುವ ವೊಗ–
ಸಂತೈಸಿದನಾಗಾ
ಒಂದು ನಿಮ್ಮನು ಕೂಡದಿದ್ದನೇ–ಅಲ್ಲಿದ್ದನೇ-ಬಾರದೆಲೆ
ಇದ್ದನೇ
ನಂದಗೋಪ ಗೋಪಿಯರಾಣೇ–ಇಟ್ಟನು ಜಾಣೇ–
ಯೋಚನೆಯ ಪ್ರವೀಣೇ ॥ ॥೩॥

### ಶ್ಲೋಕ

ಬಹಳ ಖರೇ ಬಂದಾ ಅಕ್ರೂರ ಬಾಲೇ
ಕುಹಕಾದರೂ ಕಟ್ಟುವೇ ಕಾಣುತಲೇ
ಮಹಾಸ್ನೇಹವೇ ಮಾಧವಾಗ್ಯನ್ನಮ್ಯಾಲೇ
ಸಹಸ್ರಾದರೂ ಸಾಗ ಕಾರ್ಯವಿಲ್ಲದಾಲೇ ॥

### ಪದ

ಅಕ್ರೂರನೆಂದು ಆತನ ಯಾಕೇ–ಕರಿಯಲು ಬೇಕೇ-ಆತನ
ಭಾಗ್ಯ ಸಾಕೇ

ವಕ್ರವಾದನು ನಮ್ಮ ಕ್ರೀಡೆಗೇ–ತನ್ನ ಜೋಡಿಗೇ–
ಕಾಂತನನ್ನೈದ ಕಡೆಗೇ
ಚಕ್ರಧರನು ಯಾಕೆ ಪೋದನೇ–ಕಾರ್ಯ ಶೋಧಾನೆ-
ಪರಿಪೂರ್ಣಬೋಧಾನೇ
ರಕ್ಕನಾಡಿದರೆನ ನಿಂದಿರ–ಧೃತ ಮಂದಿರ–ಪುರುಷರೊಳು
ಸುಂದರ ॥ ॥೪॥

## ಶ್ಲೋಕ

ಉದಾಸೀನವಾ ಊರನಾರೇರ ಮಾಡೀ
ಹದಾ ತಪ್ಪಿದಾ ಹಬ್ಬದಾ ಸೇವನ ಮಾಡೀ
ಮಧುರಿಯೊಳು ಮಾನನೀಯರ ನೋಡೀ
ಮಧುಸೂದನ ಮೆಚ್ಚಿ ಹೋದಾನೇ ಓಡೀ ॥

## ಪದ

ಮಿಂಚುವ ನಿಂಬಫಲದಂತೇ–ಕುಚಗಳು ಕಾಂತೇ–
ಆದವ್ವ್ಯಾಲತಿ ಭ್ರಾಂತೇ
ಕಂಚುಕವಡದ ಮಯ್ಯಾ ಬಣ್ಣಾ–ಉಳ್ಳ ಹೆಣ್ಣಾ–ಗಳ
ಮ್ಯಾಲಿಟ್ಟ ಕಣ್ಣಾ
ಕುಂಚಿತವಾದ ಚುಂಚುಗುರುಳೂ–ಮತ್ತವರೊಳೂ–
ಮಾಡಿದನೇ ಮರುಳೂ
ಪಂಚಬಾಣಗೆ ಗುರಿಯು ನಮ್ಮ–ಮಾಡಿದನಮ್ಮಾ–ಹ್ಯಾಗೆ
ತಾಳ್ವೆ ಪೇಳಮ್ಮಾ ॥ ॥೫॥

## ಶ್ಲೋಕ

ಕೊಳಲಾನೂದುತಾ ಕೌಮುದಿಯಾವಳಾಗೇ
ನಳಿನಾಕ್ಷನು ನಮ್ಮ ಮಾಡಿದಾ ಹೀಗೇ

ಕಳವಳಿಕೆ ತನ್ನ ನೋಡುವ ಹಾಗೆ
ಕಳಾದೇರನೂ ಕಂಗೆಡೀಸುತ್ತ ಪ್ರೋಗೇ ॥

ಪದ

ಕೃಷ್ಣ ಎಷ್ಟೊಳು ಮಾಡುವ ಲೀಲೇ ಮಾಡುವ ವ್ಯಾಕುಳೇ-
ಆತನ ಕಂಡಾಮ್ಯಾಲೇ
ದೃಷ್ಟಿ ಜೊಟಗಳ ಸನ್ನೆಯ ಮಾಡೀ–ದೃಷ್ಟಿಸೀ ನೋಡಿ–
ವಿನಯದೊಳು ಕೂಡೀ
ಪಟ್ಟಣದಾಬಲೇರು ಸುಮ್ಮನೇ–ಬಿಡುವಾರೇನೇ–ನಿಮಗೆ
ಮತ್ಸರಾನೇ
ಇಷ್ಟು ಮಾಡೋದು ಖರಿಯಾವೇ–ಮೊದಲರಿಯಾವೇ-
ಅತ್ಯಂತನರಿಯವೇ ॥ ॥೬॥

ಶ್ಲೋಕ

ನಿಶಾಕಾಲದೀ ನೆನ್ನೆ ನಮ್ಮನಿಗೆ ಬಂದೂ
ವಸುಧೀಶನೂ ಮಾವನ ಕೊಲ್ಲುವೆನೆಂದೂ
ವಸುದೇವ ದೇವಕಿಯರಾ ಕಷ್ಟದಿಂದಾ
ಬಿಸಜಾಕ್ಷನು ಬಿಡಿಸಿ ಕಾಹುವೆನೆಂದಾ ॥

ಪದ

ಏಕಾಂತದಲ್ಲಿ ಎಲ್ಲೀ ಕೇಳೀ–ನಮಗೆ ಹೇಳೀ–ನೀನೇ ಮಹಾ ಜೋಳೀ
ಲೋಕಾಂತದಲ್ಲಿ ನಮ್ಮ ಹಾಂಗೇ–ಅರಿಯದ್ಹಾಂಗೇ–
ಮಾಡುವುದಷ್ಟು ನಂಗೇ
ಬೇಕಾಗಿ ಮಧುರೆಪಟ್ಟಣಕ್ಕೊ ಹೋಗಿ–ಕಂಸನ ನೀಗೀ–
ಅರಸಾಗಬೇಕಾಗೀ ॥ ॥೭॥

## ಶ್ಲೋಕ

ಪ್ರರಾವಾಳನೂ ಪೂರ್ವಪುಂಸಾನ ಬಿಟ್ಟು
ಶರಧಿಯೊಳು ಶರಧಿ ಮಿಂಗಡಿಸಿ ಕೊಟ್ಟು
ತರುಣೇರಿಗೆ ತಾಂಬಲರೂಪ ಕೊಟ್ಟು
ಪೊರೆದೇನೆಂದು ಹೇಳಿಯಿದ್ದಾನೆ ಗುಟ್ಟು ॥

## ಪದ

ಪಿರೆಯಾನೆ ನಿನ್ನೊಳಾಡೀದರೇ–ಕೇಳಲೆ ನೀರೇ–ನಮಗೆ
ಯಾರು ಎದುರೇ
ಶರಣನು ಹೌದು ನಂದನ ಕಂದಾ–ಹಿಂದಕೆ ಬಂದಾ–
ದುರಿತಗಳೆಲ್ಲ ಕೊಂದಾ
ಮೊರೆಹೊಕ್ಕರೇ ಕಾವ ಬಿರುದಾಂಕಾ–ಕುಬುಜೆಯ ಡೊಂಕಾ–
ತಿದ್ದಿದ ನಿಷ್ಕಳಂಕಾ
ಕರುಣಾಳು **ಮಧ್ವೇಶವಿಠ್ಠಲ**–ಭಕ್ತರಪಾಲ-
ನಮ್ಮಾಲೆತಿಲೋಲಾ ॥ ॥೮॥



**ಅರ್ಥವಿವರಣೆ :–**

ಒಂದು **ಶ್ಲೋಕ**, ತದನುಸಾರವಾಗಿ ಒಂದು **ಪದ**– ಹೀಗೆ ಛಂಧೋಬದ್ಧವಾಗಿ ರಚಿತವಾಗಿರುವ ಕೀರ್ತನಸಾಹಿತ್ಯಕ್ಕೆ **ಪಾರಿಜಾತ**– ಎಂದು ಹೆಸರು. ಇಂತಹ ಪಾರಿಜಾತಾಖ್ಯ ಸಾಹಿತ್ಯವು ಹರಿದಾಸರ ಕೀರ್ತನ ತರಂಗಿಣಿಯಲ್ಲಿ ಅಲ್ಲಲ್ಲಿ ದೊರೆಯುತ್ತದೆ. **ಶ್ರೀ ಮಧ್ವೇಶವಿಠ್ಠಲಾಂಕಿತ** ದಾಸವರ್ಯರು ಈ **ಶ್ರೀಕೃಷ್ಣಪಾರಿಜಾತದಲ್ಲಿ** ಶ್ರೀಕೃಷ್ಣನು ಮಧುರಾ ನಗರಕ್ಕೆ ಹೋಗುವ ಪ್ರಸಂಗದ ಸನ್ನಿವೇಶದಲ್ಲಿ ಗೋಪಿಕಾಸ್ತ್ರೀಯರ ವಿರಹ ವ್ಯಥೆಯನ್ನು ಹೃದಯಂಗಮವಾಗಿ ಚಿತ್ರಿಸಿರುತ್ತಾರೆ.

**ರಂಗ** = ನಮ್ಮ ಅಂತರಂಗವನ್ನು ಸೂರೆಗೊಂಡ ಶ್ರೀಕೃಷ್ಣ. **ರಾಜಧಾನಿಗ್ಹೋದನೇ** = ರಾಜಧಾನಿಯಾದ ಮಥುರಾನಗರಕ್ಕೆ ಹೋದನೇನು? **ರಾಜವದನೇ** = ಸುಂದರವದನಳೇ **ಸಂದುವಂದಿಷ್ಟು** = ದೊರೆಯುವ ಕ್ರಮವು (ನಮಗೆ ಶ್ರೀಕೃಷ್ಣನ ಪ್ರಾಪ್ತಿ). **ಕೃಪಾಣೆ** = ಶ್ರೀಕೃಷ್ಣನ ಕರುಣದ ಮೇಲೆ ನನ್ನಾಣೆ. **ಒಬ್ಬ ಬಂದನೇ** = ಕಂಸಾಸುರನಿಂದ ಕಳುಹಿಸಲ್ಪಟ್ಟ ಅಕ್ರೂರ. **ಹಬ್ಬವೆಂದನೇ** = ಬಿಲ್ಲು ಹಬ್ಬವೆಂದು ತಿಳಿಸಿದನೇ? **ಕದಲೀರಿ ಎಂದಾನೇ** = ಶ್ರೀ ರಾಮಕೃಷ್ಣರಿಬ್ಬರನ್ನೂ ಗೋಕುಲದಿಂದ ಹೊರಡಿರಿ ಎಂದನಂತೆ. **ಅನುಸರಿಸಿದಾ** = ರಥವನ್ನೇರಿ ಮಥುರೆಗೆ ಹೋದ. **ಉದಕ ನೆಪದಿ** = ನೀರನ್ನು ತರುವ ನೆಪದಲ್ಲಿ ಯಮುನಾ ನದಿಗೆ ಹೋದಾಗ, ಅಲ್ಲಿ ಶ್ರೀರಾಮಕೃಷ್ಣರ ನಿರ್ಗಮನವನ್ನು ಸಾಕ್ಷಾತ್ತಾಗಿ ನೋಡಿದೆವೇ. **ಮುತ್ತಿಕೊಂಡೇವೇ** = ತಕ್ಷಣ ರಥವನ್ನು ನಿಲ್ಲಿಸಿ ಅವನನ್ನು ಸುತ್ತುವರಿದೇವೇ. **ಚದುರ** = ಜಾಣನಾದ ಶ್ರೀಕೃಷ್ಣ.

**ನೆರೇಲಿಪ್ಪಳೇ** = ಈ ಮಾತನ್ನು ಕೇಳಿದ ಇನ್ನೊಬ್ಬ ಗೋಪಿಕಾ ಸ್ತ್ರೀಯು–ನಾನು ಪಕ್ಕದಲ್ಲಿಯೇ ಇದ್ದೆ. ನನಗ್ಯಾಕೆ ಹೇಳಲಿಲ್ಲ ? –ಎಂದ ಪ್ರಶ್ನಿಸುತ್ತಾಳೆ. **ಹರುಷ ವಿಶ್ವಾಸ**=ಅವಳಲ್ಲಿ ಶ್ರೀಕೃಷ್ಣ ತೋರುತ್ತಿದ್ದ ಪ್ರೀತಿ ವಿಶ್ವಾಸಗಳನ್ನು ನೆನೆಸಿಕೊಳ್ಳುತ್ತಾಳೆ.

**ಕುಂಭವಿಳಿಸಿ** = ತಲೆಯ ಮೇಲೆ ಹೊತ್ತುಕೊಂಡಿದ್ದ ನೀರಿನ ಭಾಂಡವನ್ನು ಕೆಳಗಿಳಿಸಿ, **ರಂಭೆರೊಬ್ಬೊಬ್ಬರ ಕರೆದನೇ**=ಸುಂದರಿಯರಾದ ನಮ್ಮಲ್ಲಿ ಒಬ್ಬೊಬ್ಬರನ್ನಾಗಿ ತನ್ನ ಸಮೀಪಕ್ಕೆ ಕರೆದನೇ. **ವನಕ್ರೀಡೆಗೆ**= ಜಲಕ್ರೀಡೆಗೆ (ವನ = ಜಲ) **ಘಾತಮಾಡಿದನೆಂದೂ** = ತಮ್ಮ ಮನಸ್ಸಿಗೆ ನೋವನ್ನುಂಟುಮಾಡಿದನೇ. **ಅಬದ್ಧನೇ** = ನಿರ್ಲಿಪ್ತನೇ (ಶ್ರೀಕೃಷ್ಣನು ಸರ್ವಲೋಕವಿಲಕ್ಷಣನೆಂದು ಭಾವ) **ಕಾಲೋಚಿತಕ್ಕೈದಾನೇ** = ಸಮಯೋಚಿತವಾದ ಕಾರ್ಯಕ್ಕೆ ಹೋಗಿದ್ದಾನೆ (ಕಂಸವಧೆಯು ಕಾಲೋಚಿತವಾದ ಮಹತ್ತರ ಕಾರ್ಯ) **ಬಾರದಲೇ ಇದ್ದನೇ** = ಮಥುರಾ ಪಟ್ಟಣದಿಂದ ಬರದೆ ಇರುತ್ತಾನೆಯೇ ? **ಖರೇ** = ನಿಶ್ಚಯವಾಗಿಯೂ,

**ಮಹಾ ಸ್ನೇಹವೇ** = ಮಾಧವನಿಗೆ ನನ್ನ ಮೇಲಿನ ಪ್ರೀತಿ ಅಸಾಧಾರಣ ವಾದವದ್ದು-ಎಂದು ಪ್ರತಿಯೊಬ್ಬ ಗೋಪಿಕಾಸ್ತ್ರೀಯೂ ತಿಳಿದಿದ್ದಾಳೆ. **ಅಕ್ರೂರನೆಂದೂ** = ಕ್ರೂರನಾದ ಇವನಿಗೆ ಯಾರು "ಅಕ್ರೂರ"-ನೆಂದು ಹೆಸರಿಸಿದರು ? **ವಕ್ರವಾದನು** = ನಮ್ಮ ಒಡನಾಟಕ್ಕೆ ಅಡ್ಡಬಂದನೇ ? **ಚಕ್ರಧರನು** = ಸುದರ್ಶನ ಚಕ್ರಧಾರಿಯಾದ ಶ್ರೀಕೃಷ್ಣ. **ತಕ್ಕನಾಡಿದನೇ** = ವಂಚನೆಯ ಮಾತುಗಳನ್ನಾಡಿದನೇ ? **ಇಂದಿರಧೃತಮಂದಿರ** = ಲಕ್ಷ್ಮೀಯನ್ನು ತನ್ನ ವಕ್ಷಸ್ಥಳದಲ್ಲಿ ಧರಿಸಿದ ಶ್ರೀಧರನು. **ಪುರುಷರೊಳಗೆ ಸುಂದರ** = ಸಾಕ್ಷಾತ್ ಮನ್ಮಥ ಮನ್ಮಥನು ಅತಿಸುಂದರ ಪುರುಷನು. **ಹದಾ ತಪ್ಪಿದಾ** = ಬಿಲ್ಲುಹಬ್ಬದ ನೆವದಿಂದ ನಮ್ಮನ್ನಗಲಿದ. **ಮಾನನೀಯರ ನೋಡೀ** - ಮಧುರಾನಗರದ ಚೆಲುವೆಯರನ್ನು ಕಂಡು, ಅವರಿಂದ ಮೋಹಿತನಾಗಿ ನಮ್ಮನ್ನು ಮರೆತನೇ. **ಚುಂಬುಗುರುಳೂ** = ಜೋಲಾ ಡುತ್ತಿರುವ ಮುಂಗುರುಳು **ಪಂಚಬಾಣಗೆ** = ಮನ್ಮಥನ ಬಾಣಕ್ಕೆ (ನಮ್ಮನ್ನು ಕಾಮವಶರನ್ನಾಗಿ) **ಕೌಮುದಿಯಾವಳಗೇ** = ಪೂರ್ಣ ಚಂದ್ರನ ಬೆಳದಿಂಗಳಿನಲ್ಲಿ. **ಕಂಗೆಡಿಸುತ್ತ** = ರಾಸಕ್ರೀಡೆಯಲ್ಲಿ ನಮ್ಮನ್ನು ಕೂಡಿ ನಮ್ಮ ಮನಸ್ಸನ್ನು ಅಪಹರಿಸಿದನೇ. **ದೃಷ್ಟಿ ಚೊಟಿಗಳ** = ಕಣ್ಸನ್ನೆಯಿಂದ **ಪಟ್ಟಣಾಬಲೇರು** = ಮಧುರಾಪಟ್ಟಣದ ಅಬಲೆ ಯರು **ನಿಮಗೆ ಮತ್ಸರಾನೇ** = ಅವರ ರೂಪ ಸೌಂದರ್ಯಗಳನ್ನು ನೆನೆದು ಗೋಪಿಕಾಸ್ತ್ರೀಯರಿಗೆ ಸಹಜವಾಗಿ ಮಾತ್ಸರ್ಯವಾಯಿತು. **ನಿಶಾ ಕಾಲದೀ** = ರಾತ್ರಿ ಹೊತ್ತಿನಲ್ಲಿ. **ವಸುಧೀಶನೂ** = ಭೂದೇವಿಯ ರಮಣನಾದ ಶ್ರೀಕೃಷ್ಣನು. **ಮಾವನ** = ತನ್ನ ಸೋದರಮಾವನಾದ ಕಂಸಾಸುರನನ್ನು ಕೊಲ್ಲುವ ನೆಪದಿಂದ. **ಬಿಸಜಾಕ್ಷನು** = ಕಮಲದಳಾಯ ತಾಕ್ಷನು (ಬೀಸಜ-ನೀರಿನಲ್ಲಿ ಹುಟ್ಟುವ ಕಮಲಪುಷ್ಪ). **ಚೊಳೀ** = ಜಾಣೆ. **ಪುರವಾಳನೂ** = ಪುರವನ್ನು ಆಳುವ ಅರಸ. **ಶರಧಿಯೊಳು** = ಸಮುದ್ರದಲ್ಲಿ. **ಶರಧಿ ನಿಂಗಡಿಸಿಕೊಟ್ಟ** = ಮಧ್ಯದಲ್ಲಿ ದ್ವಾರಕಾಪುರ ನಿರ್ಮಿಸಿದ ಶ್ರೀಕೃಷ್ಣ. **ಕುಬುಜೆಯ ಡೊಂಕಾ** = ತ್ರಿವಕ್ರಯಾಗಿದ್ದ ಕುಬ್ಜೆಯ ವಕ್ರತೆಯನ್ನು ತಿದ್ದಿದ ಶ್ರೀಕೃಷ್ಣ.

ಶ್ರೀಮದ್ಭಾಗವತದಲ್ಲಿನ ದಶಮಸ್ಕಂಧದ ಸುಂದರವಾದ ಚಿತ್ರಣವೇ ಈ ಕೀರ್ತನಸಾಹಿತ್ಯದ ವಸ್ತು



## ೬೪೪

### (ಅಭಿನವಜನಾರ್ದನವಿಠ್ಠಲಾಂಕಿತ)

ರಾಗ–ವಿಜಯಶ್ರೀ ಆದಿತಾಳ

ಪುಟ್ಟ ಬಾರೋ ರಂಗಯ್ಯ–ಎನ್ನ ॥ ॥ಪ॥

ಇಷ್ಟ ಇಷ್ಟ ಬೆಣ್ಣೆಮುದ್ದೆ ಕೊಟ್ಟೆನು ರಂಗಯ್ಯ–ಎನ್ನಾ ॥ ॥ಅ॥

ಅಪ್ಪ ಬೊಮ್ಮನಪ್ಪ ಬಾಯಿಜೊಲ್ಲು ಸುರಿಸು
ತಪ್ಪ ಕಾಲ್ಗೆಜ್ಜೆಯಿಂದ ಚಪ್ಪಳಿಕ್ಕಿ ಎನ್ನ॥ ॥೧॥

ಪುಟ್ಟ ಪುಟ್ಟ ಪಾದದಿಂದ ಸೊಟ್ಟ ಸೊಟ್ಟ ಹೆಜ್ಜೆ ಹಿಂದ
ಕ್ಕಿಟ್ಟು ದಿಟ್ಟ ಕೃಷ್ಣ ಎನ್ನ ದೃಷ್ಟಿಯಿಂದ ನೋಡಿ ನೀ॥ ॥೨॥

ಶ್ರೀಪತಿಗೆ ಗೋಪಿಯು ಬಹೂಪರಿ ಅಲಕರಿಸಿ
ಭಾಪುರೆಯಿಂದಪೇಕ್ಷದಿ ಈ ಪರಿ ಎಂದಳೂ॥ ॥೩॥

ಲೇಶಕ್ಲೇಶತೋಷದಿಂದ ಶ್ರೀಶ ಸರ್ವೇಶ ನೀ ಮಾ
ನೀಸ ಕೂಸಲ್ಲವೋ ಮಂದಹಾಸದಿ ನಗುತ ರಂಗ॥ ॥೪॥

ಘನ್ನ ಅಭಿನವಜನಾರ್ದನ ವಿಠ್ಠಲನೆ ಎನ್ನ॥
ಪುಣ್ಯವೆಂತೋ ನಿನ್ನಂಥವ ಚಿಣ್ಣನಾದೀ ಎನ್ನ॥ ॥೫॥



**ಅರ್ಥವಿವರಣೆ:-**

ಈ ಸುಂದರ ಕೀರ್ತನಸಾಹಿತ್ಯದಲ್ಲಿ **ಅಭಿನವಜನಾರ್ದನ ವಿಠ್ಠಲಾಂಕಿತ ಶ್ರೀಪ್ರೇಮದಾಸರು** ಯಶೋದೆಯು ತುಂಟ ಕೃಷ್ಣ ನೊಡನೆ ಜೂಟಾಟವಾಡುವ ಸನ್ನಿವೇಶವನ್ನು ಚಿತ್ರಿಸಿದ್ದಾರೆ.

**ಮುಟ್ಟು ಬಾರೊ**=ಬಾಲಕ ಶ್ರೀಕೃಷ್ಣನಿಂದ ದೂರದಲ್ಲಿ ನಿಂತು ಕೊಂಡು, ಯಶೋದೆಯು ತನ್ನನ್ನು ಓಡಿಬಂದು ಮುಟ್ಟುವಂತೆ ಹೇಳುತ್ತಾಳೆ. ನಿನಗಿಷ್ಟು ಸವಿಯಾದ ಬೆಣ್ಣೆಯನ್ನು ಕೊಡುತ್ತೇನೆಂದು ಆಸೆ ತೋರಿಸುತ್ತಾಳೆ. **ಅಪ್ಪ** = ಜಗಜ್ಜನಕ (ಇಲ್ಲಿ ಯಶೋದೆಯ ನಾಕುಪುತ್ರ- ಮುಗ್ಧಬಾಲಕ) **ಬೊಮ್ಮನಪ್ಪ** = ಬ್ರಹ್ಮದೇವರ ತಂದೆ **ಚಪ್ಪಳಿಕ್ಕಿ**=ನೀನು ಕಾಲ್ಗೆಜ್ಜೆಯ ಘಲು ಘಲು ನಿನಾದದಿಂದ ನೃತ್ಯ ವಾಡುತ್ತಾ ಓಡಿ ಬಾ. ನಾನು ಅದಕ್ಕೆ ತಕ್ಕಂತೆ ಚಪ್ಪಾಳಿಕ್ಕುತ್ತೇನೆ. **ದಿಟ್ಟ ಕೃಷ್ಣ** = ಹೇ ಧೀರಪುರುಷ ಶ್ರೀಕೃಷ್ಣ ! ಪುಟ್ಟ ಪುಟ್ಟ ತಪ್ಪು ಹೆಜ್ಜೆ ಇಕ್ಕುತ್ತಾ, ಎನ್ನ ಕಡೆ ಕೃಪಾದೃಷ್ಟಿಯನ್ನು ಸೂಸುತ್ತಾ ಓಡಿ ಬಾ ಮರಿಯೇ! **ಶ್ರೀಪತಿಗೆ** = ಈಶಕೋಟಿಪ್ರವಿಷ್ಠಳಾದ ಶ್ರೀಲಕ್ಷ್ಮೀದೇವಿಯರಿಂದ ಸದಾ ಸಂಪೂಜ್ಯನಾದ ಸ್ವರಮಣನಾದ ಶ್ರೀಕೃಷ್ಣನನ್ನು ಬಹು ಪರಿಯಿಂದಲಿ ಉಡಿಗೆ ತೊಡಿಗೆಗಳಿಂದ ಅಲಂಕರಿಸುತ್ತಾಳೆ. ದಿವ್ಯಸುಂದರ ಮಂಗಳ ಮೂರ್ತಿಗೆ ಯಶೋದೆಯ ಅಲಂಕಾರಸೇವಾ ! **ಭಾಪುರೆ** = ಅವನ ಅಂದ ಚೆಂದಗಳನ್ನು ನೋಡಿ ಆನಂದದಿಂದ ಮೈಯುಬ್ಬಿ, ಆ ಲಾವಣ್ಯಮೂರ್ತಿ ಯನ್ನು ಈಕ್ಷಿಸಿ ಗೋಪಿಯು ಭೇಷ್ ! -ಎನ್ನುತ್ತಾಳೆ. **ಲೇಶಕ್ಲೇಶ** = ದುಃಖದೂರನಾದ (ಸದಾ ಆನಂದಮಯನಾದ ಇಲ್ಲಿ "ಲೇಶ"- ಎಂದರೆ ಸ್ವಲ್ಪವೂ ಇಲ್ಲವೆಂಬ ನಿಷೇಧಾರ್ಥ). **ಶ್ರೀಶ** = ಲಕ್ಷ್ಮೀಪತಿ. **ಸರ್ವೇಶ** = ಸರ್ವಕ್ಕೂ ನಿಯಾಮಕ. **ನೀ ಮಾನಿಸ ಕೂಸಲ್ಲವೋ** = ನೀನು ಮಾನವರಂತೆ ಸಾಮಾನ್ಯವಾದ ಮಗುವಲ್ಲ. ಪರಮಪುರುಷನು, ಪರಾತ್ಪರ ವಸ್ತು ನೀನು ಸ್ವಾಮಿ ! **ಘನ್ನ** = ಸರ್ವೋತ್ತಮ (ಉತ್ತುಂಗ ಮಹಿಮಾ ಸಂಪನ್ನ) **ನಿನ್ನಂಥವ ಚಿಣ್ಣನಾದೀ**=ನಿನ್ನಂತಹ ಸರ್ವೇಶನು ನನಗೆ

ಪುಟ್ಟ ಮಗುವಾಗಿದ್ದಿಯೆ! ಇದು ನನ್ನ ಪಾಲನ ಪುಣ್ಯ. ನಾನೆಂತಹ ಭಾಗ್ಯ ಶಾಲಿ– ಎಂದೆನ್ನುಕೊಳ್ಳುತ್ತಾಳೆ–ಶ್ರೀಕೃಷ್ಣನ ಮೋಡಿಯಿಂದ ಪರವಶಳಾದ ಯಶೋದೆ



## ೭೪೫

### (ವ್ಯಾಸವಿಠ್ಠಲಾಂಕಿತ)

ರಾಗ–ನಾದನಾಮಕ್ರಿಯೆ ಏಕತಾಳ

ಇಂದು ರಂಗನಟ್ಟುಳಿಗೇ– ಇರಲಾರೆವಮ್ಮಾ ನಾವು
ಒಂದುಮಾಯವ ಕಾಣೆವೆ– ವನಿತೆ ಗೋಪ್ಯಮ್ಮಾ ಕೇಳೇ॥ ॥ಪ॥

ಹಿರಿಯರಾದವರಿಗೆ ಭರದಿ ಪೇಳುವೆವೆಂದರೆ
ಸರಸಿಜಸಂಭವಗೆ ಹಿರಿಯನೀತ ಕಾಣಮ್ಮಾ॥ ॥೧॥

ಮಾಯಗಳ ಮಾಡೀ ನಾವೂ ಹೊಯಲೆಬ್ಬಿಸುವೆಂದರೇ
ಮಾಯಾದೇವಿಗೆ ಸಿಗದೆ ಮಾಯವಾ ತೋರುವನಮ್ಮ॥ ॥೨॥

ಗುಮ್ಮನ ತೋರಿದಾರೀಗಾ ಒಮ್ಮೆಮ್ಮೆ ಲೆಕ್ಕಿಸಾನಮ್ಮ
ಅಮ್ಮಮ್ಮ ಶ್ರೀನಾರಸಿಂಹ ಅದ್ಭುತಾದ ದೈವ ಕಾಣಮ್ಮ ॥ ॥೩॥

ಅರಿವಿ ಸರ್ಪನ ಮಾಡೀ ಭರದಿ ಅಂಜಿಸೇವೆಂದರೇ
ಖರಿಯಾವಾಗಿದ್ದ ದೊಡ್ಡ ಉರಗಶಾಯಿ ಕಾಣಮ್ಮ ॥ ॥೪॥

ಅರಸಾರಿಗ್ಹೇಳೀದಾರು ಬರಿದಾಗೂವದೇ ನಿಜ
ಧರೆ ಗಗನ ಪಾತಾಳದ ಅರಸನಲ್ಲವೇನಮ್ಮ ॥ ॥೫॥

ಕಾಸುವೀಸಾ ಕಯ್ಯೊಳಿಟ್ಟು ಕೂಸಿಗೆ ಬುದ್ದಿ ಹೇಳೀವೇ
ಕೋಶಭಾಗ್ಯದಭಿಮಾನಿ ಶ್ರೀಶನೇ ಈಶ ಕಾಣಮ್ಮಾ ॥ ॥೬॥

ಪಾಪಾದ ಭೀತಿ ತೋರದು ಭೂಪರಂಗಾ ಅಂಜಾನಮ್ಮಾ
ಪಾಪರಹಿತರಾದವರ ತಪಸಿಗಳೊಡೆಯನಮ್ಮಾ ॥ ॥೭॥

ಮ್ಯಾಣದ ಚೇಳು ತೋರುವೆ ಜಾಣ ರಂಗಾ ಅಂಜಾನಮ್ಮ
ಮೇಣಾ ಪೂವತ್ತಾರುಲಕ್ಷ ತಾ ಶಿಂಶುಮಾರನಮ್ಮಾ ॥ ॥೮॥

ಅನ್ನವಸನಗಳಿತ್ತು ಮನ್ನಿಪೆವೆಂದಾರೆ ಪುಸಿ
ಕನ್ನೆ ದ್ರೌಪದಿ ದುಮ್ಮಾನ ಮುನ್ನೆ ಇದಕೆ ಸಾಕ್ಷಿಯಲ್ಲೇ॥ ॥೯॥

ಅಣ್ಣತಮ್ಮ ಬಂಧು ಬಳಗ ಜನಕರುಂಟೇನೆ ಹೇಳೀವೇ
ಅನಾದಿಕಾಲದಿಂದಾ ಘನ್ನ ತಾನೇ ಏಕಮೇವಾ ॥ ॥೧೦॥

ಚಿನ್ನ ನೀ ಅಣ್ಣಾ ಬಾಯೆಂದು ಮನ್ನಿಸೆವೆಂದಾರೇ ಪುಸಿ
ಅನಂತವೇದಗಳಿವನ ಬಣ್ಣಿಸಿ ಹಿಂದಾಗಲಿಲ್ಲೇ ॥ ॥೧೧॥

ಊರು ಕೇರಿಗಳಾ ಬಿಟ್ಟು ದೂರ ಬಾರಾಹೋದೇವೆನೇ
ಸಾರವ್ಯಾಪ್ತನಾಗೀ ಇಪ್ಪಾ ಯಾರಿಗೆ ದೂರುವೇನಮ್ಮಾ ॥ ॥೧೨॥

ಕದ್ದು ಕದ್ದೋಡುವಾ ನಮ್ಮಲಿದ್ದು ಪಿಡಿಯಲೊತಾವಲ್ಲೇ
ರುದ್ದರನ್ನಾ ಓಡೀಸೀದಾ ಮುದ್ದುರಂಗಾ ನಿಮಾನಮ್ಮಾ ॥ ॥೧೩॥

ಹಗ್ಗದೀ ಕಟ್ಟೀವಾರಾಗ ಬಗ್ಗನಮ್ಮಾ ನಿನ್ನಾ ಮಗಾ
ಅಗಳಿಗೇ ಖಳರ ಉಕ್ಕು ತಗ್ಗಿಸಿ ಬಂದೀಹಾನಮ್ಮಾ ॥ ॥೧೪॥

ಇಂದು ನಿನ್ನಾ ಕಂದನಾಟಾ ಚೆಂದವೆಂದೂ ವಂದೀಸುವೆವೇ
ತಂದೆ ವ್ಯಾಸವಿಠ್ಠಲ ಎಮಗೆ ಬಾಂಧವನಾದನು ಕಾಣೇ ॥ ॥೧೫॥



**ಅರ್ಥವಿವರಣೆ :—**

ಪ್ರಸಕ್ತ ಕೀರ್ತನಸಾಹಿತ್ಯದಲ್ಲಿ ವ್ಯಾಸವಿಠ್ಠಲಾಂಕಿತ **ಶ್ರೀ ಕಲ್ಲೂರು ಸುಬ್ಬಣ್ಣಾಚಾರ್ಯರು** ನಂದಗೋಕುಲದಲ್ಲಿ ಗೋಪಿಯ ಮನೆಗೆ ಬಂದ ಗೋಪಿಕಾಸ್ತ್ರೀಯರು ತುಂಟ ಕೃಷ್ಣನ ವಿರುದ್ಧ ದೂರು ಹೇಳುವ ನೆವದಲ್ಲಿ ಅವನ ಮಹಾಮಹಿಮಾತಿಶಯಗಳನ್ನು ವರ್ಣಿಸುವ ಹೃದಯಸ್ಪರ್ಶ ಸನ್ನಿವೇಶವನ್ನು ಸಚಿತ್ರವಾಗಿ ಚಿತ್ರೀಕರಣಮಾಡಿದ್ದಾರೆ.

**ಅಟ್ಟೊಳಿಗೇ** = ಹಿಂಸೆ (ಕಾಟದಿಂದ). **ಒಂದುಪಾಯವ** = ಕೃಷ್ಣನ ಕಾಟವ ತಾಳಲಾರೆವಪ್ಪ. ಅದರ ಪರಿಹಾರಕ್ಕೆ ದಾರಿಯನ್ನು ನಾವು ಕಾಣೆವು. **ಹಿರಿಯರಾದವರಿಗೆ** = ನಂದಗೋಕುಲದಲ್ಲಿ ಹಿರಿಯರಿಗೆ ಹೇಳೋಣವೆಂದರೆ, **ಸರಸಿಜ ಸಂಭವನಿಗೆ ಹಿರಿಯ** = ಶ್ರೀಕೃಷ್ಣನು ಜೀವೋತ್ತಮರಾದ ಬ್ರಹ್ಮದೇವರಿಗಿಂತಲೂ ಅತ್ಯಂತ ಹಿರಿಯನು. **ಮಾಯಗಳ ಮಾಡೀ** = ಮಾಯಾಮಂತ್ರಗಳಿಂದ ಅವನನ್ನು ವಶದಲ್ಲಿಟ್ಟುಕೊಳ್ಳುವೆವು ಎಂದರೆ- **ಮಾಯಾದೇವಿಗೆ ಸಿಗದೆ** — ಶ್ರೀಲಕ್ಷ್ಮೀದೇವಿಯ ಆಲೋಚನೆಗೂ ಸಿಲುಕದ ಕೃಷ್ಣನನ್ನು ನಾವೆಂದು ವಶೀಕರಿಸಿಕೊಳ್ಳಬಲ್ಲೆವು? **ಗುಮ್ಮನಾ ತೋರಿದರೀಗಾ** = ಗುಮ್ಮನನ್ನು ಕರೆಯುತ್ತೇವೆ-ಎಂದು ಬೆದರಿಕೆ ಹಾಕೋಣವೆಂದರೇ, **ಶ್ರೀನಾರಸಿಂಹ ಅದ್ಭುತಾದ ದೈವ** = ತಾನೇ ನರಸಿಂಹರೂಪದಿಂದ ಭಯಂಕರ ರೂಪವನ್ನು ಪ್ರದರ್ಶಿಸುತ್ತಾ, ಕಂಭದಿಂದ ಸಿಗದು ಒಗೆದು ಬಂದ. **ಅಭಿಮಾನಿ** = ಭಾಗ್ಯಾಭಿಮಾನಿಯಾದ ಶ್ರೀಲಕ್ಷ್ಮೀದೇವಿಗೆ ನಿಯಾಮಕ ಅಬ್ಬರದ ದೈವ. **ಅರವಿ ಸರ್ಪಮಾಡಿ** = ಬಟ್ಟೆಯಿಂದ ಹಾವು ಮಾಡಿ ಅದರಿಂದ ಅವನನ್ನು ಅಂಜಿಸುತ್ತೇವೆಂದರೆ, **ಖರೆಯಾಗಿದ್ದ** = ನಿಜವಾಗಿಯೂ ಮಹಾಸರ್ಪಶ್ರೇಷ್ಠನಾದ ಶೇಷನನ್ನೇ ತನ್ನ ಹಾಸಿಗೆಯಾಗಿ ಮಾಡಿಕೊಂಡು ಮಲಗಿದ್ದಾನೆ! **ಅರಸಾರಿಗ್ಹೇಳಾದಾನು** = ದೊರೆಯಲ್ಲಿ ಹೋಗಿ ದೂರು ಹೇಳುವೆವೆಂದರೆ, **ಧರೆ ಗಗನ ಪಾತಾಳದ ಅರಸ** = ತಾನೇ ವಿರಾಡ್ರೂಪಿಯಾಗಿ ಸ್ವರ್ಗ–ಭೂಮಿ–ಪಾತಾಳವನ್ನು ಆಕ್ರಮಿಸಿಕೊಂಡಿರುವ ಜಗತ್ಪ್ರಭುವಾಗಿದ್ದಾನೇ. **ಕಾಸುವೀಸಾ** = ಕಾಸಿನ ಆಸೆಯನ್ನು ತೋರಿಸಿ, ದೂರಕ್ಕಟ್ಟುವೆವೆನೆಂದರೆ. **ಕೋಶದಭಾಗ್ಯ ಅಭಿಮಾನಿ** = ಭಾಗ್ಯಾಭಿಮಾನಿಯಾದ ಶ್ರೀ ಲಕ್ಷ್ಮೀದೇವಿಗೆ ನಿಯಾಮಕದ

ನಾಗಿದ್ದಾನೆ. **ಪಾಪಾದ ಭೀತಿ**=ಎಲೈ ಕೃಷ್ಣ ! ನೀನು ಹೀಗೆ ಕಾಟ ಕೊಟ್ಟರೆ, ಅದರಿಂದ ನಿನಗೆ ಪಾಪವು ಸಂಭವಿಸುವುದು – ಎನ್ನೋಣ ವೆಂದರೇ, **ತಪಸಿಗೆಳರೊಡೆಯ** = ಪಾಪರಹಿತವಾದ ತಪಸ್ವಿಗಳಿಗೆ ಫಲ ಪ್ರದನು ! **ಮ್ಯೊಣದಾ ಚೇಳು**=ಮೇಣದಿಂದ ಮಾಡಿದ ಚೇಳನ್ನು ಅವನ ಮುಂದೆ ಬಿಟ್ಟು ಹೆದರಿಸೋಣವೆಂದರೇ, **ತಾ ಶಿಂಶುಮಾರನವ್ವ** = ಮುವತ್ತಾರು ಲಕ್ಷಯೋಜನದ ವ್ಯಾಪ್ತಿವುಳ್ಳ ಶಿಂಶುಮಾರ ರೂಪನಾಗಿ ತಾನೇ ಜಗತ್ತಿಗೆ ಆಧಾರನಾಗಿದ್ದಾನೆ. **ಅನ್ನ ವಸನಗಳನಿತ್ತು** = ಮೃಷ್ಟಾನ್ನ ಮತ್ತು ಉತ್ತಮ ವಸ್ತ್ರಗಳನ್ನು ಇತ್ತು ಕಳುಹಿಸೋಣವೆಂದರೇ, **ಕನ್ನೆ ದ್ರೌಪದೀ ದುಮ್ಮಾನ** = ದ್ರೌಪದಿಯ ಮೊರೆಯನ್ನು ಕೇಳಿ ಅಕ್ಷಯ ಪಾತ್ರೆಯ ದ್ವಾರಾ ದೂರ್ವಾಸರಿಗೆ ಮತ್ತು ಅವರ ಶಿಷ್ಯಪರಿವಾರಕ್ಕೆ ಮೃಷ್ಟಾನ್ನ ನೀಡಿದ ಪ್ರಸಂಗ–ತುಂಬಿದ ಸಭೆಯಲ್ಲಿ ದ್ರೌಪದಿಗೆ ವಸ್ತ್ರಪುಂಜ ಗಳನ್ನು ಅನುಗ್ರಹಿಸಿ, ಅವಳ ಮಾನ ಸಂರಕ್ಷಣೆ ಮಾಡಿದ ಪ್ರಸಂಗ–ಎರಡು ಪ್ರಸಂಗಗಳಲ್ಲಿಯೂ ಶ್ರೀಕೃಷ್ಣನ ಅಕ್ಷಯಪ್ರದತ್ವವನ್ನು ಕೊಂಡಾಡಿದ್ದಾರೆ ಗೋಪಸ್ತ್ರೀಯರು **ಅಣ್ಣಾ ತಮ್ಮಾ....** . = ನಿನಗೆ ಅಣ್ಣ–ತಮ್ಮ –ತಂದೆ–ತಾಯಿ–ಬಂಧು ಬಳಗ ಯಾರಾದರೂ ಇದ್ದಾರೆಯೋ–ಎಂದು ಹಂಗಿ ಸೋಣವೆಂದರೇ. **ತಾನೇ ಏಕಮೇವ** =ಅನಾದ್ಯಂತ ಕಾಲದಿಂದ ತಾನೊ ಬ್ಬನೇ ಏಕಮೇವ ಅದ್ವಿತೀಯನೆನಿವ್ವಾನೆ ! **ಮನ್ನಿಸೆವೆಂದಾರೇ** ಅವನನ್ನು ಮುಕ್ತಕಂಠದಿಂದ ಹೊಗಳೋಣವೆಂದರೇ, **ಅನಂತವೇದಗಳಿ ವನ** = ಅನಂತವೇದಗಳಿಂದ ಪ್ರತಿಪಾದ್ಯನಾಗಿದ್ದಾನೆ ! **ಊರುಕೇರಿ ಗಳಾ ಬಿಟ್ಟು** = ಊರುಕೇರಿಗಳಿಂದ ಹೊರಗೆ ಅಟ್ಟೋಣವೆಂದರೇ, **ಸಾರ ವ್ಯಾಪ್ತನಾಗೀ ..** ಅಣುರೇಣುತೃಣಕಾಷ್ಠ ಪರಿಪೂರ್ಣನಾಗಿ ಸರ್ವತ್ರ ವ್ಯಾಪಿಸಿದ್ದಾನೆ. **ಹಗ್ಗದೀ ಕಟ್ಟಿದರಾಗ** = ಹಗ್ಗದಿಂದ ಸುತ್ತಿ ಕಟ್ಟೋಣ ವೆಂದರೇ–ದಾನವಾಂತಕನಾಗಿ ಪದ್ದೈವನಾಗಿದ್ದಾನೆ ! **ಬಾಂಧವನಾದನು** = ಕೊನೆಯಲ್ಲಿ ಗೋಪಸ್ತ್ರೀಯರು ಯಶೋದೆಗೆ ನಿನ್ನ ಮಗನ ಅಂದವೇನು ಬಣ್ಣಿಸುವೆವು ? ಅವನು ನಮಗೆಲ್ಲಾ ಪರಮಾಪ್ತಬಂಧುವಾಗಿದ್ದಾನೆಂದು ಚಾಡಿ ಹೇಳುವ ನೆಪದಲ್ಲಿ ಸ್ತುತಿಸಲು ತೊಡಗುತ್ತಾರೆ. ಇದಲ್ಲವೇ ಆ ಅಪ್ರ ಮೇಯನ ಅನಂತ ಮಹಿಮೆಯ ವೈಭವ!

## ೬೩೬

## (ವೆಂಕಟವಿಠ್ಠಲಾಂಕಿತ)

**ರಾಗ–ಕಾಪಿ** **ಅಟತಾಳ**

ಚೆಂದವೇನೇ ಗೋಪಿ ಚೆಂದವೇನೇ।
ನಿನ್ನ ಮಗನ ದುಡುಕು–ಚೆಂದವೇನೇ ॥ ॥ಪ॥

ಚೆಂದದಿಂದಲಿ ಅರವಿಂದಾಕ್ಷ ಬೆಣ್ಣೆಯು
ತಿಂದು ಬೇಗದಿ ಕೃಷ್ಣ ಬಂದೋಡಿ ನಿಂತನೆ॥ ॥೧॥

ಸದ್ದುಮಾಡದೆ ಹಾಲು ಕದ್ದು ನಮ್ಮನೆಯೊಳ।
ಗಿದ್ದ ಸ್ತ್ರೀಯರನೆಲ್ಲ ಮುದ್ದಾಡಿ ಪೋದನೆ॥ ॥೨॥

ಚೋರನೆನಿಸಿಕೊಂಬ ಧೀರ **ವೆಂಕಟವಿಠ್ಠಲ**।
ವಾರಿಜಾಕ್ಷನ ಪಾದ ಸೇರಿದೆ ನಾನೀಗ॥ ॥೩॥

**ಅರ್ಥವಿವರಣೆ :–**

**ವೆಂಕಟವಿಠ್ಠಲಾಂಕಿತ** ದಾಸವರ್ಯರು ಮಾನಾಮಧುರೈನಲ್ಲಿ (ತಮಿಳು ನಾಡು)ನಲ್ಲಿ ವಾಸವಾಗಿದ್ದರು ಸುಪ್ರಸಿದ್ಧ ವಾಗ್ಗೇಯಕಾರರೆಂದು ಖ್ಯಾತ ರಾಗಿದ್ದರು ಸಂಗೀತಶಾಸ್ತ್ರದಲ್ಲಿ ಪ್ರವೀಣರು. **ಚೆಂದವೇನೇ**=ಎಲೈ ಯಶೋದೆ ! ನಿನ್ನ ಮಗನ ತುಂಟತನ ಚೆನ್ನವೇನೇ ?– ಎಂದು ದೂರು ತ್ತಾರೆ ಗೋಪಿಕಾಸ್ತ್ರೀಯರು. **ದುಡುಕು**=ಹಿಂದೆ ಮುಂದೆ ನೋಡದೆ ಮಾಡುವ ಚೇಷ್ಟೆ. **ಅರವಿಂದಾಕ್ಷ**=ಕಮಲ ಪುಷ್ಪದ ದಳದಂತೆ ವಿಸ್ತಾರ ವಾದ ನೇತ್ರವುಳ್ಳ ಸುಂದರ ಶ್ರೀಕೃಷ್ಣ, **ಬಂದೋಡಿ ನಿಂತನೆ**=ಗುಟ್ಟಾಗಿ

ಮನೆಯನ್ನು ಪೊಕ್ಕು, ಬೆಣ್ಣೆಯನ್ನು ಕದ್ದು ಮೆದ್ದು, ಏನೂ ಅರಿಯ ದವನಂತೆ ಮುಗ್ಧಭಾವದಿಂದ ಓಡಿ ಗೋಪಿಕಾಸ್ತ್ರೀಯರ ಮುಂದೆ ಬಂದ ನಿಂತ ಪ್ರಸಂಗ. **ಪಾಲು ಕದ್ದು** = ಗಡಿಗೆಯಲ್ಲಿದ್ದ ಮೀಸಲ ಹಾಲನ್ನು ಕುಡಿದು, ಸ್ತ್ರೀಯರೊಡನೆ ಸರಸವಾಡಿ ಹೋದನೆ! **ಚೋರ** = ಹಾಲು-ಮೊಸರು ನವನೀತಚೋರ. **ಧೀರ** = ಮಹಾ ಸಮರ್ಥಶಾಲಿ, **ವಾರಿಜಾಕ್ಷ** = ಕಮಲದಳಾಯತನೇತ್ರ ಶ್ರೀಕೃಷ್ಣನ ಒಂದೊಂದು. ಆಟ-ಲೀಲಾವಿಲಾಸ ವೈಭವವಾಗಿತ್ತು ಆನಂದಗೋಕುಲದಲ್ಲಿ.

## ೬೪೭

### (ಭೀಮೇಶವಿಠ್ಠಲಾಂಕಿತ)

**ರಾಗ-ಜಾವಡಿ** **ಆದಿತಾಳ**

ಕಾಣದೆ ನಿಲ್ಲಲಾರೆ ಕೋಮಲೆ ಕಾಂತನಗಲಿದಿನದಿ ॥ ॥ಪ॥

ಸ್ಮರಶರ ಮರವಣೆ ಪರಿಹರಿಸುವ
ಪರತರ ಸಿರಿವರ ನರಹರಿ ಚರಣವ ॥ ॥೧॥

ಮನೆ ತನಯ ಸ್ವಜನ ನಿಜ
ತನುವನು ಕನಸಿನಲಿ ನೆನೆಸದು ಮನ ॥ ॥೨॥

ಈಶ **ಭೀಮೇಶವಿಠ್ಠಲ** ಸುರಸುಹರಣನ
ವಶದೊಳಿಸನುವುದು ಕುಸುಮ ಸುವಸನೆ ॥ ॥೩॥

**ಅರ್ಥವಿವರಣೆ :—**

**ಕಾಣದೆ ನಿಲ್ಲಲಾರೆ**= ಶ್ರೀಕೃಷ್ಣನ ಸಿರಿಮೊಗದ ದರ್ಶನವಾಗದೇ ನಾನು ಜೀವಿಸಲಾರೆ. **ಸ್ಮರಶರ**= ಮನ್ಮಥನ ಬಾಣ (ಪುಷ್ಪಬಾಣಗಳು), **ಉರವಣೆ** = ಮನ್ಮಥನ ಬಾಧೆ, **ಪರತರ**= ಪರನಾಮಕಳಾದ ಲಕ್ಷ್ಮಿಗಿಂತ ಅನಂತಾನಂತಕೋಟಿ ಗುಣದಿಂದ ಅಧಿಕನಾದ ಶ್ರೀಹರಿ, **ಸಿರಿವರ**= ಶ್ರೀ ರಮಾಪತಿ, **ಮನೆ ತನಯ ಸ್ವಜನ** = ನನ್ನ ಮನೆ. ಮಕ್ಕಳು, ಬಂಧು ಬಾಂಧವರು, **ನಿಜ ತನುವನು**= ಕಡೆಗೆ ನನ್ನ ಈ ದೇಹ, ಅವನಿಲ್ಲದೆ ನನಗೆ ಏನೇನೂ ಬೇಡ, **ಈಶ**= ಸರ್ವನಿಯಾಮಕನಾದ, **ಸುರಸುಹರಣನ** = ದೇವತೆಗಳಿಗೆ ಮನೋಹರನಾದ **ಕುಸುಮ ಸುವಸನೆ**= ಪುಷ್ಪದಳ ದಂತೆ ಮೃದುವಾದ ವಸ್ತ್ರವುಳ್ಳವಳೇ.

೩೪೮

(ಅಂಕಿತ–ಅನಂತಾದ್ರೀಶ)

**ರಾಗ–ಕಲ್ಯಾಣಿ** **ಆದಿತಾಳ**

ಎಷ್ಟು ಅಟ್ಟುಳಿ ಕೊಡುವ ನೋಡಮ್ಮ
ಶ್ರೀಕೃಷ್ಣ ನಿನ್ನ ಮಗ ಎಷ್ಟು ಅಟ್ಟುಳಿ ಕೊಡುವ ನೋಡಮ್ಮ ॥ ॥ಪ॥

ಎಷ್ಟು ಅಟ್ಟುಳಿ ಕೊಡುವ ನಿಮಗಿವ
ದುಷ್ಟತನ ಯಥೇಷ್ಟ ಇರುವುದು
ಸ್ಪಷ್ಟ ನಾನಿವಗೆಷ್ಟು ಪೇಳ್ದರೆ
ಅಷ್ಟ ತಾ ಮತ್ತಿಷ್ಟು ಮಾಡುವ ॥ ॥ಅ॥

ಸಿಕ್ಕ ಮನೆ ಮನೆ ಹೊಕ್ಕು ಹುಡುಕುವನೆ ತಾ
ಸಿಕ್ಕದಿರುವುತ ತಕ್ಕ ತುಡುಗಿನ ರಕ್ಕನಾಗಿಹನೇ ॥
ಅಕ್ಕ ಹೇಳ್ವೆಳಹೆರಕ್ಕರದಿ ಕೈ
ಇಕ್ಕಿ ತೆಗೆದಿಹ ಚೊಕ್ಕ ಬೆಣ್ಣೆಯು
ಚಿಕ್ಕ ಬಾಲರಿಗಿಕ್ಕಿ ತಿಂಬುವ
ಮಿಕ್ಕ ಬೆಣ್ಣೆಯು ಬೆಕ್ಕಿಗ್ಹಾಕುವ॥ ॥೧॥

ಅಡಿಗೆ ಮನೆಯಲ್ಲಡಗಿಕೊಂಡಿರುವಾ– ಅಲ್ಲಿರುವ
ಬಾಂಢವ ಬುಡವ ಮೇಲ್ಮಾಡಡಕಲೇರಿಸುವಾ ॥
ಅಡಿಗಳನು ಅಲ್ಲಿಡುತ ನೆಲವಿನ
ಲಿಡುವ ಪಾಲ್ಮೊಸರ ಕುಡಿವ ಗೆಳೆಯರ
ಹಿಡಿವುತಿರಲು ಬಿಡಲು ಮತ್ತೆ
ಗಡಿಗೆಯನು ತಾ ಒಡೆದು ಓಡುವಾ ॥೨॥

ಎಂಥನಿವ ಕಳ್ಳನಂತೆ ಮಾಡುವನೆ ಬೇ
ಕಂಥ ಕರುಗಳ ತಂತು ಬಿಚ್ಚುತ ನಿಂತು ನೋಡುವನೇ ॥
ಎಂಥ ಮತ್ತಿರುವಂಥ ಆಟ್ಟುಳಿ
ಇಂತು ನಾವಿನ್ನಂತು ಕಾಣವೆ
ಕಾಂತೆ ಮನಬಂದಂತೆ ಬೈದರೆ
ನಿಂತು ನಗುವನು **ಅನಂತಾದ್ರೀಶನು** ॥ ॥೩॥



**ಅರ್ಥವಿವರಣೆ :–**

**ಶ್ರೀ ವೆಂಕಟೇಶಪಾರಿಜಾತದ** ಕರ್ತೃಗಳಾದ **ಅನಂತಾದ್ರೀಶ ವಿಠ್ಠಲಾಂಕಿತರಾದ** ಹರಿದಾಸರ ಸುಂದರ ಕೀರ್ತನಸಾಹಿತ್ಯವಿದು.

ಅಟ್ಟುಳಿ = ಹಿಂಸೆ–ಕಾಟ. **ತಾ ಮತ್ತಿಷ್ಟು ಮಾಡುವ** =

ನಾನು ಎಷ್ಟು ಬುದ್ಧಿವಾದ ಹೇಳಿದಷ್ಟೂ ಚೇಷ್ಟೆ ಅಷ್ಟು ಜಾಸ್ತಿ. **ತುಡುಗಿನ** = ಕಳ್ಳತನದ, **ತಕ್ಕ** = ವಂಚಕ (ಮೋಸಗಾರ) **ಬೆಕ್ಕಿಗ್ಹಾಕುವ** = ತನಗೆ ಬೇಕಾದಷ್ಟು ಬೆಣ್ಣೆಯನ್ನು ಮೆದ್ದು, ಉಳಿದುದನ್ನು ಬೆಕ್ಕು ಬಾಲಕರಿಗೆ ಕೊಟ್ಟು ಮಾರ್ಜಾಲ ಪಾಲು ಮಾಡುವನು. **ಭಾಂಡವ**= ಅಡುಗೆ ಮನೆಯನ್ನು ಪೊಕ್ಕು, ಅಲ್ಲಿದ್ದ ಮಡಿಕೆಯನ್ನು ಬೋರಲು ಹಾಕಿ, ಅವರ **ಮೇಲೆ** ನಿಂತು, ನೆಲುವಿನಲ್ಲಿರುವ **ಮಡಿಕೆಯನ್ನು** ಕೆಳಗಿಳಿಸಿ, ಕೆನೆ ಪಾಲು, ಹೆಪ್ಪು ಮೊಸರುಗಳನ್ನು ತಿಂದು, ಚೆಲ್ಲಾಡುವನು. ಖಾಲಿ ಮಡಕೆಯನ್ನು ಒಡೆದು ಚೂರು ಚೂರು ಮಾಡುವನು. **ತಂತು ಬಿಚ್ಚುತ** = ಕರುಗಳ ಕುತ್ತಿಗೆಗೆ ಹಾಕಿರುವ ಹಗ್ಗವನ್ನು ಬಿಚ್ಚಿ, ಆಕಳಿನ ಸಮೀಪಕ್ಕೆ ಬಿಡುವನು ಆ ದೃಶ್ಯವನ್ನು ನೋಡುತ್ತಾ ತಮಾಷೆ ಮಾಡುವನು. **ನಿಂತು ನಗುವನು** = ಅವನ ಕಾಟ ತಾಳಲಾರದೇ, ನಾವು ಮನಸ್ಸಿಃ ಬೈದರೆ, ಮಂದಹಾಸ ಬೀರುತ್ತಾ ನಿಲ್ಲುವನು. ಆ ಮುಗ್ಧ ಮುಗುಳುನಗೆಯಿಂದ ನಮ್ಮನ್ನು ಮೋಹಪರವಶ ಮಾಡುವನು



## ೬೪೯

### (ಶ್ಯಾಮಸುಂದರವಿಠ್ಠಲಾಂಕಿತ)

**ರಾಗ–ಭೈರವಿ** **ತ್ರಿಪುಟತಾಳ**

ಎಂದು ಕಾಂಬೆನೆ ನಂದಗೋಪನ ಕಂದ ಶ್ರೀ ಗೋವಿಂದನ
ಮಂದರಾ ಜಲಧರ ಯದುಕುಲಚಂದ್ರ ಗುಣಗಣಸಾಂದ್ರನ ॥ ॥ಪ॥

ವಿಜಯಸೂತನ ವಿಶ್ವಪಾಲನ ಭುಜಗವರಪರ್ಯಂಕನ
ರಜನಿಚರರಳಿದ ಜನ ಜನಕನ ತ್ರಿಜನಪತಿ ದ್ವಿಜಗಮನನ ॥ ॥೧॥

ಪಾಲು ದಧಿ ನವನೀತ ಚೋರನ ಬಾಲಕೃಷ್ಣ ಗೋಪಾಲನ
ಶೈಲ ಬೆರಳಿಲಿ ತಾಳಿ ಗೋಕುಲ ಪಾಲಿಸಿದ ಪರಮಾತ್ಮನಾ ॥ ॥೨॥

ಭಾಮೆ ರುಕ್ಮಿಣಿರಮಣ ರಂಗನ ಸಾಮಗಾನ ವಿಲೋಲನ
ಶ್ರೀಮದಾನಂದಮುನಿ ಕರಾರ್ಜಿತ ಶ್ಯಾಮಸುಂದರವಿಠ್ಠಲನ ॥ ॥೩॥



**ಅರ್ಥವಿವರಣೆ :-**

**ನಂದಗೋಪನ ಕಂದ** = ನಂದಗೋಪನ ಸಾಕು ಪುತ್ರ ಶ್ರೀಕೃಷ್ಣ. **ಮಂದರಾಚಲಧರ** = ಸಮುದ್ರಮಥನ ಸಮಯದಲ್ಲಿ ಮಂದರಪರ್ವತವನ್ನು ತನ್ನ ಬೆನ್ನಿನ ಮೇಲೆ ಹೊತ್ತ ಕೂರ್ಮಾವತಾರಿ ಶ್ರೀಹರಿ. **ಯದು ಕುಲ ಚಂದ್ರ** = ಯದುವಂಶ ಸಂಜಾತನಾದ ಶ್ರೀಕೃಷ್ಣ. **ಗುಣಗಣ ಸಾಂದ್ರನ** = ಅನಂತಕಲ್ಯಾಣಗುಣಗಣಪೂರ್ಣನನ್ನು. **ವಿಜಯ ಸೂತನ** = ಪಾರ್ಥಸಾರಥಿಯಾದ ಶ್ರೀಕೃಷ್ಣ. **ವಿಶ್ವಪಾಲನ** = ಸಮಗ್ರ ಜಗದ್ರಕ್ಷನು. **ಭುಜಗ ವರ ಪರ್ಯಂಕನ** = ಸರ್ಪ ಶ್ರೇಷ್ಠರಾದ ಶೇಷದೇವರ ಮೇಲೆ ಶಯನಿಸಿರುವ ಶ್ರೀಮನ್ನಾರಾಯಣ **ರಜನೀಚರರ ಅಳಿದ**= ರಾತ್ರೀ ಸಂಚರರಾದ ದೈತ್ಯರನ್ನು ಸಂಹರಿಸಿದ **ಅಜಜನಕನ**= ಬ್ರಹ್ಮನನ್ನು ತನ್ನ ನಾಭೀಕಮಲದಲ್ಲಿ ಪಡೆದವನು. **ತ್ರಿಜಗಪತಿ** = ಮೂರು ಲೋಕದ ಪ್ರಭು. **ದ್ವಿಜಗಮನನ** = ಗರುಡ ವಾಹನ (ದ್ವಿಜ-ಪಕ್ಷಿ-ಗರುಡ). **ಶೈಲ ಬೆರಳಲಿ** = ಗೋವರ್ಧನಗಿರಿಯನ್ನು ತನ್ನ ಕೈಯಿನ ಕಿರುಬೆರಳಿಂದ ಲೀಲಾಜಾಲವಾಗಿ ಎತ್ತಿದವನ (ಗೋವರ್ಧನ ಧಾರೀ). **ಭಾಮೆ** = ಸತ್ಯಭಾಮೆ. **ಸಾಮಗಾನವಿಲೋಲನ** = ಸಾಮಗಾನ (ಸಂಗೀತ) ಪ್ರಿಯನ. **ಶ್ರೀಮದಾನಂದಮುನಿ ಕರಾರ್ಚಿತ** = ಶ್ರೀ ಮನ್ಮಧ್ವಮುನಿಗಳಿಂದ ಪೂಜಿತನಾದ ಉಡುಪಿಯ ಶ್ರೀಕೃಷ್ಣ.



## ೬೫೦

## ಕವಿಕುಲತಿಲಕ ಶ್ರೀ ತಿಪ್ಪಣ್ಣಾರ್ಯ ಕವಿವಿರಚಿತ

## "ಕಾಳೀಯ ಮರ್ದನ ಚರಿತ್ರೆ" ಯಿಂದ ಆಯ್ದ ಕೀರ್ತನಸಾಹಿತ್ಯ

(ಅಂಕಿತ – ಖಾದ್ರಿನೃಹರಿ)

ರಾಗ–ಪಂತುವರಾಳಿ ರೂಪಕತಾಳ

ಮಡುವು ಧುಮುಕಿದ ರಂಗ–ಮಡುವ ಕಲಕಿದ ||ಪ||

ಕಡಹದ ಮರವೇರಿ ಕಾಲ–ಕಡಗ ಗೆಜ್ಜೆ ಘಲ್ಲು ಘಲ್ಲೆನೆ || ||ಅ||

ಬಟ್ಟ ಮುತ್ತಿನ ಹಾರ ಪದಕ
ವಿಟ್ಟು ಕಡಗ ಬಾಹುಪುರಿಯು
ನೆಟ್ಟನೆ ಸವರಿಸುತ ಜಗ–
ಜ್ಜಟ್ಟಿಯಂತೆ ಭುಜವನೊದರಿ || ||೧||

ಉಟ್ಟ ಪೀತವಸನ ನೆರಿಯು
ಇಟ್ಟ ಕನಕ ರಶನ ಬಂಧದಿ
ದಿಟ್ಟನಾಗಿ ನೀಲಮಣಿಯು
ಪುಟ್ಟ ಚೆಂಡು ಹಾರುವಂತೆ || ||೨||

ಮುಟ್ಟಲಮ್ಮದ ಕಾಳಿಂಗನ್ನ
ಕುಟ್ಟಿ ಕಾಲಿಲೊದೆವೆನೆಂದು
ಭಟ್ಟರು ಪೊಗಳುವಂತೆ ಉಡಿಯು
ಕಟ್ಟಿದ ಘಂಟೆ ಘಣಘಣರೆನೆ || ||೩||

ಲಂಡತನದಿ ದಿಂಡು ಗೆಡಹಿ
ತೊಂಡನ ಮಾಡಿಕೊಂಡು ಬಿಡುವೊ

ಗಂಡುಗಲಿಯೆಂತೆಂಬ ತೆರದಿ
ಗಂಡು ಪೆಂಡ್ಯ ಘಂಘಣರೆನೆ ॥ ॥೪॥

ಚಂದದಿಂದ ನಾರದಾದ್ಯ
ರಂದವಾದ ರಂಭಾದಿಗಳು
ನಿಂದು ನುತಿಸಿ ನಟಿಸೆ ದೇವ-
ದುಂದುಭಿಗಳು ದಂಧಣರೆನೆ ॥ ॥೫॥

ಕ್ಷಯರಹಿತ ದಯಾಸಮುದ್ರ
ಭಯನಿವಾರಣ ಭಕ್ತಲೋಕ
ಪ್ರಿಯ ನೀನೆಂದು ಬೊಮ್ಮಾದಿಗಳು
ಜಯ ಜಯತು ಉಘೇಯೆನಲು ॥ ॥೬॥

ಗರುಡ ಕಿನ್ನರ ಕಿಂಪುರುಷ
ವರವಧೂ ಜನಗಳರಿಸಿ
ವರ ಖಾದ್ರಿನೃಹರಿ ಪಿರದಿ
ಅರಳು ಮಲ್ಲಿಗೆ ಮಳೆಯ ಕರೆಯೆ ॥ ॥೭॥



**ಅರ್ಥವಿವರಣೆ :–**

ಕವಿಕುಲತಿಲಕನಾದ ತಿಪ್ಪಣ್ಣಾರ್ಯ ಕವಿಯು ಹನುಮದ್ವಿಲಾಸ-ಕಾಳೀಯ ಮರ್ದನ – ಕುಚೇಲೋಪಾಖ್ಯಾನ–ಎಂಬ ಮೂರು ಸುಪ್ರಸಿದ್ಧ ಯಕ್ಷಗಾನ ಕಾವ್ಯಗಳನ್ನು ಬರೆದಿರುತ್ತಾನೆ. ಪ್ರಸಕ್ತ ಕೀರ್ತನಸಾಹಿತ್ಯವು ಅವನ **ಕಾಳೀಯ ಮರ್ದನ** – ಎಂಬ ಯಕ್ಷಗಾನ ಕಾವ್ಯದಿಂದ ಆಯ್ಕೆಯಾಗಿದೆ

ಕಡಹದ ಮರವನ್ನೇರಿ ಶ್ರೀಕೃಷ್ಣನು ಕಾಳಿಂಗಸರ್ಪನು ವಾಸಮಾಡಿಕೊಂಡಿದ್ದ ಆಳವಾದ ಮಡುವಿಗೆ ಧುಮುಕಿ, ಕಾಳಿಂಗನ ಗರ್ವವನ್ನು ಭಂಗಗೊಳಿಸಿದ ಕಥಾಪ್ರಸಂಗವಿದು.

**ಮಡುವು** = ಯಮುನಾ ನದಿಯಲ್ಲಿ ಆಳವಾದ ಮಡುವಿನ ಪ್ರದೇಶ. ಅಲ್ಲಿ ಕ್ರೂರವಾದ ವಿಷದಿಂದ ಫೂತ್ಕರಿಸುತ್ತಿದ್ದ ಕಾಳಿಂಗನು ವಾಸಿಸುತ್ತಿದ್ದನು. **ಕಡಹ ಮರನೇರಿ** = ಆ ಮಡುವಿನ ದಡದಲ್ಲಿ ಒಂದು ಕಡಹದ ಮರವಿತ್ತು. ಸಮೀಪದಲ್ಲಿದ್ದ ಇತರ ವೃಕ್ಷಗಳೆಲ್ಲಾ ಕಾಳಿಂಗಸರ್ಪನ ವಿಷಜ್ವಾಲೆಯಿಂದ ಭಸ್ಮೀಭೂತವಾಗಿದ್ದರೂ, ಈ ಕಡಹದ ಮರದ ಮೇಲೆ ಗರುಡನು ಕೂತಿದ್ದು, ಅಮೃತ ಬಿಂದುಗಳನ್ನು ಸೇಚನ ಮಾಡಿದ್ದರಿಂದ, ಅದು ಸಜೀವವಾಗಿತ್ತು. **ಕಡಗ ಗೆಜ್ಜೆ** = ಶ್ರೀ ಕೃಷ್ಣನು ತನ್ನ ಕಾಲಿನಲ್ಲಿ ಧರಿಸಿದ್ದ ಕಾಲ್ಬಳೆಯ ಗೆಜ್ಜೆಗಳ ಘಲು ಘಲು ನಿನಾದ. **ಬಟ್ಟೆ ಮುತ್ತಿನ** = ಗುಂಡಗಿರುವ ಮುತ್ತಿನ ಹಾರ ಮತ್ತು ಅದಕ್ಕೆ ಕಟ್ಟಿದ ಪದಕ. **ಬಾಹುಪುರಿಯು** = ತೋಳ್ಬಳೆ (ಭಾಪುರಿ). **ನೆಟ್ಟನೆ ಸವರಿಸುತ** = ತನ್ನ ತೋಳ್ಬಳೆಗಳನ್ನು ಮೇಲಕ್ಕೆ ಸವರಿಸಿಕೊಂಡ. **ಭುಜವನು ಒದರಿ** = ತನ್ನ ಬಾಹುಗಳನ್ನು ಜಗಜಟ್ಟಿಗಳಂತೆ ಚಪ್ಪರಿಸಿದ. **ಪೀತವಸನ** = ಉಟ್ಟ ಪೀತಾಂಬರ. **ಕನಕ ರಶನ ಭಂದದಿ** = ರತ್ನ ಖಚಿತ ಸುವರ್ಣ ಬಂದಿ. **ನೀಲಮಣಿಯು** = ನೀಲ ರತ್ನಗಳ ಹಾರದಿಂದ ಅಲಂಕೃತನಾದ ಶ್ರೀಕೃಷ್ಣನು ಚೆಂಡು ಹಾರುವಂತೆ ಮಡುವಿಗೆ ಧುಮುಕಿದನು. **ಮುಟ್ಟಲಮ್ಮದ** = ಸಮೀಪಕ್ಕೆ ಹೋಗಲೂ ಸಾಧ್ಯವಿಲ್ಲದ ಭಯಂಕರ ವಿಷವನ್ನು ಫೂತ್ಕರಿಸುತ್ತಿದ್ದ ಕಾಳಿಂಗಸರ್ಪ. **ಭಟ್ಟರು** = ಹೊಗಳುಭಟ್ಟರು (ವಂದಿಮಾಗಧರು). **ಉಡಿಯ ಕಟ್ಟಿದ** = ಧುಮುಕಲು ಸಿದ್ಧನಾಗಿ ಸೊಂಟದ ಪಟ್ಟಿಯನ್ನು ಕಟ್ಟಿದನು. **ಲಂಡತನದಿ** = ಒರಟು ರೀತಿಯಲ್ಲಿ, **ದಿಂಡು ಗೆಡಹಿ** = ದೇಹವನ್ನು ಕೆಡವಿಕೊಂಡು. **ತೊಂಡನ ಮಾಡಿಕೊಂಡು** = ಅಧೀನನನ್ನಾಗಿ ಮಾಡಿಕೊಂಡು (ತೊಂಡ–ದಾಸ-ಕಿಂಕರ) **ಪೆಂಡ್ಯ** = ಕಾಲಿನ ಆಭರಣ. **ಅಂದವಾದ** = ಸುಂದರಿಯರಾದ ರಂಭಾದಿ ಅಪ್ಸರೆಯರು. **ಕ್ಷಯರಹಿತ** = ನಾಶವಿಲ್ಲದಿರುವವನು.

(ಅಚ್ಯುತನಾಮಕನು). **ಉಘೇ** = ಭೇಷ್-ಎಂಬ ಹೊಗಳಿಕೆಯ ಮಾತು. **ಅರಳು ಮಲ್ಲಿಗೆ ಮಳೆಯ** = ಅರಳು ಮಿಶ್ರಿತವಾದ ಮಲ್ಲಿಗೆ ಹೂವಿನ ವರ್ಷವನ್ನು ಶ್ರೀಕೃಷ್ಣನ ಶಿರಸ್ಸಿನ ಮೇಲೆ ಸುರಿಸಿದರು.

## ೬೫೧

## (ಅಂಕಿತ-ಶ್ರೀ ಖಾದ್ರಿ ನರಹರಿ)

**ರಾಗ-ಪುನ್ನಾಗವರಾಳಿ** **ಆದಿತಾಳ**

ಹೆಜ್ಜೆಗಳಿವೆ ನೋಡಿರೆ-ರಂಗೈಯನ
ಹೆಜ್ಜೆಗಳಿವೆ ನೋಡಿರೇ ॥ ॥ಪ॥

ಹೆಜ್ಜೆಗಳಿವೆ ನೋಡಿ-ಮೂಜ್ಜಗದೊಡೆಯನ
ಅಬ್ಜಾಂಕುಂಶ ಧ್ವಜ ವಜ್ರ ರೇಖೆಗಳುಳ್ಳ ॥ ॥ಅ॥

ಗಣನೆಯಿಲ್ಲದ ಧೇನುಗಣಗಳನೊಳಗೊಂಡು
ಪ್ರಣುತಿಪ ಗೋಪಾಲರಣುಗರನೊಡಗೂಡಿ
ತೃಣರಾಶಿಯುಳ್ಳ ಧಾರುಣಿಯಲ್ಲಿ ಚರಿಸುತ್ತ
ಮಣಿದು ದೇಹವನಿಲ್ಲಿ ಕುಣಿಕುಣಿದಾಡಿದ ॥ ॥೧॥

ಗಿಳಿಯಂತೆ ಕೂಗಿ ಕೋಗಿಲೆಯಂತೆ ಪಾಡಿ ಉ-
ಜ್ವಲ ಹಂಸೆಯಂದದಿ ಕುಲುಕುತ್ತ ನಡೆಯುತ್ತ
ಆಳಿಯಂತೆ ಮೊರೆದು ಎರಳೆಯಂತೆ ಚಿಗಿದು ನ-
ವಿಲು ಚಂದದಿಂದಿಲ್ಲಿ ನಲಿನಲಿದಾಡಿದ ॥ ॥೨॥

ಗರುಡಗಮನನೆಂಬ ಗರುವತನವ ಬಿಟ್ಟು
ತುರುಗದಾಟವನಾಡಿ ತುರುಗಾವರಿಗೆ ಸೋತು

ತುರುಗ – ತಾನಾಗಿ ಅವರುಗಳ ಪೊತ್ತಿರ್ದು
ತಿರುಗಿ ತಿರುಗಿ ಇಲ್ಲಿ ಹರಿಹರಿದಾಡಿದ ॥ ॥೩॥

ಚೆಂಡು ಬುಗುರಿ ಗೋಲಿ ಗುಂಡು ಗಜ್ಜುಗ ಚಿನ್ನಿ
ದಾಂಡು ಮಲ್ಲಿಗೆ ಹೂವ ಕೊಂಡಾಡಿ ದಣಿಸು
ಗೊಂಡು ಆಕಳ ಕರಕೊಂಡು ಪಾಲನು ಸವಿ–
ದುಂಡು ಮಿಕ್ಕುದ ಚೆಲ್ಲಿ ಕೊಂಡಾಡಿ ಪೋಗಿಪ್ಪನ ॥೪॥

ಮರನೇರಿ ಧುಮುಕಿದ ಗುರುತು ಪಾದಗಳಿವು
ನೆರಳೊಳು ಮುಳುಗಿರ್ದ ಕುರುಹಿನಡಿಗಳಿವು
ಶರಣರು ಪೂಜಿಪ ಚರಣತಳಗಳಿವು
ಹರಿಯಾದ **ಶ್ರೀಖಾದ್ರಿ ನರಹರಿ** ಚರಿಸಿದ ॥ ॥೫॥



**ಅರ್ಥವಿವರಣೆ : –**

ಕಾಳಿಂಗನ ಮಡುವಿಗೆ ತೆರಳಿದ ಶ್ರೀಕೃಷ್ಣನನ್ನು ಅರಸುತ್ತ ಗೋಪ ಗೋಪಿಯರು ಮಾರ್ಗದಲ್ಲಿ ಮೂಡಿದ್ದ ಶ್ರೀಕೃಷ್ಣನ ಹೆಜ್ಜೆಗಳ ಗುರುತು ಗಳನ್ನು ನೋಡಿ, ತಮ್ಮ ತಮ್ಮಲ್ಲಿಯೇ ಚರಣವೈಭವವನ್ನು ವರ್ಣಿಸು ತ್ತಾರೆ.

**ಮೂಜಗದೊಡೆಯನ** = ಮೂರು ಲೋಕದ ಅಧಿಪತಿಯಾದ ಶ್ರೀಕೃಷ್ಣ. **ಅಬ್ಜ ಅಂಕುಶ ಧ್ವಜ ವಜ್ರ ರೇಖೆಯುಳ್ಳ** = ಹಜ್ಜೆಯಲ್ಲಿ ಪದ್ಮ–ಅಂಕುಶ–ಧ್ವಜ–ವಜ್ರ ಮುಂತಾದ ಚಿಹ್ನೆಗಳು. **ಗಣನೆಯಿಲ್ಲದ** = ಅಪಾರವಾದ ಗೋವುಗಳ ಹಿಂಡು. **ಪ್ರಣುತಿಸ** = ಸ್ತುತಿ ಮಾಡುತ್ತಿದ್ದ. **ಗೋಪಾಲರಣುಗ** = ಗೋಪಾಲ ಬಾಲಕರೊಡಗೂಡಿ, ಹುಲ್ಲಿನ ಮೇಲೆ ಕುಣಿದಾಡಿದ ಶ್ರೀಕೃಷ್ಣನ ಹೆಜ್ಜೆಗಳು. **ಉಜ್ವಲಹಂಸೆಯಂತೆ** = ಶುಭ್ರ ಬಿಳಿಯ ಬಣ್ಣದ ಹಂಸದಂತೆ ಕುಲುಕುತ್ತ ನಡೆಯುತ್ತಿರುವ ಶ್ರೀಕೃಷ್ಣ. ಆಳಿ

**ಯಂತೆ** = ದುಂಬಿಯಂತೆ ಮೊರೆಯುತ್ತಾ, **ಎರಳೆಯಂತೆ** = ಜಿಂಕೆಯು ಮರಿಯಂತೆ ಚಿಗಿಯುತ್ತಾ. **ಗರುಡಗಮನ ಬಿಟ್ಟು** = ತಾನು ಗರುಡ ವಾಹನನೆಂಬ ಹೆಮ್ಮೆಯನ್ನು ತೊರೆದು. **ತುರುಗದಾಟವನಾಡಿ** = ಕುದುರೆಯ ಆಟವನ್ನಾಡಿದ ಶ್ರೀಕೃಷ್ಣ. **ತುರುಗಾವರಿಗೆ ಸೋತು** = ದನ ಕಾಯುವ ಗೊಲ್ಲಬಾಲಕರಿಗೆ ಸೋತು. **ತುರುಗ ತಾನಾಗಿ** = ತಾನೇ ಕುದುರೆಯಾಗಿ, ಆ ಬಾಲಕರನ್ನು ತನ್ನ ಬೆನ್ನಿನ ಮೇಲೆ ಕೂಡಿಸಿಕೊಂಡು ಆಡ್ಡಾಡಿದ ಶ್ರೀಕೃಷ್ಣನು ಗೊಲ್ಲ ಬಾಲಕರೊಡಗೂಡಿ. ಚೆಂಡು ಬುಗುರಿ ಗೋಲಿ ಗಜ್ಜುಗ ಚಿನ್ನಿ ದಾಂಡು ಇತ್ಯಾದಿ ನಾನಾ ಪರಿಯಲ್ಲಿ ಕ್ರೀಡೆಯಾಡಿದ. ಗೋವನ್ನು ಕಾಯುತ್ತಾ. ಹಾಲನ್ನು ಸವಿದು. ಹೆಚ್ಚಾದುದನ್ನು ಚೆಲ್ಲಿಕೊಂಡು ಹೋಗಿದ್ದ ಕುರುಹನ್ನು ಕಂಡರು. **ಮರನೇರಿ** = ಕಡಹದ ಮರವನ್ನೇರಿ ಕಾಳಿಂಗನ ಮಡುವಿಗೆ ಧುಮುಕಿದ ಪಾದದ ಚಿಹ್ನೆಗಳಿವು **ನೆರಳೊಳು** = ಮರದ ನೆರಳಿನಲ್ಲಿ ಕಾಣಿಸದ ಕುರುಹುಗಳು. **ಶರಣರು** = ಭಕ್ತರು ಪೂಜಿಸುವ ಪಾದಪದ್ಮಗಳಿವು.



**೬೫೨**

**(ಅಂಕಿತ–ನಾಮಗಿರಿನೃಸಿಂಹ)**

**ರಾಗ–ಮುಖಾರಿ** **ಆದಿತಾಳ**

ಗೋಪಾಲ ಪಾಲಿಸೋ – ನಿನ್ನ ಪಾದ ಸೇವಕನಿವನೆಂದು-ನೀ ಭಾವಿಸಿ
ಗೋಪಾಲ ಪಾಲಿಸೋ ॥ ॥ಪ॥

ನಾರಿಜನರುಟ್ಟ–ಸೀರೆ ಸೆಳೆದು ತಾ
ಭಾರಿ ಮರವನ್ನೇರಿ ವಿನೋದವ

ತೋರಿದ ಸುರರಿಪು ವೈರಿಯೋ–ಎನ್ನಯ
ಕೋರಿಕೆ ನಡಿಸಲಿನ್ನ್ಯಾರಿಗೆ ಬೇಡಲೋ ॥ ॥೧॥

ತುಂಗಫಣಿ ಫಣ ಶೃಂಗದೊಳು ಚರ–
ಣಂಗಳ ಕುಣಿಸಿ ಭುಜಂಗಮವರನಿಗೆ
ಭಂಗಪಡಿಸಿ ಕೃಪಾಪಾಂಗದಿ ಸಲಹಿದ
ಮಂಗಳ ಮಹಿಮ ರಥಾಂಗಧರ ಬಾಲ ॥ ॥೨॥

ಬಂಧು ಬಳಗ ನೀನೆಂದು ತಿಳಿದು ಮ
ತ್ತೊಂದನೆಣಿಸದೆ ಇಂದಿರಾರಮಣನೆ
ಎಂದೆಂದಿಗೂ ಸಲಹೆಂದು ನಾ ಬೇಡುವೆ
ಮಂದರಧರ ಮುಚುಕುಂದವರದ ಸಿರಿ ॥ ॥೩॥

ಖಿನ್ನ ನಿಜಜನರನ್ನು ಸಲಹುವ
ಪನ್ನಗಶಯನ ಪ್ರಸನ್ನಹೃದಯನಾಗಿ
ಎನ್ನ ಮನೋರಥವನ್ನು ಪೂರೈಸುವ
ರನ್ಯರು ಯಾರಯ್ಯ ಚಿನ್ಮಯಮೂರುತಿ ॥ ॥೪॥

ಕಾಮಜನಕನೆ ನಾಮಗಿರಿ ಸಿರಿ
ಸ್ವಾಮಿ ನೃಸಿಂಹನೆ ಕಾಮಿತ ಕೊಡುವಂಥ
ಕಾಮಧೇನು ಚಿಂತಾಮಣಿ ಎನ್ನ ಯೋಗ–
ಕ್ಷೇಮವು ನಿನ್ನದಯ್ಯ ಸೋಮಕುಲಾಧಿಪ ॥ ॥೫॥



ಶ್ರೀ ಮದ್ವ್ಯಾಸರಾಜ ಮಠಾಧೀಶ್ವರ ಶ್ರೀಮದ್ವಿದ್ಯಾರತ್ನಾಕರ ತೀರ್ಥ ಶ್ರೀಪಾದಂಗಳವರ ಸುಂದರ ಕೀರ್ತನೆ ಇದು. ಈ ಕೀರ್ತನೆ ಜನ ಪ್ರಿಯವಾಗಿದೆ.

**ನಾರಿಜನರುಟ್ಟ** = ಗೋಪಿಕಾಸ್ತ್ರೀಯರು ಉಟ್ಟಿದ್ದ ಸೀರೆಗಳು. ಗೋಪಿಕಾಸ್ತ್ರೀಯರು ಸ್ನಾನಕ್ಕಾಗಿ ಯಮುನಾ ನದಿಗೆ ಹೊರಟಿದ್ದಾರೆ. ನದಿಯ ಮೆಟ್ಟಿಲುಗಳ ಮೇಲೆ ತಮ್ಮ ವಸ್ತ್ರಗಳನ್ನು ಇಟ್ಟು, ಸ್ನಾನಕ್ಕೆ ಇಳಿದಿದ್ದಾರೆ. ಆಗ ವಿನೋದಪ್ರಿಯನಾದ ವೇಣುಗೋಪಾಲನು ಅಲ್ಲಿಗೆ ಬಂದು, ಆ ಸೀರೆಗಳನ್ನು ತೆಗೆದುಕೊಂಡು ಮರವನ್ನೇರಿದ. **ಸುರರಿಪು ವೈರಿಯೇ** = ದೈತ್ಯರ ಶತ್ರುವೇ (ಸುರರಿಪು–ದೇವತೆಗಳ ಶತ್ರುಗಳಾದ ದೈತ್ಯರು. ಅವರ ವೈರಿ ಶ್ರೀಹರಿ). **ಎನ್ನ ಕೋರಿಕೆ** = ನನ್ನ ಪ್ರಾರ್ಥನೆ ಯನ್ನು ಇನ್ಯಾರಿಗೆ ಮಾಡಲಿ? **ತುಂಗಫಣಿಫಣ** = ಬೃಹದಾಕಾರದ ಕಾಳಿಂಗಸರ್ಪನ ಹೆಡೆಗಳು. **ಶೃಂಗದೊಳು** = ಅಗ್ರಭಾಗದ ಮೇಲೆ ಕಾಳಿಂಗಮರ್ದನದ ಪ್ರಸಂಗ ವಿಶೇಷ. **ಭುಜಂಗವರನಿಗೆ** = ಸರ್ಪಶ್ರೇಷ್ಠ ನಾದ ಕಾಳಿಂಗನಿಗೆ (ಭುಜಂಗ–ಸರ್ಪ) **ಭಂಗಪಡಿಸಿ** = ಅವನ ಗರ್ವಭಂಗ ಮಾಡಿ, **ಕೃಪಾಪಾಂಗದಿ ಸಲಹಿದ** = ಕೃಪಾಕಟಾಕ್ಷವೀಕ್ಷಣದಿಂದ. ಆ ಸರ್ಪರಾಜನಿಗೆ ಪ್ರಾಣದಾನಮಾಡಿ, ಸುರಕ್ಷಿತ ಸ್ಥಳಕ್ಕೆ ಕಳುಹಿಸಿದ ಕೃಷ್ಣನ ಕಾರುಣ್ಯ ವಿಶೇಷ. **ಮಂಗಳಮಹಿಮ** = ಶುಭಚರಿತನು. **ರಥಾಂಗ ಧರ** = ಚಕ್ರಧರನು (ರಥಾಂಗ–ಚಕ್ರ), **ಮುಚುಕುಂದವರದ** = ಭಕ್ತನಾದ ಮುಚುಕುಂದನಿಗೆ ಒಲಿದ ಶ್ರೀಕೃಷ್ಣ, **ಖಿನ್ನ ನಿಜಜನರನ್ನು** = ದುಃಖದಿಂದ ತಪ್ತರಾದ ತನ್ನ ಭಕ್ತರನ್ನು, **ಪನ್ನಗಶಯನ** = ಶೇಷ ಶಾಯಿ. **ಪ್ರಸನ್ನ ಹೃದಯನಾಗಿ** = ಅಂತಃಕರಣದಿಂದ ಒಲಿದು. **ಮನೋರಥವನ್ನು** = ಮನಸ್ಸಿನ ಅಭಿಲಾಷೆಗಳನ್ನು, **ಚಿನ್ಮಯ ಮೂರುತಿ** = ಜ್ಞಾನಾನಂದಮಯನು. **ಕಾಮಜನಕನ** = ಮನ್ಮಥನ

ತಂದೆ (ಶ್ರೀಕೃಷ್ಣನ ಪುತ್ರ-ಕಾಮನ ಅವತಾರಿಯಾದ ಪ್ರದ್ಯುಮ್ನನು) **ಸೋಮಕುಲಾಧಿಪ** = ಚಂದ್ರವಂಶ ಸಂಜಾತನಾದ ಶ್ರೀಕೃಷ್ಣನು.

**೬೫೩**

**(ಅಂಕಿತ-ನಾಮಗಿರಿ ನರಹರಿ)**

**ರಾಗ-ಕಮಾಚ್** **ಆದಿತಾಳ**

ಪಾಹಿ ಶ್ರೀ ಯದುನಂದನ ಶರದಂಬುಜವದನ ॥ ॥ಪ॥

ಲಾವಣ್ಯ ಜಿತಮದನ ಕ್ಷೀರಾಬ್ಧಿಸದನ ॥ ॥ಅ॥

ಗೋಕುಲಭೂಷಣ ದಾನವಶೋಷಣ
ಆನತ ಹಿತತೋಷಣ ನೀರೇಜಾಕ್ಷಣ ॥ ॥೧॥

ಯಾದವಶೇಖರ ಭೂಸುರ ಶ್ರೀಕರ
ಅದ್ಭುತಮಹಿಮನಿಕರ ದಾರಿತಮಕರ ॥ ॥೨॥

**ನಾಮಗಿರೀಶ್ವರೀ ನರಹರಿ** ತನುಧರ
ರೋಹಿಣೀಸುತಸೋದರ ಪಾಲಿತಮಧುರ ॥ ॥೩॥

**ಅರ್ಥವಿವರಣೆ :**

**ಪಾಹಿ** = ರಕ್ಷಿಸು. **ಯದುನಂದನ** = ಯಾದವಕುಲದಲ್ಲಿ ಅವತರಿಸಿದ ಶ್ರೀಕೃಷ್ಣನು. **ಶರದಂಬುಜವದನ** = ಶರದೃತುವಿನ

ಪೂರ್ಣಚಂದ್ರನಂತೆ ಮುಖವುಳ್ಳ (ಶರತ್ = ಶರದೃತು, ಅಂಬುಜ = ಕ್ಷೀರಸಮುದ್ರದಲ್ಲಿ ಉತ್ಪನ್ನನಾದ ಚಂದ್ರ) **ಲಾವಣ್ಯ ಜಿತಮದನ** = ಮನ್ಮಥನ ಸೌಂದರ್ಯವನ್ನು ಗೆದ್ದ, ಅತ್ಯಂತ ಲಾವಣ್ಯಮಯನು. (ಸಾಕ್ಷಾತ್ ಮನ್ಮಥ ಮನ್ಮಥ:) **ಕ್ಷೀರಾಬ್ಧಿಸದನ** = ಕ್ಷೀರಸಮುದ್ರನಿವಾಸಿಯಾದ ಶ್ರೀಮನ್ನಾರಾಯಣನು. **ಗೋಕುಲಭೂಷಣ** = ಇಡೀ ನಂದ ಗೋಕುಲಕ್ಕೆ ಅಲಂಕಾರಪ್ರಾಯನು. **ದಾನವಶೋಷಣ** = ದೈತ್ಯ ಸಂಹಾರಿ **ಆನತಹಿತತೋಷಣ** = ತನಗೆ ಶರಣಾಗತರಾಗಿ ಬಂದವರ ಹಿತವನ್ನು ಕಾಯ್ದು, ಅವರಿಗೆ ಸಂತೋಷಪ್ರದನು. (ಆನತ= ಶರಣಾಗತರಾದ ಭಕ್ತ ಜನರು. ತೋಷಣ = ಆನಂದದಾಯಕನು). **ನೀರೇಜಾಕ್ಷಣ** = ಕಮಲದ ದಳದಂತೆ ವಿಸ್ತಾರವಾದ ನೇತ್ರವುಳ್ಳವನು (ನೀರಜ + ಅಕ್ಷಣ) **ಯಾದವಶೇಖರ** = ಯದುಕುಲತಿಲಕನು. **ಭೂಸುರ ಶ್ರೀಕರ** = ವಿಪ್ರರಿಗೆ ಮಂಗಳಕರನು. (ಬ್ರಹ್ಮಣ್ಯದೇವನು). **ಅದ್ಭುತ ಮಹಿಮನಿಕರ** = ಅಸದೃಶಗಳಾದ ಮಹಿಮಾತಿಶಯಗಳ ಧಾಮನು. (ನಿಕರ–ಗುಣಗಣನು), **ದಾರಿತಮಕರ** = ನಕ್ರನನ್ನು ಚಕ್ರದಿಂದ ಸೀಳಿ, ಗಜೇಂದ್ರನನ್ನು ಸಂರಕ್ಷಿಸಿದ ಕರಿವರದನು (ದಾರಿತ–ಸೀಳಿದ. ಮಕರ = ಮೊಸಳೆ).

**ನಾಮಗಿರೀಶ್ವರೀ** = ನಾಮಗಿರಿ ನಿವಾಸನಾದ (ಸ್ತ್ರೀಲಿಂಗ ಪ್ರಯೋಗ ವಿರುವುದರಿಂದ ಲಕ್ಷ್ಮೀನಾರಸಿಂಹನು) **ನರಹರಿ ತನುಧರ** = ಮಾನವ–ಸಿಂಹ ಈ ದೇಹವನ್ನು ಧರಿಸಿದ ನರಸಿಂಹ. (ನರ-ಮಾನವ. ಹರಿ-ಸಿಂಹ). **ರೋಹಿಣೀಸುತಸೋದರ** = ರೋಹಿಣೀ ದೇವಿಯ ಮಗನಾದ ಬಲರಾಮನ ಸಹೋದರನು. **ಪಾಲಿತಮಧುರ** = ಮಧುರಾಪಟ್ಟಣವನ್ನು ಕಂಸ ವಧೆಯ ದ್ವಾರಾ ರಕ್ಷಿಸಿ, ಆಳಿದವನು.

## ೬೫೪

## (ತಂದೆ ವೆಂಕಟೇಶವಿಠ್ಠಲಾಂಕಿತ)

**ರಾಗ–ಶಂಕರಾಭರಣ** **ಆದಿತಾಳ**

ಸರಸೀಜಶರ ಸುಂದರಾ–ಮುರಳೀಧರಾ ॥ ॥ಪ॥

ವರ ಬೃಂದಾವನ ಚರ–ಗೋಗೋಪೀ ಮನೋಹರಾ ॥ ॥ಅ॥

ಹೃದಯಂಗಮ ಲೀಲಾ–ಸದನ ಗೋಪಾಲ
ರಾಧಾ ನಯನೋತ್ಪಲ- ವಿಧು ಬಿಂಬೋಪಮ ಶೀಲಾ
ಪದುಮಾಕ್ಷ ವನಮಾಲಾ–ದಧಿ ಘೃತ ಚಿಣಿಕೋಲ
ತುದಿಬೆರಳ ಪೊಂಗೊಳಲ–ಉದಯಾರ್ಕ ವೇಶಲ ॥

ಉದಕದಾಭ ಸುನಿರ್ಮಲ–ಯದುಕಿಶೋರ ಮಹಾಚಲ
ಮುದದಿ ಧರಿಸಿ ನಂಬಿದರ ಕಾಯ್ದ ಕೋ–ವಿದ ಶಿರೋಮಣಿ
ಸದಯಜಾಲಾ ॥ ॥೧॥

ವಿರಚಿತೋದಯ ಲಯಾ–ನಿರುಪಮ ಗುಣ ಕ್ರೀಯಾ
ತರಿದು ದೈತ್ಯ ನಿಕಾಯ–ಪೊರೆದೆಯೊ ಕುಬ್ಜೆಯ
ತುರುಗಾವ ವನಿತೆಯರರವಿಂದಾಸ್ಯಾಬ್ಧಿಯ
ಶರಚ್ಚಂದ್ರ ಕವಿಗೇಯ–ವರ ಕಾಳಿಂದಿನಿ ನಿಲಯ ॥

ಸರ ಮಕುಟ ಮಣಿಹಾರ ವಲಯ–ಧರ ಕೌಸ್ತುಭ ಶ್ರೀವತ್ಸ ಹೃದಯ
ಕರ ಮುರಳಿ ಸುಸ್ವರ ಸುವಾದನ–ಕರ ಪರಾತ್ಪರ ಶರಣ ವಿಜಯ
॥೨॥

ಚಿತ್ರದುರ್ಗ ನಿವಾಸಾ-ಚಿತ್ರಚರಿತ ಶ್ರೀಶಾ
ಸುತ್ರಾಮ ನಭಕೇಶ-ಸ್ತೋತ್ರಾಗಮ್ಯ ವ್ರಜೇಶ
ಮಿತ್ರಶತಶತ ಭಾಸ-ಕರ್ತೃ **ತಂದೆ ವೆಂಕಟೇಶ**
ವಿಠ್ಠಲೈಯ್ಯ ಸಾರಸಾ-ಪತ್ರಾಕ್ಷ ಮೃದುಹಾಸಾ ॥

ರಾತ್ರಿ ಪೌರ್ಣಿಮಾ ಮಾರ್ಗಶಿರದಲಿ-ಧಾತ್ರಿ ಸುರರ ಪವಿತ್ರ ಶ್ರೀ ಪಂಚ-
ರಾತ್ರನಿಗಮಸ್ತೋತ್ರ ಗಡಣಕೆ-ಪಾತ್ರನಾಗಿ ಪರತ್ರ ಸಲಿಸುವ ॥೩॥

**ಅರ್ಥವಿವರಣೆ :**

ಚಿತ್ರದುರ್ಗದಲ್ಲಿಯ ಶ್ರೀ ವೇಣುಗೋಪಾಲಸ್ವಾಮಿಯು ಪರವಾದ ಸುಂದರ ಬಂಧುರವಾದ ಈ ಕೀರ್ತನ ಸಾಹಿತ್ಯದ ಕರ್ತೃಗಳು ತಂದೆ ವೆಂಕಟೇಶವಿಠ್ಠಲಾಂಕಿತ ದಾಸವರ್ಯ ಶ್ರೀ ಆರ್. ರಾಮಚಂದ್ರರಾಯರು.

**ಸರಸೀಜ ಶರ** = ಮನ್ಮಥ (ಸರಸೀಜ-ನೀರಿನಲ್ಲಿ ಉತ್ಪನ್ನವಾದ ಕಮಲ. ಶರ-ಬಾಣ. ಕಮಲವು ಪುಷ್ಪದಾಂಕಿತವು. ಮನ್ಮಥನ ಐದು ಬಾಣಗಳು ಪುಷ್ಪ ಬಾಣಗಳು. ಪಂಚ ಬಾಣನಾದ ಮನ್ಮಥನನ್ನು "ಸರಸೀಜ ಶರ" ಎಂಬ ಶಬ್ದಾಲಂಕಾರದಿಂದ ಸೂಚಿಸಲಾಗಿದೆ). **ಸುಂದರಾ** = ಮನ್ಮಥನ ಲಾವಣ್ಯಕ್ಕಿಂತ ಅನಂತಕೋಟಿಲಾವಣ್ಯವಂತನು ಲಕ್ಷ್ಮೀಪತಿಯು. ಸಾಕ್ಷಾತ್ ಮನ್ಮಥ ಮನ್ಮಥನು. ಮನ್ಮಥನ ಸೌಂದರ್ಯಕ್ಕೆ ಶ್ರೀಹರಿಯ ವಿಭೂತಿರೂಪವೇ ಕಾರಣವು. **ಮುರಳೀಧರಾ** = ಕೈಯಲ್ಲಿ ಕೊಳಲನ್ನು ಹಿಡಿದಿದ್ದಾನೆ. **ವರಬೃಂದಾವನಚರ** = ಪವಿತ್ರವಾದ ಬೃಂದಾವನದಲ್ಲಿ ಸಂಚರಿಸಿದ, **ಗೋ ಗೋಪೀ ಮನೋಹರಾ** = ಗೋವುಗಳು ಮತ್ತು ಗೋಪಿಕಾಸ್ತ್ರೀಯರುಗಳ ಮನಸ್ಸನ್ನು ಅಪಹರಿಸಿದ ಶ್ರೀಕೃಷ್ಣ. **ಹೃದಯಂಗಮ** = ಮನಸ್ಸಿಗೆ ಪರಮೋಲ್ಲಾಸವನ್ನು ಕೊಡುವ, **ಲೀಲಾ**

**ಸದನ** = ಕ್ರಿಯಾವಿಶಿಷ್ಟನಾದ ಶ್ರೀಕೃಷ್ಣ. ಇವರ ಮನಸ್ಸೆಂಬ ಸದನವೇ ಆವನ ಕ್ರೀಡಾಂಗಣವು. **ಗೋಪಾಲ** = ಗೋವುಗಳನ್ನು ಮತ್ತು ಗೋಪಾಲಕರನ್ನು ಪರಿಪಾಲಿಸಿದವನು **ರಾಧಾ ನಯನ ಉತ್ಸವ** = ರಾಧೆಯ ಕಣ್ಣುಗಳೆಂಬ ಕನ್ನೈದಿಲೆ ಪುಷ್ಪಗಳಿಗೆ. **ವಿಧು ಬಿಂಬೋಪಮ** = ಪೂರ್ಣಚಂದ್ರಬಿಂಬ ಸದೃಶನು. (ಉತ್ಪಲ-ಕನ್ನೈದಿಲೆ ಪುಷ್ಪ. ವಿಧು-ಪೂರ್ಣಚಂದ್ರ, ಉಪಮ = ಸದೃಶ) ಚಂದ್ರನ ದರ್ಶನದಿಂದ ಕನ್ನೈದಿಲೆ ವಿಕಾಸ ಹೊಂದುವುದು, ಅಂತೆಯೇ ಶ್ರೀಕೃಷ್ಣನ ಸಂದರ್ಶನ ಮಾತ್ರದಿಂದ ರಾಧೆಯ ನೇತ್ರಗಳು ಸಂತಸದಿಂದ ಅರಳುವುವು-(ರೂಪಕಾಲಂಕಾರ), **ಶೀಲಾ** = ಸಚ್ಚರಿತ್ರನು (ಸದ್ಗುಣನಿಲಯನು). **ಪದುಮಾಕ್ಷ ವನ ಮಾಲಾ** = ಕಮಲಪುಷ್ಪಗಳಿಂದ ಅಲಂಕೃತವಾದ ವನಮಾಲಾಧರನು. **ದಧಿ ಘೃತ ಚಿಣಿಕೋಲ** = ಶ್ರೀಕೃಷ್ಣನ ಕೈಯ ಮಹಿಮೆ ತಿಳಿಸುತ್ತಾರೆ. ಮೊಸರನ್ನು ಕದ್ದ ಕರಗಳು, ತುಪ್ಪವನ್ನು ಎತ್ತಿ ಮೆದ್ದ ಕೈ. ಚಿನ್ನಿಕೋಲನ್ನು ಆಡಿದ ರಮಣೀಯ ಹಸ್ತಗಳು. **ತುದಿಬೆರಳಿನ ಪೊಂಗೊಳಲ** = ತನ್ನ ಬೆರಳಿನ ತುದಿಯಲ್ಲಿ ಸುವರ್ಣಮಯವಾದ (ಲಕ್ಷ್ಮ್ಯಾತ್ಮಕವಾದ) ಕೊಳಲನ್ನು ಹಿಡಿದು. **ಉದಯಾರ್ಕ ಪೇಶಲ** = ಆಗ ತಾನೇ ಉದಯಿಸುತ್ತಿರುವ ಸೂರ್ಯನ ಸೌಂದರ್ಯವುಳ್ಳ (ಉದಯ-ಪೂರ್ವದಲ್ಲಿ ಆಗತಾನೇ ಹುಟ್ಟುತ್ತಿರುವ. ಅರ್ಕ-ಸೂರ್ಯ. ಪೇಶಲ-ಸೌಂದರ್ಯ). **ಉದಕದಾಭ ಸುನಿರ್ಮಲ** = ನೀಲಮೇಘಶ್ಯಾಮಲ ವರ್ಣವುಳ್ಳ ಅತ್ಯಂತ ಶುದ್ಧವಾದ ದೇಹವುಳ್ಳ (ಉದಕ-ನೀರು. ಉದಕದ-ನೀರನ್ನು ಸುರಿಸುವ ಮೇಘ. ಆಭ-ಕಾಂತಿ. ಸುನಿರ್ಮಲ = ನಮೀಚೀನವಾದ-ಅಪ್ರಾಕೃತವಾದ ಜ್ಞಾನಾನಂದ ಮಯ ದೇಹವುಳ್ಳ). **ಯದುಕಿಶೋರ** = ಯದುಕುಲ ಸಂಜಾತನಾದ ಗೋಪಾಲಬಾಲಕ. **ಮಹಾಚಲ ಮುದದಿ ಧರಿಸಿ** = ಗೋವರ್ಧನ ಪರ್ವತವನ್ನು ತನ್ನ ಕೈಯ್ಯನ ಕಿರುಬೆರಳಿನಿಂದ ಲೀಲಾಜಾಲವಾಗಿ ಕೊಡೆಯಂತೆ ಎತ್ತಿಹಿಡಿದು, ಭೀಕರ ಮಳೆ ಗಾಳಿಯಿಂದ ಸಕಲಗೋಕುಲವನ್ನು ಸಂರಕ್ಷಿಸಿದ ಗೋವರ್ಧನ ಪರ್ವತಧಾರಿ. **ಕೋವಿದ ಶಿರೋಮಣಿ** = ಸರ್ವಜ್ಞನು. **ಸದಯಜಾಲಾ** = ದಯಾಸಾಗರನು. **ವಿರಚಿತ ಉದಯ ಲಯ** = ಜಗತ್ತಿನ ಸೃಷ್ಟಿಲಯಕರ್ತನು (ವಿರಚಿತ-ಮಾಡಲ್ಪಟ್ಟ, ಅಂದರೆ-

ಕರ್ತನೆಂದರ್ಥ. ಉದಯ-ಬ್ರಹ್ಮಾಂಡದ ಸೃಷ್ಟಿ ಲಯ-ನಾಶ ಇದರಿಂದ ಸ್ಥಿತಿ ನಿಯಮನ-ಜ್ಞಾನ ಬಂಧ-ಮೋಕ್ಷಗಳೆಂಬ ಇತರ ಕರ್ತೃತ್ವಗಳೂ ಗ್ರಾಹ್ಯ). **ನಿರುಪಮಗುಣಕ್ರೀಯಾ** = ಅಸದೃಶವಾದ ಅಪರಿಚ್ಛಿನ್ನವಾದ ಗುಣಾತಿಶಯಗಳು ವ್ಯಾಪಾರವಿಶೇಷಗಳುಳ್ಳವನು, **ತರಿದು ದೈತ್ಯನಿಕಾಯ** = ದಾನವರ ಸಂಹಾರಿ (ದೈತ್ಯದಲ್ಲಣನು). **ಕುಬ್ಜೆಯ** = ಮಥುರಾನಗರದಲ್ಲಿ ತ್ರಿವಕ್ರೆಯಾಗಿದ್ದ ಕುಬ್ಜೆಯ ಕುರೂಪವನ್ನು ಪರಿಹರಿಸಿ ಲಾವಣ್ಯವತಿಯನ್ನಾಗಿಸಿದ [ಪ್ರಸಂಗವಿಶೇಷ. **ತುರಗಾವ ವನಿತೆಯರರವಿಂದಾಸ್ಯ ಅಬ್ಧಿಯ ಶರಚ್ಚಂದ್ರ** = ಗೋವುಗಳನ್ನು ಕಾಯುವ ಗೋಪಿಕಾಸ್ತ್ರೀಯರ ಮುಖ ಕಮಲವೆಂಬ ಸಮುದ್ರಕ್ಕೆ ಪೂರ್ಣಚಂದ್ರಬಿಂಬ ಸದೃಶನು. (ತುರುಗಾವ-ತುರುಗಳನ್ನು ಕಾಯುವ. ವನಿತೆಯರ – ಗೋಪಸ್ತ್ರೀಯರ. ಅರವಿಂದಾಸ್ಯ–ಮುಖ ಕಮಲವೆಂಬ. ಅಬ್ಧಿಯ ಸಮುದ್ರಕ್ಕೆ. ಶರಚ್ಚಂದ್ರನ ಶರತ್ಕಾಲದ ಪೂರ್ಣ ಚಂದ್ರಬಿಂಬ. ಚಂದ್ರೋದಯದಿಂದ ಸಮುದ್ರದ ನೀರು ಉಕ್ಕುವುದು. ಅಂತೆಯೇ ಶ್ರೀಕೃಷ್ಣನ ದರ್ಶನ ಭಾಗ್ಯದಿಂದ ಗೋವನಿತೆಯರ ವದನಾರವಿಂದವೆಂಬ ಸಮುದ್ರವು ಸಂತಸದಿಂದ ಉಕ್ಕಿ ನಲಿದಾಡುವುದು) **ಕವಿಗೇಯ** = ಜ್ಞಾನಿಗಳಿಂದ ಸಂಸ್ತುತ್ಯಮಾನನು **ವರ ಕಾಳಿಂದಿನಿ ನಿಲಯ** = ಕಾಳಿಂದಿನಿ ಮಡುವಿಗೆ ಧುಮುಕಿ, ಕಾಳಿಂಗನ ಹೆಡೆಗಳ ಮೇಲೆ ಲಾಸ್ಯವಾಡಿ, ಅವನ ಗರ್ವಭಂಗ ಮಾಡಿದ ಶ್ರೀಕೃಷ್ಣ. **ಸರ** = ಮಾಲೆ. **ಮಕುಟ** = ಕಿರೀಟ. **ಮಣಿಹಾರ ವಲಯಾ** = ರತ್ನಖಚಿತವಾದ ಮಾಲೆಗಳನ್ನು ವಲಯಾಕಾರದಲ್ಲಿ ಧರಿಸಿರುವ. **ಧರ ಕೌಸ್ತುಭ** = ಬ್ರಹ್ಮದೇವರು ಕೌಸ್ತುಭ ಮಣಿಯ ರೂಪದಲ್ಲಿ ಶ್ರೀಕೃಷ್ಣನ ಕಂಠದಲ್ಲಿದ್ದು ಸೇವಿಸುತ್ತಿರುವರು. **ಶ್ರೀವತ್ಸಹೃದಯ** = ತನ್ನ ವಕ್ಷಸ್ಥಳದಲ್ಲಿ ಶ್ರೀವತ್ಸವೆಂಬ ರೂಪದಿಂದ ಲಕ್ಷ್ಮಿಯನ್ನು ಧರಿಸಿದ್ದಾನೆ. **ಮುರಳಿ ಸುಸ್ವರ ಸುವಾದನ ಕರ** = ಹಸ್ತ ಭೂಷಿತನಾದ ಕೊಳಲಿನಿಂದ ಸುಸ್ವರಗಳನ್ನು ಹೊರಡಿಸುತ್ತಾ ಇರುವ ವೇಣುಗೋಪಾಲಕೃಷ್ಣ. **ಪರಾತ್ಪರ** = ಪರಶಬ್ದನಾಮಕಳಾದ ಲಕ್ಷ್ಮಿಗಿಂತ ಅನಂತಕೋಟಿಗುಣಗಳಿಂದ ಅತ್ಯಾಧಿಕನು, **ಶರಣರ ವಿಜಯ** = ಶರಣಾಗತರಾದ ಭಕ್ತರಿಗೆ ಜಯಪ್ರದನು. **ಚಿತ್ರದುರ್ಗನಿವಾಸಾ** = ಚಿತ್ರದುರ್ಗವು ಪ್ರಸಕ್ತ

ಕೀರ್ತನೆಯ ಕರ್ತೃಗಳ ಸ್ಥಳ. ಅಲ್ಲಿ ಕ್ಷೇತ್ರವಾಸಿಯಾದ ವೇಣುಗೋಪಾಲ ಕೃಷ್ಣನನ್ನು ಕುರಿತ ಕೀರ್ತನಸಾಹಿತ್ಯವಿದು. **ಚಿತ್ರಚರಿತ** = ವಿಚಿತ್ರವಾದ ಅದ್ಭುತವಾದ ಚರಿತ್ರೆಯುಳ್ಳವ. **ಶ್ರೀಶಾ** = ಲಕ್ಷ್ಮೀಗೂ ನಿಯಾಮಕನು (ಲಕ್ಷ್ಮೀರಮಣನು). **ಸುತ್ರಾಮ** = ಇಂದ್ರ. **ನಭಕೇಶ** = ಗಂಗಾ ವತರಣಕಾಲದಲ್ಲಿ ಆಕಾಶದಲ್ಲಿ ತನ್ನ ಕೇಶವನ್ನು ಹರಡಿದ ವ್ಯೋಮಕೇಶನೆಂದು ಖ್ಯಾತನಾದ ರುದ್ರದೇವರು (ನಭ–ಆಕಾಶ. ಕೇಶ–ಕೂದಲು–ಅಂದರೆ ವ್ಯೋಮಕೇಶರಾದ ರುದ್ರದೇವರು) **ಸ್ತೋತ್ರ** = ಇಂದ್ರ ರುದ್ರ ದೇವ ರಿಂದ ಸ್ತುತ್ಯಮಾನನಾದ, **ಅಗಮ್ಯ** = ಯಾರಿಂದಲೂ ಹೊಂದಲು ಸಾಧ್ಯನಲ್ಲದ, **ವ್ರಜೇಶ** = ಗೋಕುಲಾಧಿಪತಿಯಾದ ಶ್ರೀಕೃಷ್ಣ. **ಮಿತ್ರ ಶತಶತಭಾಸ** = ಕೋಟಿಸೂರ್ಯ ಪ್ರಕಾಶನು (ಮಿತ್ರ–ಸೂರ್ಯ. ಶತ ಶತ–ಅನಂತಕೋಟಿ ಎಂದರ್ಥ. ಭಾಸ-ಪ್ರಕಾಶ) **ಕರ್ತೃ** = ಸರ್ವ ವ್ಯಾಪಾರಗಳಿಗೂ ತಾನೇ ಕರ್ತನು. **ಸಾರಸಾಪತ್ರಾಕ್ಷ** = ಕಮಲಪುಷ್ಪದ ದಳದಂತೆ ವಿಸ್ತಾರವಾದ ಕಣ್ಣುಳ್ಳ (ಸಾರಸ-ನೀರಿನಲ್ಲಿ ಉತ್ಪತ್ತಿಯಾದ ಕಮಲ ಪತ್ರ-ದಳ ಅಕ್ಷ-ನೇತ್ರವುಳ್ಳವನು) **ಮೃದುಹಾಸಾ** = ಮಂದ ಹಾಸಯುಕ್ತನಾದ, **ರಾತ್ರಿ ಪೌರ್ಣಿಮಾ ಮಾರ್ಗಶಿರದಲಿ** = ಚಿತ್ರ ದುರ್ಗ ಕ್ಷೇತ್ರಸ್ಥ ಶ್ರೀ ವೇಣುಗೋಪಾಲಕೃಷ್ಣನ ರಥೋತ್ಸವವು ಪ್ರತಿ ಮಾರ್ಗಶೀರ ಮಾಸ ಶುಕ್ಲ ಪೌರ್ಣಿಮೆಯ ದಿನ ರಾತ್ರಿಯಂದು ನಡೆಯುವುದು. **ಧಾತ್ರೀಸುರರ** = ಭೂಸುರರ–ಅಂದರೆ, ಜ್ಞಾನಿಗಳಾದ ವಿಪ್ರರ, **ಪವಿತ್ರ** = ಅತ್ಯಂತ ಪವಿತ್ರವಾದ, **ಶ್ರೀ ಪಂಚರಾತ್ರ ನಿಗಮ ಸ್ತೋತ್ರ ಗಡಣಕೆ** = ಪಂಚರಾತ್ರಗಮ ಮತ್ತು ವೇದಸಮೂಹಗಳ ಸ್ತೋತ್ರಕ್ಕೆ **ಪಾತ್ರ ನಾಗಿ** = ಮುಖ್ಯ ವಿಷಯನಾಗಿ, **ಪರತ್ರ ಫಲಿಸುವ** = ನಿತ್ಯಾನಂದರೂಪ ವಾದ ಮುಕ್ತಿ ಎಂಬ ಪರಮ ಪುರುಷಾರ್ಥವನ್ನು ನೀಡುವವನು.



## ೬೫೫

## (ಅಂಕಿತ–ಕರಿಗಿರೀಶ)

**ರಾಗ–ಬಿಲಹರಿ** **ಆದಿತಾಳ**

ಬಾರಯ್ಯ ಬಾ ಬಾ – ಯದುಕುಲರಾಯಾ
ಹೇ ಭಾಗವತಪ್ರಿಯ ॥ ॥ಪ॥

ಸಾರಸಾಕ್ಷ ಕರುಣಾರಸಪೂರಿತ
ಮಾರಜನಕ ಭವತಾರಕ ಮುರಹರ ॥ ॥ಅ॥

ಬೃಂದಾರಕ ಬೃಂದ ಸುವಂದಿತಚರಣ ಭುಜಗೇಂದ್ರಶಯನ
ಮಂದಾಕಿನಿಪಿತ ಮುಕುಂದ ದುರಿತಹರಣ ವಿಹಗೇಂದ್ರಗಮನ ॥ ॥೧॥

ಮಂದಹಾಸದ ಬಲು ಸುಂದರವದನಾ ಶುಭಗುಣಪೂರ್ಣ
ಮಂದರಧರ ಗೋವಿಂದ ಭಜಕಜರ

ಮಂದಾರನೆ ಮುಚುಕುಂದವರದ ರಾ
ಕೇಂದುಕುಲಜಲಧಿ ಚಂದ್ರಮನೆನಿಸಿದ
ಇಂದಿರೆಯರಸ ಶ್ರೀ ಕರಿಗಿರೀಶನೆ ॥ ॥೨॥

**ಅರ್ಥವಿವರಣೆ : –**

**ಯದುಕುಲರಾಯಾ** = ಯದುಕುಲಾಧಿಪತಿಯಾದ ಶ್ರೀಕೃಷ್ಣ. **ಭಾಗವತ ಪ್ರಿಯ** – ಭಕ್ತರಿಗೆ ಅತ್ಯಂತ ಪ್ರೀತಿಯ ವಿಷಯನು. **ಸಾರ ಸಾಕ್ಷ** = ಕಮಲ ಪುಷ್ಪದ ದಳಗಳಂತೆ ವಿಸ್ತಾರನೇತ್ರವುಳ್ಳವನು. **ಮಾರ ಜನಕ** = ಮನ್ಮಥನ ತಂದೆ. **ಭವತಾರಕ** = ಸಂಸಾರಸಾಗರದಿಂದ

ದಾಟಿಸುವವನು. (ಬಂಧ ವಿಮೋಚಕ). **ಮುರಹರ** = ಮುರಾ-ಎಂಬ ದೈತ್ಯನ ಸಂಹಾರಿ. **ಬೃಂದಾರಕ ಬೃಂದ** = ವೃಂದಾವನವಲ್ಲಿರುವ ಜನರ ಸಮೂಹ. **ಭುಜಗೇಂದ್ರಶಯನ** = ಸರ್ಪಶ್ರೇಷ್ಠನಾದ ಶೇಷನ ಮೇಲೆ ಮಲಗಿರುವವನು. (ಭುಜಗ-ಸರ್ಪ. ಭುಜಗೇಂದ್ರ-ಸರ್ಪಶ್ರೇಷ್ಠನಾದ ಶೇಷದೇವರು). **ಮಂದಾಕಿನಿ ಪಿತ** = ಗಂಗಾಜನಕ (ತ್ರಿವಿಕ್ರಮ). **ಮುಕುಂದ** = ಮೋಕ್ಷಪ್ರದನು. **ದುರಿತಹರಣ** = ಭಕ್ತರ ಪಾಪ ಗಳನ್ನು ಪರಿಹರಿಸುವವನು. **ವಿಹಗೇಂದ್ರಗಮನ** = ಪಕ್ಷಿಶ್ರೇಷ್ಠರಾದ ಗರುಡದೇವರನ್ನೇ ವಾಹನವನ್ನಾಗಿ ಉಳ್ಳವನು (ಗರುಡಧ್ವಜ). **ಭಜಕಜನ ಮಂದಾರನೆ** = ಭಕ್ತರ ಪಾಲಿಗೆ ಕಲ್ಪವೃಕ್ಷ ಸದೃಶನು. **ರಾಕೇಂದು ಕುಲಜಲಧಿ ಚಂದ್ರಮ** = ಚಂದ್ರಕುಲವೆಂಬ ಸಮುದ್ರಕ್ಕೆ ಚಂದ್ರಸದೃಶನು. (ರಾಕೇಂದು = ಪೂರ್ಣಚಂದ್ರ)

## ೭೫೭

### (ಶ್ರೀಕರವಿಠಲಾಂಕಿತ)

**ರಾಗ–ಮಿಶ್ರ** **ಆದಿತಾಳ**

ಬಾರೋ ಶ್ರೀಕೃಷ್ಣ ಮುರಾರಿ ಬೇಗ
ಬಾರಯ್ಯ ಮಧುರಿಪು ಶೌರೀ ॥ ॥ಪ॥

ವಾರಣಭಯವ ನಿವಾರಣ ಮಾಡಿದ
ನೀರಜನಾಭ ಪದವಾರಿಜಕ್ಕೆರಗುವೆ ॥ ॥ಅ॥

ಜಾಂಬುವತಿಯ ರಮಣಾ–ದಿವ್ಯ
ಬಾಂಬೊಳೆಯನು ಪೆತ್ತ ಚರಣಾ

ಸಾಂಬಜನಕ ಘನಜಾಂಬೂನದಾಂಬರ
ಸಾಂಬವಿನುತ ಸುಗುಣಾಂಬುಧಿ ಕರುಣಿಸಿ ॥ ॥೧॥

ಇಂದೀವರಾಕ್ಷ ಮುಕುಂದಾ-ಸಿರಿ
ಇಂದಿರೆಯರಸ ಗೋವಿಂದಾ
ಮಂದರೋದ್ಧಾರ ದಯಾಸಿಂಧೂ ಎನ್ನಯ ಮನ
ಮಂದಿರದೊಳು ಬಂದು ಸಿಂಧುಶಯನ ನಿಲ್ಲೋ ॥ ॥೨॥

ಕೇಳಿ ಪ್ರಹ್ಲಾದನ್ನ ಮೊರೆಯಾ–ಸಿರಿ
ಲೋಲ ನೀಡು ಅಭಯಾ
ಬಾಲೆ ಪಾಂಚಾಲಿ ಧ್ರುವ ಬಾಲಕನಾ ಪೊರೆದ
ಕಾಳಿಮರ್ಧನ ಕೃಪಾಶಾಲಿ ಶ್ರೀಕರವಿಠ್ಠಲಾ ॥ ॥೩॥

**ಅರ್ಥವಿವರಣೆ : –**

**ಶ್ರೀಕರವಿಠ್ಠಲಾಂಕಿತರಾದ** ಕಲ್ಲೂರಿನ ದಾಸರ ಕೃತಿ ಇದು. ಅವರ ಶೈಲಿ ಸರಳ ಸುಂದರ. **ಮುರಾರಿ** = ಮುರಾ–ಎಂಬ ಅಸುರನನ್ನು ಸಂಹರಿಸಿದ ಶ್ರೀಕೃಷ್ಣ. **ಮಧುರಿಪು** = ಮಧು–ಎಂಬ ದೈತ್ಯವನ್ನು ಸಂಹರಿಸಿದ ಶ್ರೀಮನ್ನಾರಾಯಣ. **ಶೌರೀ** = ಶೂರಸೇನನ ಕುಲದಲ್ಲಿ ಸಂಜಾತನಾದ ಶ್ರೀಕೃಷ್ಣ (ಯಾದವಕುಲತಿಲಕನು) **ವಾರಣಭಯವ** = ಗಜೇಂದ್ರನ ಆಪತ್ತನ್ನು ಪರಿಹರಿಸಿದವ (ವಾರಣ–ಆನೆ). **ನೀರಜನಾಭ** = ಪದ್ಮನಾಭ **ಪದವಾರಿಜಕ್ಕೆ** = ನಿನ್ನ ಚರಣಕಮಲಕ್ಕೆ. **ದಿವ್ಯಬಾಂಬೊಳೆಯ ಪೆತ್ತ** = ಶ್ರೇಷ್ಠವಾದ ಗಂಗಾನದಿಯನ್ನು ತನ್ನ ಪಾದನಖಾಗ್ರದಿಂದ ಉತ್ಪತ್ತಿ ಮಾಡಿದ ತ್ರಿವಿಕ್ರಮ (ಬಾನಿನ ಹೊಳೆ–ಬಾಂಬೊಳೆ-ಆಕಾಶಗಂಗೆ). **ಸಾಂಬ ಜನಕ** = ಸಾಂಬನು ಜಾಂಬವತಿಯಲ್ಲಿ ಶ್ರೀಕೃಷ್ಣನಿಂದ ಜನಿಸಿದ ಪುತ್ರನು. **ಜಾಂಬೂನದಾಂಬರ** = ಬಂಗಾರದ ವಸ್ತ್ರವನ್ನು-ಅಂದರೆ ಪೀತಾಂಬರವನ್ನು

ಧರಿಸಿದವನ (ಜಾಂಬೂನದ=ಚಿನ್ನ). **ಸಾಂಬವಿನುತ** = ರುದ್ರನಿಂದ ಸ್ತುತ್ಯಮಾನನಾದವನು(ಸಾಂಬ=ಸ+ಅಂಬ=ಪಾರ್ವತೀಸಹಿತನಾದ ಮಹ ರುದ್ರದೇವರು) **ಇಂದೀವರಾಕ್ಷ** = ಕನ್ನೈದಿಲೆ ಪುಷ್ಪದ ಪಳದಂತೆ ವಿಸ್ತಾರವಾದ ನೇತ್ರವುಳ್ಳವನು. **ಮುಕುಂದಾ** = ಮುಕ್ತಿಪ್ರದಾತನು. **ಸಿಂಧುಶಯನ** = ಕ್ಷೀರಸಾಗರದಲ್ಲಿ ಪವಳಿಸಿದವನು (ಸಿಂಧು-ಸಮುದ್ರ). **ಸಿರಿಲೋಲ** = ಜಗತ್ಕಾರ್ಯಕ್ಕಾಗಿ ಶ್ರೀಲಕ್ಷ್ಮಿಯಲ್ಲಿ ರಮಣಮಾಡುವ ವನು. **ಪಾಂಚಾಲಿ** = ದ್ರೌಪದೀ.

## ೬೫೭

## (ಪ್ರಾಣನಾಥವಿಠಲಾಂಕಿತ)

**ರಾಗ–ಮೋಹನ್/ಮಾಂಡ್** **ಆದಿತಾಳ**

ರಾಧಾಕೃಷ್ಣ ಪಾಲಿಸೋ–ರಾಧಾಕೃಷ್ಣ ಪಾಲಿಸೋ ॥ ॥ಪ॥

ನಂದಕುಮಾರ ನವನೀತಚೋರ
ಸುಂದರಾಕಾರ ಅಗಣಿತಗುಣಗಂಭೀರ ॥ ॥೧॥

ಉದಧಿಶಯನ ಉಡುರಾಜವದನ
ಮದಮುಖ ಕಂಸಾಸುರನ ಮದನಿವಾರಣ ॥ ॥೨॥

ಗೋಪವಿನೋದನೆ ದೀನಾಧಾರನೆ
ಪ್ರಾಣನಾಥವಿಠಲನೆ ಪವನಾತ್ಮನೇ ॥ ॥೩॥

**ಅರ್ಥವಿವರಣೆ :-**

ಪ್ರಾಣನಾಥವಿಠ್ಠಲಾಂಕಿತರಾದ ಶ್ರೀಬಾಗೇಪಲ್ಲಿ ಶೇಷದಾಸರ ಸುಂದರ ಕೃತಿ ಇದು. ಅವರ ಕಾಲ ಕ್ರಿಶ. 1865-1924. "ಶೇಷವಿಠ್ಠಲ"-ಎಂಬ ಅಂಕಿತನಾಮದಲ್ಲೂ ಇವರ ಸಾಹಿತ್ಯಕೀರ್ತನೆಗಳು ದೊರೆತಿವೆ. ಶ್ರೀ ತಂದೆ ಮುದ್ದು ಮೋಹನದಾಸರ ಶಿಷ್ಯರು.

**ನಂದಕುಮಾರ** = ನಂದಗೋಪನ ಸಾಕುಪುತ್ರ ಶ್ರೀಕೃಷ್ಣ. **ಅಗಣಿತಗುಣಗಂಭೀರ** = ಅಪ್ರಾಕೃತವಾದ (ಗಂಭೀರ) ಅಪಾರಗುಣ ಗುಣಭರಿತನು. **ಉದಧಿಶಯನ** = ಕ್ಷೀರಸಮುದ್ರದಲ್ಲಿಷ ಮಳಿಸಿರುವವನು. (ಉದಧಿ = ಸಮುದ್ರ). **ಉಡುರಾಜವದನ** = ಚಂದ್ರಮಂಡಲ ಸದೃಶ ವಾದ ಮುಖವುಳ್ಳವನು. (ಉಡುರಾಜ-ನಕ್ಷತ್ರಗಳಾಧಿಪತಿಯಾದ ಚಂದ್ರ). **ಮದಮುಖ** = ಮದೋನ್ಮತ್ತನಾಗಿದ್ದ ಕಂಸಾಸುರನ ವಿದಾರಣ. **ಗಾನ ವಿನೋದನೆ** = ಸಂಗೀಲೋಲನು (ಸಾಮಗಾನ ವಿಲೋಲನು). **ದೀನಾ ಧಾರನೆ** = ದೀನರಾದ ಜನರಿಗೆ ಆಶ್ರಯದಾತನು. **ಪವನಾತ್ಮನೇ** = ಮುಖ್ಯಪ್ರಾಣಾಂತರ್ಗತನಾದ ಶ್ರೀಹರಿಯೇ.

**೭೫೮**

**(ರಮಾಕಾಂತವಿಠ್ಠಲಾಂಕಿತ)**

**ರಾಗ-ಶಂಕರಾಭರಣ** **ಆದಿತಾಳ**

ನೋಡಿದೇ-ಕೃಷ್ಣಯ್ಯನ-ನೋಡಿದೇ ॥ ॥ಪ॥

ಭರದಿ ನೋಡಲು ಬಂದೆ ನಿನ್ನಾ-ನೋಡಿ
ಹರುಷಭರಿತನಾದೆ ಮುನ್ನ-ಮುದ್ದು

ಸಿರಿಕೃಷ್ಣ ದೇವ ಪ್ರಸನ್ನ–ವದನ
ಸ್ಮರಕೋಟಿರೂಪ ಲಾವಣ್ಯ || ಆಹಾ ||
**ಗುರುವಾಯುಪುರವಾಸ**–ಶರಣ ಜನರ ಪೋಷ
ಸರಿಗಾಣೆ ನಿನಗಿನ್ನು–ಪರಮ ಸುಂದರಮೂರ್ತಿ || ||೧||

ಅಭಯಕರದಲಿ ಅರವಿಂದಾ–ಸೂರ್ಯ
ಪ್ರಭೆ ಪೋಲ್ವ ಚಕ್ರನಲವಿಂದ–ಎಡದಿ
ಶುಭ ಶಂಖ ಗದೆ ಧರಿಸಿ ನಿಂದಾ–ವಿಶ್ವ
ವಿಭು ಮೆರೆವ ವೈಭೋಗದಿಂದಾ || ಆಹಾ ||
ವಿಬುಧರ ಸ್ತುತಿಗೆ ತಾ ಸಭಿಮುಖನಾಗಿ ಮು-
ತ್ತಭಯವ ಕೊಡುವ ವೈಭವದಿ ನಿಂದಿರುವನ್ನ || ||೨||

ಜಲಜಪೀಠನ ಪೂಜೆಗೊಲಿದು–ಬರಲು
ಇಳೆಗೆ ಉದ್ಧವ ನಿನ್ನ ಕರೆದು–ತಂದು
ನಿಲಿಸಲು ನೆಲೆಸಿದೆ ತಿಳಿದು-ಪುಣ್ಯ
ಸ್ಥಳವಾಯ್ತು ವರ್ಣಿಸಲರಿದು || ಆಹಾ ||
ನಳಿನಜ ಸುರವೃಂದ ಬಳಗದಿಂದಲಿ ಸೇವೆ
ಗೊಳುತ ನಲಿದಾಡುವ ಎಳೆನಗೆ ಚೆಲುವನ್ನ || ||೩||

ಹಲವಾರು ಜನ ಓಲೈಸುತಲೀ–ಸೇವೆ
ಸಲಿಪ ಪರಿಯ ನೀನೇ ಬಲ್ಲಿ–ಬಹು
ಸುಲಭನೆಂದೆನಿಸಿ ನಿಂದಿಲ್ಲಿ–ನೈಜ
ಫಲವೀವೆ ಬಹುಯುಕ್ತಿಯಲ್ಲೀ || ಆಹಾ ||
ಬಲವಂತ ನಿನ್ನಯ ನೆಲೆಯ ಬಲ್ಲವರ್ಯಾರೋ
ಕಲಿವೈರಿಯೊಡೆಯನೆ-ಅಲವಬೋಧರ ಪ್ರಿಯ || ||೪||

ಆಗಮನುತ ಭಾಗ್ಯವಂತಾ–ವರ
ಭೋಗಿಶಯನ **ರಮಾಕಾಂತ–ವಿಠ್ಠಲ**
ಯೋಗಿಗಳರಸ ನಿಶ್ಚಿಂತ-ಬಂದು ಈ
ಜಾಗದಿ ನಿಂತು ನಿರಂತ ॥ ಆಹಾ ॥
ಲೋಗರಿಷ್ಟಾರ್ಥವ ಬೇಗನೆ ಕೊಡುತ ಭೂ
ಭಾಗದ ದಕ್ಷಿಣದ್ವಾರಕಿ ಎನಿಸಿದೆ ॥ ॥೫॥



**ಅರ್ಥವಿವರಣೆ :**

ರಮಾಕಾಂತವಿಠ್ಠಲಾಂಕಿತದಾಸರು ದೇವರಾಯದುರ್ಗದ ಪರಮ ಪ್ರಿಯ ಸುಬ್ಬರಾಯ ದಾಸವರ್ಯರ (ತಂದೆ ಮುದ್ದುಮೋಹನ ವಿಠ್ಠಲಾಂಕಿತ ದಾಸವರೇಣ್ಯರು) ಅಂತರಂಗದ ಶಿಷ್ಯಸಮೂಹದಲ್ಲಿ ಒಬ್ಬರು. ಅವರಿಗೆ ಪರಮಾಪ್ತರಾಗಿದ್ದವರು ದಾಸರು ಒಮ್ಮೆ ತೀರ್ಥಕ್ಷೇತ್ರಯಾತ್ರಾಕಾಲದಲ್ಲಿ ಕೇರಳದಲ್ಲಿರುವ ಗುರುವಾಯೂರುಕ್ಷೇತ್ರಕ್ಕೆ ಆಗಮಿಸಿದ್ದಾರೆ ಅಲ್ಲಿ ಸಾಕ್ಷಾತ್ ಮನ್ಮಥಮನ್ಮಥನಂತೆ ಭವ್ಯಾಕೃತಿಯಿಂದ ನಿಂತಿರುವ ಕ್ಷೇತ್ರ ಮೂರ್ತಿ ಗುರುವಾಯೂರು ಕೃಷ್ಣನನ್ನು ಸಂದರ್ಶಿಸಿದ್ದಾರೆ. ಆ ಸರ್ವೇಶನ ಸಂದರ್ಶನಭಾಗ್ಯದಿಂದ ಆನಂದತುಂದಿಲರಾಗಿದ್ದಾರೆ. ಆಗ ಅವರ ಕಂಠ ದಿಂದ ಹೊರಹೊಮ್ಮಿದ ಕೀರ್ತನಸಾಹಿತ್ಯವಿದು.

**ಸ್ಮರಕೋಟಿರೂಪಲಾವಣ್ಯ** = ಕೋಟಿಮನ್ಮಥರ ರೂಪ ಲಾವಣ್ಯಗಳನ್ನು ಮೀರುವ ಪರಮ ಸುಂದರಮೂರ್ತಿ. **ಗುರುವಾಯು ಪುರವಾಸ** = ಗುರುವಾಯೂರು ಕ್ಷೇತ್ರಮೂರ್ತಿಯಾದ ಶ್ರೀಕೃಷ್ಣ. **ಅರವಿಂದಾ** = ಅಭಯ ಹಸ್ತದಲ್ಲಿ ಧರಿಸಿರುವ ಪದ್ಮಾಯುಧ. **ಎಡದಿ** = ವಾಮಹಸ್ತದಲ್ಲಿ ಕೋಟಿಸೂರ್ಯಪ್ರಕಾಶಮಾನವಾದ ಸುದರ್ಶನ ಚಕ್ರವಿದೆ.

**ವಿಶ್ವವಿಭು** = ಸಮಗ್ರ ಬ್ರಹ್ಮಾಂಡಕ್ಕೇ ಪ್ರಭುವಾದ ವಿಶ್ವೇಶನು. ಶಂಖ ಚಕ್ರ ಗಧಾ ಪದ್ಮಧಾರಿಯಾಗಿ ವೈಭವಮೂರ್ತಿಯಾಗಿ ನಿಂತಿದ್ದಾನೆ **ಜಲಜ ಪೀಠನ** = ಬ್ರಹ್ಮದೇವರ (ಜಲಜ–ಕಮಲ. ಕಮಲಪೀಠನಾದ ಬ್ರಹ್ಮನು–ಜಲಜಪೀಠನು) ಬ್ರಹ್ಮದೇವರ ಪೂಜೆಗೆ ಒಲಿದು,ಶ್ರೀಹರಿಯು ಇಳೆಗೆ ಇಳಿದು ಗುರುವಾಯೂರಿನಲ್ಲಿ ಪ್ರಾದುರ್ಭವಿಸಿದನು. ಇದು ಅಲ್ಲಿಯ ಕ್ಷೇತ್ರ ಪುರಾಣ. ಉದ್ಧವನಿಂದ ಪ್ರತಿಷ್ಠಿತ. **ನಳಿನಜ ಸುರವೃಂದ** = ಬ್ರಹ್ಮಾದಿದೇವತಾಸಮೂಹ, **ನೈಜಫಲವೀವ** = ಅವರವರ ಸ್ವರೂಪ ಯೋಗ್ಯತಾನುಸಾರ ಜೀವರಿಗೆ ಫಲಪ್ರದನು. **ಯುಕ್ತಿಯುಲಿ** = ಉಪಾಯದಿಂದ (ಯೋಗಕ್ರಮ), **ಕಲಿವೈರಿಯೊಡೆಯನೆ** = ವಾಯು ದೇವರ ಪ್ರಭುವೇ, (ಶ್ರೀ ವಾಯುದೇವರು ಕಲಿವಿದಾರಣರು, ಅಖಿಣಾಕ್ಷ ಸಮರು) **ಅಲವಬೋಧರೆಪ್ರಿಯ** = ಪೂರ್ಣಪ್ರಜ್ಞನಾಮಕರಾದ ಗುರುಮಧ್ವರ ಮಾನಸಮಂದಿರನು. **ಅಗಮನುತ** = ವೇದಪ್ರತಿಪಾದ್ಯ, **ವರಭೋಗಿಶಯನ** = ಸರ್ವಶ್ರೇಷ್ಠರಾದ ಶೇಷದೇವರ ಮೇಲೆ ಮಲ ಗಿರುವವನು. **ಯೋಗಿಗಳರಸ** = ಯೋಗಸಾಧಕರಾದ ಮುನಿಪುಂಗವರ ಒಡೆಯನು, **ಲೋಗರಿಗೆ** = ಲೋಕದ ಜನರಿಗೆ ಅವರ ಮನೋಭಿಲಾಷೆ ಗಳನ್ನು ಸ್ಖಲಿಸುತ್ತಾ ನಿಂತಿದ್ದಾನೆ ಭಕ್ತವತ್ಸಲನು. **ದಕ್ಷಿಣ ದ್ವಾರಕಿ ಎನಿಸಿದೆ** = ಭರತ ಖಂಡದ ಉತ್ತರದಲ್ಲಿ ಗುಜರಾತ್ ದೇಶದಲ್ಲಿರುವ ದ್ವಾರಕಿ, ಶ್ರೀಕೃಷ್ಣನ ರಾಜಧಾನಿ. ಗುರುವಾಯೂರು ಕ್ಷೇತ್ರವು ದಕ್ಷಿಣಭಾರತದ ದ್ವಾರಕಿ–ಎಂದು ಖ್ಯಾತವಾಗಿದೆ.

## ೬೫೯

## ಜಯವಿಠ್ಠಲಾಂಕಿತ ದ್ವಾರಕಾಪುರದ ವರ್ಣನೆ

**ರಾಗ-ಖಡಕು** **ಏಕತಾಳ**

ಮಹರಾಜ ಯದುಕುಲಧಾಮ
ಸುರರಾಜ ಸುಂದರಧ್ಯಾಮ
ದ್ವಿಜರಾಜವಂಶ ಲಲಾಮ
-ಮಹರಾಜ ಮಹರಾಜ ॥ ॥ಪ॥

ಸುಂದರತರ ದ್ವಾರಾವತೀ ನಗರ
ಸುತ್ತ್ರಯೋಜನ ದ್ವಾದಶ ವಿಸ್ತಾರ
ಸಿಂಧೂರದಿ ತಿದ್ದಿದ ಗೋಪುರ
ಶತಕೋಟಿ ಪ್ರಭೆಗಳ ಧಿಕ್ಕಾರ
ಒಂದಾರಿಂದಲಿಹುದು ಪ್ರಕಾರ
ವಜ್ರಾನ್ವಿತ ಕವಾಟದ್ವಾರ ॥
ಬಂಧಿಸಿಹರು ಬಹು ರತ್ನಗಳಿಂದ
ಬುರುಜುಗಳಿವೆ ಬಹು ಲಕ್ಷಗಳಿಂದ
ಅಂದವಾದ ಆಳ್ವೇರಿಗಳು
ಕರಿವೃಂದಗಳಿಂದಂಲಕಾರಗಳು
ಮೇಲೀಂದ್ರ ನೀಲ ಪುತ್ಥಳಿಗಳ ತಿದ್ದಿ
ಇಟ್ಟಿಹರೈ ಪ್ರಾಕಾರದಿ ಹೊದ್ದಿ
ಮುಂದೆ ಮೃಗೇಂದ್ರನ ಮುಖಗಳ ರಚಿಸಿ
ಮಾಣಿಕ್ಯಗಳದರಲಿ ಮೇಳವಿಸಿ
ಒಂದೇ ರೀತಿಯೊಳಿರುವ ತೆನೆಗಳು
ವರುಣಾಲಯದಂತಿರುವ ಅಗಳು ॥

ಮಂದರಗಿರಿಯಂದದಿ ಉನ್ನತ
ಮೂರುಲೋಕದೊಳು ಬಹು ವಿಖ್ಯಾತ
ಸಿಂಧುಮಧ್ಯದೋಳೆಸೆವುದು ನಗರ
ಸೀಮೆಯೊಳಾವನು ಬಲ್ಲನು ಚದುರ
ಚಂದ್ರನ ಸುಕರ–ಮುತ್ತಿನ ಮಕರ
ತೋರಣ ನಿಕರ
ರತ್ನದ ಶಿಖರಗಳಿವೆ ಸಾವಿರ
ಬಂಧನ ಮುರಗಿಗಳಿಂದ
ವಿಮಾನಗಳಿಂದ–ಪತಾಕೆಗಳಿಂದ
ಸುಕೌಶಲದಿಂದ–ದಿವೌಕಸವೃಂದ
ವಿಚಿತ್ರ ಸುಗಂಧ–ವಿಶೇಷಗಳಿಂದಲಿ ನೋಡಲು
ಚೆಂದಳಿ ವೃಂಬಾರವಿಂದಗಳ್ಹೊಂದಿಸು
ಮಂದರ ಸ್ವರ ಪಿಕವೃಂದ ಧ್ವನಿಗಾನಂದಪಿಸೆ ॥

ಹರುಷವಂಕುರಿಸೆ–ಸುಖಮೋಹರಿಸೆ
ಜನ ಮೈ ಮರೆಸೆ–ಸುಮಂದಿರಗಳ ಮೇಲ್
ಚಂದ್ರಶಾಲೆಗಳಿಂದಲೆಸೆಯೇ ಪೂ–
ರ್ಣೇಂದು ವದನೆಯರು–ಪಂಕಜಾಕ್ಷಿಯರು
ಮಂದದಾಸೆಯರು–ಮೃದುಗಾತ್ರೆಯರು
ಅಂದಣಗಳಲಿ ವಿಹರಿಸುತಲಿರೆ
ಪರಸಾಂದ್ರವಾದ ಜಾಳಾಂದ್ರ ಗವಾಕ್ಷಗಳಿಂದ ॥

ಲೆಸೆವ ಮೇಲುಪ್ಪರಿಗೆಗಳಿರೆ
ಗಂಧಪನ್ನೀರಿನ ತಳಿಯು ಹಾಕಿಹರು
ಘಮಘಮಿಸುವ ಪುಷ್ಪಗಳ ಕಟ್ಟಿಹರು
ಸ್ಯಂದನಗಳು ಶತಸಾವಿರ ಸಂಖ್ಯೆಯೊಳ್
ನಿಂದಿವೆ ಪುರದ್ವಾರದಲಿ

ವೃಷ್ಣ್ಯಂಧಕರಾಯುಧಗಳ ಪಿಡಿದು
ಆರರೇ ನಿಂದಿಹರು ಮುದದಲ್ಲಿ
ಕರಿವೃಂದ ತುರಗ ಕಾಲಾಳುಗಳು
ಪುರವೀಧಿ ವೀಧಿಗಳಲ್ಲಿ
ಸನಂದ ಸನಕಾದ್ಯರು ಬಂದು
ನಿಂದಿಹರು ಸಮ್ಮುಖದಲಿ
ವರಕುಂದಣದಂತೆ ವಿರಾಜಿಸುವಾಮಲಭಿತ್ತಿಗಳು ॥
ನವರತ್ನಗಳು–ಸಾಲಿಂದೆಸೆವ ನವದ್ವಾರಗಳು
ಆಗಾರಗಳು–ಧರದಿಂದ ತೋರ್ಪ ಮೇಲ್ಕಟ್ಟುಗಳು
ನೆಲಗಟ್ಟುಗಳು–ಜಲಬಿಂದುಳಿಂದಾನಂದ ಕೊಡುವ
ಕಾರಂಜಿಗಳು–ಸುಮಪುಂಜಗಳು ॥
ಮಹೇಂದ್ರನಿರುವ ಅಮರಾವತಿಯೋ
ಇದ ಕಟ್ಟಿದವನ ಪ್ರವೀಣತೆಯೋ
ಬಲು ಸಂದಣಿ-ಬಲು ಸಂದಣಿ
ಬಲು ಸಂದಣಿ–ಸುರರೈತಂದು ದ್ವಾರದಲಿ
ನಿಂದು–ಸ್ವಾಮಿಪರಾಕು–ನಮ್ಮ ಸುಮಾಕು
ಲಾಲಿಸಬೇಕು–ಎಂತೆಂದ್ರಿಂದ್ರಾದ್ಯಮರರು
ನಿಂದೊದರೇ–ಆ ಗರ್ಜನೆಗೆ ನೆಲ ಬೆದರೇ ॥
ಮಹರಾಜ–ಮಹರಾಜ ॥ ॥೧॥

ಶೃಂಗರಶೃಂಗಿಸುವ ಶಿರಿಕರದ ಕನ್ನಡಿಯೋ
ಜಗದೊಳಗಿಲ್ಲದ ಸ್ಮರನ ಗರುಡಿಯೋ
ನಗವೈರಿಗೆ ಇದು ನಾಟ್ಯಚಾವಡಿಯೋ
ನಾಗನಗಿರಿಯ ಪ್ರಭೆಗಿಮ್ಮಡಿಯೋ
ನಗರದಮಲ ಸುಕಾಂತಿಚ್ಛವಿಯೋ

ನಗಜಾರಮಣನ ರಜತದಗಿರಿಯೋ
ನಾಗರತ್ನದಿಂ ರಚಿಸಿದ ಗುಡಿಯೋ
ವಿಗಡ ಮದನಕರ ಸುರಗಿಯ ಕಿಡಿಯೋ
ಮೃಗಶಾಖಾಕ್ಷಿಯರಿಗೆ ಎದೆಪುಡಿಯೋ
ಮೃಗಧರ ಮಾರ್ತಾಂಡರುಗಳ ಫಡೆಯೋ
ಮಜ ಭಾಪುರೆ ವೈರಾಜನ ಸಭೆಯೋ
ಜಗವನು ಬೆಳಗಿಪ ದೀಪದ ಕುಡಿಯೋ
ಜಗತೀಪತಿ ಶ್ರೀಹರಿಯ ದೇವಕಿಯೋ
ನಗುತಿವೆ ದೀಪಾವಳಿಗಳು ಸ್ತಂಭಾ
ದಿಗಳಲಿ ಸ್ವರ್ಗವ ನೋಡಿ ಮೇಲ್
ಗಗನವ ಚುಂಬಿಪ ಗಾಢ ತೆರದಿ
ಗಂಭೀರದಲೊಪ್ಪುವ ಮಹಡಿ
ಹೊಗಹೊರ್ಗುತಿಹೆ ಚಿತ್ತಾರಗಳಲಿ ಶೋಭಿಪ
ಸ್ವರ್ಣಮಯದ ವರಗ್ವಾಡಿ
ಗ್ವಾಡಿಗಳಲಿ ನೋಳ್ಪರ ಚಿತ್ತಭ್ರಾಮಕ
ಚೌಕಡೆಯಲಿ ನಿಲುವುಗನ್ನಡಿ
ಸಾಲುಗಳಲಿ ಮಣಿಮಯ ಸ್ತಂಭಗಳು
ರುಗ್ಮಗಳಲಿ ತಿದ್ದಿದ ಲೋವೆಗಳು
ರಜತದಲಿ ಮಾಡಿದ ಹಂಸೆಗಳು
ಕುಸುಮಗಳಿಂದಲೊಪ್ಪುವ ಬೇಲುಗಳು
ಜಾಗರದಲಿ ರಂಜಿಪ ನವಿಲುಗಳು
ಅರಗಿಳಿಯ ಸಾಲುಗಳು–ಅರಳ ಗುಚ್ಛಗಳು
ಅಗಣಿತ ರತ್ನಾನ್ವಿತ ಪೀಠಗಳು
ಅದ್ಭುತವಾದ ವಿಚಿತ್ರ ದ್ವಾರಗಳು
ಸೊಗಸಿನ ಚಿತ್ರದ ಮೇಲ್ಕಟ್ಟುಗಳು
ಸುಂದರಿಯರ ಸುಖಕರದ ಗಾನಗಳು

ತೆರೆದ ಲಕ್ಷ ಗವಾಕ್ಷಿಗಳು
ತಾರೆಗಳಲಿ ತಿದ್ದಿದ ಕುಸುರಿಗಳು
ಕುಸುರಿಗಳಲಿ ಮುತ್ತಿನ ಚೆಂಡುಗಳು

ಚೆಂಡುಗಳಿಗೆ ರತ್ನದ ಗೊಣಸುಗಳು
ಗೊಣಸುಗಳಲಿ ಮೇಲೊಪ್ಪುವ ಕಮಲಗಳು
ಕಮಲಗಳಲಿ ಮೆರೆವಾ ಭ್ರಮರಗಳು
ಸುಮದರಳುಗಳು–ಘಮಘಮಿಸುವ ಗಂಧಾದಿಗಳಿಂದೊಪ್ಪುವ
ಮಂಚಗಳು

ಸ್ಮರಸಂಚುಗಳು

ತೆಗೆಮುಗಿಲುಂಟೆ ಈ ಜಗದೊಳು ಶಿರಕರ
ಯುಗಳದಿ ಸೌಭಾಗ್ಯವ ತಾ ಧರಿಸೀ
ನಗರದಿ ನೆಲೆಸಿಹಳ್ಳಿ ಹರಿಯರಸಿ
ತಾ ಮನವೆರಸೀ–ಸುಖವನುಸರಿಸಿ
ಹರಿಯನನುಸರಿಸೀ-ದುಃಖವ ಮರೆಸೀ
ಪೊಗಲೊಶವೇ ಮಹರಾಜ ಸುರಸ್ತೋಮ
ಗೆಜ್ಜೆಯ ಮೇಲಕೆ ಸ್ವಾರಿ
ಮೂರು ಹೆಜ್ಜೆಯಿಡಲು ಜಂಭಾರಿ
ತಾ ಲಜ್ಜಿಸಿ ಬಿಟ್ಟನು ದಾರಿ
ಬಲು ಜರ್ಝರಿಸಿತು ಸುರನಗರಿ
ಮಹರಾಜ–ಮಹರಾಜ ॥ ॥೨॥

ಸಿರಿಯರಸನ ಶ್ರೀಮುಖದ ಶೃಂಗಾರ
ಶಶಿಕೋಟಿ ಪ್ರಭೆಗಳ ಧಿಕ್ಕಾರ
ಅರಳಿದ ಕುಸುಮಮಂಜರಿಗಳ ಹಾರ
ಆಡುವ ಮತ್ತಾವಳಿಗಳ ಝೇಂಕಾರ
ಮರಕತ ಸುಂದರ ಶ್ಯಾಮಶರೀರ

ಮಕರಧ್ವಜ ಸಾಸಿರನಾಕಾರ
ಶಿರಿಮುಡಿಯೊಳು ಶೃಂಗಾರ ಕಿರೀಟ
ಸುಮನೋಹರದಲಿ ತಿದ್ದಿದ ಮಾಟ
ಕರುಣಾರಸಪೂರಿತ ಅರೆನೋಟ
ಕಾಮಿತ ಕೊಡುವುದು ಈ ಭ್ರೂಮಾಟ
ವರಕಸ್ತೂರೀ ತಿಲಕಲಲಾಟ
ವಾಮಾಕ್ಷಿಯರಿಗೆ ಇದೆ ಎದೆಗೂಟ
ಸರಸಿಜದಳ ನೇತ್ರಗಳ ವಿಲಾಸ
ಸರಸೋಕ್ತಿಗೆ ಸೂಸುವುದು ಪೀಯೂಷ
ಪರಮದಯಾಳುಗಳಿಗೆ ಇವ ಅರಸ
ಪರಿಪರಿಯು ಸುಖ ಸುರಿಸುವ ಪುರುಷ
ಕೊರಳಲಿ ಮೆರೆಯುವ ಮುತ್ತಿನ ಕಂಠೀ
ಕಿವಿಯೊಳು ಶೋಭಿಪ ಮಕರದ ವಂಟೀ
ತರುಣಾದಿತ್ಯನ ಪೋಲುವ ಪದಕ
ತೋರುತಲಿದೆ ನೋಡು ಫಾಲದಿ ಅಳಕ
ಕರದೊಳು ಹಾಕಿದ ರತ್ನದ ಥೋಡೆ
ಕೌಂಸ್ತುಭ ರತ್ನಕೆ ನೋಡಿನ್ನೀಡೆ
ಅರುಣಾಧರ ದಾಳಿಂಬ ಸುದಂತ
ಅಂಬುಜ ಕಂಬುಗೆದಾರಿ ಕರಾಂತ
ಸರಸಿಜನಾಭಿ ತ್ರಿವಳಿಗಳಿಂದ
ಸುಂದರ ಭಾಪುರಿಗಳು ಬಲು ಅಂದ
ಸುರುಚೀರಾಂಬರ ಭೂಷ ವಿಲಾಸ
ಸುಮನಸರೀಕ್ಷಿಸೆ ಪರಮೋಲ್ಲಾಸ
ಪುರಹರ ಸುರನರ ವಂದಿತ ಪಾದ
ಪುಣ್ಯಶ್ಲೋಕರಿಗಿದು ಸುಸ್ವಾದ
ಮಹಿಮೆ ಅಗಾಧ–ಮನಕತಿ ಮೋದ
ಬಿರಿದಿನ ಖಡೆಯು–ಭಳಿರೆನ್ನೊಡೆಯ

ಮುರ ಮಧು ನರಕಾಸುರಸಂಹಾರಿ
ಮುರಳೀಧರ ಗೋವರ್ಧನಧಾರೀ
ಕಂಸಕುಠಾರೀ–ಗರುಡನ ಏರಿ
ಬರುತಿದೆ ಸ್ವಾರೀ-ಬಿಡಿ ಬಿಡಿ ದಾರಿ
ಕರಲಾಘವದಿಂ-ಕರಿಯುಗಮನದಿಂ
ಹರಿ ದಯಮಾಡುವ ಛಂದ
ಮುಂದಿರದೆ ಪೊಗಳ್ವ ಪಾಠಕರುಗಳು
ಛ್ತ್ರದಲಿ ರಂಜಿಪ ಶ್ವೇತಚ್ಛತ್ರಿಯು
ಛಾಯದಿ ಬರೆ ನಲವಿಂದ
ಸಂದರಿಯರು ಸಮುಖದಿ ನಾಟ್ಯಗಳಂ
ವಿಸ್ತರಿಸುವರತಿ ನಯದಿಂದ
ವಿಟಪುರುಷರ ಮನಸಪಹರಿಸುವರು
ನುಟ್ಟುಗಳ ಸನ್ನೆಗಳಿಂದ
ವಿಹರಿಸುವ ಸುಂದರಿಯರ ವರ್ಣನೆ
ತ್ರೈಲೋಕ್ಯದಿ ನಾನರಿಯೆಂದ
ಹಿಮಕರನ ಮಂಡಲವೋ–ಮುಖಮಂಡಲವೋ
ಸರಸಿಜಾಕ್ಷಿಯರ ಶುಭನೋಟಗಳೋ
ಸ್ಮರನ ಕರಚ್ಯುತವಾದ ವೇತ್ರಗಳೋ
ಪರಿವೃತದಳಕಾವಳಿ ಝುಮರುಗಳೋ
ಪಂಕಜದೊಳ್ ಝೇಂಕರಿವ ಭೃಂಗಗಳೋ
ಉರದೊಳು ವರ್ತುಳ ಸ್ತನಭಾರಗಳೋ
ಉನ್ನತ ಕಾಂಚನ ಗಿರಿ ಶಿಖರಗಳೋ
ಕಿರಿದುದರದ ವೋಲ್ರೋಮರಾಜಿಗಳೋ
ಕಾಮನ ಗಿರಿಗೇರುವ ದಾರಿಗಳೋ
ಸ್ಮರನಂತಃಪುರ ಸೋಪಾನಗಳೋ
ಸೂಕ್ಷ್ಮೋದರದೊಳಿಹ ತ್ರಿವಳಿಗಳೋ
ಹರಡಿ ಕಂಕಣದ್ವಾರ್ರಾ

ಹಿಂದೊಪ್ಪುವ ಹೆರಳ ಬಂಗಾರ
ಭರ್ಜರಿಯು ಶರಗಿನೊಯ್ಯಾರ
ಅರೆಬಿರಿದ ಮಲ್ಲಿಕಾಹಾರ
ಬಿಗಿದಿರುವ ಕುಪ್ಪುಸ ಸರಸರಿಗೆ ಮುತ್ತಿನ
ಮುಕುರ ಮೇಲೆ ಹಣೆಬೊಟ್ಟು
ಕೇಸರಿಯು ಮಧ್ಯದಂತಿರುವ ನಡುವು
ಸ್ತನಭಾರಕೆ ಬಳುಕೆ ಕರವಿಟ್ಟು
ಅಪ್ಸರೆಯರೆಲ್ಲ ಸುಸ್ವರಗಳಿಂದ
ಶೃಂಗದ ನಾಟ್ಯದೋಳ್ ಮೆರೆಯೆ
ವಿಸ್ತರಿಸಲಿಕ್ಕೆ ನಾ ಸರಿಯೇ
ಚಿತ್ತರಲಿ ಎನ್ನ ಕಡೆ ಧೊರೆಯೇ
ನವತರುಣಿಯರು–ಶಶಿಕಿರಣೆಯರು
ಮೃದುಚರಣೆಯರು ॥
ಸುವರಣೆಯರಾರತಿಗಳ ಪಿಡಿದಿರುವ ಛಂದ
ತರತರದಿಂದೊಪ್ಪುವ ಕಲಶ ಕನ್ನಡಿಗಳ
ಧರಿಸಿರುವರು ಕರದಿಂದ
ವಿಪ್ರರುಗಳು ಆಶೀರ್ವಾದಗಳಿಂದಲಿ
ಸೂಸುವ ಸೀಶೆಗಳಿಂದ
ಸುರಪುರದ ಸುಂದರಿಯರು
ಕುಸುಮುಗಳ ಸುರಿಸುವರು ಮೇಲಿಂದ
ಸುಧರ್ಮ ಸಭಾಸ್ಥಾನದಲಿ ಪೃಥ್ವೀಪತಿಗ
ಳಿರೇ ಬಹು ವೃಂದ ॥
ಬಹು ಹರುಷದಿಂದ ಸಿಂಹಾಸನ ಸಾರಿ
ಗರುಡಧ್ವಜ ಗಂಭೀರದಿ ಏರಿ
ಸುರ ಕಂಠೀರವ ಮೆರೆಯಲು ಭೇರಿ

ಹೊಡೆಯೆ ನಗಾರಿ–ಕಹಳೆ ತುತೂರಿ
ತಮ್ಮಟೆ ವರೌರಿ–ಮುರ ಜಢಕ್ಕಿ ಜರ್ಝರಿಪ ಭಟರ
ಅಬ್ಬರಕೆ ಜರಿಯೆ ಗಿರಿಕೂಟ
ಭೋರ್ಗರೆವ ಶರಧಿ ಆರ್ಭಟ
ದುರ್ಧರವು ಕರ್ಣಕಾಸ್ಫೋಟ
ನೀರ್ಗರೆವ ಮೇಘದಬ್ಬರವೋ
ಸಿಡಿಲಿನುಬ್ಬರವೋ–ಅರಿಯು ದರ್ಬಾರ
ವತ್ತರದಿ ನೆರೆದ ಪರಿವಾರ
ಭೂ ತರುಣಿಯುರಮುರ ಶೃಂಗಾರ
ರಸಭರಿತ ವದನ ಚಂದಿರ ॥
ಮಹರಾಜ–ಮಹರಾಜ ॥ ॥೩॥

ಜಲಜನಾಭ ಶ್ರೀಕೃಷ್ಣನ ಮುಂದೆ
ಜಯವಿಜಯಾದ್ಯರು ನಿಂದಿಹರಂದೆ
ಕಳವಳಗೊಡುತಿದೆ ವಾದ್ಯದ ಘೋಷ
ಕರಿಗಳ ಸಾಲದೆ ಗಿರಿಸಂಕಾಶ
ಹಳವಿಗಿ ಹಬ್ಬಿದ ಹೇಮರಥಗಳು
ಹರಿವೇಗದಿ ರಂಜಿಸುವಶ್ವಗಳು
ಬಲಿದು ನಿಂತ ಬಲು ಬಿರಿದುಗಳನ್ನು
ಬೆಳ್ಳಿ ಬೆತ್ತಗಳ ಗಣನಿನ್ನೇನು
ಘಳಿಘಳಿಸುತಲಿದೆ ಶಂಖದ ನಾದ
ಗರುಡಧ್ವಜನಿಗೆ ಅದು ಬಲು ಮೋದ
ಬಲಶಾಲಿಗಳದೆ ಲಕ್ಷ ಸಂಖ್ಯಾತ
ಬರಿ ಮಾತಲ್ಲಿದು ಕೇಳೆನ್ನ ಮಾತ
ಝಳಪಿಸುವರು ಖಡ್ಗಗಳನು ಪಿಡಿದು
ಜ್ಯಾಘೋಷಗಳನು ಮಾಳ್ಪರು ಜಡಿದು
ಬಳಸಿ ನಿಂತ ಯದುವೀರರ ಗಡಣ

ಬಾಯಲಿ ಕೊಂಡಾಡುವನೇ ನಿಪುಣ
ಘಲಿಘಲಿರೆಂಬುವ ಗಗ್ಗರಿ ಭಲ್ಲೆ
ಘರ್ಜಿಸುವುದು ನೋಡು ಬಿದಿರಿನ ಕಹಳೆ
ಕಳಕಳಿಸುತಲಿದೆ ಮಹ ಸೌರಂಭ
ಕುಂಭಿಣಿಗಾಶ್ಚರಿಯದ ಸಿರಿತುಂಬಿ
ತುಳುಕುತಿದೇ ಸೌಭಾಗ್ಯದ ನಗರ
ತುದಿ ಮೊದಲಾವನು ಬಲ್ಲನು ಚದುರ
ಜಲಜಭವಾಂಡದೊಳಾರಿಸಿ ನೋಡಾ
ಜೋಡುಂಟೇ ನಮ್ಮ ಧೊರೆಗೆಲೋ ಮೂಢಾ
ಶಳೆನಡುವಿನ ಶೃಂಗಾರದ ಸತಿಯರು
ಸರಿಸದಲಿ ನಿಂದಿಹರು
ಕಂದಳಿರು ಪೋಲುವ ಹಸ್ತಗಳಿಂ
ಚಾಮರಗಳ ಹಾರಿಸುತಿಹರು
ಪುತ್ಥಳಿಗಳಂತೆ ನಿಲುಗನ್ನಡಿಗಳನು
ಕರದಲಿ ಪಿಡಿದಿಹರು
ಚಿಗುರೆಲೆಯಿಂದೊಪ್ಪುವ ತಾಂಬೂಲಗಳನು
ಚಿನ್ಮಯಗೇ ಕೊಡುತಿಹರು
ಮದ್ದಳೆಯು ತಾಳ ತಂಬೂರಿ ವೀಣಾ
ವಾದ್ಯವು ಲಯಸ್ವರ
ಬದ್ಧದಿಂದ ಸುಬದ್ಧಿವಂತರ
ಲ್ಲೆದ್ದು ನಿಂತು ತಮ್ಮ
ವಿದ್ಯೆಗಳನು ತೋರುವರು
ಸುಪದ್ಧತಿಗಳ ಬಲ್ಲವರು
ಭಳಿರೆ ಭಳಿರೆ ಸದ್ಗುಣನಿಲಯ
ಭಕ್ತ ಜನಾವಳಿಗೆಲ ನೀ ಸದಯಾ
ಬಲಿಗೊಲಿದತಿ ಸುಂದರತರ ಮೂರ್ತಿ
ಭೂಮ್ಯಾಕಾಶದಿ ತುಂಬಿತು ಕೀರ್ತಿ

ಜಲಜನಾಭ ವರಜಾಹ್ನವಿಜನಕ
ಜಗತೀಪತಿ ಜಯ ಯದುಕುಲತಿಲಕ
ಖಳಕುಲ ಮೂಲೋತ್ಪಾಟನಕಾರೀ
ಕುಜನಕುರಾರೀ–ಕೌಂಸ್ತುಭಧಾರಿ
ಫಲುಗುಣಸಖ **ಜಯವಿಠ್ಠಲ**
ಎಂದು ಹೊಗಳುತಿರೆ ಬಂದಿಗಳು
ಮಂಜುಳದ ದಿವ್ಯತರ ನಾದಗಳು
ಎಲ್ಲೆಲ್ಲು ತೋರ್ಪ ವಿನೋದಗಳು
ಭೂವಲಯದಲ್ಲಿ ಮಹರಾಜ ಸಭಾ
ಶೋಭಿಸುವುದು ಶತಸೂರ್ಯನಿಭಾ
ಪ್ರಭೆ ತುಂಬಿ ಚುಂಬಿಸುತಿದೆ ನೋಡು ಸಭಾ
ಭೂವಲಯಕೆ ಇದು ವೈಕುಂಠಸಭಾ ॥
ಮಹರಾಜ–ಮಹರಾಜ ॥ ॥೪॥



**ಅರ್ಥವಿವರಣೆ : –**

**ಖಡಕು** ರಾಗದಲ್ಲಿರುವ ಲಾವಣಿಯ ಮಾದರಿಯಲ್ಲಿರುವ ಈ ಕೀರ್ತನ ಸಾಹಿತ್ಯದ ಕರ್ತೃಗಳು **ಜಯವಿಠ್ಠಲಾಂಕಿತ ಶ್ರೀನಿವಾಸದಾಸರು.** ಈ ಮಹನೀಯರು ಮೈಸೂರಿನವರು ಅವರ ವಂಶೀಕರು ಮೈಸೂರಿನಲ್ಲಿದ್ದಾರೆ. ಹೊನ್ನಾಳಿದಾಸರ ಪೀಳಿಗೆಗೆ ಸೇರಿದ ದಾಸವರೇಣ್ಯರಿವರು. ಅರ್ಥ ಅಲಂಕಾರಗಳಿಲ್ಲದ ಈ ಕಾಲದ ಭಾವಗೀತೆಗಳಲ್ಲಿ ಇಂತಹ ಅಪೂರ್ವ ಶೈಲಿಯನ್ನು ಕಾಣುವುದು ಅಪೂರ್ವ.

ಈ ಕೀರ್ತನೆಯನ್ನು ಹಾಡುವವರು ಈ ಕಾಲದಲ್ಲಿ ತುಂಬಾ ವಿರಳ. ಆದಕ್ಕೆ ಸ್ಪಷ್ಟವಾದ ಶಬ್ದೋಚ್ಚಾರಣೆ–ಒಂದೇ ಉಸಿರಿನಲ್ಲಿ ಹೇಳುವ ಕಂಠ ಸಾಮರ್ಥ್ಯ ಬೇಕು.

ಈ ಕೀರ್ತನಸಾಹಿತ್ಯದ ಪೂರ್ವ ಸಂದರ್ಭ ಹೀಗಿದೆ :–

ಯದುಕುಲ ವಂಶಕ್ಕೆ ಸೇರಿದ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿನ ಪ್ರಭುಗಳಾಗಿದ್ದ ಕಾಲವದು ಒಮ್ಮೆ ಪ್ರಭುಗಳು ತಮ್ಮ ಅರಮನೆಯಲ್ಲಿ ವಿದ್ವದ್ಗೋಷ್ಠಿಯನ್ನು ಕರೆದಿದ್ದಾರೆ. ತ್ರಿಮತಸ್ಥ ಪಂಡಿತರಲ್ಲಿ ವ್ಯಾಕ್ಯಾರ್ಥಗಳಾಗುತ್ತಿವೆ. ಆಗ ಮಹಾರಾಜರು ಪಂಡಿತರನ್ನು ಉದ್ದೇಶಿಸಿ – "ನಮ್ಮ ಈ ಅರಮನೆಯನ್ನು ವರ್ಣಿಸುತ್ತೀರಾ ?" ಎಂದು ಕೇಳಿದ್ದಾರೆ. ಪಂಡಿತರು ಹಳೆಗನ್ನಡದ ಶೈಲಿಯಲ್ಲಿ ವಿವರಣಾತ್ಮಕವಾಗಿ ಬರೆದು ಓದಿದ್ದಾರೆ. ಆದರಿಂದ ಪ್ರಭುಗಳಿಗೆ ತೃಪ್ತಿಯಾಗಲಿಲ್ಲ. ಅವರು ಸರಳವಾದ ಕನ್ನಡದಲ್ಲಿ ವರ್ಣನೆ ಇದ್ದರೆ, ಆಬಾಲವೃದ್ಧರಿಗೂ ಅರ್ಥವಾಗುತ್ತಿತ್ತು ಎಂದು ಉತ್ತರಿಸಿದ್ದಾರೆ. ಆದಕ್ಕೆ ಕವಿಗಳು ವ್ಯಂಗ್ಯವಾಗಿ, "ಆ ಶೈಲಿಯಲ್ಲಿ ಬರೆಯಲು ಹರಿದಾಸರೇ ಆಗಬೇಕು. ನಮ್ಮಿಂದ ಸಾಧ್ಯವಿಲ್ಲ" ಎಂದಿದ್ದಾರೆ. ಚಾಣಾಕ್ಷರಾದ ಮಹಾರಾಜರು ನಸುನಗುತ್ತಾ, "ಹಾಗಾದರೆ ಸರಿ. ನಮ್ಮ ಮೈಸೂರು ರಾಜಧಾನಿಯಲ್ಲಿ ಅಂತಹ ಹರಿದಾಸರೂ ಯಾರೂ ಇಲ್ಲವೇ?" ಎಂದು ಪ್ರಶ್ನಿಸಿದ್ದಾರೆ. ಒಬ್ಬರು "**ಶ್ರೀನಿವಾಸದಾಸರೆಂಬ** ಒಬ್ಬ ಹರಿದಾಸರಿದ್ದಾರೆ. ಅವರು ಒಪ್ಪಿದರೆ ಆಗಬಹುದು" ಎಂದು ತಿಳಿಸಿದರು. ಕೂಡಲೇ ಮಹಾರಾಜರು ಮೇನೆಯನ್ನು ಕಳುಹಿಸಿ, ಶ್ರೀನಿವಾಸದಾಸರನ್ನು ತಮ್ಮ ಅರಮನೆಗೆ ಬರಮಾಡಿಕೊಂಡರು. ದಾಸರು ಪ್ರಭುಗಳನ್ನು ಕುರಿತು "ನಾನು ನಿಯಮಬದ್ಧ ದಾಸ. ನರಸ್ತುತಿ-ಲೌಕೀಕ ವರ್ಣನೆ ಮಾಡಿ ಅಭ್ಯಾಸವಿಲ್ಲ. ತಾವು ಸಮ್ಮತಿಸುವುದಾದರೆ, ಶ್ರೀಕೃಷ್ಣನ ದ್ವಾರಕಾಪುರದ ವರ್ಣನೆಯನ್ನು ಮಾಡುತ್ತೇನೆ" ಎಂದು ದಿಟ್ಟತನದಿಂದ ಹೇಳಿದರು. ಪ್ರಭುಗಳು ಸಮ್ಮತಿಸಿದರು. ಕೂಡಲೇ ದಾಸರು ತಾಳ ಹಾಕುತ್ತಾ "**ದ್ವಾರಕಾಪುರದ ವರ್ಣನೆ**"ಯನ್ನು ಆಶುಕವಿತ್ವದಿಂದ ಹೇಳಿದರು. ವರ್ಣನಾ ವೈಖರಿ–ಲಲಿತ ಪದಗಳ ವಿನ್ಯಾಸ–ಮನಸ್ಸಿಗೆ ಸ್ಪರ್ಶಿಸುವ ಚಿತ್ರಣಗಳಿಂದ ಕೂಡಿದ ಈ ಕೀರ್ತನಸಾಹಿತ್ಯ ದಾಸಸಾಹಿತ್ಯಾಗಸದಲ್ಲಿ ನಿತ್ಯ ನೂತನವಾಗಿ ಬೆಳಗುತ್ತಿರುವ ಪ್ರಮುಖ ತಾರೆಯಂತಿದೆ.

**ಯದುಕುಲಧಾಮ** = ಯದುಕುಲಸಂಜಾತನಾದ ಶ್ರೀಕೃಷ್ಣ. **ಸುರರಾಜ** = ದೇವದೇವನಾದ ಸರ್ವೋತ್ತಮ. **ಸುಂದರ ಧಾಮ** = ಸಮುದ್ರಮಧ್ಯದಲ್ಲಿರುವ ಸುಂದರ ದ್ವಾರಕಾಪುರ. **ದ್ವಿಜರಾಜವಂಶ ಲಲಾಮ** = ಚಂದ್ರಕುಲೋದ್ಭವ (ದ್ವಿಜ-ಚಂದ್ರ). **ದ್ವಾದಶವಿಸ್ತಾರ** = ದ್ವಾರಕಾನಗರಿಯು ದ್ವಾದಶಯೋಜನ ವ್ಯಾಪ್ತಿಯುಳ್ಳದ್ದು. **ಸಿಂಧೂರದಿ** = ಸಮುದ್ರಮಧ್ಯದಲ್ಲಿ. **ಶಶಿಕೋಟಿಗಳ** = ಕೋಟಿ ಚಂದ್ರರ ಕಾಂತಿಯುಳ್ಳ. **ಪ್ರಾಕಾರ** = ಸುತ್ತಲಿರುವ ಆವರಣಗಳು. **ವಜ್ರಾನ್ವಿತ** = ಪ್ರಮುಖದ್ವಾರದ ಚೌಕದಲ್ಲಿ ವಜ್ರಖಚಿತವಾಗಿದೆ. **ಬುರುಜು** = ಕೋಟೆಯ ಮೇಲಿನ ಗುಮ್ಮಟ. **ಅಟ್ಟೇರಿಗಳು** ಎತ್ತರವಾದ ಗೋಪುರಗಳು **ಕರಿವೃಂದಗಳಿಂದ** = ಆನೆಗಳ ಸಮೂಹ **ಇಂದ್ರನೀಲ** = ನೀಲಮಣಿಗಳು, **ಮೃಗೇಂದ್ರನ** = ಸಿಂಹಾಕಾರದ ಮುಖವಾಡ. **ಮೇಳವಿಸಿ** = ಅದರಲ್ಲಿ ಮಾಣಿಕ್ಯದ ಹರಳುಗಳನ್ನು ಜೋಡಿಸಿ, **ವರುಣಾಲಯ** = ಸಮುದ್ರ. **ಉನ್ನತ** = ಮಂದರ ಪರ್ವತದಂತೆ ಎತ್ತರವಾಗಿರುವ, **ಸಿಂಧುಮಧ್ಯದೊಳು** = ಸಮುದ್ರ ಮಧ್ಯದಲ್ಲಿ ವಿರಾಜಿಸುತ್ತಿದೆ ದ್ವಾರಕಾವತೀ. **ಚದುರ** = ಜಾಣ, **ಸುಕರ** = ಸುಂದರವಾದ, **ಮಕರ** = ಆಭರಣ (ಮೊಸಳೆಯ ಆಕಾರದಲ್ಲಿ), **ನಿಕರ** = ಸಮೂಹ. **ಮುರಗಿ** = ಹಸ್ತಾಭರಣ (ಭಾಪುರಿ). **ದಿವೌಕಸವೃಂದ** = ದೇವತಾಸಮೂಹ, **ಚೆಂದಳಿ** = ಸುಂದರವಾದ, ಪರಿಮಳಯುಕ್ತವಾದ, **ಪಿಕವೃಂದ** = ಕೋಗಿಲೆಗಳ ಹಿಂಡು. **ಪೂರ್ಣೇಂದುವದನೆಯರು** = ಪೂರ್ಣಚಂದ್ರ ಬಿಂಬವನ್ನು ಹೋಲುವ ವದನವುಳ್ಳ ಸುಂದರ ಸ್ತ್ರೀಯರು. **ಮೃದುಗಾತ್ರೆಯರು** = ಕೋಮಲವಾದ ದೇಹವುಳ್ಳವರು. **ಅಂದಣದಲಿ** - ವಿಮಾನಗಳಲ್ಲಿ, **ಜಾಳಾಂದ್ರ** = ಜಾಲಗಳಿಂದ ಕೂಡಿದ (ರಂಧ್ರಯುಕ್ತ), **ಗವಾಕ್ಷ** = ಮೇಲು ಕಿಟಕಿಗಳು. **ತಿಳಿಯ** = ತಿಳಿನೀರು (ಪನ್ನೀರು). **ಸ್ಯಂದನಗಳು** = ರಥಗಳು. **ವೃಷ್ಣ್ಯಂಥ** = ವೃಷ್ಣಿಶ್ರೇಷ್ಠರು (ಯದುಕುಲಪ್ರಮುಖರು). **ಅಮಲಭಿತ್ತಿಗಳು** = ಸ್ಪಷ್ಟವಾಗಿ ಗೋಡೆಯ ಮೇಲೆ ಬರೆದ ಚಿತ್ರಗಳು.

**ಆಗಾರಗಳು** = ನಡುವಿನ ತೊಟ್ಟಿಗಳು. **ಕಾರಂಜಿಗಳು** = ನೀರಿನ ಚಿಲುಮೆಗಳು. **ಸುಮಪುಂಜಗಳು** = ನಾನಾ ಬಗೆಯ ಹೂವುಗಳ ಗೊಂಚಲುಗಳು. **ಪರಾಕು** = ಸ್ವಾಗತಧ್ವನಿ. **ಶಿರಿಕರದ** = ಕೈಯಲ್ಲಿ ಹಿಡಿದ ಕನ್ನಡಿ. **ಸ್ಮರನ ಗರುಡಿಯೋ** = ಮನ್ಮಥನ ಪ್ರಭಾವವೋ. **ನಗವೈರಿಗೆ** = ಇಂದ್ರನಿಗೆ. **ಚಾವಡಿ** = ನರ್ತನಶಾಲೆ. **ನಾಗನಗರಿಯು** = ಪಾತಾಳಲೋಕ (ಸರ್ಪಲೋಕ). **ಚ್ಛವಿಯೋ** = ಕಾಂತಿ, **ನಗಜಾ ರಮಣನ** = ರುದ್ರದೇವರ (ನಗಜಾ–ಪಾರ್ವತೀ, ಪರ್ವತಕುಮಾರಿ). **ರಜತದ ಗಿರಿಯೋ** = ರಜತಪರ್ವತವೋ, **ನಾಗರತ್ನ** = ಸರ್ಪದ ಹೆಡೆಯಲ್ಲಿರುವ ಮಣಿ. **ವಿಗಡ** = ಸಾಹಸಿ. **ಮದನಕರ** = ಮನ್ಮಥನ ಕೈಯಲ್ಲಿರುವ. **ಸುರಗಿಯು** = ಕಠಾರಿ. **ಮೃಗಶಾಬಾಕ್ಷಿಯರಿಗೆ** = ಜಿಂಕೆಯಂತೆ ಕಣ್ಣುಳ್ಳ ಸುಂದರಸ್ತ್ರೀಯರು. **ಮೃಗಧರ** = ಚಂದ್ರ. **ಮಾರ್ತಾಂಡರುಗಳ** = ಸೂರ್ಯರ, **ಘಡೆ** = ಮೂದಲಿಸುವ ಕಾಂತಿ. **ವೈರಾಜನ** = ವಿರಾಟಪುರುಷನ, **ದೇವಡಿ** = ಗರ್ಭಗುಡಿ. **ಚಿತ್ತಾರಗಳು** = ಬಗೆಬಗೆಯ ಚಿತ್ರಗಳು. **ಗ್ವಾಡಿ** = ಗೋಡೆ. **ಚಿತ್ತ ಭ್ರಾಮಕ** = ಗೋಡೆಯಲ್ಲಿ ಹಾಕಿರುವ ನಿಲುಗನ್ನಡಿಗಳು ಭ್ರಾಂತಿ ಯನ್ನುಂಟುಮಾಡುತ್ತಿವೆ. **ರುಗ್ಮಗಳು** = ಚಿನ್ನದಿಂದ, **ಲೋವೆಗಳು** = ಇಳಿಜಾರಾದ ಸೂರು. **ಬೇಲುಗಳು** = ತಂತಿಯ ಬೇಲಿ. **ಅರಳ ಗುಚ್ಛಗಳು** = ಅರಳಿನ ಗೊಂಡೆಗಳು. **ಕುಸುರಿ** = ಸೂಕ್ಷ್ಮವಾದ ಕೆತ್ತನೆಯ ಕೆಲಸ. **ಗೊಣಸು** = ಚೆಂಡು, **ಭ್ರಮರಗಳು** = ಬಿಡಿಸಿದ ಕಮಲಗಳಿಗೆ ಮುತ್ತುತ್ತಿರುವ ದುಂಬಿಗಳು. **ಸ್ಮರಸಂಚು** = ಕಾಮನ ಕ್ರೀಡೆ. **ತೆಗೆ** = ಸರಿಸಮಾನ. **ಶಿರಿಕರ ಯುಗಳದಿ** = ಸುಂದರವಾದ ಎರಡು ಕೈಯ್ಯಗಳಿಂದ, **ಹರಿಯರಸಿ** = ಶ್ರೀಹರಿಯ ಪತ್ನಿಯಾದ ಲಕ್ಷ್ಮಿಯು ಸೌಭಾಗ್ಯದ ಸಾಂಕೇತವಾಗಿ ನಗರದಲ್ಲಿ ನೆಲೆಸಿದ್ದಾಳೆ. **ಸೆಜ್ಜೆ** = ಮಲಗುವ ಕೋಣೆ (ಶಯ್ಯಾಗಾರ). **ಜಂಭಾರಿ** = ಇಂದ್ರ. ಅಲಂಕೃತ ವಾದ ಶಯ್ಯಾಗಾರದಲ್ಲಿ ಕಾಲಿಡಲು ಇಂದ್ರನಿಗೇ ನಾಚಿಕೆಯಾಯ್ತು. **ಜರ್ಝರಿಸಿತು** = ಪ್ರಕಾಶಿಸಿತು. **ಸುರನಗರಿ** = ಅಮರಾವತಿಯನ್ನು

**ಹೊಳೆಯುವ** ದ್ವಾರಕಾಪುರ. **ಕುಸುಮಮಂಜರಿಗಳ ಹಾರ** = ಅರಳು ತ್ತಿರುವ ಹೂವುಗಳಿಂದ ಕಟ್ಟಲ್ಪಟ್ಟ ಹಾರವನ್ನು ಧರಿಸಿದ್ದಾನೆ ಶ್ರೀಕೃಷ್ಣ. **ಮತ್ತಾಳಿಯು** = ಮದಿಸಿದ (ಕೊಬ್ಬಿದ) ದುಂಬಿಗಳ ಸಾಲು. **ಮರಕತ** = **ಪಚ್ಚೆ** (ನವರತ್ನಗಳಲ್ಲಿ ಒಂದು) **ಶ್ಯಾಮಶರೀರ** = ನೀಲಮೇಘ ವರ್ಣ. **ಮಕರಧ್ವಜ** = ವರುಣ. ನೀಲಸಮುದ್ರದಂತೆ ವರ್ಣವಿನ್ಯಾಸ. **ಶಿರಿಮುಡಿ** = ಸುಂದರವಾದ ತಲೆಗೂದಲು. **ಭ್ರೂವಾಟೆ** = ತಿದ್ದಿ ದಂತಹ ಹುಬ್ಬಿನ ಜೋಡಿ. **ವಾಮಾಕ್ಷಿಯರಿಗೆ** = ಚೆಲುವೆಯರಾದ ಸ್ತ್ರೀಯರು. **ಎದೆಗೂಟೆ** = ಅವರ ಎದೆಗೆಡಿಸುವ ಶ್ರೀಹರಿಯ ಲಾವಣ್ಯ ವಿಶೇಷ. **ಪೀಯೂಷ** = ಅಮೃತ. ಶ್ರೀಕೃಷ್ಣನ ಸರಸದ ಮಾತುಗಳು ಅಮೃತಮಯ. **ಮುತ್ತಿನ ಕಂಠೀ** = ಮುಕ್ತಾವಳಿಯ ಕಂಠದ ಸರ. **ಮಕರದ ವಂಟೀ** = ಮೊಸಳೆಯ ಆಕಾರದಂತಿರುವ ಕರ್ಣಾಭರಣ. **ತರುಣಾದಿತ್ಯನ** = ಆಗ ತಾನೇ ಉದಯಿಸುತ್ತಿರುವ ಸೂರ್ಯ. **ಫಾಲದಿ ಅಳಕ** = ಶ್ರೀಕೃಷ್ಣನ ಹಣೆಯ ಮೇಲೆ ಲಾಸ್ಯವಾಡುತ್ತಿರುವ ಮುಂಗುರುಳು. **ತೊಡೆ** = ಕಂಕಣ (ರತ್ನಖಚಿತವಾದ), **ಅರುಣಾಧರ**= **ಅವನ** ತುಟಿಗಳು ತೊಂಡೆಹಣ್ಣಿನಂತಿವೆ. **ದಾಳಿಂಬಿ ಸುದರಿತ** = ದಾಳಿಂಬೆಯ ಕಾಳುಗಳಂತೆ ಶುಭ್ರವಾಗಿ ಜೋಡಿಸಲ್ಪಟ್ಟ ದಂತಪಂಕ್ತಿ. **ಕಂಬುಗಧಾರಿ** = ಕೈಯಲ್ಲಿ ಧರಿಸಿರುವ ಪದ್ಮ (ಅಂಬುಜ)–ಶಂಖ(ಕಂಬು) ಗದಾ (ಗಧಾಯುಧ)–ಚಕ್ರ (ಅರಿ). **ಸರಸಿಜನಾಭಿ ತ್ರಿವಳಿಗಳಿಂದ** = ಶ್ರೀಪದ್ಮನಾಭನ ನಾಭೀಕಮಲದ ಮೂಲದ ಸುತ್ತಲೂ ಉದರದ ಮೇಲೆ ಮೂರು ಸುರುಳಿ ಗೆರೆಗಳು (ಅಪ್ರಾಕೃತ) ತ್ರಿವಳಿಗಳಿವೆ. **ಪೀತಾಂಬರ** = ಸುವರ್ಣವಸ್ತ್ರ (ಜರತಾರಿ). **ಸುಮನಸರು ಈಕ್ಷಿಸಿ** = ದೇವತೆಗಳು ನೋಡುತ್ತಿರಲಾಗಿ, **ಪುರಹರ** = ತ್ರಿಪುರಾರಿಯಾದ ರುದ್ರದೇವರು. **ಸುರನರ** = ದೇವತಾಗಣ – ಮಾನವರಿಂದ ವಂದಿತಚರಣ. **ಪುಣ್ಯ ಶ್ಲೋಕರಿಗಿದು** = ಉತ್ತಮಾಧಿಕಾರಿಗಳಿಗೆ, **ಬಿರಿದಿನ ಖಡೆಯ** = ಪ್ರಶಸ್ತಿಯ ಮಹಿಮೆ (ಹಿರಿಮೆ). **ಸ್ವಾರಿ** = ಸವಾರಿ. **ಕರಲಾಘವ** = ಕರಾವಲಂಬನ. **ಕರಿಯ ಗಮನದಿಂ** = ಆನೆಯ ನಡಿಗೆಯ ಗಾಂಭೀರ್ಯ.

**ಪಾಠಕರುಂಗಳು** = ಹೊಗಳುಭಟ್ಟರು (ವಂದಿಮಾಗಧರು). **ಸುಭ್ರೂಗಳ ಸನ್ನೆಗಳಿಂದ** = ಹುಬ್ಬಿನ ಸನ್ನೆಗಳಿಂದ (ಭ್ರೂಚಾಲನ). **ಹಿಮಕರನ** = ಚಂದ್ರನ (ತಂಪಾದ ಕಿರಣಗಳುಳ್ಳ). **ವೇತ್ರಗಳೋ** = ಕರದಲ್ಲಿ ಹಿಡಿದ ಬೆತ್ತ (ಕರಕೋಲು). **ಪರಿವೃತದಳಕಾವಳಿ** = ಸುತ್ತುವರಿಯಲ್ಪಟ್ಟ (ವಲಯಾಕಾರದ) ದಳಗಳಲ್ಲಿ ಝೇಂಕರಿಸುತ್ತಿರುವ ದುಂಬಿಗಳ ಸಮೂಹ. **ಝಮಮುರುಗಳೋ** = ಝೇಂಕಾರದ ಧ್ವನಿ. **ಹಿಂದೊಪ್ಪುವ ಹೆರಳ ಭಂಗಾರ** = ತಲೆಗೂದಲಿನ ಹಿಂಭಾಗದಲ್ಲಿ ಹೆರಳು ಭಂಗಾರದಿಂದ ಭೂಷಿತರಾಗಿದ್ದಾರೆ. **ಅರೆಬಿರಿದ** = ಅರ್ಧ ಅರಳಿರುವ ಮಲ್ಲಿಗೆಯ ಮಾಲೆ. **ಮುಖುರ** = ನಾಸಿಕಾಭರಣ. **ನಡುವು** = ಸಿಂಹದ ನಡುವಿನಂತೆ ಇರುವ ಸೊಂಟ (ಕೇಸರಿ-ಸಿಂಹ). **ಶಶಿಕಿರಣೆಯರು** = ಚಂದ್ರನ ಕಿರಣದಂತೆ ಪ್ರಶಾಂತಕಾಂತಿಯುಕ್ತರು. **ಮೃದುಚರಣೆಯರು** = ಮೃದುವಾದ (ಕೋಮಲ) ಪಾದವುಳ್ಳವರು. **ಸುವರಣೆಯರಾರತಿಗಳ** = ಚಿನ್ನದ ಹರಿವಾಣದಲ್ಲಿ ಆರತಿಯನ್ನು ಬೆಳಗುತ್ತಿರುವ. **ಸೂಸುವ ಸೇಶೆಗಳಿಂದ** = ಎರಚುತ್ತಿರುವ ಮಂತ್ರಾಕ್ಷತೆ ಕಾಳುಗಳಿಂದ **ಸುರಕಂಠೀರವ** = ದೇವ ಶ್ರೇಷ್ಠನಾದ ಸರ್ವೋತ್ತಮನಾದ ಶ್ರೀಕೃಷ್ಣ (ಕಂಠೀರವ–ಮೃಗರಾಜ–ಶ್ರೇಷ್ಠ). **ನೌರಿ** = ಚರ್ಮವಾದ್ಯ ವಿಶೇಷ. **ಮುರಜ** = ಮದ್ದಳೆ. **ದುರ್ಧರವು** = ಸಹಿಸಲಸಾಧ್ಯ (ಕರ್ಣಕಠೋರ). **ನೀರ್ಗರೆವ** = ಮಳೆಯನ್ನು ಸುರಿಸುತ್ತಿರುವ. **ವತ್ತರದಿ** = ನೆರದೆ (ಕಿಕ್ಕಿರಿದ). **ಕಳವಳಗೊಡುತಿದೆ** = ವಾದ್ಯದ ಶಬ್ದ ತುಂಬಿ ಅನುರಣಿತವಾಗುತ್ತಿದೆ. **ಹಳವಿಗಿ** = ಅಂದವಾದ ವರ್ಣಗಳು. **ಹರಿವೇಗದಿ** = ರಥಕ್ಕೆ ಕಟ್ಟಿರುವ ಕುದುರೆಗಳು ನಾಗಾಲೋಟದಿಂದ ಓಡುವ ಸಾಮರ್ಥ್ಯವುಳ್ಳವು. **ಬೆಳ್ಳಿ ಬೆತ್ತಗಳ ಗಣ** = ಬೆಳ್ಳಿಕೋಲನ್ನು (ರಜತ ದಂಡ) ಹಿಡಿದಿರುವ ಸೇವಕರ ಸಮೂಹ **ಜ್ಯಾಘೋಷಗಳನ್ನು** = ಉಘೇ–ಉಘೇ–ಎಂಬ ಜಯ ಘೋಷ. **ಗಗ್ಗರಿ ಭಲ್ಲೆ** = ಉದ್ದವಾದ ಹಿಡಿಯಿರುವ ಭಲ್ಲೆಗಳು. **ಕುಂಭಿಣಿಗಾಶ್ಚರಿಯದ** = ಭೂಮಿಯ ಮೇಲೆ ಅತ್ಯಾಶ್ಚರ್ಯವಾದ. **ಸಿರಿತುಂಬಿ** = ದ್ವಾರಕಾಪುರಿಯು ವೈಭವ ಸಂಪತ್ತುಗಳಿಂದ ತುಂಬಿತುಳು

ಕುತ್ತಲಿದೆ. **ಜಲಜಭವಾಂಡ** = ಬ್ರಹ್ಮಾಂಡ (ಜಲಜ–ಪದ್ಮ. ಜಲಜಭವ–ಕಮಲಸಂಜಾತನಾದ ಬ್ರಹ್ಮ). **ಶೆಳೆನಡುವಿನ** = ತೆಳುವಾದ ಸೊಂಟದ ಭಾಗ. **ಕೆಂದಳಿರು** = ಚಿಗುರಿನಂತೆ ಕೆಂಪಾದ ಹಸ್ತದ್ವಯಗಳು **ಚಿನ್ಮಯಗೇ** = ಜ್ಞಾನಾನಂದಮಯನಾದ ಶ್ರೀಕೃಷ್ಣನಿಗೆ. **ಲಯಸ್ವರಬದ್ಧದಿಂದ** = ತಾಳ ಗತಿ ಸುಸ್ವರಗಳಿಗನುಸಾರವಾಗಿ. **ವಿದ್ಯೆಗಳ** = ಸಂಗೀತ ಕಲಾಕೌಶಲ್ಯವನ್ನು. **ಸುಪದ್ಧತಿಗಳ** = ಶಾಸ್ತ್ರಬದ್ಧವಾದ ಪದ್ಧತಿಗಳು. **ಭಳಿರೆ ಭಳಿರೆ** = ಭೇಷ್–ಭೇಷ್–ಎನ್ನುವ ಹರ್ಷೋದ್ಗಾರ. **ಬಲಿಗೊಲಿದ** = ಬಲಿಚಕ್ರವರ್ತಿಯನ್ನು ಅನುಗ್ರಹಿಸಿದ ವಾಮನಮೂರ್ತಿ. **ಜಲಜನಾಭವರ** = ಸರ್ವೋತ್ತಮನಾದ ಪದ್ಮನಾಭನು. **ಜಾಹ್ನವಿಜನಕ** = ಗಂಗಾಪಿತನು (ತ್ರಿವಿಕ್ರಮರೂಪ). **ಯದುಕುಲತಿಲಕ** = ಯಾದವಕುಲ ಶ್ರೇಷ್ಠನಾದ ಶ್ರೀಕೃಷ್ಣ. **ಮೂಲೋತ್ಪಾಟನಕಾರಿ** = ದೈತ್ಯರ ವಂಶವನ್ನೇ ಬೇರುಸಹಿತ ನಾಶಮಾಡುವ ದಾನವಾರಿ ಶ್ರೀಕೃಷ್ಣ. **ಫಲ್ಗುಣಸಖ** = ಪಾರ್ಥನ ಮಿತ್ರ. **ಶತಸೂರ್ಯಪ್ರಭಾ** = ಕೋಟಿಸೂರ್ಯಪ್ರಕಾಶವುಳ್ಳ (ಶತ ಎಂದರೆ-ಅನಂತ ಎಂದರ್ಥ). **ಸಭಾ ಭೂವಲಯಕೆ** = ಆಕಾಶ ಭೂ ವ್ಯಾಪ್ತವಾದ **ವೈಕುಂಠ ಸಭಾ** = ವೈಕುಂಠಕ್ಕೆ ಸಮಾನವಾದ ಶ್ರೀಕೃಷ್ಣಸಭಾ.

೭೭೧

(ರಘುರಾಮವಿಠ್ಠಲಾಂಕಿತ)

**ರಾಗ–ಮೋಹನ** **ಆದಿತಾಳ**

ನಾನೆಂತು ವರ್ಣಿಸಲಿ–ಕೃಷ್ಣನಾ
ಭಕುತರ ಬಲೆಗೆ ಬೀಳ್ವನಾ ॥ ॥ಪ॥

ರುಕುಮಿಣಿ ವಲ್ಲಭನಾ ಪರಮಪುರುಷನ
ಪತಿತೋದ್ಧಾರಕನಾ ॥ ॥ಅ॥

ಪುಟ್ಟಿದೇಳುದಿವಸದಲೀ–ಆ ದುಷ್ಟಪೂತನಿಯು ಕೊಂದೂ
ಕಟ್ಟಿದ ಒರಳನೂ ಥಟ್ಟನೆ ಸೆಳೆದೊಯ್ದು–ಘಟ್ಟೀಮರ ಕೆಡಹಿದನಾ ॥ ॥೧॥

ಬಾಲಕತನದಲಿ ತಾನೂ–ಆ ಕಾಳೀಯ ಮಡುವೀಲೀ
ಧುಮುಕಿ ಲೀಲೆಯಿಂದ–ತನ್ನ ಪಾದವ ತಲೆಗೊತ್ತೀ
ಕಾಳಿಂಗನ ಉದ್ಧರಿಸಿದನಾ ॥ ॥೨॥

ವಸುದೇವ ಸುತನೆಂದೆನಿಸೀ–ಆ ಅಸದಾಳ ಬಾಲೆಯರೊರಿಸೀ
ಪಶುಪಾಲ ನೆಂತೆಂಬೋ ಹಸನಾದ–ಪೆಸರುಳ್ಳ **ರಘುರಾಮವಿಠ್ಠಲನಾ** ॥
॥೩॥



೬೬೨

# ಶ್ರೀ ಕೃಷ್ಣಸ್ತುತಿ (ದಶಮಸ್ಕಂಧ)

## (ಗುರುಗೋವಿಂದವಿಠ್ಠಲಾಂಕಿತ)

**ರಾಗ–ಮಧ್ಯಮಾವತಿ** **ಅಟ್ಟತಾಳ**

ಪುಟ್ಟಿದನು ಜಗದೀಶ–ಜಗಭಾರ ನೀಗಲು
ವೃಷ್ಣಿಕುಲದಲಿ ಈಶ–ದೇವಕಿಯು ಜಠರದಿ
ಕೊಟ್ಟ ಅವಳಿಗೆ ಹರ್ಷ–ಕರುಣಾಬ್ಧಿಭೇಶ ॥ ॥ಪ॥

ಅಟ್ಟಹಾಸದಿ ದೇವದುಂದುಭಿ
ಶ್ರೇಷ್ಠವಾದ್ಯಗಳೆಲ್ಲ ಮೊಳಗಲು
ಅಷ್ಟಮಿಯು ದಿನದಲ್ಲಿ ಬಲು ಉ
ತ್ಕೃಷ್ಟದಲ್ಲಿರೆ ಗ್ರಹಗಳೆಲ್ಲವು ॥ ॥ಅ॥

ಶಂಖ ಚಕ್ರವ ಧರಿಸೀ- ಅಭಯ ಪ್ರದಾತನು
ನೊಕ್ಕಿದವರನು ಅರಸೀ–ನಿಗ್ರಹಿಸಲೋಸುಗ
ಅಕ್ಕರದಿ ಮನವೆರಸೀ–ನರಮೃಗನ ಪರಿ ದೇ–
ವಕ್ಕಿಯಲಿ ಉದ್ಭವಿಸೀ–ಸಜ್ಜನರ ಹರ್ಷಿಸೀ ॥
ವಕ್ರಮನದವನಾದ ಕಂಸನು
ಕಕ್ಕಸವ ಬಡಿಸುವನು ಎನುತಲಿ
ನಕ್ರಹರ ಪ್ರಾರ್ಥಿತನು ದೇ–
ವಕ್ಕಿ ವಸುದೇವರಿಂದಲಿ ॥ ॥೧॥

ದೇವ ಶಿಶುತನ ತಾಳೀ–ನಗುಮೊಗವ ತೋರಲು
ದೇವವಾಣಿಯು ಕೇಳೀ–ಅನುಸರಿಸಿ ಆದ ವಸು
ದೇವ ತನಯನ ಕೈಲೀ–ಕೊಂಡಾಗ ಬಂಧನ
ಭಾವ ಕಳಚಿತು ಕೇಳೀ–ಶ್ರೀಹರಿಯ ಲೀಲೀ ॥
ಪ್ರಾವಹಿಪ ಸರಿದ್ಯಮುನೆ ವೇಗದಿ
ಭಾವ ತಿಳಿಯುತ ಮಾರ್ಗವೀಯಲು
ಧೀವರನು ದಾಟುತಲಿ ಶಿಶು–
ಭಾವದವನನ ಗೋಪಿಗಿತ್ತನು ॥ ॥೨॥

ನಂದಗೋಪನು ಶಿಶುವ–ತಾ ಕೊಂಡು ಮುದದಲಿ
ಬಂದ ಮಾರ್ಗವ ಹಿಡಿವ–ಮನಮಾಡಿ ಮಧುರೆಗೆ
ಬಂದ ತ್ವರ ವಸುದೇವ–ಕಾರಾಗೃಹದ ಕದ
ಬಂಧವಾಯಿತು ದೇವ–ಮಾಯಾದಿ ವಿಭವ ॥
ತಂದೆ ಶಿಶು ಸ್ತ್ರೀಯಾಗಿ ಮಲಗಿರೆ
ಬಂದು ಕಂಸನು ಕೈಲಿಕೊಳ್ಳುತ
ಕಂದನನು ಹರಣಕ್ಕೆ ಯತ್ನಿಸೆ
ಬಾಂದಳಕ್ಕದು ಹಾರಿ ಪೇಳಿತು ॥ ॥೩॥

ದುರುಳ ಕಂಸನೆ ತಿಳಿಯೋ–ನಿನ್ನನನ ಗೈಯ್ಯುವ
ತರಳನುದ್ಭವ ಪರಿಯು–ಬೇರೆಡೆಯುಲಿ ಇರುತಿಹ
ಕರಿಯ ವೈರಿಯ ಪರಿಯು–ಕೊಲ್ಲುವನು ನಿನ್ನನ್ನು
ಮರೆಯದಿರು ಇದು ಖರೆಯು–ತಿಳಿ ರಕ್ಕಸರ ಅರಿಯ ॥
ಒರೆವುತೀಪರಿ ಶಿಶುವು ಹಾರಲು
ದುರುಳ ಭಯುವನೆ ಪೊಂದಿ ತೆರಳುತ
ತರಳರಸುಗಳ ಸೀಳೆ ತನ್ನಯ
ಪರಿಜನಕೆ ಆಜ್ಞಾಪಿಸಿದ ಕಂಸ ॥ ॥೪॥

ಆರೊಂದನೆಯ ದಿನದೀ–ಗೋಕುಲಕೆ ಬಂದಳು
ಕ್ರೂರಿ ಪೂತನಿ ವಿಷದೀ–ಪೂರಿತದಸ್ತನ ಕೂಡೆ
ಹೀರಿ ಅವಳಸು ಭರದೀ–ಮೂರೊಂದು ಮಾಸಕೆ
ಭಾರಿ ಶಕಟನ ಮುದದೀ- ಒದೆದಳಿದೆ ನಿಜಪದದಿ ॥
ಮಾರಿ ಪೂತನಿ ತನುವನಾಶ್ರಿತ
ಊರ್ವಶಿಯ ಶಾಪವನೆ ಕಳೆಯುತ
ಘೋರ ಆಕಳಿಸುತ್ತ ಮಾತೆಗೆ
ತೋರಿದನು ತನ್ನ ವಿಶ್ವರೂಪ ॥ ॥೫॥

ತೃಣನ ವತ್ಸನ ಬಕನ–ತರು ಅರ್ಜುನಾಶ್ರಿತ
ಧುನಿಯು ಚಮು ಅಸುರಕರ–ಸಂಹರಿಸಿ ಕೃಷ್ಣನು
ಮಣಿಗ್ರೀವ ಯಮಳರ–ಮೋಚಿಸುತ ಕಾಳೀ
ಯನ್ಹೆಡೆಯಲಿ ಸುನರ್ತನ–ಗೈದು ಮದಭಂಜನ ॥
ಪಾನಗೈಯ್ಯುತ ದಾವವನ್ಹಿಯ
ಹನನ ವಿಷತರುರೂಪಿ ದೈತ್ಯನ
ಧೇನುಕಾಸುರ ಮಥನ ಅಂತೆಯೆ
ಹನನ ಬಲನಿಂದಾ ಪ್ರಲಂಬನು ॥ ॥೬॥

ಪುನಹ ವನ್ಹಿಯ ಪಾನ-ಗೈಯುತ್ತ ಹರಿ ಋಷಿ
ಪತ್ನಿಯರು ಕೊಟ್ಟನ್ನ-ಭುಜಿಸುತ ನಗಧೃತ
ತೃಣದ ಪರಿ ಗೋವರ್ಧನ-ಶಂಖಚೂಡನ ಶಿರ
ಮಣಿಯು ಬಲು ಅಪಹರಣ-ಅರಿಷ್ಟಾಸುರ ಹನನ ||
ಹನನ ಗೈಯ್ಯಲು ಕೇಳಿ ಅಸುರನ
ಘನ ಸುವ್ಯೋಮಾಸುರನ ಅಂತೆಯು
ಮನದಿ ಯೋಚಿಸಿ ಕಂಸ ಕಳುಹಿದ
ದಾನಪತಿಯನು ಹರಿಯ ಬಳಿಗೆ || ||೭||

ಬಲ್ಲ ಮಹಿಮೆಯು ಹರಿಯ-ಅಕ್ರೂರ ವಂದಿಸಿ
ಬಿಲ್ಲ ಹಬ್ಬಕೆ ಕರೆಯೆ-ತಾನಿಂಯ ಕೃಷ್ಣನು
ಎಲ್ಲ ತಿಳಿಯುತ ನೆಲೆಯ-ಪರಿವಾರ ಸಹಿತದಿ
ಚೆಲ್ವ ರಥದಲಿ ಗೆಳೆಯ-ಅಕ್ರೂರ ಬಳಿಯಾ ||
ಕುಳ್ಳಿರುತ ಸಿರಿ ಕೃಷ್ಣ ತೆರಳುತ
ಅಲ್ಲಿ ಯಮುನೆಯಲಿ ಸ್ನಾನ ವ್ಯಾಜದಿ
ಚೆಲ್ವತನ ರೂಪಗಳ ತೋರುತ
ಹಲ್ಲೆಗೈದನು ಗೆಳೆಯನ ಮನವನು || ||೮||

ಕೊಲ್ಲ ಬಯಸುವ ಇವರ-ಮಾವಟಿಗನಾನೆಯು
ಹಲ್ಲ ತೋರುತ ಬವರ-ಗೈವುದಕೆ ಬರೆ ಹರಿ
ಹಲು ಮುರಿಯುತ ಅದರ-ಸಂಹರಿಸಿ ಬಿಸುಡಲು
ಮಲ್ಲ ಬರೆ ಚಾಣೂರ-ಹೂಡಿದನು ಸಂಗರ ||
ಚೆಲ್ವ ಕೃಷ್ಣನು ತೋರಿ ವಿದ್ಯೆಯ
ಮಲ್ಲನನು ಸಂಹರಿಸುತಿರಲು
ಬಲ್ಲಿದನು ಬಲರಾಮ ಮುಷ್ಟಿಕ
ಮಲ್ಲನನು ಹುಡಿಗೈದು ಬಿಸುಟನು || ||೯||

ನೆರೆಯ ಸೇನೆಯು ಜಲಧಿ–ಆವರಿಸಿ ಬರುತಿರೆ
ಹರಿಯು ಬಲಸಹ ಭರಧೀ–ಸಂಹರಿಸಿ ಅವರನು
ಕರಿಯು ವೈರಿಯು ತೆರದೀ–ಹಾರುತಲಿ ಮಂಚಿಕೆ
ಲಿರುವ ಕಂಸನ ಶಿರದೀ–ಪದವೊಟ್ಟಿ ಶಿಖೆ ಪಿಡಿದು ॥
ಗರುಡನುರಗ ಪಿಡಿದು ಕೊಲ್ಲುವ
ತೆರ ಕೃಷ್ಣನು ಪಿಡಿದು ಕಂಸನ
ಕರದಿ ಖಡ್ಗದಿ ಶಿರವನಿಹಳುಲು
ನೆರೆದ ಸುಜನರು ಮೋದಪಟ್ಟರು ॥ ॥೧೦॥

ಹತನು ಆಗಲು ಮುಂದ–ಸುರನಿಕರ ಪೂಮಳೆ
ವಿತತ ಭಕ್ತಿಯಲಿಂದ–ಗೈದುಗ್ರಸೇನಗೆ
ಕೃತವು ರಾಜ್ಯದಲಿಂದ–ಪಟ್ಟಾಭಿಷೇಕವು
ಪಿತನ ಬಂಧಲಿಂದ–ಮೋಚಿಸಿದ ಕಂದ ॥
ಹಿತ **ಗುರುಗೋವಿಂದವಿಠ್ಠಲನ** ।
ಕ್ಷಿತಿಯು ಭಾರವನಿಳುಹೆ ಪೀಠಿಕೆ
ಪ್ರಥಮ ಸಾಧಿತ ಪಠಿಸೆ ಭಕುತಿಯಲಿ
ಗತಿಯ ನೀಡುತ ಮೋದಪಡಿಸುವ ॥ ॥೧೧॥



**ಅರ್ಥವಿವರಣೆ:–**

**ಶ್ರೀಗುರುಗೋವಿಂದವಿಠ್ಠಲಾಂಕಿತ** ದಾಸವರ್ಯರ ಸುಂದರ ಕೀರ್ತನಸಾಹಿತ್ಯವಿದು. ಶ್ರೀಮದ್ಭಾಗವತದ ದಶಮಸ್ಕಂಧದ ಪೂರ್ಣ ಕಥಾನಕದ ಚಿತ್ರಣ ಈ ಕೀರ್ತನದಲ್ಲಿದೆ.

**ಪುಟ್ಟಿದನು** = ಶ್ರೀಮನ್ನಾರಾಯಣನು ವಸುದೇವ ದೇವಕಿಯರಲ್ಲಿ ಪ್ರಾದುರ್ಭಾವ ರೂಪದಿಂದ ಅವತರಿಸಿದನು. ಆತನಿಗೆ ಶುಕ್ಲಶೋಣಿತ

ಸಂಬಂಧವಿಲ್ಲ. ಅನಾದಿನಿತ್ಯರೂಪನಾದ ಅವನಿಗೆ ಜನನ ಮರಣಾದಿಗಳಿಲ್ಲ. **ಜಗದೀಶ** = ಬ್ರಹ್ಮಾಂಡದ ಪ್ರಭು. **ಜಗಭಾರ ನೀಗಲು** = ಭೂಭಾರ ಹರಣಕ್ಕಾಗಿ. **ವೃಷ್ಣಿಕುಲದಲಿ** = ಯಾದವರ ಕುಲದಲ್ಲಿ, **ಈಶ** = ಸರ್ವಜ್ಞ ನಿಯಾಮಕನು, **ಕರುಣಾಬ್ಧಿ** = ದಯಾಸಾಗರನು. **ಭೇಶ** = ಸೂರ್ಯ) ಭೂ–ಆಕಾಶ ಈಶ–ಒಡೆಯ. (ಭ + ಈಶ = ಭೇಶ). **ಅಟ್ಟೆ ಹಾಸದಿ** = ವೈಭವದಿಂದ. **ಉತ್ಕೃಷ್ಟದಲಿರೆ ಗ್ರಹಗಳು** = ಎಲ್ಲಾ ಗ್ರಹಗಳೂ ಉಚ್ಚಸ್ಥಾನದಲ್ಲಿರುತ್ತಿರಲು, ಶ್ರೀಕೃಷ್ಣನ ಅವತಾರ. **ಶಂಖ ಚಕ್ರವ ಧರಿಸಿ** = ಶ್ರೀಕೃಷ್ಣನು ಅವತರಿಸುವಾಗಲೇ ಶಿಶುವು ತನ್ನ ಹಸ್ತ ಲ್ಲಿದ ಶಂಖ ಚಕ್ರಧಾರಿಯಾಗಿ ವಸುದೇವನಿಗೆ ಗೋಚರಿಸಿದನು. **ಅಭಯ ಪ್ರದಾತನು** = ಅವತರಿಸುತ್ತಲೇ ವಸುದೇವನಿಗೆ ಅಭಯವನ್ನು ನೀಡಿದನು. **ಸೊಕ್ಕಿದವರನು** = ಮದಿಸಿದ ಕಂಸಾದಿ ದೈತ್ಯರನ್ನು. **ನರಮೃಗನ ಪರಿ** ಕಂಭದಿಂದು ಸಿಗಿದು ಬಂದ ನರಸಿಂಹನಂತೆ (ಪ್ರಾದುರ್ಭಾವರೂಪ), **ವಕ್ರ ಮನದವನಾದ** = ವಕ್ರಬುದ್ಧಿಯುಳ್ಳ ಕಂಸಾಸುರ. ಅದಕ್ಕೇ ಅವನಿಗೆ "**ಕಂಸ**" ನೆಂದು ನಾಮ. **ಕಕ್ಕಸನ** = ಕಷ್ಟಗಳನ್ನು ಕೊಡುವನು. **ನಕ್ರಹರ** = ಮೊಸಳೆಯನ್ನು ಚಕ್ರದಿಂದ ಸೀಳಿ ಗಜರಾಜನನ್ನು ಸಂರಕ್ಷಿಸಿದ ಕರಿವರದನು. **ದೇವವಾಣಿಯು** = ಆಕಾಶವಾಣಿಯಾಯಿತು. **ಬಂಧನ ಭಾವ ಕಳಚಿತು** = ಸೆರೆಮನೆಯ ಬಾಗಿಲಿಗೆ ಹಾಕಿದ್ದ ಬೀಗಗಳಕೊಂಡಿ ತಾನಾಗಿಯೇ ಕಳಚಿಕೊಂಡಿತು. **ಪ್ರಾವಹಿಪ** = ತುಂಬು ಪ್ರವಾಹದಿಂದ ಹರಿಯುತ್ತಿರುವ ಯಮುನಾನದಿ. **ಯಮಮಾರ್ಗವೀಯಲು** = ವಸುದೇವ ನಿಗೆ ಹೋಗಲು ಮಾರ್ಗ ಮಾಡಿಕೊಟ್ಟಿತು **ಧೀವರನು** - ಬುದ್ಧಿ ವಂತನೂ ಶೂರನೂ ಆದ ವಸುದೇವನು. **ಮಾಯಾದಿವಿಭವ** = ಮಾಯಾನಾಮಕಳಾದ ಲಕ್ಷ್ಮಿಯು ಕೂಸಾಗಿ ಮಲಗಿದ್ದಾಳೆ. **ಹರಣಕ್ಕೆ** = ಕೊಲ್ಲುವುದಕ್ಕೆ. **ಬಾಂದಳಕ್ಕೈದು** = ಆ ಶಿಶುವು ಕಂಸನ ಕೈಯಿಂದ ಜಾರಿ ಆಕಾಶಕ್ಕೆ ಹಾರಿ, ಹೇಳಿತು. **ನಿಸ್ದನನ** = ನಿನ್ನ ಸಂಹಾರ. **ಕರಿಯ ವೈರಿಯು** = ಸಿಂಹದೋಪಾದಿಯಲ್ಲಿ ನಿನ್ನನ್ನು ಕೊಲ್ಲುತ್ತಾನೆ. **ಖರೆಯು** = ಇದು ಸತ್ಯವಾದ ಮಾತು. **ಒರೆವುತೀಪರಿ** = ಈ ರೀತಿಯಲ್ಲಿ

ಉದ್ಘೋಷಿಸುತ್ತಾ, **ತರಳಸುಗರಸೀಗ** = ಆಗ ತಾನೇ ಜನಿಸಿದ ಎಲ್ಲಾ ಮಕ್ಕಳನ್ನು ಕೊಲ್ಲಬೇಕೆಂದು ಕಂಸನು ತನ್ನ ಅನುಚರರಿಗ ಆಜ್ಞಾಪಿಸಿದನು. **ಆರೊಂದನೆಯ ದಿನದಿ** = ಕೃಷ್ಣನಿಗೆ ಏಳನೆಯ ದಿನ ನಡೆಯುತ್ತಿದ್ದಾಗ, **ಮೂರೊಂದು ಮಾಸಕೆ** = ನಾಲ್ಕನೆಯ ತಿಂಗಳಿನಲ್ಲಿ, **ಭಾರಿ ಶಕಟನ** ಬಲಶಾಲಿಯಾದ ಶಕಟಾಸುರನನ್ನು (ಬಂಡಿಯ ರೂಪದಲ್ಲಿ ಬಂದಿದ್ದ), **ಒದೆದಳಿದೆ** = ಲೀಲಾಜಾಲವಾಗಿ ಒದ್ದು, ತನ್ನ ಪದಾಘಾತದಿಂದ ಸಂಹರಿಸಿದ. **ಊರ್ವಶಿಯ ಶಾಪವನೆ** = ಪೂತನಿಯಲ್ಲಿ ಜೀವದ್ವಯಾವೇಶವಿತ್ತು. ಅಪ್ಸರಸ್ತ್ರೀಯಾದ ಊರ್ವಶಿಯು ಪೂತನಿಯ ಶರೀರದಲ್ಲಿ ಆವಾಸವಾಗಿದ್ದಳು. ಪೂತನಿಯ ಮರಣದಿಂದ ಊರ್ವಶಿಯು ಶಾಪವಿಮೋಚನೆ ಹೊಂದಿದ ಪ್ರಸಂಗ ವಿಶೇಷ. **ವಿಶ್ವರೂಪ** = ಮಾತೆ ಯಶೋದೆಗೆ ತನ್ನ ಪುಟ್ಟ ಬಾಯಿಯಲ್ಲಿ ವಿಶ್ವರೂಪ ತೋರಿಸಿದ ಆ ವಿಶ್ವಂಭರನು. **ತೃಣನ ವತ್ಸನ ಖರನ** = ಸುಂಟರಗಾಳಿಯಂತೆ ಬಂದ ತೃಣಾವರ್ತನೆಂಬ ಅಸುರ–ಗೋವತ್ಸರೂಪದಿಂದ ಧಾಳಿಮಾಡಿದ ವತ್ಸಾಸುರ–ಕೊಕ್ಕರೆಯ ರೂಪದಿಂದ ಕೃಷ್ಣನನ್ನು ನುಂಗಲು ಯತ್ನಿಸಿದ ಬಕಾಸುರ–ಇವರುಗಳನ್ನು ಲೀಲಾಜಾಲವಾಗಿ ಕೊಂದನು. **ತರು ಅರ್ಜುನಾಶ್ರಿತ** = ಎರಡು ಅರ್ಜುನ ವೃಕ್ಷಗಳಾಗಿ ಬೆಳೆದಿದ್ದ ಶಾಪಗ್ರಸ್ತರಾಗಿದ್ದ ನಳಕೂಬರ ಮತ್ತು ಮಣಿಗ್ರೀವರನ್ನು ಉದ್ಧರಿಸಿದ ಪ್ರಸಂಗ ವಿಶೇಷ. **ಮೋಚಿಸುತ** = ಶಾಪವಿಮುಕ್ತರನ್ನಾಗಿ ಮಾಡಿದ. **ಸುನರ್ತನಗೈದು** = ಕಾಳಿಂಗನ ಮಡುವಿಗೆ ಧುಮುಕಿ, ಕ್ರೂರ ಕಾಳಿಂಗನ ಹೆಡೆಗಳ ಮೇಲೆ ನರ್ತನಗೈದು, ಅವನ ಗರ್ವವನ್ನು ಭಂಗಿಸಿ, ಉದ್ಧರಿಸಿದ್ದು. **ದಾವವಹ್ನಿಯ** = ಕಾಡ್ಗಿಚ್ಚನ್ನು ಪಾನ ಮಾಡಿದ ಪ್ರಸಂಗ. **ವಿಷತರುರೂಪಿ ದೈತ್ಯನ** = ವಿಷಪೂರಿತವಾದ ವೃಕ್ಷರೂಪವನ್ನು ಧರಿಸಿ ಬಂದ ದಾನವನನ್ನು, **ಧೇನುಕಾಸುರ ಮಥನ** = ತಾಳೀವೃಕ್ಷಗಳ ತೋಪಿನಲ್ಲಿ ವಾಸಿಸುತ್ತಿದ್ದ ಕ್ರೂರನೂ ಬಲಶಾಲಿಯೂ ಆಗಿದ್ದ ಧೇನುಕಾ ಎಂಬ ಹೆಸರಿನ ಅಸುರನನ್ನು ಬಲರಾಮನಲ್ಲಿ ಆವೇಶಯುಕ್ತನಾಗಿದ್ದು, ಕೊಂದನು ಶ್ರೀಕೃಷ್ಣ. **ಪ್ರಲಂಬನು** = ಹಾಗೆಯೇ ಪ್ರಲಂಬ

ನೆಂಬ ದಾನವನೂ ಸಹ ಬಲರಾಮನಿಂದ ಕೃಷ್ಣಾನುಗ್ರಹದಿಂದಲೇ ಹನನ ಹೊಂದಿದನು. **ಋಷಿಪತ್ನಿಯರು** = ಋಷಿಪತ್ನಿಯರು ಶ್ರೀಕೃಷ್ಣನು ಸರ್ವೋತ್ತಮನೂ, ಸರ್ವಸಾರಭೋಕ್ತನೂ ಎಂಬ ಉತ್ತಮಜ್ಞಾನುಸಂಧಾನ ದಿಂದ ಪಕ್ವಾನ್ನಗಳನ್ನು ಕೃಷ್ಣ-ಬಲರಾಮ-ಗೋಪಬಾಲಕರಿಗೆ ಕೊಟ್ಟ ವಿಶೇಷ ಪ್ರಸಂಗ. **ನಗಧೃತ** = ಗೋವರ್ಧನಗಿರಿಯನ್ನು ತನ್ನ ಕೈಯ್ಯಿನ ಕಿರುಬೆರಳಿನಿಂದ ಎತ್ತಿದನು (ನಗ-ಪರ್ವತ. ಧೃತ-ಹಿಡಿಯಲ್ಪಟ್ಟ). **ತೃಣದ ಪರಿ** = ಒಂದು ಹುಲ್ಲುಕಡ್ಡಿಯನ್ನು ಎತ್ತುವಂತೆ ಲೀಲಾಜಾಲವಾಗಿ, **ಶಂಖಚೂಡನ** = ಶಂಖಚೂಡನೆಂಬ ದಾನವನ ತಲೆಯಲ್ಲಿದ್ದ ಶಿರೋರತ್ನ ವನ್ನು ತಂದ ಪ್ರಸಂಗ. **ಅರಿಷ್ಟಾಸುರನ ಕೇಶಿ ಸುವ್ಯೋಮಾಸುರನ** = ಕಂಸನಿಂದ ಪ್ರೇಷಿತನಾದ ಅರಿಷ್ಟ ಎಂಬ ಪರಾಕ್ರಮಶಾಲಿಯಾದ ದೈತ್ಯ-ಕೇಶಿ ಎಂಬ ಅಸುರ-ವ್ಯೋಮಾಸುರನನ್ನು ಕೊಂದ ಪ್ರಸಂಗ. **ದಾನಪತಿಯನು** = ಕಂಸನ ಅಷ್ಟ ಮಂತ್ರಿಗಳಲ್ಲಿ ಒಬ್ಬನಾದ ಅಕ್ರೂರನನ್ನು ರಾಮ ಕೃಷ್ಣರನ್ನು ತರುವಂತೆ ಗೋಕುಲಕ್ಕೆ ಕಳುಹಿಸಿದ ಪ್ರಸಂಗ. **ಯಮುನೆಯಲಿ ಸ್ನಾನ ವ್ಯಾಜದಿ** = ಯಮುನಾನದಿಯಲ್ಲಿ ಸ್ನಾನ ಮಾಡುವ ನೆಪದಲ್ಲಿ ಶ್ರೀಕೃಷ್ಣನು ಅಕ್ರೂರನಿಗೆ ಸುಂದರವಾದ ತನ್ನ ಅನೇಕರೂಪ ಗಳನ್ನು ಪ್ರದರ್ಶಿಸಿದನು. **ಹಲ್ಲೆಗೈದನು** = ಗೆಳೆಯನಾದ ಅಕ್ರೂರನ ಮನಸ್ಸನ್ನು ಗೆದ್ದನು. **ಹಲ್ಲ ತೋರುತ** = ಕುವಲಯಾಪೀಡ ಎಂಬ ದೈತ್ಯಾಕಾರದ ಆನೆಯು ತನ್ನ ಕೊಂಬಿನಿಂದ ಕೃಷ್ಣನನ್ನು ತಿವಿಯುವಂತೆ ಮೇಲೆ ನುಗ್ಗಿ ಬಂದಿತು. **ಬವರ** = ಯುದ್ಧ. **ಹಲ್ಲು ಮುರಿಯುತ** = ಆ ಆನೆಯ ಎರಡು ದಂತಗಳನ್ನೂ ಮುರಿದು, ಆ ದಂತಗಳಿಂದಲೇ ಮದಿಸಿದ ಗಜವನ್ನು ಕೊಂದನು. **ಚಾಣೂರ** = ಚಾಣೂರನೆಂಬ ಮಲ್ಲನೊಡನೆ ಪಟ್ಟುಹಾಕಿ, ಶ್ರೀಕೃಷ್ಣನು ಅವನನ್ನು ಯಮಸದನಕ್ಕೆ ಅಟ್ಟಿದನು. **ಮುಷ್ಟಿಕ** = ಮುಷ್ಟಿಕ ಎಂಬ ಬಲಶಾಲಿಯಾದ ಇನ್ನೊಬ್ಬ ಜಟ್ಟಿಯನ್ನು ಬಲರಾಮನು ಸಂಹರಿಸಿದನು. **ನೆರೆಯ ಸೇನೆಯ ಜಲಧಿ** = ಕಂಸಾ ಸುರನಿಂದ ಆಜ್ಞಪ್ತವಾದ ಸೇನಾಸಾಗರವು ಎದುರಾಗಲು, ಪ್ರತಿಯೋಧರನ್ನು ಶ್ರೀಕೃಷ್ಣನು ಲೀಲಾಜಾಲವಾಗಿ ಕೊಂದನು. **ಕರಿಯ ವೈರಿಯ ತೆರದಿ** =

ಸಿಂಹದ ಮರಿಯು ಹಾರುವಂತೆ, ಸಿಂಹಾಸನದ ಮೇಲೆ ಭಯಗ್ರಸ್ಥನಾಗಿ ಕುಳಿತಿದ್ದ ಕಂಸನನ್ನು ಜುಟ್ಟು ಹಿಡಿದು, ಕೆಳಗೆ ತಳ್ಳಿ, ಅವನನ್ನು ತನ್ನ ಕಾಲಿನಿಂದ ಮೆಟ್ಟಿ, ಸಂಹರಿಸಿದನು. **ಮಂಚಿಕೆ** = ಸಿಂಹಾಸನ (ಉನ್ನತಪೀಠ). **ಗರುಡನು ಉರಗವ** = ಗರುಡನು ಸರ್ಪವನ್ನು ಹಿಡಿದು, ಅವರೊಡನೆ ಸರಸವಾಡಿ, ನಿರ್ವೀರ್ಯವನ್ನಾಗಿ ಮಾಡಿ, ಕೊನೆಗೆ ಕೊಲ್ಲುವ ತೆರನಂತೆ. **ಖಡ್ಗದಿ ಶಿರವ** = ಕಂಸನು ಧರಿಸಿದ, ಖಡ್ಗದಿಂದಲೇ ಅವನ ಶಿರಚ್ಛೇದನ ಮಾಡಿದನು. **ಸುಜನರು ಮೋದಪಟ್ಟರು** = ಅಲ್ಲಿ ನೆರೆದಿದ್ದ ಸಜ್ಜನರು ಕಂಸವಧೆಯಿಂದ ಆನಂದತುಂದಿಲರಾದರು.

೬೬೨

(ವೆಂಕಟೇಶಾಂಕಿತ)

**ರಾಗ–ಕಾಂಬೋದಿ** **ಝಂಪೆತಾಳ**

ಶ್ರೀ ವೇಣುಗೋಪಾಲ ಕೃಷ್ಣಮೂರ್ತಿ ॥ ॥ಪ॥

ಕಾವುದೀತನ ನಿನ್ನ ದಾಸನೆಂದನವರತ ॥ ॥ಅ॥

ಕಾಯದಿಂದಲಿ ನಿನ್ನ ಚರಣಸೇವೆಯ ಮಾಡಿ
ತೋಯಜಾಂಬಕ ನಿನ್ನ ನಾಮ ವಾಚಿಸುತಲಿ
ಜೀಯ ನಿನ್ನಯ ಮೂರ್ತಿ ಮಾನಸದಿ ಧ್ಯಾನಿಸುತ
ಈಯುಪಾಯವನೆನಗನವರತ ಕೊಡು ದೇವ ॥ ॥೧॥

ಲೌಕಿಕದಲ್ಲಿದ್ದರು ಲೋಕೈಕಸಾಧನೆ
ಏಕಾಂತದಲಿ ನಿನ್ನ ನೆನವು ಪೊಂದಿರಲಿ
ಪಾಕಳತ್ರನೆ ನೀನು ಸಕಲಮಂಗಳವಿತ್ತು
ಲೋಕದೊಳು ನಿನ್ನಯ ಭಕುತರೊಳಿಡು ಇನ್ನು ॥ ॥೨॥

ಪವನಾಂತರಾತ್ಮ ಶ್ರೀವೆಂಕಟೇಶಾತ್ಮಕ
ಶ್ರೀವೇಣುಗೋಪಾಲಕೃಷ್ಣ ಮೂರುತೇ
ಭಾವಶುದ್ಧನ ಮಾಡಿ ಶ್ರೀವರನ ದಾಸರ
ಸೇವೆಯನೆ ಕೊಟ್ಟು ಭವದುಃಖವನೆ ಹರಿಸೋ ॥ ॥೩॥



**ಅರ್ಥವಿವರಣೆ : –**

ಉರಗಾದ್ರಿವಾಸವಿಠ್ಠಲಾಂಕಿತರಾದ ನಮ್ಮ ಪರಮಪೂಜ್ಯ ಗುರುವರ್ಯರು ಶ್ರೀತಂದೆ ಮುದ್ದುಮೋಹನವಿಠ್ಠಲದಾಸವರ್ಯರ ಪ್ರಮುಖ ಶಿಷ್ಯರಲ್ಲಿ ಒಬ್ಬರು. ಅಂಕಿತಪ್ರದಾನದ ಪೂರ್ವದಲ್ಲಿ ತಮ್ಮ ಉಪಾಸ್ಯ ಮೂರ್ತಿಯಾದ ಸಪ್ತಗಿರಿವಾಸನ ಹೆಸರಿನಲ್ಲಿ **ಶ್ರೀವೆಂಕಟೇಶ**–ಎಂಬ ಅಂಕಿತ ನಾಮದಲ್ಲಿ ಅನೇಕ ಪದ ಪದ್ಯಗಳನ್ನು ರಚಿಸಿದ್ದರು.

**ವೇಣುಗೋಪಾಲ ಕೃಷ್ಣಮೂರ್ತಿ** = ಗುರುಗಳ ಶಿಷ್ಯಪರಿವಾರದಲ್ಲಿ ಒಬ್ಬ ಪ್ರಮುಖ ಹರಿದಾಸರು–ಕೃಷ್ಣವಿಠ್ಠಲಾಂಕಿತರಾದ ಶ್ರೀ ಹೆಚ್. ಭೀಮರಾಯರು. ಶ್ರೀವೇಣುಗೋಪಾಲಕೃಷ್ಣನ ಪ್ರತಿಮೆಯನ್ನು ತಂತ್ರಸಾರಪೂರ್ವಕ ವಿಧ್ಯುಕ್ತವಾಗಿ ಅರ್ಚಿಸಿ, ಆ ಪ್ರತಿಮೆಯನ್ನು ಶ್ರೀಭೀಮರಾಯರಿಗೆ ನೀಡಿ, ಅನುಗ್ರಹಿಸಿದರು. ಈಗಲೂ ಆ ದಿವ್ಯ ಸುಂದರ ವಿಗ್ರಹವು ಅವರ ವಂಶೀಕರಿಂದ ಪೂಜಿಸಲ್ಪಡುತ್ತಿದೆ. **ಕಾವುದೀಶನ** = ಈ ಶಿಷ್ಯನನ್ನು ನಿನ್ನ ಕಿಂಕರನೆಂದು ಭಾವಿಸಿ, ಅನುಗ್ರಹಿಸೆಂದು ಪ್ರಾರ್ಥಿಸಿ

ದ್ದಾರೆ. **ಕಾಯದಿಂದಲಿ** = ಸಾಧನಶರೀರವಾದ ಈ ಸ್ಥೂಲದೇಹೇಂದ್ರಿಯಗತ ಇಂದ್ರಿಯಗಳಿಂದ. **ತೋಯಜಾಂಬಕ** = ಕಮಲಪುಷ್ಪದ ದಳದಂತೆ ವಿಸ್ತಾರವಾದ ನೇತ್ರವುಳ್ಳ, **ವಾಚಿಸುತಲಿ** = ಸ್ತೋತ್ರರೂಪದಲ್ಲಿ ಹಾಡುತ್ತಾ, **ಜೀಯ** = ಎನ್ನೊಡೆಯನೆ (ಪ್ರಭುವೆ). **ಮಾನಸದಿ ಧೇನಿಸುವ** = ಮನೋಮಂದಿರದಲ್ಲಿ ಧ್ಯಾನಮಾಡುವ, **ಈ ಉಪಾಯನೆ** = ಈ ಯೋಗಶಕ್ತಿಯನ್ನು (ಉಪಾಯ–ಯೋಗ). **ಲೌಕಿಕದಲ್ಲಿದ್ದರು** = ಈ ಪ್ರಾಪಂಚಿಕ ವಿಷಯಗಳಿದ್ದರೂ. **ಲೋಕೈಕನಾಥನೆ** = ಲೋಕೈಕನಾಥನಾದ ನಿನ್ನನ್ನು ಹೊಂದುವ ಮಾರ್ಗ. **ಏಕಾಂತದಲಿ** = ಗುಪ್ತಮಾರ್ಗದಿಂದ (ಸಾಧನೆ ಗುಪ್ತವಾಗಿರಬೇಕೆಂದು ತಾತ್ಪರ್ಯ). **ನೆನವು** = ನಾಮಸ್ಮರಣೆ ಒಂದು ಸಾಕು. **ಮಾಕಳತ್ರನೆ** = ಲಕ್ಷ್ಮೀಪತಿಯಾದ ಶ್ರೀಹರಿ (ಮಾ–ರಮಾ. ಕಳತ್ರ–ಪತ್ನೀ). **ಮಂಗಳ** = ಶುಭ. **ಲೋಕದೊಳು** = ಈ ಜನರ ಮಧ್ಯೆ ನಿನ್ನ ಏಕಾಂತಭಕ್ತರ ಸಂಗದಲ್ಲಿ ಇರಿಸು. **ಪವನಾಂತರಾತ್ಮ** = ವಾಯುವಿನ ಅಂತರ್ಯಾಮಿಯಾದ ಶ್ರೀಹರಿ. **ಭಾವಶುದ್ಧನ** = ಚಿತ್ತಶುದ್ಧನನ್ನಾಗಿ ಮಾಡಿ (ಮನಸ್ಸಿನ ನೈರ್ಮಲ್ಯ). **ಭವದುಃಖವನೆ** = ಸಂಸಾರಜನ್ಯವಾದ ನಾನಾ ಪರಿಯ ಕ್ಲೇಶಗಳನ್ನು ಪರಿಹರಿಸಿ, ಮನದಾನಂದವನ್ನು ನೀಡು–ಎಂದು ಪ್ರಾರ್ಥಿಸಿದ್ದಾರೆ.



೭೬೩

# ಗೋಪೀಗೀತೆ

## (ಪ್ರಸನ್ನವೆಂಕಟದಾಸರಿಂದ ವಿರಚಿತ)

ಜಯ ವ್ರಜಕೆ-ನೀ ಜನ್ಮಿಸಧಿಕವು-ಶ್ರೀಯಳ ವಾಸವು ಶಾಶ್ವತಿಲ್ಲಿಯು
ಪ್ರಿಯಗೆ ಪ್ರಾಣವರ್ಪಿಸಿ ನೋಡುವ-ಪ್ರಿಯರ ದೃಷ್ಟಿಗೆ ಪ್ರಾಪ್ತಿ
ಯಾಗದೆ ॥ ॥೧॥

ಸ್ವಜನ ವಿಸ್ಮಯಾಸ್ಮಿತದಲಳಿದೆಯೊ-ವ್ರಜದ ದುಃಖವನೊದ್ದ
ವೀರನೆ
ಭಜಿಸು ಕಿಂಕರೇರ್ರಾಸಖಾ-ಹ(ತೀಂ)ಬುಜ ಸಮಾನ್ಯವ ಅಕ್ಷಿಗೆ
ತೋರ್ವನೆ ॥ ॥೨॥

ಶರತಕಾಲದ ಸ್ವಬ್ಜಗರ್ಭದ ಸಿರಿಗೆ-ಪೋಲುವಾಸ್ಯೇಕ್ಷೆಯೊಪ್ಪುವ
ಸುರತಸ್ವಾಮಿ ನೀಂ ಶುಲ್ಕದಾಸೆರಂ-ವರದ ಕಾಯದೆ
ವಿಧಿಯದಾವುದೈ ॥ ॥೩॥

ವಿಷದ ನೀರ್ದೊರೆ-ವ್ಯಾಳರಾಕ್ಷಸನಿಂ-ವಿಷಮಗಾಳಿ-ಮಳೆ
ವೈದ್ಯುತಾಗ್ನಿಯಿಂ
ವೃಷಭ ಮುಖ್ಯರಿಂ ವಿಶ್ವ ದುಃಖದಿಂ-ವೃಷಭ ನಮ್ಮನು ರಕ್ಷಿಸಿ
ದೆಯೋ ನೀ ॥ ॥೪॥

ಅಖಿಲ ಜೀವಕಾಂತರ್ನಿಯಾಮಕ-ಗೋಕುಲ ರಕ್ಷಕಾರ್ಗೆಂತ ಬಾಲಕ
ವಿಖಿನಸಾರ್ಚಿತ ಸರ್ವಗೋಪಿಕಾ-ಸಖ ನೀ ಪುಟ್ಟಿದೆ ಸಾತ್ವವಂಶದಿ
॥೫॥

ವರ ವರಿಷ್ಠನೆ ವೃಷ್ಣಿಕಾಂತನೆ–ಶರಣು ಹೊಕ್ಕರ ಸಂಸೃತಿಹರ
ನೆರೆ ಕರಾಬ್ಜವನಿಟ್ಟು ಶೀರ್ಷವಾ–ಧರಿಸು ಶ್ರೀಕರ
ಧರಿಸಿದಾಕರ ॥ ॥೬॥

ಪ್ರಣತ ಪ್ರಾಣಿಗಳ–ಪಾಪಕರ್ಷಕಾ–ವಿನನ ಬಳಲಿಪ್ಪ–ವೈಷ್ಣವಾರ್ಚಿತ
ಫಣಿಯ ಪೆಡಲಿಹ ಪಾದಪದ್ಮವ–ಸ್ತನಕೆ ಹೊಂದಿಸೈ ತಾಪವಾರಿಸೈ ॥ ॥೭॥

ಬುಧರ ಮೆಚ್ಚಿನ–ಬುದ್ಧಿ ಕಾರಣ - ಮಧುರ ಮಾತಿನಂಭೋಜನೇತ್ರನೆ
ತ್ವದೀಯ ಆಜ್ಞೆಯ–ತಪ್ಪದಿಪ್ಪ–ವರ್ಗಧರ ಸೋಮವ ಊಡು
ವೀರನೆ ॥ ॥೮॥

ನಿನ್ನ ಕಥಾಮೃತವು–ನೀಜ ಜೀವನಂ–ಮುನಿಗಳರ್ಥವು–ಮತ್ತೆ ಅಘಹರಂ
ಮನನ ಭವ್ಯವು ಮಹಾಭಾಗ್ಯವು–ನೆನೆವ ಭಕ್ತರು ನಿತ್ಯದಾತರು ॥ ॥೯॥

ಪ್ರಿಯನಿನ್ನಾ ಸವು–ಪ್ರೇಮನೋಟವು–ದಯೆಯ ಕ್ರೀಡೆಯು–
ಧ್ಯಾನ-ಶೋಭನವು
ನಯರಹಸ್ಯವು ಮನವು ಬೇಯಿಸಿ–ನೋಯಿಸುವ ಬುದ್ಧಿ
ಕೈತವ ॥ ॥೧೦॥

ವ್ರಜವ ಬಿಟ್ಟು–ಆವನ್ನು ಮೇಸುವಾ–ಂಬುಜವ ಹೋಲುವಾ–ಅಂಘ್ರಿ
ಗೊತ್ತುವೆ
ರಜತೃಣಾತ್ಮವಾಲೋಚಿಸಿ ಮನವು–ಭಜಿಸದ್ಯೆ ಸಖಿ ಭೂಪತೇ
ಸಖಾ ॥ ॥೧೧॥

ದನದ ಧೂಳಿಯಿಂ–ದೊಪ್ಪುವಾಳಕದಿಂ–ವನಜವಕ್ತ್ರವ–ವೀಕ್ಷಿಸಿ ಮನ
ನೆನೆಸಿ ಇಚ್ಛಿಪೆವು ನಿನ್ನ ರೂಪವ–ಇವನ ಅಸ್ತ್ರದಿ ವೀರ ವಿತ್ಯದಿ॥
॥೧೨॥

ಭಕುತರಿಚ್ಛಿಪ-ಅಬ್ಜಜನರ್ಚಪ–ಪೃಥಿವಿ ಭೂಷಿವಾಪತ್ತುವಾರಿಪ
ಸುಖಿಕೆ ಶ್ರೀಪ್ತನಾ ಸತ್ಪದಾಬ್ಜವ–ಸುಕುಚಕದಲ್ಲಿದ್ದೈ ಸುಪ್ಯಧಿ ಸುಡ್ಯೈ ॥ ॥೧೩॥

ಸುರತ ಹುಟ್ಟುವ–ಶೋಕವಟ್ಟುವ–ಸ್ವರಿತ ವಂಶವ–ಸಂಧಿಗೊಪ್ಪುವಾ
ನರರ ರಾಗವನಟ್ಟಿ ಮರೆಸುವ–ಅರಸ ನಿನ್ನಧರಾಂಕಿತ ಸುಧಾ ॥
॥೧೪॥

ಹಗಲ ಚರಿಸುವಿ-ಹೋಗಿ ಅಟವಿ–ಯುಗಕೆ ವೆಗ್ಗಳವು–ಒಂದು ತೃಟಿಯುದು
ಮೊಗದ ಸಿರಿಗುರುಳ್ಮಿಚ್ಚಿ ನೋಡಲು–ಮಂಗುಳೆ ಜಡದೊಳು ಮೋಹಿಪೆ
ವೀಗಳು ॥ ॥೧೫॥

ಎಳೆಯ ನಿರಿಯರ–ಇಷ್ಟರಾಪ್ತರ–ಬಲವ ಮೀರುತ–ಬಂದೆವ್ಯೈಚ್ಯುತ
ಲಲಿತ ಗೀತದಾರಾಪ ಮೋಹದಾ–ಬಲೆರ ನೈಶಕೆ ಬಿಟ್ಟ ಕುಹಕ ॥
॥೧೬॥

ಮುಗುಳುನಗೆ ಮೊಗವು-ಮೋಹ ನೋಟವು–ಮುಗುಳಗಣೆಯನು-ಮೀಟುವ
ಘನ
ಮಿಗಿಲು ನಿಮ್ಮದೆ–ಮಾಟ ಕಂಡೆದೆ–ಬಿಗಿದು ಅಪ್ಪುವೆಂಬೆಸೆಸ ಮೋಹವು
॥೧೭॥

ಆಕಳಕಾವರಾ–ಮಂಗಳಾಹರ–ಪ್ರಕಟ ನಿನ್ನದು–ಪಾಪ ಪೋಪ್ಪುದು
ಸ್ವಕೀಯರಾರ್ತಹ ಸರ್ವರೋಗಹ–ನಿಖಿಳರಾಶಿಯು ನೀ ಪೂರೈಸಯ್ಯ ॥
॥೧೮॥

**ಪ್ರಸನ್ನ ವೆಂಕಟಾ**–ಪಶು ಪ್ರಪಾಲಕಾ–ಅಸಿಯಗೀತವ–ಅರಿತುವ–ಮಾಧವ
ಪ್ರಸನ್ನವಾಗುವಾಪತ್ತು ಹರಿಸುವ–ಶಶಿಮುಖಿಯರೊಳು ಸ್ನೇಹತಪ್ತರಾ ॥
॥೧೯॥



**ಶ್ರೀಶುಕ ಉವಾಚ :–**

ಇತಿಗೋಪ್ಯಃ ಪ್ರಗಾಯಂತ್ಯಃ ಪ್ರಲಪಂತ್ಯಶ್ಚಿಚಿತ್ರಧಾ
ರುರುದುಃ ಸುಸ್ವರಂ ರಾಜನ್ ಕೃಷ್ಣದರ್ಶನಲಾಲಸಾಃ ॥೧॥

ತಾಸಾಮಾವಿರಭೂಚ್ಛೌರಿಃ ಸ್ಮಯಮಾನಮುಖಾಂಬುಜಃ
ಪೀತಾಂಬರಧರಃ ಸ್ರಗ್ವೀ ಸಾಕ್ಷಾನ್ಮನ್ಮಥ ಮನ್ಮಥಃ ॥೨॥

## ೬೬೪

## ಗೋಪಿಕಾಗೀತೆ (ಶ್ರೀಮದ್ಭಾಗವತ ದಶಮಸ್ಕಂಧದಿಂದ)

**ಗೋಪ್ಯಃ ಊಚು :–**

ಜಯತಿ ತೇऽಧಿಕಂ ಜನ್ಮನಾ ವ್ರಜಃ
ಶ್ರಯತ ಇಂದಿರಾ ಶಶ್ವದತ್ರಹಿ ।
ದಯಿತ ದೃಶ್ಯತಾಂ ದಿಕ್ಷು ತಾವಕಾ–
ಸ್ತ್ವಯಿ ಧೃತಾಸವಸ್ತ್ವಾಂ ವಿಚಿನ್ವತೇ ॥೧॥

ಶರದುದಾಶಯೇ ಸಾಧುಜಾತಸತ್
ಸರಸಿಜೋದರ ಶ್ರೀಮುಷಾ ದೃಶಾ ।
ಸುರತನಾಥ ತೇऽಶುಲ್ಕದಾಸಿಕಾ
ವರದ ನಿಘ್ನತೋ ನೇಹ ಕಿಂ ವಧಃ ॥೨॥

ವಿಷಜಲಾಪ್ಯಯಾದ್ ವ್ಯಾಲರಾಕ್ಷಸಾದ್–
ವರ್ಷಮಾರುತಾದ್ ವೈದ್ಯುತಾನಲಾತ್ ।

ವೃಷಮಯಾತ್ಮಜಾದ್ ವಿಶ್ವತೋಭಯಾ
ದೃಷಭತೇ ವಯಂ ರಕ್ಷಿತಾ ಮುಹುಃ ॥೩॥

ನ ಖಲು ಗೋಪಿಕಾನಂದನೋಭವಾ–
ನಖಿಲ ದೇಹಿನಾಮಂತರಾತ್ಮದೃಕ್ ।
ವಿಖನಸಾರ್ಥಿತೋ ವಿಶ್ವಗುಪ್ತಯೇ
ಸಖ ಉದೇಯಿವಾನ್ ಸಾತ್ವತಾಂ ಕುಲೇ ॥೪॥

ವಿರಚಿತಾಭಯಂ ವೃಷ್ಣಿಧುರ್ಯ ತೇ
ಚರಣಮೀಯುಷಾಂ ಸಂಸೃತೇರ್ಭಯಾತ್ ।
ಕರಸರೋರುಹಂ ಕಾಂತಕಾಮದಂ
ಶಿರಸಿ ದೇಹಿಃ ನಃ ಶ್ರೀಕರಗ್ರಹಮ್ ॥೫॥

ವ್ರಜಜನಾರ್ತಿಹನ್ ವೀರಯೋಷಿತಾಂ
ನಿಜಜನಸ್ಮಯ ಧ್ವಂಸನಸ್ಮಿತ ।
ಭಜ ಸಖೇ ಭವತ್ಕಿಂಕರೀಃ ಸ್ಮನೋ
ಜಲರುಹಾನನಂ ಚಾರು ದರ್ಶಯನ್ ॥೬॥

ಪ್ರಣತ ದೇಹಿನಾಂ ಪಾಪಕರ್ಶನಂ
ತೃಣಚರಾನುಗಂ ಶ್ರೀನಿಕೇತನಮ್ ।
ಫಣಿಫಣಾರ್ಪಿತಂ ತೇ ಪದಾಂಬುಜಂ
ಕೃಣು ಕೃಚೇಷು ನಃ ಕೃಂಧಿ ಹೃಚ್ಛಯಮ್ ॥೭॥

ಮಧುರಯಾಗಿರಾ ವಲ್ಗುವಾಕ್ಯಯಾ
ಬುಧ ಮನೋಜ್ಞಯಾ ಪುಷ್ಕರೇಕ್ಷಣ ।
ವಿಧಿಕರೀರಿಮಾ ವೀರ ಮುಹ್ಯತೀ–
ರಧರಸೀಧುನಾಽಽಪ್ಯಾಯಯಸ್ವನಃ ॥೮॥

ತವಕಥಾಮೃತಂ ತಪ್ತಜೀವನಂ
ಕವಿಭಿರೀಡಿತಂ ಕಲ್ಮಷಾಪಹಮ್ ।
ಶ್ರವಣಮಂಗಲಂ ಶ್ರೀಮದಾತತಂ
ಭುವಿ ಗೃಣಂತಿ ತೇ ಭೂರಿದಾ ಜನಾಃ ॥೯॥

ಪ್ರಹಸಿತಂ ಪ್ರಿಯ ಪ್ರೇಮವೀಕ್ಷಣಂ
ವಿಹರಣಂ ಚ ತೇ ಧ್ಯಾನಮಂಗಲಮ್ ।
ರಹಸಿ ಸಂವಿದೋ ಯಾ ಹೃದಿಸ್ಪೃಶಃ
ಕುಹಕ ನೋ ಮನಃ ಕ್ಷೋಭಯಂತಿ ಹಿ ॥೧೦॥

ಚಲಸಿ ಯದ್ವ್ರಜಾಚ್ಚಾರಯನ್ ಪಶೂನ್
ನಲಿನಸುಂದರಂ ನಾಥ ತೇ ಪದಮ್ ।
ಶಿಲತೃಣಾಂಕುರೈಃ ಸೀದತೀತಿ ನಃ
ಕಲಿಲತಾಂ ಮನಃ ಕಾಂತ ಗಚ್ಛತಿ ॥೧೧॥

ದಿನಪರಿಕ್ಷಯೇ ನೀಲಕುಂತಲೈ-
ರ್ವನರುಹಾನನಂ ಬಿಭ್ರದಾವೃತಮ್ ।
ಘನರಜಸ್ವಲಂ ದರ್ಶಯನ್ ಮುಹು-
ರ್ಮನಸಿ ನಃ ಸ್ಮರಂ ವೀರ ಯಚ್ಛಸಿ ॥೧೨॥

ಪ್ರಣತಕಾಮದಂ ಪದ್ಮಜಾರ್ಚಿತಂ
ಧರಣಿಮಂಡನಂ ಧ್ಯೇಯಮಾಪದಿ ।
ಚರಣಪಂಕಜಂ ಶಂತಮಂ ಚ ತೇ
ರಮಣಃ ನಃ ಸ್ತನೇಷ್ವರ್ಪಯಾಧಿಹನ್ ॥೧೩॥

ಸುರತವರ್ಧನಂ ಶೋಕನಾಶನಂ
ಸ್ವರಿತವೇಣುನಾ ಸುಷ್ಠು ಚುಂಬಿತಮ್ ।

ಇತರ ರಾಗವಿಸ್ಮಾರಣಂ ನೃಣಾಂ
ವಿತರ ವೀರ ನಸ್ತೇಽಧರಾಮೃತಮ್ ॥೧೪॥

ಅಟತಿಯದ್ ಭವಾನಹ್ನಿ ಕಾನನಂ
ತ್ರುಟಿರ್ಯುಗಾಯತೇ ತ್ವಾಮಪಶ್ಯತಾಮ್ ।
ಕುಟಿಲಕುಂತಲಂ ಶ್ರೀಮುಖಂ ಚ ತೇ
ಜಡ ಉದೀಕ್ಷತಾಂ ಪಕ್ಷ್ಮಕೃತ್ ದೃಶಾಮ್ ॥೧೫॥

ಪತಿ ಸುತಾನ್ವಯಾಭ್ರಾತೃ ಬಾಂಧವಾ-
ನತಿ ವಿಲಂಘ್ಯತೇಽತ್ಯಚ್ಯುತಾಗತಾಃ ।
ಗತಿವಿದಸ್ತವೋದ್ಗೀತ ಮೋಹಿತಾಃ
ಕಿತವ ಯೋಷಿತಃ ಕಸ್ತ್ಯಜೇನ್ನಿಶಿ ॥೧೬॥

ರಹಸಿ ಸಂವಿದಂ ಹೃಚ್ಛಯೋದಯಂ
ಪ್ರಹಸಿತಾನನಂ ಪ್ರೇಮವೀಕ್ಷಣಮ್ ।
ಬೃಹದುರಃ ಶ್ರಿಯೋ ವೀಕ್ಷ್ಯ ಧಾಮತೇ
ಮುಹುರತಿಸ್ಪೃಹಾ ಮುಹ್ಯತೇ ಮನಃ ॥೧೭॥

ವ್ರಜವನೌಕಸಾಂ ವ್ಯಕ್ತಿರಂಗತೇ
ವೃಜಿನಹಂತ್ರ್ಯಲಂ ವಿಶ್ವಮಂಗಲಮ್ ।
ತ್ಯಜ ಮನಾಕ್ ಚ ನಸ್ತ್ವತ್ಸ್ಪೃಹಾತ್ಮನಾಂ
ಸ್ವಜನ ಹೃದ್ರುಜಾಂ ಯನ್ನಿಷೂದನಮ್ ॥೧೮॥

ಯತ್ತೇ ಸುಜಾತ ಚರಣಾಂಬುರುಹಂ ಸ್ತನೇಷು
ಭೀತಾಃ ಶನೈಃ ಪ್ರಿಯ ದಧೀಮಹಿ ಕರ್ಕಶೇಷು ।
ತೇನಾಟವೀಮಟಸಿ ತದ್ ವ್ಯಥತೇ ನ ಕಿಂಸ್ವಿತ್
ಕೂರ್ಪಾದಿಭಿರ್ಭ್ರಮತಿ ಧೀರ್ಭವದಾಯುಷಾಂ ನಃ ॥೧೯॥

**ಶ್ರೀಶುಕ ಉವಾಚ :-**

ಇತಿಗೋಪ್ಯಃ ಪ್ರಗಾಯಂತ್ಯಃ ಪ್ರಲಪಂತ್ಯಶ್ಚ ಚಿತ್ರಧಾ ।
ರುರುದುಃ ಸುಸ್ವರಂ ರಾಜನ್ ಕೃಷ್ಣದರ್ಶನಲಾಲಸಾಃ ॥೨೦॥

ತಾಸಾಮಾವಿರಭೂಚ್ಛೌರಿಃ ಸ್ಮಯಮಾನಮುಖಾಂಬುಜಃ ।
ಪೀತಾಂಬರಧರಃ ಸ್ರಗ್ವೀ ಸಾಕ್ಷಾತ್‌ಮನ್ಮಥಮನ್ಮಥಃ ॥೨೦॥

(ಶ್ರೀಮದ್ಭಾಗವತ ದಶಮಸ್ಕಂಧ-ಅಧ್ಯಾಯ ೩೧)

**ಅರ್ಥವಿವರಣೆ :**

ಒಮ್ಮೆ ಶ್ರೀಕೃಷ್ಣನು ಗೋಪಿಕಾಸ್ತ್ರೀಯರ ಭಕ್ತಿಭಾವವನ್ನು ಪರೀಕ್ಷಿಸ ಬೇಕೆಂಬ ಉದ್ದೇಶದಿಂದ, ಅವರ ಗುಂಪಿನಿಂದ ಹಠಾತ್ತಾಗಿ ಅಂತರ್ಧಾನ ನಾದನು. ಆಗ ಗೋಪಿಕಾಸ್ತ್ರೀಯರು ಶ್ರೀಕೃಷ್ಣನ ವಿರಹವ್ಯಥೆಯನ್ನು ತಾಳಲಾರದೇ, ಮಹಾತ್ಮ್ಯಜ್ಞಾನಪೂರ್ವಕವಾಗಿ ಅವನನ್ನು ಪರಿಪರಿ ಸ್ತುತಿ ಸಿದರು. ಸ್ತೋತ್ರರೂಪವಾದ ಗೋಪಿಕಾಸ್ತ್ರೀಯರ ಮೊರೆಯೇ, ಈ **"ಗೋಪಿಕಾಗೀತೆ"**ಯು ಮುಖ್ಯವಸ್ತು.

ಪ್ರಸನ್ನವೆಂಕಟದಾಸವರ್ಯರು ಶ್ರೀಮದ್ಭಾಗವತ ದಶಮಸ್ಕಂಧ ೩೧ನೆಯ ಅಧ್ಯಾಯಗತ ಈ ಗೋಪಿಕಾಗೀತೆಯ ಪ್ರತಿ ಶ್ಲೋಕವನ್ನು ಸರಳ ಕನ್ನಡದಲ್ಲಿ ಅನುವಾದಿಸಿದ್ದಾರೆ. ಅವರ **"ಭಾಗವತ ಪೂರ್ವಾರ್ಧ"** ಗ್ರಂಥ ದಿಂದ ಆಯ್ಕೆಯಾದ ಭಾಗವಿದು

**ಜಯವ್ರಜಕೆ ... ... ಶಾಶ್ವತಿಲ್ಲಿಯು** = ಹೇ ಗೋವಿಂದ, ನಿನ್ನ ಅವತಾರದಿಂದ ಗೋಕುಲವು ಘನತೆಯಿಂದ ಮೆರೆಯುತ್ತಿದೆ. ಇಂದಿರೆಯು ಬಂದಿಲ್ಲಿ ಶಾಶ್ವತವಾಗಿ ನೆಲೆಸಿದ್ದಾಳೆ. **ಪ್ರಿಯನೆ ಪ್ರಾಣ್ತಿಯಾಗದೆ** = ನಿನಗಾಗಿ ನಮ್ಮ ಜೀವವನ್ನು ಬಿಗಿಹಿಡಿದಿದ್ದೇವೆ. ನಿನ್ನನ್ನು ದಿಕ್ಕು ದಿಕ್ಕುಗಳಲ್ಲಿ ಹುಡುಕುತ್ತಿದ್ದೇವೆ. **ಶರತಕಾಲದ . ವಿಧಿ ಯಾವುದೆ** = ಇದು ಶರತ್ಕಾಲವು. ಸರೋವರದಲ್ಲಿ ಕಮಲಗಳು ಸೊಂಪಾಗಿ ಬೆಳೆದಿವೆ. ಕಮಲದಳಾಯತಾಕ್ಷನಾದ ನೀನು ನಮ್ಮನ್ನು ಘಾತಿಸುವೆಯಾ ? ಹೇ ಸುರತ ನಾಥ. ಅದು ವಧೆಯ ಹತ್ಯಾದೋಷವಲ್ಲವೇ ? **ವಿಷದ ನೀರ್ದೊರೆ ...... . ರಕ್ಷಿಸಿದೆಯೋ ನೀ** = ವಿಷಮಿಶ್ರಿತವಾದ ಜಲದಿಂದ–ಅಘಾಸುರ ನಿಂದ–ಬಿರುಗಾಳಿಯಿಂದ–ಜಡಿಮಳೆಯಿಂದ–ಸಿಡಿಲಿನಿಂದ – ವೃಷಭಾಕೃತಿಯ ಅರಿಷ್ಟಾಸುರನಿಂದ–ಮಯಪುತ್ರನಾದ ವ್ಯೋಮಾಸುರನಿಂದ–ಈ ರೀತಿ ಸರ್ವ ಭಯಗಳಿಂದಲೂ ನಲ ಸಲವೂ ನಮ್ಮನ್ನು ರಕ್ಷಿಸಿದೆ. **ಅಖಿಳಜೀವ ........ ಸಾಕ್ಷವಂಶದಿ** = ನೀನು ಯಶೋದೆಯ ಪುತ್ರನಲ್ಲ ! ನಿಖಿಳ ಜೀವರ ಬುದ್ಧಿಗೆ ಸಾಕ್ಷಿಭೂತನಾಗಿರುವೆ. ಬ್ರಹ್ಮಾದಿಗಳ ಮೊರೆಯನ್ನು ಲಾಲಿಸಿ, ವಿಶ್ವಪಾಲನೆಗಾಗಿ ಈ ವೃಷ್ಣಿಕುಲದಲ್ಲಿ ಅವತರಿಸಿ ಬಂದಿರುವೆ. **ವರ ವರಿಷ್ಟನ .... ಧರಿಸಿಧಾಕರ** = ಹೇ ವೃಷ್ಣಿಕುಲಲಲಾಮ ! ಸಂಸಾರ ಭಯದಿಂದ ತಲ್ಲಣಗೊಳ್ಳುತ್ತಿರುವ ನಮ್ಮ ತಲೆಯ ಮೇಲೆ ಕಾಮದವಾದ ನಿನ್ನ ಕರಕಮಲವನ್ನಿಡು. **ಪ್ರಣತ ಪಾಪವಾರಿಸ್ಕೆ** = ನಿನ್ನ ಚರಣ ಕಮಲಗಳಾದರೋ, ವಂದಿಸಿದವರ ದೋಷಗಳನ್ನು ನಿವಾರಿಸುವುವು. ಹುಲ್ಲನ್ನು ತಿನ್ನುವ ಹಸುಗಳ ಹಿಂದೆ ಸಂಚರಿಸುವುವು. ಇಂದಿರೆಯ ಮಂದಿರವು. ಹಾವಿನ ಹೆಡೆಯನ್ನು ಹೊಸಕಿಹಾಕಿದವು. ಅಂತಹ ಚರಣಾರವಿಂದಗಳನ್ನು ನಮ್ಮ ಸ್ತನದ ಮೇಲಿರಿಸು. ಕಾಮಿತಾರ್ಥಪ್ರದ ನಾಗು. **ಬುಧರ ಮೆಚ್ಚಿನಾ . ಊಡು ನೀರನೆ** = ಸೊಬಗಿನಿಂದ ಕೂಡಿದ ಮೃದು ಮಧುರ ವಚನಗಳಿಂದ, ಬುಧರು ಮೆಚ್ಚುವ ಮಾಧುರವಾದ ಮಾತುಗಳಿಂದ, ನಿನ್ನ ಅಧರಾಮೃತದಿಂದ, ಬವಳಿ ಬೀಳುತ್ತಿರುವ ಈ ಅಬಲೆ ಯರನ್ನು ಬದುಕಿಸು. **ನಿನ್ನ ಕಥಾಮೃತವು......... ನಿತ್ಯದಾತರು**

ನಿನ್ನ ಕಥೆಯೊಂದು ಅಮೃತ. ಸಂತಪ್ತ ಜನರ ಪಾಲಿಗೆ ಸಂಜೀವಿನಿ. ಕವಿಗಳಿಂದ ಸಂಸ್ತೂಯಮಾನನು ನೀನು. ದೋಷಪರಿಹಾರಕವು. ಶ್ರವಣಮಂಗಳವಾಗಿದೆ. ಸುಂದರತಮ. ವಿಶದವಾಗಿದೆ. ಭೂರಿದಾನ ಮಾಡಿದ **ಪುಣ್ಯಾತ್ಮ**ರು ನಿನ್ನ ಕಥೆಯನ್ನು ಹಾಡಿ ಹೊಗಳುವರು. **ಪ್ರಿಯನಿರೀಕ್ಷಣ ಸವು** ..... **ಬುದ್ಧಿ ಕೈತವ** = ನಿನ್ನ ಮಂದಹಾಸ ಪ್ರೇಯಸಿಯರ ಪಾಲಿಗೆ **ಅಮೃತ** ಸದೃಶವು ನಿನ್ನ ಪ್ರೇಮದ ಕುಡಿನೋಟವು ಹೃದಯವನ್ನು ಸೂರೆಗೊಳ್ಳುವುದು. ನಿನ್ನ ಮಂಗಳತಮವಾದ ಧ್ಯಾನದಲ್ಲಿ ಮಗ್ನರಾಗಿದ್ದೇವೆ. ಎಲೈ ವಂಚಕನೇ ! ಹೀಗೆ ನಮ್ಮ ಮನಸ್ಸನ್ನು ಕಾಮದ ಅಗ್ನಿಯಲ್ಲಿ ಬೇಯಿಸಬೇಡ. **ವ್ರಜವ ಬಿಟ್ಟು . ಭೂಪತೇ ಸಖಾ** = ಹಸುಗಳನ್ನು ಮೇಯಿಸಲು ನೀನು ಹೋಗುವಾಗ, ಕಮಲದ ಕಾಂತಿಯಂತೆ ಎಸೆವ ನಿನ್ನ ಚರಣಗಳು ಕಲ್ಲು ಹುಲ್ಲುಗಳಿಂದ ನಲುಗುವುವು ನಮ್ಮ ಮನಸ್ಸು ಮಲಿನವಾಗಿ ಮರುಗುವುದು. **ದಿನಪರೀಕ್ಷಯೇ . . ವೀರ ಯಚ್ಛಸಿ** = ಸೂರ್ಯಾಸ್ತಸಮಯದಲ್ಲಿ ನಿನ್ನ ಮುಖವು ನೀಲಕುಂತಳಗಳಿಂದ ಆವೃತವಾಗಿವೆ. ಗೋವುಗಳ ಪಾದದಿಂದ ಎದ್ದ ಕೆಂಧೂಳಿಯಿಂದ ಆವೃತವಾಗಿ ನಯನಮನೋಹರವಾಗಿ ಕಾಣಿಸುತ್ತಿವೆ. ಇದರ ದರ್ಶನದಿಂದ ನಾವು ಕಾಮಪರವಶವಾಗಿದ್ದೇವೆ. **ಭಕುತರಿಚ್ಛಿಪ .. ಸುವ್ಯಥೆ ಸುಡೈ** = ಭಕುತರು ಇಚ್ಛಿಸುವ, ವಿಧಿವಂದಿತನಾದ, ಭೂಭೂಷಣನಾದ, ಧ್ಯಾನಕ್ಕೆ ವಿಷಯವಾದ, ಸುಖತಮವಾದ ನಿನ್ನ ಚರಣಾರವಿಂದಗಳನ್ನು ಹೇ ರಮಣ–ಚಿತ್ತಾಪಹಾರಿ–ನಮ್ಮ ಸ್ತನಗಳ ಮೇಲಿರಿಸು. ನಮ್ಮ ವ್ಯಥೆಯನ್ನು ಸುಡು. **ಸುರತ ಹುಟ್ಟುವ ... ಧರಾಂಕಿತ ಸುಧಾ** = ನಿನ್ನ ಅಧರಾಮೃತವು ಸುರತವರ್ಧನವೂ, ಶೋಕಪರಿಹಾರಕವೂ ಆಗಿದೆ. ಕೊಳಲಿನಿಂದ ಚುಂಬಿತವಾದ ನಿನ್ನ ಅಧರಾಮೃತವನ್ನು ನಮಗೆ ವಿತರಿಸು. **ಹಗಲ ಚರಿಸುವಿ ... ಮೋಹಿಪೆವೀಗಳು** = ಹಗಲಿನಲ್ಲಿ ನೀನು ಅಡವಿಯಲ್ಲಿ ಸಂಚರಿಸುತ್ತಿರುವಾಗ, ನಿನ್ನ ದರ್ಶನವಿಲ್ಲದವರಿಗೆ ಪ್ರತಿ ನಿಮಿಷವೂ ಯುಗದಂತೆ ತೋರುವುದು. ಕುಟಿಲಾಲಕಪರಿವೃತವಾದ ನಿನ್ನ ಶ್ರೀಮುಖದ ಸೊಬಗನ್ನು ನೋಡಲು ನಮ್ಮ ಕಣ್ಣುಗಳು ಹಾತೊರೆಯುತಿವೆ. ಅಂತಹ ಕಣ್ಣುಗಳಿಗೆ

ಅಡ್ಡಿಯಾಗಿರುವ ರೆಪ್ಪೆಗಳನ್ನು ನಿರ್ಮಿಸಿದ ಆ ಬ್ರಹ್ಮನು ಒಬ್ಬ ಪೆದ್ದನೇ ಸರಿ! **ಎಳೆಯರಿನಿಯರ** = ಹೇ ಅಚ್ಯುತ! ನಿನ್ನ ಗಾನದಿಂದ ಮನ ಮೋಹಿತರಾದ ನಾವು ನಮ್ಮ ಪತಿ, ಸುತ, ಬಂಧು ಬಾಂಧವರ ಮಾತನ್ನು ಉಲ್ಲಂಘಿಸಿ, ನಿನ್ನ ಬಳಿಗೆ ಬಂದೆವು. ನಡುರಾತ್ರಿಯಲ್ಲಿ ನಮ್ಮಂತಹ ಸ್ತ್ರೀಯು ರನ್ನು ತ್ಯಜಿಸಿ ಹೋದೆಯಾ? **ಮುಗುಳುನಗೆಯು .. ಮೋಹವು** = ನಿನ್ನ ಏಕಾಂತದ ಸರಸ, ಮಂದಹಾಸಯುಕ್ತವಾದ ವದನಾರವಿಂದ, ಪ್ರೇಮ ವೀಕ್ಷಣ, ಸೊಬಗಿನ ವಿಶಾಲ ವಕ್ಷಸ್ಥಳ–ಇವೆಲ್ಲವೂ ಮನ್ಮಥನ ಆಟವನ್ನು ಮೀರಿಸುವುವು. ನಮ್ಮ ಮನಸ್ಸನ್ನು ಅಪಹರಿಸುವುದು. ಮನವು ತಲ್ಲಣ ಗೊಳ್ಳುವುದು. **ಆಕಳ ಕಾವರಾ.. ನೀ ಪೂರೈಸಯ್ಯ** = ವ್ರಜನಿವಾಸಿ ಗಳಿಗೆ ನಿನ್ನ ಉದಯವು ದುರಿತದೂರವು. ಅದು ವಿಶ್ವಮಂಗಳಕರ ವಾದದ್ದು. ಹೃತ್ತಾಪಹಾರಕವು. ನಮ್ಮ ಮನದಾಸೆಯನ್ನು ಪೂರೈಸು ಹೇ ಮನೋವಲ್ಲಭ! **ಪ್ರಸನ್ನ ವೆಂಕಟಾ . ಸ್ನೇಹ ತಪ್ತರಾ** = ನಿನ್ನ ಚರಣಗಳು ಅತ್ಯಂತ ಕೋಮಲ. ನಮ್ಮ ಕಠಿಣವಾದ ಕುಚಗಳ ಮೇಲೆ ನಿನ್ನ ಚರಣಗಳನ್ನು ಇರಿಸಿದಾಗ, ನಿನಗೆ ನೋವು ಆಗುವುದೆಂಬ ಹೆದರಿಕೆ ಯಿಂದ, ನಿನಗೆ ನಮ್ಮ ಜೀವನವನ್ನೇ ಅರ್ಪಿಸಿದ್ದೇವೆ. ಸ್ನೇಹತಪ್ತರಾದ ನಮಗೆ ನಿನ್ನ ದರ್ಶನಭಾಗ್ಯವನ್ನು ನೀಡು–ಎಂದು ಪ್ರಾರ್ಥಿಸುತ್ತಾರೆ ಆ ಅಬಲೆಯರು. **ಇತಿ ಗೋಪ್ಯಃ ಸಾಕ್ಷಾನ್ಮನ್ಮಥಮನ್ಮಥಃ** = ಈ ಪ್ರಕಾರ ವಾಗಿ ಗೋಪಿಕಾಸ್ತ್ರೀಯರು ನಾನಾ ಪರಿಯಲ್ಲಿ ಹಲುಬುತ್ತಾ, ಶ್ರೀಕೃಷ್ಣದರ್ಶನ ಲಾಲಸೆಯರಾಗಿ, ಗಟ್ಟಿಯಾಗಿ ಅತ್ತರು. ಆಗ ದಯಾಮಯನಾದ ಶೌರಿಯು ಪೀತಾಂಬರವನ್ನುಟ್ಟು, ವನಮಾಲಾಧರನಾಗಿ, ಮಂದಹಾಸದಿಂದ, ಸಾಕ್ಷಾತ್ ಮನ್ಮಥನನ್ನು ಮೋಹಗೊಳಿಸುವ ಜಗನ್ಮೋಹನ ರೂಪದಿಂದ ಅವರ ಎದು ರಿಗೆ ಪ್ರಕಟನಾದನು–ಎಂದು ಶುಕಾಚಾರ್ಯರು ಪರೀಕ್ಷಿದ್ರಾಜನಿಗೆ ಹೇಳಿದ ಗೋಪಿಕಾಗೀತೆಯ ಸಾರಾಂಶ.



೬೬೫

## ಭ್ರಮರಗೀತಾ

(ರಂಗವಿಠ್ಠಲಾಂಕಿತ) (ಶ್ರೀಪಾದರಾಜರಿಂದ ವಿರಚಿತ)

**ರಾಗ–ಮುಖಾರಿ** **ಆದಿತಾಳ**

ಭೃಂಗ–ನಿನ್ನ ಟ್ಟಿದನೆ ಶ್ರೀ
ರಂಗ ಮಧುರೆಲಿ ನಿಂದು
ಅಂಗಜ ಲುಬ್ಧಕ ಪೊಂಗಳ ತಡೆಯನಿಕ್ಕಿ
ಹಿಂಗಿಸುತ್ತೈದಾನೆ ಅಸುವ-ಹೇ ಕಿತವ ॥ ॥ಪ॥

ನಿನ್ನ ನೋಡೆ ನಮ್ಮ ಅಚ್ಯುತನ್ನ ಕಂಡಂತಾಯಿತಯ್ಯಾ
ಚೆನ್ನಿಗರರಸ ಕುಶಲೋನ್ನತಿಯಲಿಹನೇನೋ
ಚಿಣ್ಣತನ ಮೊದಲಾಗ್ಯವನ್ನ ಬಲ್ಲೆವೋ–ಕಿತವ
ಗನ್ನಗಾರ ಚಿತ್ತಚೋರನ್ನ ಶ್ರೀಹರಿಯು
ಮನ್ನಣೆಗೆ ಮೆಚ್ಚಿ ತನುವನ್ನೊಪಿಸಿದ ಮುಗುಧ
ಪೆಣ್ಣುಗಳ ವಿಹರಾಬ್ಧಿಯನ್ನ ದಾಟಿಸುವೆನೆಂದು
ತನ್ನ ಸ್ನೇಹವೆಂಬ ನಾವೆಯನ್ನೇರಿಸಿ ನಡುನೀ
ರಿನ್ನೊಳು ತೊರೆದ್ಹೋದನೇ–ಹೇ ಕಿತವ ॥ ॥೧॥

ತಮ್ಮ ನಂದಗೋಪ ಯಶೋದಮ್ಮನ ಕಂಡು–ಬಾರೆಂದು
ರಮ್ಮೆಯ ರಮಣ ನಿನ್ನ ಒಮ್ಮೆ ಕಳುಹಿದನೇನೋ
ಹಮ್ಮುಗೆಟ್ಟ ರಮ್ಮಣೇರೆಂದುಮ್ಮಳಿಸಿದೆವೋ ವೃಥಾ
ನಮ್ಮ ಹಂಬಲಿನ್ನೇನವಗೆ–ಶ್ರೀಹರಿಗೆ
ಕೊಮ್ಮೆಲಟ್ಟಿದ ಲಂಚೆಯಗಮ್ಮನೇರ ಕುಚದ ಕುಂ–

ಕುಮು ಕಸ್ತೂರಿಯು ಕರದಿಮ್ಮನದಿ ಸಿಲುಕಿದಂಗೆ
ಕಮ್ಮಗೋಲ ಬಾಣಂಗಳು ಎಷ್ಟು ಘಾಯಗೊಳಿಸುತಿವೆ
ಸುಮ್ಮನೆ ಬಾಹೋದು ಸುಲಭವೇ—ಹೇ ಕಿತವ ॥ ॥೨॥

ಮಧುಕುಂಜವನದಲ್ಲಿ ಮಧುವೈರಿ ಕೊಳಲೂದಲಾ
ಮಧುರ ಸುಸ್ವರ ಕೇಳಿ ಮದಿರಾಕ್ಷಿಯರೆಲ್ಲರ ಧಾ—
ಮದ ಧ್ಯಾನವ ಬಿಟ್ಟು ಮೃಗಮದಗಂಪ ಪಿಡಿದೈದಿ
ಮದನನೈಯ್ಯನ ಕಾಣುವ ಶ್ರೀಹರಿಯು
ಮದವೇರಿ ತಲೆವಾಗಿ ಮೇದಿನಿ ನಿಟ್ಟಿಸಲಾಗ
ಮೃದುವಾಕ್ಯದೆಮ್ಮನ್ನಪ್ಪಿ ಅಧರಾಮೃತ ಭೋಜನ
ಕೊಡಗುವ ಸತತ ಸನ್ನದ್ಧ ನಮ್ಮಗಲಿ ಕ—
ಲ್ಲದೆಯಾದನೆಂತೋ ಕೃಪಾಳು—ಹೇ ಕಿತವ ॥ ॥೩॥

ವಜ್ರಾಂಕುಶ ಧ್ವಜಾಂಕಿತ ಹೆಜ್ಜೆಯನ್ನೆ ತಿಳಿದ ನ—
ಮ್ಮಬ್ಜಾಕ್ಷಿಯರೊಡನೆ ರತಿಕಜ್ಜದುಪವನದಲ್ಲಿ
ನಿರ್ಜರೋತ್ತಂಸರೊಡನೆ ಮಜ್ಜನ ಕ್ರೀಡ್ಯಾಡುವ ಸಾ—
ಯುಜ್ಯ ಸುಖವೆತ್ತಲ್ಲಿಹುದೋ ಶ್ರೀಹರಿಯು
ಅಬ್ಜಭವ ಮುನಿಜನ ಪೂಜ್ಯನಗಲಿದಮೇಲೆ
ನಿರ್ಜೀವಗಳಾಗಿ ಕಣ್ಣಕಜ್ಜಲ ಕಲಕಿಕೊಂಡು
ಲಜ್ಜೆಗೆಟ್ಟು ತನುವತಿ ಜರ್ಝರಿತದಿ ಜೀವಿಸೆ
ವಜ್ಜರ ಎದೆಯುಲ್ಲವೇ ನಮ್ಮದೆ—ಹೇ ಕಿತವ ॥ ॥೪॥

ಉತ್ಪಲ ಶಾಮಲ ಮೋದಪೆತ್ತ-ಭಾವಚೆನ್ನದಿಂದ
ಅತ್ಯಮ್ಮಲ (ಅಮಲ) ಪೊನ್ನಂಬರ ಸುತ್ತಿದಡಾ
ಮತ್ತಾನೂಪುರ ಝಣತ್ಕಾರದಿ ಮಿಂಚುವ
ಚಿತ್ತ ಶಿಖಿಗೆ (ನವಿಲಿಗೆ) ಮೋಘದಂತೊಪ್ಪುವ ಶ್ರೀಹರಿಯು
ಹೆತ್ತ ತಾಯಿ ಆಪ್ತ ಬಂಧು ಗೋತ್ರ ಗತಿ ನೀನೆ ನಮ್ಮ

ಚಿತ್ರವೆಂದು ನಂಬಿ ತನ್ನ ಹತ್ತಿಲಿ ಸಾರಿದವರ
ಒತ್ತಿ ತಾ ರಥವನೇರಿ ಸತ್ವರ ಬರುವೆನೆಂದು
ಮತ್ತೆ ಅಕ್ರೂರನೊಡನೈದಿದ–ಹೇ ಕಿತವ ॥ ॥೫॥

ಕತ್ತಲೆ ವೈರಿಯು ಬಟ್ಟು ಮುತ್ತಿನ ಜೊಲ್ಲೆದುರುಬಿಲಿ
ಕಸ್ತೂರಿತಿಲಕ ಉಜ್ವಲ ಕುಂಡಲ ಬೆಳಗೆ
ವೃತ್ತವದನದಿ ಮಂದಸ್ಮಿತ ತಿಂಗಳಿಂದಲೆಮ್ಮ
ಹೃತ್ತಾಪ ಪರಿಹರಿಸು ಶ್ರೀಹರಿಯೆ
ಮತ್ತೆ ವಕ್ಷದ ಶ್ರೀವತ್ಸ ಕೌಸ್ತುಭ ವೈಜಯಂತೀಮಾಲೆ
ಶ್ರೀತುಳಸಿ ಘಮಘಮಿಸುತ್ತಲಿಹ ವನಮಾಲೆ
ರತ್ನದ ಕಂಕಣ ಭುಜಕೀರ್ತಿಯಿಂದೊಪ್ಪುವ ಪುರು–
ಷೋತ್ತಮುನ್ನ ಬಣ್ಣಿಪರುಂಟೇ–ಹೇ ಕಿತವ ॥ ॥೬॥

ಲಕ್ಷುಮಿರಮಣ-ನವಸೂಕ್ಷ್ಮದ ಗೊಲ್ಲತಿಯರು ನಾವು
ಕುಕ್ಷಿಯೊಳು ಬೊಮ್ಮಾಂಡವಗೆ ಮಕ್ಷಿಕಗಳಂತೆ ನಾವು
ಮೋಕ್ಷಿಗಳರಸನವ-ಗೋಕ್ಷೀರವ್ರತರಾವು
ಲಕ್ಷಿಸುವನೆಂತೋ ನಮ್ಮನು ಶ್ರೀಹರಿಯು
ರಕ್ಷಿಸಲುದಿಸಿ ಜನರಕ್ಷಣೆಗೆ ಪಾಲ್ಬೆಣ್ಣೆಯ
ಭಕ್ಷಿಸಿ ನಿರುತ ನಮ್ಮ ಅಕ್ಷಿಗೆ ಹಬ್ಬವನುಣಿಸಿ
ಈ ಕ್ಷೋಣೀಭಾರ ಹಾರಿ ಯಮಶಿಕ್ಷೆಗೆ ನರರ ಸಾಮ್ಯ
ವಕ್ಷಮಾಣರಾದೆವೋ ಮೂರ್ಖರೋ–ಹೇ ಕಿತವ ॥ ॥೭॥

ಹಿಂದೆ ಮಾಡಿದ್ದ ಸದ್ಧರ್ಮದಿಂದ ಮಧುರಾನಗರ
ದಿಂದೀವರಾಕ್ಷಿಯರಾನಂದ ಸಿಂಧು ಉದಿಸಿದ ಪೂರ್ಣ–
ಚಂದ್ರನಂತೊಪ್ಪುವ ಸಿರಿ ಮಂದರಧರನಂಘ್ರಿಯ
ಪೊಂದುವ ಭಾಗ್ಯಕ್ಕೆಣೆಯುಂಟೆ ಶ್ರೀಹರಿಯು
ಇಂದೆಮ್ಮೊಳು ರಾಸಕ್ರೀಡೆಯಿಂದ ಬಂದಪರಾಧವ–

ಒಂದನೆಣಿಸದೆ ಸಲಹೆಂದು ಬಿನ್ನೈಸಿ ಸಾಷ್ಟಾಂಗ-
ದಿಂದ ವಂದಿಪೆವೋ ಭಕ್ತಬಂಧುವಿಗೆ ಎಮ್ಮ ಹೃದಯ
ಮಂದಿರದೊಳಿಂದೆಂದಿರೆಂದು-ಹೇ ಕಿತವ ॥ ॥೮॥

ಹಂಗಳೆರೊಂದಾಗಿ ಅಂತರಂಗದರಸ ಮಾಡಿದ
ಮಂಗಳಚರಿತ್ರೆಯನ್ನು ಸಂಗೀತದಿಂ ಪೊಗಳುತ್ತ
ಕಂಗಳ ಶೃಂಗಗರೆವುತ್ತ ಇಂಗಿತಜ್ಞ ದೇವನಂಗ
ಸಂಗದಾನಂದವ ನೆನೆದು ಶ್ರೀಹರಿಯ
ಮಂಗಳ ವೇದಸ್ತೇಯಾರಿ ಶೃಂಗಾರ ಕೂರುಮನು
ಪೊಂಗಣ್ಣನ ಸೀಳ್ದ ನರಸಿಂಗ ವಟು ಭಾರ್ಗವನು
ಅಂಗದ ಪಾರ್ಥ ಶಂಭು ತುರಂಗಪ **ರಂಗವಿಠ್ಠಲ**
ತುಂಗಮಹಿಮ ನಮೋ ಎಂಬೆವೋ-ಹೇ ಕಿತವ ॥ ॥೯॥



**ಅರ್ಥವಿವರಣೆ : -**

ಶ್ರೀಕೃಷ್ಣನ ಭಕ್ತನಾದ ಉದ್ಧವನು ಗೋಕುಲಕ್ಕೆ ಆಗಮಿಸಿದ್ದಾನೆ. ಶ್ರೀಕೃಷ್ಣನ ವಾರ್ತೆಯನ್ನು ತಿಳಿಯಲು ಆಸಕ್ತರಾದ ಗೋಪಿಕಾಸ್ತ್ರೀಯರು ಉದ್ಧವನನ್ನು ಸತ್ಕರಿಸಿ, ಅವನನ್ನು ಸುತ್ತುವರಿಯುತ್ತಾರೆ. ಆಗ ಉದ್ಧವನು ಭಕ್ತಿರಸದಿಂದ ಪರವಶನಾಗಿ ಮಾತನಾಡದೆ ಸುಮ್ಮನಿದ್ದನು. ಆಗ ಒಂದು ಭ್ರಮರವು ಝೇಂಕರಿಸುತ್ತಾ, ಗೋಪಿಕಾಸ್ತ್ರೀಯರ ಗುಂಪಿನೆಡೆಗೆ ಹಾರಿಬಂತು. ಪ್ರಿಯಕೃಷ್ಣನ ವಿರಹವ್ಯಥೆಯಿಂದ ತಪ್ತರಾದ ಆ ವ್ರಜ ಸುಂದರಿಯರು, ಭ್ರಮರದ ಝೇಂಕಾರವನ್ನು ಆಲಿಸಿ, ಕೃಷ್ಣನು ತಮ್ಮೆಡೆಗೆ ಕಳುಹಿಸಿಕೊಟ್ಟ ಸಂದೇಶದೂತನೆಂದು ಭ್ರಮಿಸಿ, ಆ ಭ್ರಮರವನ್ನು ಕುರಿತು ಅವರು ಆಡಿದ ವಚನಕುಸುಮಗಳೇ **ಭ್ರಮರಗೀತೆಯ** ಸಾಹಿತ್ಯ ವಸ್ತುವು.

**ಭೃಂಗಾ** = ಹೇ ದುಂಬಿಯೇ ! **ಮಧುರೆಲಿ ನಿಂದು** = ಹೇ ಪ್ರಿಯ ಶ್ರೀಕೃಷ್ಣ ! ನಮ್ಮನಗಲಿ ನೀನು ಮಧುರಾನಗರಕ್ಕೆ ಹೋಗಿ, ನಿನ್ನ ದೂತನಾಗಿ ಈ ಭ್ರಮರವನ್ನು ಗೋಕುಲಕ್ಕೆ ಕಳುಹಿಸಿದ್ದೀಯಾ ? **ಅಂಗಜ ಲುಬ್ಧಕ** = ಮನ್ಮಥನೆಂಬ ಬೇಡ (ಅಂಗಜ–ಮನ್ಮಥ. ಲುಬ್ಧಕ–ಬೇಡ). **ಪೂಗೋಲಂಗಳ** = ಹೂವಿನ ಬಾಣಗಳನ್ನು (ಮನ್ಮಥನ ಕುಸುಮಶರಗಳು). **ಅಂಗನೇರೆಂಬೋ** = ಕೇವಲ ಸ್ತ್ರೀಯರು (ಅಬಲೆಯರು) ಎಂಬ ಭಾವನೆಯಿಂದ ಬಿಡುತ್ತಿದ್ದಾನೆ. ಇಲ್ಲಿ ಮನ್ಮಥನನ್ನು ಬೇಡರವನಿಗೆ ಹೋಲಿಸುತ್ತಾರೆ ಗೋಪಿಕಾಸ್ತ್ರೀಯರು. "ನಾವು ಅಬಲೆಯರು. ಅರಣ್ಯದಲ್ಲಿ ಹುಲ್ಲೆ, ಜಿಂಕೆಗಳ ಮೇಲೆ ಬೇಡರವನು ಬಾಣ ಬಿಡುವಂತೆ, ಮನ್ಮಥನು ತನ್ನ ಕುಸುಮಬಾಣಗಳನ್ನು ಅಬಲೆಯರೂ ನಿಃಸ್ಸಾಹಕರೂ ಆದ ನಮ್ಮ ಮೇಲೆ ಪ್ರಯೋಗಿಸುತ್ತಾನೆ" ಎನ್ನುವರು. **ಹಿಂಗಿಸುತ್ತೈದಾನೆ ಅಸುವ** = ನಮ್ಮ ಪ್ರಾಣವನ್ನು ಹಿಂಡುತ್ತಿದ್ದಾನೆ. **ಕಿತವ**= ವಂಚಕ – ಮೋಸಗಾರ. ಭ್ರಮರವನ್ನು **ವಂಚಕನೆಂದು** ಕರೆಯುತ್ತಾರೆ ಗೋಪಸ್ತ್ರೀಯರು. **ನಿನ್ನ ನೋಡಿ** = ಹೇ ಭ್ರಮರ ! ನಿನ್ನನ್ನು ನೋಡುತ್ತಿರಲಾಗಿ. **ಚೆನ್ನಿಗರರಸ** = ಸುಂದರಸ್ತ್ರೀಯರ ರಮಣನಾದ ಶ್ರೀಕೃಷ್ಣ. **ಕುಶಲೋನ್ನತಿಯಲಿ** = ಉತ್ತಮಸ್ಥಿತಿಯಲ್ಲಿ ಯೋಗಕ್ಷೇಮವಾಗಿರುವನೇ ?–ಎಂದು ಭ್ರಮರವನ್ನು ಕುರಿತು ಪ್ರಶ್ನಿಸುತ್ತಾರೆ. **ಚಿಣ್ಣತನ** = ಶ್ರೀಕೃಷ್ಣನ ಬಾಲಲೀಲೆಗಳನ್ನು, **ಗನ್ನಗಾರ** = ಮೋಸಗಾರ. **ಚಿತ್ತಚೋರನ್ನ** = ನಮ್ಮಗಳ ಚಿತ್ತವನ್ನು ಕದ್ದಿರುವ ಶ್ರೀಕೃಷ್ಣನ್ನ. **ಮುಗುದ ಹೆಣ್ಣುಗಳ** = ಶ್ರೀಹರಿಗೆ ತಮ್ಮ ತನುಮನಗಳನ್ನು ಅರ್ಪಿಸಿದ ಮುಗ್ಧಭಾವದ ಗೋಪಿಕಾಸ್ತ್ರೀಯರು. **ವಿಹರಾಬ್ಧಿಯನ್ನೆ** = ವಿರಹತಾಪವೆಂಬ ಮಹಾಸಮುದ್ರವನ್ನು, **ಸ್ನೇಹವೆಂಬ** = ಪ್ರೇಮ (ಸ್ನೇಹ) ವೆಂಬ. **ನಾವೆಯನ್ನೇರಿಸಿ** = ದೋಣಿಯನ್ನು ಹತ್ತಿಸಿ, ಎಲೈ ಕೃಷ್ಣ ! ನಿನ್ನ ಪ್ರೇಮವೆಂಬ ನಾವೆಯಲ್ಲಿ ನಮ್ಮನ್ನು ಕೂಡಿಸಿ, ವಿರಹವ್ಯಥೆ ಎಂಬ ಈ ಅಗಾಧ ಸಮುದ್ರದಲ್ಲಿ ನಡುನೀರಿನಲ್ಲಿ ನಮ್ಮನ್ನು ಬಿಟ್ಟು ಹೋಗಬಹುದೇ ? ಇದು ನಿನಗೆ ಸಲ್ಲದು.

**ರಮೆಯರಮಣ** = ರಮಾಪತಿಯಾದ ಶ್ರೀಕೃಷ್ಣ. **ಹಮ್ಮುಗೆಟ್ಟ** = ಗರ್ವದಿಂದ ಮನಗೆಟ್ಟು, **ರಮಣ್ಣೇರೆಂದು** = ನಮ್ಮ ವಲ್ಲಭನೆಂದು (ನಮ್ಮ ರೂಪಲಾವಣ್ಯದಿಂದ ಗರ್ವಪಡುತ್ತಾ ನಿನ್ನನ್ನು ನಮ್ಮ ರಮಣನೆಂದು ಭ್ರಮಿಸಿದ್ದೆವೋ). **ಉಮ್ಮಳಿಸಿದವೋ** = ದುಃಖತಪ್ತರಾಗಿದ್ದೇವೆ. **ನಮ್ಮ ಹಂಬಲು** = ಇನ್ನು ಯಾತಕೆ ನಮ್ಮ ಆಸೆ ಅವನಿಗೆ? **ಹೊಮ್ಮಲಟ್ಟದ** – ಭಂಗಾರದ ಕರುಮಾಡದಲ್ಲಿ (ಮೇಲಟ್ಟ). **ಅಂಚೆಗಮನೇರು** = ಹಂಸಗಮನವುಳ್ಳವರು (ಅಂಚೆ-ಹಂಸದಂತೆ ನಡಿಗೆ). **ಕಮ್ಮಗೋಲನ** = ಪುಷ್ಪಶರವುಳ್ಳ ಮನ್ಮಥ (ಅವನ ಬಿಲ್ಲು ಕಬ್ಬಿನ ಜಲ್ಲೆ. ಬಾಣಗಳು-ಪಂಚಕುಸುಮಗಳು). **ಘಾಯಗೊಳಿಸುತಿವೆ** = ಮನ್ಮಥನ ಬಾಣಗಳಿಂದ ನಮ್ಮ ಮನಸ್ಸು ಝರ್ಝರಿತವಾಗಿದೆ. **ಮಧುಕು ಜವನದಲ್ಲಿ** ಗೋಕುಲದಲ್ಲಿ ನಯನಮನೋಹರವಾದ ವೃಕ್ಷರಾಜಿಗಳಿಂದ ಶೋಭಿತವಾದ ಉಪವನ. **ಮಧುವೈರಿ** = ಮಧುವೆಂಬ ದೈತ್ಯ ಸಂಹಾರಿಯಾದ ಶ್ರೀಕೃಷ್ಣ. **ಮದಿರಾಕ್ಷಿಯರೆಲ್ಲ** = ಪಾನಾಸಕ್ತರಾದಂತೆ ಮದವೇರಿದ ನೇತ್ರವುಳ್ಳ ಚಪಲಾಕ್ಷಿಯರಾದ ಗೋಪಸ್ತ್ರೀಯರು. **ಧಾಮಧ್ಯಾನವ ಬಿಟ್ಟು** = ತಮ್ಮ ಮನೆಯ ಧ್ಯಾನವನ್ನು ತೊರೆದು, **ಮೃಗಮದಗಂಧ** = ಕಸ್ತೂರಿ ಮೃಗದ ಸುವಾಸನೆ. **ಮದನೈಯ್ಯನ** – ಮನ್ಮಥನ ತಂದೆಯಾದ ಶ್ರೀಕೃಷ್ಣ **ಮೇದಿನಿ ನಿಟ್ಟಿಸಲಾಗಿ** = ಶ್ರೀಕೃಷ್ಣನ ಮುಖದ ಶೃಂಗಾರವನ್ನು ಕಂಡು, ನಾಚಿಕೆಯಿಂದ ತಲೆತಗ್ಗಿಸಿ, ನೆಲವನ್ನು ನಿಟ್ಟಿಸುತ್ತಿರುವ ಸ್ತ್ರೀವೃಂದ. **ಮೃದುವಾಕ್ಯ** = ಸಂತಸದ ವಚನಗಳಿಂದ, **ಅಧರಾಮೃತ** = ತುಟಿಯ ಚುಂಬನ. **ಕಲ್ಲೆದೆಯಾದನೆಂತೋ** = ಕೃಪಾಳುವಾದ ಕೃಷ್ಣನು, **ನಮ್ಮಬ್ಜಾಕ್ಷಿಯರೊಡನೆ** = ಶ್ರೀಹರಿಯ ಚರಣಾಂಕಿತವಾದ ವಜ್ರ–ಅಂಕುಶ, ಧ್ವಜ-ಪದ್ಮ ಇತ್ಯಾದಿಗಳನ್ನು ನಿತ್ಯದಲ್ಲೂ ನೋಡುತ್ತಿದ್ದ ನಮ್ಮಂತಹ ಕಮಲನೇತ್ರೆಯರೊಡನೆ (ದಿನವೂ ಅವನ ಚರಣ ದರ್ಶನವಾಗುತ್ತಿತ್ತು. ಆದರ ದರ್ಶನ ಭಾಗ್ಯ ನಮಗೆ ಈಗ ಇಲ್ಲದಾಗಿದೆ–ಎಂದು ಹಲುಬುತ್ತಾರೆ). **ರತಿಕಜ್ಜ ಉಪವನದಲ್ಲಿ** = ರತಿಯ ತಾತನಾದ (ರತಿಪತಿಯಾದ ಮನ್ಮಥನ ಪಿತ). ಉಪವನದಲ್ಲಿ (ಮಧು

ಕುಂಜವನದಲ್ಲಿ). **ನಿರ್ಜರೋತ್ತಂಸರೊಡನೆ** = ಶ್ರೇಷ್ಠರಾದ ದೇವತೆಗಳ ಸಂಗಡ, **ಮಜ್ಜನಕ್ರೀಡೆ ಆಡುವ** = ಜಲಕ್ರೀಡೆಯಾಡುವ **ಸಾಯುಜ್ಯಸುಖ** = ಶ್ರೀಹರಿಯ ಸನ್ನಿಧಾನಕ್ಕಿಂತ ಆ ಸಾಯುಜ್ಯಸುಖ ಯಾರಿಗೆ ಬೇಕು ? **ಅಬ್ಜಭವ** = ನಾಭೀಕಮಲಸಂಜಾತನಾದ ಶ್ರೀ ಬ್ರಹ್ಮ. **ಮುನಿಜನ ಪೂಜ್ಯ** = ಜ್ಞಾನಿವರ್ಗದವರಿಂದ ಪೂಜಿತನಾದ. **ಕಣ್ಣು ಕಜ್ಜಲ ಹಾಕಿಕೊಂಡು** = ಬ್ರಹ್ಮಮುನಿ ಪೂಜ್ಯನಾದ ಅಂತಹ ಶ್ರೀಕೃಷ್ಣನ ವಿರಹದಿಂದ ನಾವು ಕಣ್ಣಿಗೆ ಕಾಡಿಗೆ ಹಾಕಿಕೊಂಡಂತಾಗಿದೆ. (ಅಂಧರಾಗಿದ್ದೇವೆ). **ಲಜ್ಜೆಗೆಟ್ಟು** = ನಾಚಿಕೆ ಬಿಟ್ಟು. **ವಜ್ರದ ಎದೆಯಲ್ಲನೇ** = ಅಂತಹ ಶ್ರೀಕೃಷ್ಣನನ್ನು ಅಗಲಿ, ನಾವು ಜೀವಿಸಿದ್ದೇವಲ್ಲ. ನಮ್ಮ ಎದೆ ಅದೆಂತಹ ವಜ್ರ ಕಠೋರವಾದದ್ದು ! ಎಂಬ ಆಶ್ಚರ್ಯ ಗೋಪಸ್ತ್ರೀಯರಿಗೆ ! **ಉತ್ಪಲ** = ಕನ್ನೈದಿಲೆ ಪುಷ್ಪ. **ಶಾಮಲಮೇಘವೆತ್ತ** = ನೀಲಮೇಘ ಶ್ಯಾಮವರ್ಣನಾದ ಶ್ರೀಕೃಷ್ಣನ ಸಂದರ್ಶನ-ಸಹವಾಸ ಭಾಗ್ಯದಿಂದ ಉಂಟಾಗುವ ಆನಂದವೆಲ್ಲಿ ? **ಅತ್ಯಮಂ** = ಅತ್ಯಂತ ಉತ್ತಮವಾದ, **ಪೊನ್ನಂಬರ** = ಚಿನ್ನದ ವಸ್ತ್ರ. ಅಂದರೆ ಪೀತಾಂಬರಧಾರಿಯಾದ ಶ್ರೀಕೃಷ್ಣ. **ಮತ್ತೆ ಆ ನೂಪುರ** = ಹಾಗೂ ಆ ಕಾಲಂದಿಗೆ (ಚರಣಾಭರಣ). **ಝಣತ್ಕಾರದಿ ಮಿಂಚುವ** = ನೂಪುರದ ಗೆಜ್ಜೆಗಳ ಘುಲುಘುಲು ನಾದದಿಂದ ಮೈ ರೋಮಾಂಚನಗೊಳ್ಳುವುದು. **ಶಿಖಿಗೆ** = ನವಿಲಿಗೆ. **ಮೇಘವಂತೊಪ್ಪುವ** = ಮೇಘದರ್ಶನದಿಂದ ನವಿಲು ಸಂತಸಗೊಂಡು ನರ್ತನ ಮಾಡುವುದು. ರೂಪಕಾಲಂಕಾರವಿದೆ ಇಲ್ಲಿ. **ಚಿತ್ತವೆಂದು ನಂಬಿ** = ಹೇ ಹರಿಯೇ ! ನೀನೇ ನಮ್ಮ ತಾಯಿ-ತಂದೆ. ಆಪ್ತ ಬಂಧುಗಳು - ಗೋತ್ರ-ಗತಿ ಎಂದು ನಿರಂತರವೂ ಮನಸ್ಸಿನಲ್ಲಿ ನಂಬಿಕೊಂಡಿರುವ ನಮ್ಮನ್ನು. **ತಾ ರಥವೇರಿ** = ನಿನ್ನ ಹತ್ತಿರ ಸಾರ್ದ ನಮ್ಮನ್ನು ತೊರೆದು, ಅಕ್ರೂರನೊಡನೆ ರಥವನ್ನೇರಿ **ಹೊರಟು,** ಅಗಲಿದೆಯಾ ? **ಸತ್ವರ ಬರುವೆನೆಂದು** = ಬಹು ಬೇಗ ಬರುತ್ತೇನೆ ಎಂದು ತಿಳಿಸಿ, ಅಕ್ರೂರನೊಡನೆ ಹೋದ ನೀನು ಬರುವುದು ಯಾವಾ ? **ಕತ್ತಲೆಯ ವೈರಿ** = ಕತ್ತಲೆಯನ್ನು ಪರಿಹರಿಸುವ ಪ್ರಕಾಶಮಾನನಾದ

ಸೂರ್ಯ. **ಬಟ್ಟೆ** = ಸೂರ್ಯನ ಪ್ರಕಾಶದಂತೆ ಕಾಂತಿಯುಳ್ಳ ರತ್ನದ ಹರಳು. **ಮುತ್ತಿನ ಜೊಲ್ಲೆ ಉರುಬಿನಲಿ** = ರತ್ನ ಮುತ್ತುಗಳಿಂದ ಝುಡಿತವಾದ ಶಿರೋರತ್ನವನ್ನು ತುರುಬಿನಲ್ಲಿ ಹಾಕಿಕೊಂಡು. **ಕಸ್ತೂರಿ ತಿಲಕ** = ಫಾಲದಲ್ಲಿ ಕಸ್ತೂರಿ ತಿಲಕಾಂಕಿತನಾಗಿ, **ಉಜ್ವಲ ಕುಂಡಲ ಬೆಳಗೆ** = ಫಳಫಳನೆ ಹೊಳೆಯುತ್ತಿರುವ ಕರ್ಣಾಭರಣಗಳು ಹೊಳೆಯುತಿರಲು, **ವೃತ್ತ ವದನದಿ** = ಗುಂಡುಮುಖ. **ಮಂದಸ್ಮಿತ ತಿಂಗಳಿಂದ** = ಬೆಳದಿಂಗಳಿನ ಕಾಂತಿಯಂತೆ ಮಂದಹಾಸವನ್ನು ಬೀರುತ್ತಾ **ಎಮ್ಮ ಹೃತ್ತಾಪ** = ನಮ್ಮಗಳ ಹೃದಯದ ತಾಪವನ್ನು ಪರಿಹಾರ ಮಾಡುವುದು ಶ್ರೀಕೃಷ್ಣನ ಮಂದಹಾಸ. **ವಕ್ಷದ ಶ್ರೀವತ್ಸ** = ವಕ್ಷದಲ್ಲಿ ಧರಿಸಿರುವ ಶ್ರೀವತ್ಸರೂಪದಲ್ಲಿರುವ ಶ್ರೀಲಕ್ಷ್ಮೀದೇವಿ ಮತ್ತು ಕೌಸ್ತುಭವೆಂಬ ಪದಕ-ವೈಜಯಂತೀಮಾಲೆ. **ವನಮಾಲೆ** = ತುಳಸೀಹಾರ ಮತ್ತು ಕುಸುಮ ಮಾಲಾ. **ಭುಜಕೀರ್ತಿ** = ರತ್ನ ಖಚಿತವಾದ ತೋಳಿನ ಆಭರಣ(ಭಾಪುರಿ); **ಪುರುಷೋತ್ತಮನ** = ಸರ್ವೋತ್ತಮನಾದ ಶ್ರೀಕೃಷ್ಣ. **ನವಸೂಕ್ಷ್ಮದ** = ಸೂಕ್ಷ್ಮಮತಿಗಳಾದ ಗೊಲ್ಲತಿಯರು. ಶ್ರೀಕೃಷ್ಣನಾದರೋ ರಮಾಕಾಂತನು. ನಾವಾದರೋ ಅಲ್ಪಜೀವಿಗಳು. **ಮಕ್ಷಿಕೆಗಳಂತೆ ನಾವು** = ಚರಾಚರಾತ್ಮಕವಾದ ಜಗತ್ತನ್ನೇ ತನ್ನ ಉದರದಲ್ಲಿ ಧರಿಸಿರುವ ವಿಶ್ವಧಾರಿಗೆ ನಾವು ಕೇವಲ ಸೊಳ್ಳೆಗಳಂತೆ ಇದ್ದೇವೆ. **ಮೋಕ್ಷಗಳಿಂದ** = ಮುಕ್ತರಾದವರ ಪ್ರಭುವು ಆತನು. ನಾವು ಗೋಕ್ಷೀರವನ್ನು ಕುಡಿಯುವ ಗೊಲ್ಲತಿಯರು. ನಮ್ಮನ್ನು ಮುಕ್ತರೊಡೆಯನು ಲಕ್ಷಿಸುತ್ತಾನೆಯೋ ? **ರಕ್ಷಿಸಲು ಉದಿಸಿ** = ಜಗದ್ರಕ್ಷಕನಾದ ಶ್ರೀಕೃಷ್ಣನು ಈ ನಂದಗೋಕುಲದಲ್ಲಿ ಅವತರಿಸಿ, ಹಾಲು, ಬೆಣ್ಣೆಗಳನ್ನು ಕದ್ದು ಮೆದ್ದು, ನಮ್ಮ ಕಣ್ಣಿಗೆ ಹಬ್ಬವಾಗಿದ್ದನೇ ? (ನೇತ್ರಾನಂದಪ್ರದನು). **ಈ ಕ್ಷೋಣಿ ಭಾರಹಾರಿ** = ಭೂಭಾರವನ್ನು ಹರಿಸುವ ಜಗದ್ರಕ್ಷಕನು (ಕ್ಷೋಣಿ-ಭೂಮಿ) **ಅಕ್ಷಮಾಣರಾದೆವೋ** = ಸಮಭ್ಯಧಿಕಶೂನ್ಯನಾದ ಶ್ರೀಕೃಷ್ಣನಿಗೆ ನಾವು ಎಂದಿಗಾದರೂ ಎಣೆಯೇ ? **ಹಿಂದೆ ಮಾಡಿದ ಸದ್ಧರ್ಮದಿಂದ** = ಹಿಂದಿನ ಜನ್ಮಾಂತರಗಳಲ್ಲಿ ಮಾಡಿದ್ದ ಪುಣ್ಯಕರ್ಮಗಳ ಫಲರೂಪವಾಗಿ ಶ್ರೀಕೃಷ್ಣನು ಮಧುರಾ

ನಗೆಲವ ಇಂದೀವರಾಕ್ಷಿಯರ ಪಾಲಿಗೆ ಪರಮ ಸಂತೋಷಪ್ರದನಾದ **ಪೂರ್ಣ** ಚಂದ್ರನಂತೆ ಇದ್ದಾನೆ. ಅವರ ಭಾಗ್ಯಕ್ಕೆ ಎಣೆಯುಂಟೇ – ಎಂದು ಗೋಪಿ ಸ್ತ್ರೀಯರು ಉಚ್ಚರಿಸುತ್ತಾರೆ. **ರಾಸಕ್ರೀಡೆಯಿಂದ** = ಅಂದೊಮ್ಮೆ ಬೆಳದಿಂಗಳಿನ ರಾತ್ರಿಯಲ್ಲಿ ನಮ್ಮೊಡನೆ ಕೂಡಿ, ರಾಸಕ್ರೀಡೆಯಾಡಿ ಆನಂದ ಸಾಗರದಲ್ಲಿ ಮುಳುಗಿಸಿದ ಶ್ರೀಕೃಷ್ಣ. ಆಗ ನಮ್ಮಿಂದ ಏನಾದರೂ ಅಪರಾಧ ವಾಗಿದ್ದರೆ, ಅದನ್ನು ಮನ್ನಿಸಿ, ಬಂದು ಸಲಹಬೇಕೆಂದು ಸಾಷ್ಟಾಂಗನಮನ ಪೂರ್ವಕ ಕೇಳಿಕೊಳ್ಳುತ್ತಾರೆ. ಆ ಭಕ್ತಬಂಧುವಿನ ಪಾದಾರವಿಂದಗಳಲ್ಲಿ. **ಎಮ್ಮ ಹೃದಯಮಂದಿರದೊಳಗೆ** = ನಮ್ಮ ಹೃದಯಾಕಾಶಗತ ಪದ್ಮ ದಲ್ಲಿ ನಿರಂತರವೂ ನೆಲೆಸಿರಲೆಂದು ಹೇಳು. ಹೇ ಕಿತವಾ, ಭ್ರಮರವೇ ಎನ್ನುತ್ತಾರೆ. **ಹೆಂಗಳೆಯರು ಒಂದಾಗಿ** = ನಾವು ಸ್ತ್ರೀಯರೆಲ್ಲಾ ಒಂದುಗೂಡಿ, **ಅಂತರಂಗದರಸ** – ಅಂತರಂಗಸ್ಥನಾದ ಮಂಗಳಾಂಗ ಶ್ರೀಕೃಷ್ಣನು ಮಾಡಿದ ಒಂದೊಂದು ಮಂಗಳಕಥೆಯನ್ನು ಸಂಗೀತದಿಂದ ಪಾಡಿ ಪೊಗಳುತ್ತೇವೆಂದು ತಿಳಿಸು. **ಕಂಗಳ ಅಶ್ರುಗೆರೆವುತ್ತ** = ಕಣ್ಣಿ ನಿಂದ ಭಕ್ತಿರಸಪೂರಿತವಾದ ನೀರನ್ನು ಸುರಿಸುತ್ತಾ, **ಇಂಗಿತಜ್ಞ** = ನಮ್ಮ ಮನಸ್ಸನ್ನು ಅರಿತಿರುವ, **ದೇವನ ಅಂಗಸಂಗದ ಆನಂದವ ನೆನೆದು** = ದೇವೋತ್ತಮನ ಅಂಗ–ಸಂಗದ ಸುಖವನ್ನು ನೆನೆಯುತ್ತಾ ಮನಸಾ ಸವಿಯುತ್ತಾ, ಅವನನ್ನು ಪಾಡುತ್ತೇವೆಂದು ಹೋಗಿ ತಿಳಿಸು. ಇಲ್ಲಿ ಶ್ರೀಹರಿಯ ದಶಾವತಾರ ಸ್ತುತಿಯನ್ನು ಮಾಡುತ್ತಾರೆ. **ವೇದಸ್ತೇಯನ ಅರಿ** = ವೇದಗಳನ್ನು ಅಪಹರಿಸಿದ ಸೋಮಕನೆಂಬ ದೈತ್ಯನ ಸಂಹಾರಿ ಯಾದ ಮತ್ಸ್ಯರೂಪೀ ಶ್ರೀಹರಿ. **ಶೃಂಗಾರ ಕೂರುಮನು** = ಮನೋಹರನಾದ ಕೂರ್ಮರೂಪ. **ಪೊಂಗಣ್ಣನ ಸೀಳ್ದ** = ಹಿರ ಣ್ಯಾಕ್ಷನನ್ನು ಸಂಹರಿಸಿದ ಭೂವರಾಹರೂಪ (ಪೊನ್ನಿನ ಕಣ್ಣ–ಚಿನ್ನದ ಕಣ್ಣು–ಹಿರಣ್ಯಾಕ್ಷ). **ನರಸಿಂಗ** = ನಾರಸಿಂಹ ದೇವರು. **ವಟು** = ಬ್ರಹ್ಮಚಾರಿಯಾದ ವಾಮನ. **ಭಾರ್ಗವನು** = ಭೃಗುಕುಲೋದ್ಭವ ನಾದ ಶ್ರೀಪರಶುರಾಮಮೂರ್ತಿ. **ಅಂಗದ** = ತನ್ನ ಅಂಗ ಸಂಗದ ಸುಖವನ್ನು ಹನುಮಂತನಿಗೆ ಕೊಟ್ಟ ಶ್ರೀರಾಮ.

**ಪಾರ್ಥ** = ಪಾರ್ಥಸಾರಥಿಯಾದ ಶ್ರೀಕೃಷ್ಣ. **ಶಂಭು** = ಮುಗ್ಧರೂಪದ ಬುದ್ಧ. **ತುರಂಗಪ** = ಹಯಾರೂಢನಾದ ಕಲ್ಕಿ. ಹೀಗೆ ಶ್ರೀಹರಿಯ ದಶಾವತಾರ ಸ್ತೋತ್ರ ಮಾಡುತ್ತಾರೆ-ಆ ಗೋಪಸ್ತ್ರೀಯರು ಆ ಭ್ರಮರದ ಮುಂದೆ. **ತುಂಗಮಹಿಮ** = ಉನ್ನತವಾದ ಮಹಿಮಾಸಂಪನ್ನನಾದ **ಶ್ರೀರಂಗವಿಠ್ಠಲ**-ನಿನ್ನ ಚರಣಕಂಜಗಳಿಗೆ ನಮೋ-ಎಂಬೆವು-ಎಂದು ತಮ್ಮ ಹೃದಯದ ಭಕ್ತಿಯನ್ನು ಪ್ರದರ್ಶಿಸುತ್ತಾರೆ.



೬೬೬

## ಭ್ರಮರಗೀತಾ (ಶ್ರೀಮದ್ಭಾಗವತದಿಂದ)

### (ಸಂಧಿ-೧೨ ಅಧ್ಯಾಯ-೪೭)

**ಗೋಪ್ಯುವಾಚ :—**

ಮಧುಪ ಕಿತವ ಬಂಧೋ ಮಾ ಸ್ಪೃಶಾಂಘ್ರಿಂ ಸಪತ್ನ್ಯಾಃ ।
ಕುಚವಿಲುಲಿತ ಮಾಲಾ ಕುಂಕುಮಶ್ಮಶ್ರುಭಿರ್ನಃ ॥
ವಹತು ಮಧುಪತಿಸ್ತನ್ಮಾನಿನೀ ನಾಂ ಪ್ರಸಾದಂ
ಯದುಸದಸಿ ವಿಡಂಬಂ ಯಸ್ಯ ದೂತಸ್ತ್ವಮೀದೃಕ್
॥೧೨॥

ಎಲೈ ಭ್ರಮರವೇ, ನೀನು ವಂಚಕನು. ನಮ್ಮನ್ನು ಅಗಲಿ ವಂಚಿಸಿದ ಶ್ರೀಕೃಷ್ಣನ ಗೆಳೆಯನು. ನಿನ್ನ ಮೀಸೆಗಳು ಸವತಿಯ ಕುಚಗಳಿಂದ ವಿಲುಲಿತವಾದ ವನಮಾಲೆಯ ಕುಂಕುಮದಿಂದ ಕೆಂಪಾಗಿವೆ. ನಮ್ಮ ಕಾಲನ್ನು ಸ್ಪರ್ಶಿಸಬೇಡ. ಮಧುಪತಿಯಾದ ಶ್ರೀಕೃಷ್ಣನು ಮಧುರಾನಗರದ ಆ ಮಾನಿನಿಯರ ಪ್ರಸನ್ನತೆಯನ್ನೇ ಗಳಿಸಿಕೊಂಡಿರಲಿ. ಯಾದವರ ಸಭೆಯಲ್ಲಿ

ಜನರುಅವನ ಕಾರ್ಯವನ್ನು ಹಳಿಯಲಿ. ಅವನ ದೂತನಾಗಿ ಬಂದಿರುವ ಹೇ ಭ್ರಮರವೇ-ನೀನು ಹೀಗಿರುವಿಯಲ್ಲ !

ಸಕೃದಧರಸುಧಾಂ ಸ್ವಾಂ ಮೋಹಿನೀಂ ಪಾಯಯಿತ್ವಾ ।
ಸುಮನಸ ಇವ ಸದ್ಯಸ್ತತ್ಯಜೇಽಸ್ಮಾನ್ ಭವಾದೃಕ್ ॥
ಪರಿಚರತಿ ಕಥಂ ತತ್ಪಾದಪದ್ಮಂ ತು ಪದ್ಮಾ ।
ಹ್ಯಪಿ ಬತ ಹೃತಚೇತಾ ಉತ್ತಮಶ್ಲೋಕಜಲ್ಪೈಃ ॥೧೩॥

ಎಲೈ ದುಂಬಿಯೇ ! ಕೃಷ್ಣನು ತನ್ನ ಮೋಹಕವಾದ ಅಧರಾಮೃತವನ್ನು ಒಮ್ಮೆ ಪಾನ ಮಾಡಿಸಿ, ನಮ್ಮನ್ನು ತೊರೆದು ಹೊರಟುಹೋದನು. ನೀನೂ ಹೂವುಗಳಲ್ಲಿರುವ ಮಕರಂದವನ್ನು ಪಾನಮಾಡಿ, ಅವುಗಳನ್ನು ತ್ಯಜಿಸಿ ಹೋಗುವಂತೆ, ಶ್ರೀಕೃಷ್ಣನೂ ಸಹ ಹಾಗೆಯೇ ಮಾಡಿದ. ಅಂತಹ ಮೋಸಗಾರನ ಪಾದಪದ್ಮಗಳನ್ನು ಲಕ್ಷ್ಮೀದೇವಿಯು ಹೇಗೆ ಶುಶ್ರೂಷೆ ಮಾಡುತ್ತಿರಬಹುದು ? ಅಯ್ಯೋ, ಉತ್ತಮಶ್ಲೋಕನ ಮರಳುಮಾತುಗಳಿಂದ ಅವಳು ಮರುಳಾದಳು.

ಕಿಮಿಹ ಬಹು ಷಡಂಘ್ರೇ ಗಾಯಸಿ ತ್ವಂ ಯದೂನಾ-।
ಮಧಿಪತಿಮಗೃಹಾಣಾಮಗ್ರತೋ ನಃ ಪುರಾಣಮ್ ॥
ವಿಜಯಸಖಸಖೀನಾಂ ಗೀಯತಾಂ ತತ್ಪ್ರಸಂಗಃ ।
ಕ್ಷಪಿತ ಕುಚರುಜಸ್ತೇ ಕಲ್ಪಯಂತೀಷ್ಟಮಿಷ್ಟಾಃ ॥೧೪॥

ಎಲೈ ಮಧುಪ (ಷಡಂಘ್ರೀ), ಮನೆಯಿಲ್ಲದವರು ನಾವು. ಪ್ರೇಮಕ್ಕೆ ಪಾತ್ರರಲ್ಲದ ನಮ್ಮ ಮುಂದೆ ಆ ಯದುಪತಿಯನ್ನು ಏಕೆ ಬಹುವಾಗಿ ಹೊಗಳುವೆ ? ಹಳಬನಾದ ಶ್ರೀಕೃಷ್ಣನು ನಮಗೆ ಚೆನ್ನಾಗಿ ಗೊತ್ತು. ಹೋಗು. ಕೃಷ್ಣನ ಸಖಿಯ ಎದುರಿಗೆ ಅವನ ಕಥಾಪ್ರಸಂಗವನ್ನು ಹಾಡು. ಕೃಷ್ಣನಿಂದ ಆಲಿಂಗಿತರಾದ ಅವರು ನಿನಗೆ ಬೇಕಾದ್ದನ್ನು ನೀಡುವರು

ದಿವಿ ಭುವಿ ಚ ರಸಾಯಾಂ ಕಾಃ ಸ್ತ್ರಿಯಸ್ತದ್ದುರಾಪಾಃ ।
ಕಪಟ ರುಚಿರಹಾಸ ಭ್ರೂ ವಿಜೃಂಭಸ್ಯ ಯಾಃ ಸ್ಯುಃ ॥
ಚರಣರಜ ಉಪಾಸ್ತೇ ಯಸ್ಯ ಭೂತಿರ್ವಯಂ ಕಾ
ಅಪಿ ಚ ಕೃಪಣಪಕ್ಷೇ ಹ್ಯುತ್ತಮಶ್ಲೋಕಶಬ್ದಃ ॥೧೫॥

ಎಲೋ ಕಪಟಿಯಾದ ಭ್ರಮರವೇ ! ಶ್ರೀಕೃಷ್ಣನು ಉತ್ತಮ ಶ್ಲೋಕನು ದೀನರಾದ ನಮ್ಮನ್ನು ಅವನು ಉಪೇಕ್ಷಿಸಿದ್ದಾನೆ. ನೀನು ಅವನ ದೂತನಾಗಿರುವೆ. ಅವನು ದೀನ ದಯಾಳುವೆಂದು ನೀ ಹೊಗಳಲೇ ಬೇಕಲ್ಲವೇ ? ಮನೋಹರವಾದ ಮಂದಹಾಸಯುಕ್ತನಾಗಿ, ಹುಬ್ಬು ಹಾರಿಸುವ ಅವನಿಗೆ ದೇವ, ಭೂ, ಪಾತಾಳಲೋಕಗಳಲ್ಲಿ ದುರ್ಲಭರಾದ ಅಂಗನೆಯರು ಯಾರಿದ್ದಾರೆ ? ಅವನ ಪಾದಧೂಳಿಯನ್ನು ಶ್ರೀದೇವಿಯು ಸದಾ ಸೇವಿಸುತ್ತಿರುವಳು. ಅಂತಹವನಿಗೆ ನಾವು ಎಷ್ಟು ಮಾತ್ರದವರು ?

ವಿಸೃಜ ಶಿರಸಿ ಪಾದಂ ವೇದ್ಮ್ಯಹಂ ಚಾಟುಕಾರೈಃ— ।
ರನುನಯವಿದುಷಸ್ತೇಽಭ್ಯೇತ್ಯ ದೌತ್ಯೈರ್ಮುಕುಂದಾತ್ ॥
ಸ್ವಕೃತ ಇಹ ವಿಸೃಷ್ಟಾಪತ್ಯಪತ್ಯನ್ಯಲೋಕಾ ।
ವ್ಯಸೃಜದಕೃತ ಚೇತಾಃ ಕಿಂ ನು ಸಂಧೇಯಮಸ್ಮಿನ್ ॥೧೬॥

ಎಲೈ ದುಂಬಿಯೇ ! ನನ್ನ ತಲೆಯ ಮೇಲೆ ನಿನ್ನ ಕಾಲನ್ನು ಇಡ ಬೇಡ. ನೀನು ಕೃಷ್ಣದೂತನಾಗಿ ಬಂದಿದ್ದೀಯೆ. ಲಲ್ಲೆ ಮಾತುಗಳನ್ನಾಡಿ ನಮ್ಮನ್ನು ಸಂತೈಸಬೇಡ. ಅದರಲ್ಲಿ ನೀನು ಪಂಡಿತನೆಂದು ಬಲ್ಲೆವು- ಮುಕುಂದನಿಂದ ಕಲಿತವನಲ್ಲವೇ ನೀನು ! ಅವನಿಗಾಗಿ ನಮ್ಮ ಪತಿಯನ್ನೂ, ಮಕ್ಕಳನ್ನೂ, ಪರಲೋಕವನ್ನೂ, ಸರ್ವಸ್ವವನ್ನೂ ತೊರೆದು ಬಂದ ನಮ್ಮನ್ನು ಆ ಚಪಲಚಿತ್ತನು ಕೈಬಿಟ್ಟನು. ಹೀಗಿರುವಲ್ಲಿ ನೀನು ಸಂಧಾನ ಮಾಡಬೇಕಾದದ್ದೇನಿದೆ ?

ಮೃಗಯುರಿವ ಕಪೀಂದ್ರಂ ವಿವ್ಯಧೇಲುಬ್ಧಧರ್ಮಾ ।
ಸ್ತ್ರಿಯಮಕೃತ ವಿರೂಪಾಂ ಸ್ತ್ರೀ ಜಿತಃ ಕಾಮಯಾನಾನ್ ॥

ಬಲಿಮಪಿ ಬಲಿಮತ್ತ್ವಾವೇಷ್ಟಯದ್ ಧ್ವಾಂಕ್ಷವದ್ ಯ ।
ಸ್ತದಲಮಸಿತ ಸಖ್ಯೈರ್ದುಸ್ತ್ಯ ಜಸ್ತತ್ಕಥಾರ್ಥಃ ॥೧೭॥

ಕೃಷ್ಣನು ಕಠೋರಸ್ವಭಾವದವನು. ಕಪೀಂದ್ರನಾದ ವಾಲಿಯನ್ನು ಕಿರಾತನಂತೆ ಬಾಣಬಿಟ್ಟು ಕೊಂದನು. ತನ್ನನ್ನು ಕಾಮಿಸಿ ಬಂದ ಶೂರ್ಪ ಣಖಿಯನ್ನು ಸೀತೆಗೆ ವಶನಾಗಿ ಕುರೂಪಿಯನ್ನಾಗಿ ಮಾಡಿದನು. ಬಲಿಯು ಪೂಜೆಯನ್ನು ಸ್ವೀಕರಿಸಿ, ಕಾಗೆಯಂತೆ ಅವನನ್ನು ಸುತ್ತುಗಟ್ಟಿ ಬಂಧಿಸಿದನು. ಅಂತಹ ಕೃಷ್ಣನ ಸಹವಾಸ ನಮಗೆ ಬೇಡ. ಆದರೂ ಅವನ ಚರಿತ್ರೆಯನ್ನು ಹಾಡದೇ ಇರಲಾರೆವು. ಇದರಿಂದ ಗೋಪಸ್ತ್ರೀಯರು ಶ್ರೀಕೃಷ್ಣನ ಮೋಹ ಪಾಶದಿಂದ ಎಷ್ಟು ಪರವಶರಾಗಿದ್ದಾರೆ !

ಯದನುಚರಿತಲೀಲಾ ಕರ್ಣಪೀಯೂಷ ವಿಪ್ರುಟ್ ।
ಸಕೃದದನವಿಧೂತ ದ್ವಂದ್ವಧರ್ಮಾ ವಿನಷ್ಟಾಃ ॥
ಸಪದಿ ಗೃಹಕುಟುಂಬಂ ದೀನಮುತ್ಸೃಜ್ಯ ದೀನಾ ।
ಬಹದ ಇಹ ವಿಹಂಗಾ ಭಿಕ್ಷುಚರ್ಯಾಂ ಚರಂತಿ ॥೧೮॥

ಎಲೈ ಭ್ರಮರವೇ! ಶ್ರೀಕೃಷ್ಣನ ಲೀಲಾವೈಭವವೆಂಬ ಚರಿತಾಮೃತದ ಹನಿಯನ್ನು ಒಂದೇ ಸಲ ಪಾನಮಾಡುವುದರಿಂದ, ರಾಗ ದ್ವೇಷಾದಿ ದ್ವಂದ್ವ ಧರ್ಮಗಳು ಸಮೂಹವಾಗಿ ನಾಶವಾಗುವುವು. ಹಾಗೆ ದ್ವಂದ್ವಗಳನ್ನು ನಾಶಪಡಿಸಿಕೊಂಡ ಬಹು ಜನರು ದೀನತೆಯನ್ನು ಹೊಂದುವರು. ಗೃಹಾದಿ ಗಳನ್ನು ತ್ಯಜಿಸಿ, ಪಕ್ಕಿಗಳಂತೆ ಭಿಕ್ಷಾವೃತ್ತಿಯನ್ನು ಅವಲಂಬಿಸುವರು ಇದರಿಂದ ಅವನ ಚರಿತಾಮೃತವನ್ನು ಹಾಡದೇ ಇರಲಾರೆವು.

ವಯಮೃತಮಿವಜಿಹ್ಮವ್ಯಾಹೃತಂ ಶ್ರದ್ಧಧಾನಾಃ ।
ಕಲಿಕರುತಮಿವಾಜ್ಞಾಃ ಕೃಷ್ಣವಧ್ವೋ ಹರಿಣ್ಯಃ ॥
ದದೃಶುರಸಕೃದೇತತ್ತನ್ನಖ ಸ್ಪರ್ಶತೀವ್ರ ।
ಸ್ಮರರುಜ ಉಪಮಂತ್ರಿನ್ ಭಣ್ಯತಾಮನ್ಯವಾರ್ತಾ ॥೧೯॥

ಎಲೈ ದುಂಬಿಯೇ, ನೀನು ಶ್ರೀಕೃಷ್ಣನ ಉಪಮಂತ್ರಿಯಾಗಿ ಬಂದಿದ್ದೀಯೆ ! ಅವನ ಕುಟಿಲವಚನಗಳನ್ನು ಕೃಷ್ಣಪ್ರೇಮಿಗಳಾದ ನಾವು ಸತ್ಯವೆಂದು ಪೂರ್ಣವಾಗಿ ನಂಬಿದೆವು. ಹೆಣ್ಣುಜಿಂಕೆಗಳು ಬೇಡನ ಸಂಗೀತ ಮಾಧುರ್ಯವನ್ನು ಕೇಳಿ, ನಂಬಿ ಪೆಟ್ಟು ತಿಂದೆವು ಅವನ ನಖಕ್ಷತಗಳಿಂದ ತೀವ್ರವಾದ ಮನ್ಮಥನ ಬಾಧೆಗಳನ್ನು ಅನುಭವಿಸಿದೆವು ಅವನ ವಿಷಯ ಒಂದನ್ನು ಬಿಟ್ಟು ಬೇರೆ ಸುದ್ದಿಯಿದ್ದರೆ ಹೇಳು.

> ಪ್ರಿಯಸಖ ಪುನರಾಗಾಃ ಪ್ರೇಯಸಾ ಪ್ರೇಷಿತಃ ಕಿಂ ।
> ವರಯ ಕಿಮನುರುಂಧೇ ಮಾನನೀಯೋಽಸಿ ಮೇಽಂಗ ॥
>
> ನಯಸಿ ಕಥಮಿಹಾಸ್ಮಾನ್ ದುಸ್ತ್ಯಜ ದ್ವಂದ್ವ ಪಾರ್ಶ್ವಂ ।
> ಸತತಮುರಸಿ ಸೌಮ್ಯ ಶ್ರೀರ್ವಧೂಃ ಸಾಕಮಾಸ್ತೇ ॥೨೦॥

ಆಹಾ ! ಮತ್ತೆ ಬಂದೆಯಾ ಹೇ ಭ್ರಮರ ! ನಮ್ಮ ಪ್ರಿಯಸಖ ನೀನು. ನಮ್ಮ ಪ್ರಿಯನಾದ ಶ್ರೀಕೃಷ್ಣನು ನಿನ್ನನ್ನು ಕಳುಹಿಸಿದನೇ ? ನಿನ್ನ ಬಯಕೆ ಏನಿದೆ ? – ಕೇಳಿಕೋ. ಎಲೈ ಭ್ರಮರವೇ, ನೀನು ನನಗೆ ಮಾನ್ಯನಾಗಿರುವೆ. ಶ್ರೀಕೃಷ್ಣನ ಸಂಗವು ನಮಗೆ ದುಸ್ತ್ಯಜವು. ಆದ್ದರಿಂದ ಹೇಗೆ ನೀನು ನಮ್ಮನ್ನು ಅವನ ಬಳಿ ಕರೆದೊಯ್ಯುವೇ ? ವಧುವಾದ ಶ್ರೀಲಕ್ಷ್ಮಿ ಅವನೊಡನೆ ಸದಾ ಇರುತ್ತಾಳಲ್ಲಾ !

> ಅಪಿ ಬತ ಮಧುಪುರ್ಯಾಮಾರ್ಯಪುತ್ರೋಽಧುನಾಽಽಸ್ತೇ ಃ
> ಸ್ಮರತಿ ಸ ಪಿತೃಗೇಹಾನ್ ಸೌಮ್ಯ ಬಂಧೂಂಶ್ಚ ಗೋಪಾನ್ ॥
> ಕ್ವಚಿದಪಿ ಸ ಕಥಾಃ ನಃ ಕಿಂಕರೀಣಾಂ ಗೃಣೀತೇ ।
> ಭುಜಮಗುರುಸುಗಂಧಂ ಮೂರ್ಧ್ನ್ಯಧಾಸ್ಯತ್ ಕದಾನು
> ॥೨೦॥

ಹೇ ಸೌಮ್ಯ ಭ್ರಮರವೇ ! ಆ ಆರ್ಯಪುತ್ರನು ಈಗ ಮಧುರೆಯಲ್ಲಿ ಇದ್ದಾನೆಯೇ ? ತನ್ನ ತಂದೆಯ ಮನೆಯನ್ನೂ, ಬಂಧುಗಳಾದ ಗೋಪರನ್ನೂ ಸ್ಮರಿಸಿಕೊಳ್ಳುವನೇ ? ದಾಸಿಯರಾದ ನಮ್ಮ ವಿಷಯವನ್ನೇನಾದರೂ

ಎತ್ತುವನೇ ? ಅಗರುಗಂಧದಿಂದ ಪರಿಮಳಯುಕ್ತವಾದ ತನ್ನ ಹಸ್ತ ಗಳನ್ನು ನಮ್ಮ ಶಿರಸ್ಸಿನ ಮೇಲೆ ಯಾವಾಗ ಇಡುವನಂತೆ ? – ಎಂದು ಹಾಡಿದರು ಆ ಗೋಪಸ್ತ್ರೀಯರು.



೬೬೭

## ಶ್ರೀ ಕೃಷ್ಣಾಷ್ಟೋತ್ತರ ಶತನಾಮ ಸ್ತೋತ್ರಮ್

ಶ್ರೀಕೃಷ್ಣಃ ಕಮಲನಾಥೋ ವಾಸುದೇವಃ ಸನಾತನಃ ।
ವಸುದೇವಾತ್ಮಜಃ ಪುಣ್ಯೋ ಲೀಲಾಮಾನುಷವಿಗ್ರಹಃ ॥೧॥

ಶ್ರೀವತ್ಸ ಕೌಸ್ತುಭಧರೋ ಯಶೋದಾವತ್ಸಲೋ ಹರಿಃ ।
ಚತುರ್ಭುಜಾತ್ತ ಚಕ್ರಾಸಿಗದಾ ಶಂಖಾದ್ಯುದಾಯುಧಃ ॥೨॥

ದೇವಕೀನಂದನಃ ಶ್ರೀಶೋ ನಂದಗೋಪಪ್ರಿಯಾತ್ಮಜಃ ।
ಯಮುನಾ ವೇಗ ಸಂಹಾರೀ ಬಲಭದ್ರ ಪ್ರಿಯಾನುಜಃ ॥೩॥

ಪೂತನಾಜೀವಿತಹರಃ ಶಕಟಾಸುರಭಂಜನಃ ।
ನಂದವ್ರಜಜನಾನಂದಃ ಸಚ್ಚಿದಾನಂದವಿಗ್ರಹಃ ॥೪॥
(ಪಾ – ನಂದವ್ರಜಜನಾನಂದೀ)

ನವನೀತ ವಿಲಿಪ್ತಾಂಗೋ ನವನೀತನಟೋಽನಘಃ ।
ನವನೀತನವಾಹರೋ ಮುಚುಕುಂದಪ್ರಸಾದಕಃ (ಕೃತ್) ॥೫॥

ಷೋಡಶಸ್ತ್ರೀಸಹಸ್ರೇಶ ಸ್ತ್ರೀಭಂಗೀ ಮಧುರಾಕೃತಿಃ ।
ಶುಕವಾಗಮೃತಾಬ್ಧೀಂದುರ್ಗೋವಿಂದೋ ಯೋಗಿನಾಂ ಪತಿಃ ॥೬॥

ವತ್ಸಪಾದಹರೋಽನಂತೋ ಧೇನುಕಾಸುರಭಂಜನಃ ।
ತೃಣೀಕೃತ ತೃಣಾವರ್ತೋ ಯಮಳಾರ್ಜುನಭಂಜನಃ ॥೭॥

ಉತ್ತಾಲತಾಲಭೇತ್ತಾ ಚ ತಮಾಲ ಶ್ಯಾಮಲಾಕೃತಿಃ ।
ಗೋಪ ಗೋಪೀಶ್ವರೋ ಯೋಗೀ ಕೋಟಿಸೂರ್ಯ
ಸಮಪ್ರಭಃ ॥೮॥

ಇಳಾಪತಿಃ ಪರಂಜ್ಯೋತಿರ್ಯಾದವೇಂದ್ರೋ ಯದೂದ್ವಹಃ ।
ವನಮಾಲೀ ಪೀತವಾಸಾಃ ಪಾರಿಜಾತಾಪಹಾರಕಃ ॥೯॥

ಗೋವರ್ಧನಾಚಲೋದ್ಧರ್ತಾ ಗೋಪಾಲಃ ಸರ್ವಪಾಲಕಃ ।
ಅಜೋ ನಿರಂಜನಃ ಕಾಮಜನಕಃ ಕಂಜಲೋಚನಃ ॥೧೦॥

ಮಧುಹಾ ಮಧುರಾನಾಥೋ ದ್ವಾರಕಾನಾಯಕೋ ಬಲೀ ।
ವೃಂದಾವನಾಂತಃ ಸಂಚಾರೀ ತುಲಸೀ ದಾಮಭೂಷಣಃ ॥೧೧॥

ಸ್ಯಮಂತಕಮಣೇರ್ಹರ್ತಾ ನರನಾರಾಯಣಾತ್ಮಕಃ ।
ಕುಬ್ಜಾಗಂಧಾನುಲಿಪ್ತಾಂಗೋ ಮಾಯೀ ಪರಮಪೂರುಷಃ
॥೧೨॥

ಮುಷ್ಟಿಕಾಸುರ ಚಾಣೂರ ಮಲ್ಲಯುದ್ಧ ವಿಶಾರದಃ ।
ಸಂಸಾರವೈರೀ ಕಂಸಾರಿರ್ಮುರಾರಿರ್ನರಕಾಂತಕಃ ॥೧೩॥

ಅನಾದಿಬ್ರಹ್ಮಚಾರೀ ಚ ಕೃಷ್ಣಾವ್ಯಸನಕರ್ಷಕಃ ।
ಶಿಶುಪಾಲ ಶಿರಶ್ಛೇತ್ತಾ ದುರ್ಯೋಧನ ಕುಲಾಂತಕಃ ॥೧೪॥

ವಿದುರಾಕ್ರೂರವರದೋ ವಿಶ್ವರೂಪ ಪ್ರದರ್ಶಕಃ ।
ಸತ್ಯವಾಕ್ ಸತ್ಯಸಂಕಲ್ಪಃ ಸತ್ಯಭಾಮಾರತೋ ಜಯೀ ॥೧೫॥

ಸುಭದ್ರಾಪೂರ್ವಜೋ ವಿಷ್ಣುರ್ಭೀಷ್ಮ ಮುಕ್ತಿಪ್ರದಾಯಕಃ ।
ಜಗದ್ಗುರುರ್ಜಗನ್ನಾಥೋ ವೇಣುನಾದವಿಶಾರದಃ ॥೧೬॥

ವೃಷಭಾಸುರವಿಧ್ವಂಸೀ ಬಾಣಾಸುರಕರಾಂತಕಃ ।
ಯುಧಿಷ್ಠಿರಪ್ರತಿಷ್ಠಾಂತಾ ಬರ್ಹಿಬರ್ಹಾವತಂಸಕಃ ॥೧೭॥

ಪಾರ್ಥಸಾರಥಿರವ್ಯಕ್ತೋ ಗೀತಾಮೃತಮಹೋದಧಿಃ ।
ಕಾಲೀಯಫಣಮಾಣಿಕ್ಯರಂಜಿತ ಶ್ರೀಪದಾಂಬುಜಃ ॥೧೮॥

ದಾಮೋದರೋ ಯಜ್ಞಭೋಕ್ತಾ ದಾನವೇಂದ್ರ ವಿನಾಶನಃ ।
ನಾರಾಯಣಃ ಪರಬ್ರಹ್ಮ ಪನ್ನಗಾಶನವಾಹನಃ ॥೧೯॥

ಜಲಕ್ರೀಡಾಸಮಾಸಕ್ತ ಗೋಪೀವಸ್ತ್ರಾಪಹಾರಕಃ ।
ಪುಣ್ಯಶ್ಲೋಕ ಸ್ತೀರ್ಥಪಾದೋ ವೇದವೇದ್ಯೋ ದಯಾನಿಧಿಃ ॥೨೦॥

ಸರ್ವತೀರ್ಥಾತ್ಮಕಃ ಸರ್ವಗ್ರಹರೂಪೀ ಪರಾತ್ಪರಃ ।
ಏವಂ ಶ್ರೀಕೃಷ್ಣದೇವಸ್ಯ ನಾಮ್ನಾಮಷ್ಟೋತ್ತರಂ ಶತಮ್ ॥೨೧॥

ಕೃಷ್ಣೇನ ಕೃಷ್ಣಭಕ್ತಾನಾಂ ಗೀತಂ ಗೀತಾಮೃತಂ ಪರಮ್ ಪುರಾ ।
ಸ್ತೋತ್ರಂ ಕೃಷ್ಣಪ್ರಿಯತಮಂ ಶ್ರುತಂ ತಸ್ಮಾನ್ಮಯಾ ಪರಮ್ ॥೨೨॥

ಕೃಷ್ಣನಾಮಾಮೃತಂ ನಾಮ ಪರಮಾನಂದಕಾರಣಮ್ ।
ಈತಿ ಬಾಧಾದಿ ದುಃಖಘ್ನಂ ಪರಮಾಯುಷ್ಯವರ್ಧನಮ್ ॥೨೩॥
(ಪಾ. ಅತ್ಯುಪದ್ರವದೋಷಘ್ನಂ ಪರಮಾಯುಷ್ಯವರ್ಧನಮ್)

ದಾನಂ ವ್ರತಂ ತಪಸ್ತೀರ್ಥಂ ಯತ್ಕೃತಂತ್ವಿಹ ಜನ್ಮನಿ ।
ಜಪತಾಂ ಶೃಣ್ವತಾಮೇತತ್ ಕೋಟಿಕೋಟಿಗುಣಂ ಭವೇತ್ ॥೨೪॥

ಪುತ್ರಪ್ರದಮಪುತ್ರಾಣಾಮಗತೀನಾಂ ಗತಿಪ್ರದಮ್ ।
ಧನಾವಹಂ ದರಿದ್ರಾಣಾಂ ಜಯೇಚ್ಛೂನಾಂ ಜಯಾವಹಮ್ ॥೨೫॥

ಶಿಶೂನಾಂ ಗೋಕುಲಾನಾಂ ಚ ಪುಷ್ಟಿದಂ ಪುಣ್ಯವರ್ಧನಮ್ ।
ಬಾಲರೋಗಗ್ರಹಾದೀನಾಂ ಶಮನಂ ಶಾಂತಿ ಮುಕ್ತಿದಮ್ ॥೨೬॥

ಸಮಸ್ತಕಾಮದಂ ಸದ್ಯಃ ಕೋಟಿಜನ್ಮಾಘನಾಶನಮ್ ।
ಅಂತೇ ಕೃಷ್ಣಸ್ಮರಣದಂ ಭವತಾಪತ್ರಯಾಪಹಮ್ ॥೨೭॥

ಕೃಷ್ಣಾಯ ಯಾದವೇಂದ್ರಾಯ ಜ್ಞಾನಮುದ್ರಾಯ ಯೋಗಿನೇ
ನಾಥಾಯ ರುಕ್ಮಿಣೀಶಾಯ ನಮೋ ವೇದಾಂತವೇದಿನೇ ॥೨೮॥

ಇಮಂ ಮಂತ್ರಂ ಜಪನ್ ನಿತ್ಯಂ ವ್ರಜಂಸ್ತಿಷ್ಠನ್ ದಿವಾ ನಿಶಿ ।
ಸರ್ವಗ್ರಹಾನುಗ್ರಹಭಾಕ್ ಸರ್ವಪ್ರಿಯತಮೋ ನರಃ ॥೨೯॥

ಪುತ್ರ ಪೌತ್ರೈಃ ಪರಿವೃತಃ ಸರ್ವಸಿದ್ಧಿಸಮೃದ್ಧಿಮಾನ್ ।
ನಿರ್ವಿಶ್ಯ ಭೋಗಾನಂತೇಽಪಿ ಕೃಷ್ಣಸಾಯುಜ್ಯಮಾಪ್ನುಯಾತ್ ॥೩೦॥

॥ ಇತಿ ಶ್ರೀಬ್ರಹ್ಮಾಂಡಪುರಾಣೇ ಬ್ರಹ್ಮನಾರದ ಸಂವಾದೇ
ಶ್ರೀಕೃಷ್ಣಾಷ್ಟೋತ್ತರ ಶತನಾಮ ಸ್ತೋತ್ರಮ್ ॥



೬೭೯

## ಶ್ರೀಕೃಷ್ಣದ್ವಾದಶನಾಮ ಸ್ತೋತ್ರಮ್

ಶೃಣುಧ್ವಂ ಮುನಯಃ ಸರ್ವೇ ಗೋಪಾಲಸ್ಯ ಮಹಾತ್ಮನಃ ।
ಅನಂತಸ್ಯಾಪ್ರಮೇಯಸ್ಯ ನಾಮದ್ವಾದಶಕಂಸ್ತವಮ್ ॥೧॥

ಅರ್ಜುನಾಯ ಪುರಾ ಗೀತಂ ಗೋಪಾಲೇನ ಮಹಾತ್ಮನಾ ।
ದ್ವಾರಕಾಯಾಂ ಪ್ರಾರ್ಥಯತೇ ಯಶೋದಾಯಶ್ಚ
ಸನ್ನಿಧೌ ॥೨॥

ಅಸ್ಯ ಶ್ರೀಕೃಷ್ಣ ದಿವ್ಯದ್ವಾದಶನಾಮಸ್ತೋತ್ರ ಮಹಾಮಂತ್ರಸ್ಯ
ಫಲ್ಗುನಋಷಿಃ ।
ಅನುಷ್ಟುಪ್ ಛಂದಃ ॥ ಶ್ರೀಕೃಷ್ಣಪರಮಾತ್ಮಾ ದೇವತಾ॥
ಓಂ ಬೀಜಮ್ ।
ಸ್ವಾಹೇತಿ ಶಕ್ತಿಃ । ಶ್ರೀಗೋಪಾಲಕೃಷ್ಣ ಪ್ರೀತ್ಯರ್ಥೇ ಜಪೇ
ವಿನಿಯೋಗಃ ॥

### ॥ ಧ್ಯಾನಮ್ ॥

ಜಾನುಭ್ಯಾಮಪಿ ಧಾವಂತಂ ಬಾಹುಭ್ಯಾಮಪಿ ಸುಂದರಮ್ ।
ಸ ಕುಂಡಲಾಲಕಂ ಬಾಲಂ ಗೋಪಾಲಂ ಚಿಂತಯೇದುಷಃ ॥೧॥

ಪ್ರಥಮಂ ತು ಹರಿಂ ವಿಂದ್ಯಾಂ ದ್ವಿತೀಯಂ ಕೇಶವಂ ತಥಾ ।
ತೃತೀಯಂ ಪದ್ಮನಾಭಂ ತು ಚತುರ್ಥಂ ವಾಮನಂ
ತಥಾ ॥೨॥

ಪಂಚಮಂ ವೇದಗರ್ಭಂ ಚ ಷಷ್ಠಂ ತು ಮಧುಸೂದನಮ್ ।
ಸಪ್ತಮಂ ವಾಸುದೇವಂ ಚ ವರಾಹಂ ಚಾಷ್ಟಮಂ ತಥಾ ॥೩॥

ನವಮಂ ಪುಂಡರೀಕಾಕ್ಷಂ ದಶಮಂ ತು ಜನಾರ್ದನಮ್ ।
ಕೃಷ್ಣಮೇಕಾದಶಂ ಪ್ರೋಕ್ತಂ ದ್ವಾದಶಂ ಶ್ರೀಧರಂ
ತಥಾ ॥೪॥

ಏತದ್ದ್ವಾದಶನಾಮಾನಿ ಮಯಾ ಪ್ರೋಕ್ತಾನಿ ಫಲ್ಗುಣ ।
ಕಾಲತ್ರಯೇ ಪಠೇದ್ಯಸ್ತು ತಸ್ಯ ಪುಣ್ಯಫಲಂ ಶೃಣು ॥೫॥

ಚಾಂದ್ರಾಯಣಸಹಸ್ರಸ್ಯ ಕನ್ಯಾದಾನ ಶತಸ್ಯ ಚ ।
ಅಶ್ವಮೇಧ ಸಹಸ್ರಸ್ಯ ಫಲಮಾಪ್ನೋತಿ ಮಾನವಃ ॥೬॥

॥ಇತಿ ಶ್ರೀಮನ್ಮಹಾಭಾರತೇಽರಣ್ಯ ಪರ್ವಣಿ ಶ್ರೀಕೃಷ್ಣಾರ್ಜುನಸಂವಾದೇ ।
ಶ್ರೀಕೃಷ್ಣದ್ವಾದಶನಾಮ ಸ್ತೋತ್ರಂ ॥

೬೭೦

## ಶ್ರೀಕೃಷ್ಣಾಷ್ಟಕಮ್

ಶ್ರೀ ವಾಸುದೇವ ಮಧುಸೂದನ ಕೈಟಭಾರೇ ।
ಲಕ್ಷ್ಮೀಶ ಪಕ್ಷಿವರವಾಹನ ವಾಮನೇತಿ ॥
ಶ್ರೀಕೃಷ್ಣ ಮನ್ಮರಣಕಾಲ ಉಪಾಗತೇ ತು ।
ತ್ವನ್ನಾಮ ಮದ್ವಚನಗೋಚರ ತಾಮುಪೈತು ॥೧॥

ಗೋವಿಂದ ಗೋಕುಲಪತೇ ನವನೀತಚೋರ ।
ಶ್ರೀನಂದನಂದನ ಮುಕುಂದ ದಯಾಪರೇತಿ ॥
ಶ್ರೀಕೃಷ್ಣ ಮನ್ಮರಣಕಾಲ ಉಪಾಗತೇ ತು ।
ತ್ವನ್ನಾಮ ಮದ್ವಚನಗೋಚರತಾಮುಪೈತು ॥೨॥

ನಾರಾಯಣಾಖಿಲಗುಣಾರ್ಣವ ಸರ್ವವೇದ ।
ಪಾರಾಯಣ ಪ್ರಿಯ ಗಜಾಧಿಪಮೋಚಕೇತಿ ॥
ಶ್ರೀಕೃಷ್ಣ ಮನ್ಮರಣಕಾಲ ಉಪಾಗತೇ ತು ।
ತ್ವನ್ನಾಮ ಮದ್ವಚನಗೋಚರತಾಮುಪೈತು ॥೩॥

ಆನಂದ ಸಚ್ಚಿದಖಿಲಾತ್ಮಕ ಭಕ್ತವರ್ಗ ।
ಸ್ವಾನಂದದಾನ ಚತುರಾಗಮಸನ್ನುತೇತಿ ॥
ಶ್ರೀಕೃಷ್ಣ ಮನ್ಮರಣಕಾಲ ಉಪಾಗತೇ ತು ।
ತ್ವನ್ನಾಮ ಮದ್ವಚನಗೋಚರತಾಮುಪೈತು ॥ ॥೪॥

ಶ್ರೀಪಾಣತೋಽಧಿಕ ಸುಖಾತ್ಮಕರೂಪ ದೇವ ।
ಪ್ರೋದ್ಯದ್ದಿವಾಕರನಿಭಾಚ್ಯುತ ಸದ್ಗುಣೇತಿ ॥
ಶ್ರೀಕೃಷ್ಣ ಮನ್ಮರಣಕಾಲ ಉಪಾಗತೇ ತು ।
ತ್ವನ್ನಾಮ ಮದ್ವಚನಗೋಚರತಾಮುಪೈತು ॥೫॥

ವಿಶ್ವಾಂಧಕಾರಿ ಮುಖ ದೈವತವಂದ್ಯ ಶಶ್ವತ್ ।
ವಿಶ್ವೋದ್ಭವಸ್ಥಿತಿ ಮೃತಿ ಪ್ರಭೃತಿ ಪದೇತಿ ॥
ಶ್ರೀಕೃಷ್ಣ ಮನ್ಮರಣಕಾಲ ಉಪಾಗತೇ ತು ।
ತ್ವನ್ನಾಮ ಮದ್ವಚನಗೋಚರತಾಮುಪೈತು ॥೬॥

ನಿತ್ಯೈಕರೂಪ ದಶರೂಪ ಸಹಸ್ರಲಕ್ಷಾ ।
ನಂತರೂಪ ಶತರೂಪ ವಿರೂಪಕೇತಿ ॥

ಶ್ರೀಕೃಷ್ಣ ಮನ್ಮರಣಕಾಲ ಉಪಾಗತೇ ತು ।
ತ್ವನ್ನಾಮ ಮದ್ವಚನಗೋಚರತಾಮುಪೈತು ॥೭॥

ಸರ್ವೇಶ ಸರ್ವಗತ ಸರ್ವಶು ಭಾನುರೂಪ ।
ಸರ್ವಾಂತರಾತ್ಮಕ ಸದೋದಿತ ಸತ್ಪ್ರಿಯೇತಿ ॥
ಶ್ರೀಕೃಷ್ಣ ಮನ್ಮರಣಕಾಲ ಉಪಾಗತೇ ತು ।
ತ್ವನ್ನಾಮ ಮದ್ವಚನಗೋಚರತಾಮುಪೈತು ॥೮॥

॥ಇತಿ (ಅಡವೀ) ವಿಷ್ಣುತೀರ್ಥಯತಿ ವಿರಚಿತಂ
ಶ್ರೀಕೃಷ್ಣಾಷ್ಟಕಮ್ ॥

೬೭೧

## ಶ್ರೀಕೃಷ್ಣಾಷ್ಟಕಮ್

ವ್ರಜಃ ಮನಃ ಶರಣಂ ಯದುನಂದನಂ ರಜತಪೀಠಪುರ
ಸ್ಥಿತಮಾದರಾತ್ ॥
ಭಜಕಲೋಕತತಿಂ ದಯಾನಿಧಿರ್ನಿಜಪದಂ ನಯತೀತಿ
ಸದಾಗಮಾಃ ॥ ॥೧॥

ಅಜಮುಖಾಮರಬೃಂದಸುವಂದಿತಂ ಭುಜಗಶೀರ್ಷವಿಹಾರಿ
ಪದಾಂಬುಜಮ್ ॥
ಯಜ ಯಥಾರ್ಥಮನೀಷಿ ಹೃದಾಲಯಂ ತ್ಯಜ ವಿನಶ್ವರ
ದುರ್ವಿಷಯಾನಲಮ್ ॥೨॥

ವಿಜಯಮಿತ್ರಮಮಂಧ ಧಿಯಾರ್ಚಿತಂ ವ್ರಜಪತಿಂ ಭುಜ
ದಂಡ ಧೃತಾಚಲಮ್ ॥

ಸುಜನತಾಫಲದಾನವಿಚಕ್ಷಣಂ ದ್ವಿಜವರಾನನಮಾಶ್ರಯ
ಯಾದವಮ್ ॥೩॥

ಸೃಜತಿ ಪಾತಿ ಹರತ್ಯಥ ವಿಶ್ವಮೇ ಷ್ವಜತಯೋಹ್ಯರಸಾ
ಕಮಲಾಲಯಾಮ್ ।
ರುಜುಮಾಪಸ್ಯ ಸುಖಂ ಸ್ವಮಸೌ ದಿಶೇದ್ದ್ವಿಜನದೇಶ
ಮುಪಾಸ್ವ ಮಧುದ್ವಿಷಮ್ ॥೪॥

ಗಜರದಾಹತ ಮಲ್ಲಮಮರ್ತ್ಯದೋ ವ್ಯಜನವೀಜಿತಮಕ್ಷಿ
ಜಿತಾಂಬುಜಮ್ ।
ಅಜಸಿ ಚೇಚ್ಚರಣಂ ಮುರವೈರಿಣಂ ನ ಜನಿಶಾಶವುರೋಗಮ
ದೂಷಣಮ್ ॥೫॥

ಅಜರನಾಥ ಮಹಾಮದವಾರಣಂ ಭುಜಗನಿವೇಶಸನಾಶಿತ
ಕೇಶಿನಮ್ ।
ಸ್ವಜನುರೀಶವರಾಸುರಸಂಹರಂ ಪಜ ರಜಸ್ತಮ ಆದಿ
ನಿವೃತ್ತಯೇ ॥೬॥

ದ್ವಿಜಸುತ ಪ್ರದಪುಂಗ ಪಯಶ್ಚರ ಧ್ವಜಜನಂ ಸಮರಾಹತ
ಶಾತ್ರವಮ್ ।
ಅಜನಗೇಶತುರಂಗಮಮಾನತ ವ್ರಜಸಮೀಹಿತದಂ ಭಜ
ಯಾದವಮ್ ॥೭॥

ರಜಕ ಸಾಮ ಕಂಸಮುಖಾಸನ ಸ್ವಜನನೀಜನ ಕಾಮಿತ
ಸೌಖ್ಯದಮ್ ।
ರಜನೀನಾಥಕುಲಾಭರಣಂ ಧೃತ ಸ್ರಜಮನಂತಗುಣಂ
ಭಜ ಹೇ ಮನಃ ॥೮॥

ಋತಮನೀಷ ಹೃದಬ್ಜ ಸುರಾಲಯಃ ಶ್ರಿತ ಸಮೀಹಿತದೋ
ಮಧುಶಾತ್ರವಃ ।
ಕೃತಮಿದಂ ಯತಿನಾ ಪರತೇಽಷ್ಟಕಂ ಸುತಮುಖೇಶ್ವತತಿಂ
ದದತೇಹರಿಃ ॥೯॥

॥ಇತಿ ಶ್ರೀ ಶ್ರೀಸತ್ಯಸಂಧಯತಿ ಕೃತಂ ಶ್ರೀಕೃಷ್ಣಾಷ್ಟಕಮ್॥



೬೭೨

(ಮುದ್ದು ವಿಠ್ಠಲಾಂಕಿತ)

ರಾಗ–ಆನಂದಭೈರವಿ ಆದಿತಾಳ

ಎಣ್ಣೆಯ ಪಿಡಿದು ಯಶೋದೆ ನಸುನಗುತಾ
ಸಣ್ಣ ಬಾಲನೆ ಬಾರೆಂದು ಕರೆಯುತಾ ॥ ॥ಪ॥

ಬರುವ ಮಾತೆಯ ನೋಡಿ ತ್ವರದಿ ಬಾಲಕೃಷ್ಣ
ಮರಳಿ ಮರಳಿ ನೋಡಿ ಓಡುತಲಿರಲು
ಪರಮಪುರುಷನ ಬೆನ್ನುಹತ್ತಿ ದಣಿಯೆ ಮಾತೆ
ಕರುಣದಿ ನಿಂತಾ ನಸುನಗುತ ಹರಿ ॥ ॥೧॥

ಅಂಗಳದೊಳಗೆ ನಿಂತ ಬಾಲನ
ಮುಂಗೈ ಪಿಡಿದು ಬಹು ಮುದ್ದಿಸುತ ಗೋಪಿ
ಸುಂದರ ಸುಗುಣನ ಪೀಠದಿ ಕುಳ್ಳಿರಿಸಿ ಆ–
ನಂದದಿಂದ ಹರಸುತ ಎಣ್ಣೆಯನ್ನುಚ್ಚುತ ॥

ಆಯುರಾರೋಗ್ಯದಿ ಐಶ್ವರ್ಯಭೋಗಿಸುತ
ಸೋಳಾಸಾವಿರ ಬಾಲೆರನಾಳುತ
ಮುದ್ದುವಿಠ್ಠಲ ಪ್ರೇಷ್ಠ ಅಷ್ಟಮಹಿಷೇರ ಸಹಿತ
ದುಷ್ಟರ ಶಿಕ್ಷಿಸಿ ಶಿಷ್ಟರ ಪಾಲಿಸೆಂದು ॥ ॥೩॥

**ಅರ್ಥವಿವರಣೆ :–**

**ಮುದ್ದುವಿಠ್ಠಲಾಂಕಿತ** ದಾಸವರ್ಯರ ಅನೇಕ ಕೀರ್ತನೆಗಳು ಹುಬ್ಬಳ್ಳಿಯಲ್ಲಿರುವ ಶ್ರೀಮತಿ **ರುಕ್ಮಿಣೀಬಾಯಿ ಕೃಷ್ಣಾಚಾರ್ಯ ಪಡಸಲಗಿ** ಇವರಲ್ಲಿವೆ. ಆ ದಾಸರ ಅಂತರ್ಯಾಮಿಯೇ ಅದರಲ್ಲಿ ನಿಂತು ಇನ್ನೂ ಅನೇಕ ಕೀರ್ತನೆಗಳನ್ನು ಪ್ರೇರಿಸಿ, ನಿಂತು ಬರೆಯಿಸಿದ್ದಾನೆ ಅವರ ಸಂಬಂಧೀಕರಾದ **ಶ್ರೀ ಧೀರೇಂದ್ರ ಗುರುರಾವ್ ದೇಸಾಯಿಯವರು** ಕೆಲವು ಕೀರ್ತನೆಗಳನ್ನು ನನಗೆ ಕೊಟ್ಟು, **ಭಜನಕೌಸ್ತುಭದಲ್ಲಿ** ಪ್ರಕಟಿಸಲು ಅನುಮತಿ ಇತ್ತಿದ್ದಾರೆ. ಅವರಿಗೆ ಪ್ರಕಾಶಕರು ಆಭಾರಿಗಳು.

ಯಶೋದೆಯು ತುಂಟ ಕೃಷ್ಣನನ್ನು ಹಿಡಿದು, ಎಣ್ಣೆ ಹಚ್ಚಿ ಎರೆಯುವ ಪ್ರಸಂಗವನ್ನು ದಾಸವರ್ಯರು ಹೃದಯಂಗಮವಾಗಿ ಚಿತ್ರಿಸಿರುತ್ತಾರೆ– ಪ್ರಸಕ್ತ ಕೀರ್ತನಸಾಹಿತ್ಯದಲ್ಲಿ.

**ಸಣ್ಣ ಬಾಲನೆ** = ಪುಟ್ಟ ಕೃಷ್ಣನೇ. **ಮರಳಿ ಮರಳಿ ನೋಡಿ** = ತನ್ನನ್ನು ಬೆನ್ನಟ್ಟಿ ಬರುತ್ತಿರುವ ಯಶೋದೆಯನ್ನು ಓಡುತ್ತಿರುವ ತುಂಟ ಬಾಲನು ಹಿಂದಿರುಗಿ ತಿರುಗಿ ತಿರುಗಿ ನೋಡುತ್ತಾ, ಮುಂದೆ ಮುಂದೆ ಓಡು ತ್ತಿದ್ದಾನೆ. **ದಣಿಯ ಮಾತೆ** = ಯಶೋದೆ ಸ್ಥೂಲಕಾಯದ ಹೆಂಗಸು. ಸೊಂಪಾಗಿ ಬೆಳೆದವಳು. **ಆಯುರಾರೋಗ್ಯದಿ** = ಶಶ್ವದೇಕಪ್ರಕಾರನಾದ, ನಿತ್ಯನೂ ನೂತನೂ ಆದ ಅಚ್ಯುತನಾಮಕನಾದ ಶ್ರೀಹರಿಗೆ ಆಯುಸ್ಸು, ಆರೋಗ್ಯವನ್ನು ಕೋರಿ ಎಣ್ಣೆ ಹಚ್ಚುತ್ತಿದ್ದಾಳೆ. ಏನಚ್ಚರಿ ! **ಐಶ್ವರ್ಯ**

**ಭೋಗಿಸುವ** = ಷಡ್ಗುಣೈಶ್ವರ್ಯಸಂಪನ್ನನೂ ಲಕ್ಷ್ಮೀಪತಿಯೂ ಆದ ಶ್ರೀಹರಿಗೆ ಐಶ್ವರ್ಯವನ್ನು ಹಾರೈಸುತ್ತಾಳೆ! **ಸೋಳಾಸಾವಿರ** = ೧೬೧೦೦ ಸಂಖ್ಯಾಕವಾದ. **ಬಾಲೆರನಾಳುವ** = ನರಕಾಸುರನ ಬಂಧನದಲ್ಲಿದ್ದ ಕನ್ಯಾವಸ್ಥೆಯಲ್ಲಿದ್ದವರನ್ನು ಬಿಡಿಸಿ, ಅವರನ್ನೆಲ್ಲಾ ಅವರ ಅಪೇಕ್ಷೆಯಂತೆ ವಿವಾಹವಾದನು ಶ್ರೀಕೃಷ್ಣ. **ಅಷ್ಟಮಹಿಷೇಕ** = ಎಂಟುಮಂದಿ ಪಟ್ಟ ಮಹಿಷಿಯರ ಸಹಿತ. ಅಲ್ಲಿಗೆ ೧೬೧೦೦+೮=೧೬೧೦೮ ಪತ್ನಿಯರು. (ಪಣ್ಮಹಿಷಿಯರು–ರುಕ್ಮಿಣಿ–ಸತ್ಯಭಾಮಾ). **ದುಷ್ಟರ ಶಿಕ್ಷಿಸಿ ಶಿಷ್ಟರ ಪಾಲಿಸಿ** = ದುಷ್ಟ ಶಿಕ್ಷಣ, ತದ್ವಾರಾ ಶಿಷ್ಟಪರಿಪಾಲನೆಯೇ ಶ್ರೀಹರಿಯ ಧರ್ಮಸ್ವರೂಪವಾದ ಸಂಕಲ್ಪ.



## ೬೭೩

## (ಮುದ್ದುವಿಠ್ಠಲಾಂಕಿತ)

**ರಾಗ–ರೇಗುಪ್ತಿ** **ಆದಿತಾಳ**

ಒಳಿತಾಗಲಿ–ಒಳಿತಾಗಲಿ–ಒಳಿತಾಗಲಿ ಹರಿಯೆ ॥ ॥ಪ॥

ಸುಲಭದೇವ ನಿನ್ನೊಲುಮೆ ದಾಸರ ಪಾದ–
ಧೂಳಿ ಬೀಳಲಿ ಮನಮಂದಿರದಿ–ಎನ್ನಮನಮಂದಿರದಿ ॥ ॥ಅ॥

ಅಂದು ದ್ವಾರಕಿಯೊಳಾನಂದ ವಿನೋದದಿ
ಇಂದಿರೆರಮಣ ಪೂಜೆಗೆಂದು ಕುಳಿತಿರಲು
ಬಂದನಾಗಲೆ ನಾರದಮುನಿ ವೀಣೆ ಆ–
ನಂದದಿ ಮೀಟುತ–ಹರಿ ಮಹಿಮೆ ಪಾಡುತ ॥ ॥೧॥

ಅಮ್ಮ ರುಕ್ಮಿಣಿದೇವಿ ಬೊಮ್ಮನ
ಸಮಯವೇನೆಂದು ಕೇಳಿದ–ನಮಿಸುತ ಮುನಿಯು
ನಿಮ್ಮ ನಾರಾಯಣನು ದೇವರ ಪೂಜೆಗೆಂದು
ಕುಳಿತಿರುವಾಗ ಬನ್ನಿರಿ ನೋಡಲು ॥ ॥೨॥

ಅಂದಮಾತನು ಕೇಳಿ ಮುನಿಯು ಆಶ್ಚರ್ಯದಿ
ಬಂದು ನೋಡಿದನಾಗ ವಜ್ರಸಂಪುಟವಾ
ತಂದ–ಇದೇನಿದೇನೆನಲು ಇದೇ
ನಿಮ್ಮಂಥವ ಪಾದಧೂಳಿ ಎಂದಾ ॥ ॥೩॥

ಬ್ರಹ್ಮಣ್ಯದೇವರ ದೇವ ನೀನೆಂಬೋದು
ಅಮ್ಮ ಮಹಾಲಕುಮಿಯು ಕರೆದು ತೋರಿದಳೆನಗೆ
ಸುಮ್ಮನೆ ಬರುವುದೇ–ಜ್ಞಾನ ಭಕುತಿಯು
ರಮ್ಮೆರಮಣ ನಿಮ್ಮ ಕರುಣವಾಗದ ವಿನಾ ॥ ॥೪॥

ದ್ವಂದ್ವಪಾದಕೆ ವಂದಿಸಿ ಶ್ರೀಮುದ್ದು ವಿಠ್ಠಲನಾ
ನಂದಮಹಿಮೆ ಕೊಂಡಾಡುತ ಪೊರಟು
ಇಂದಿರೇಶನೆ ಸರ್ವೋತ್ತಮವೋತ್ತಮ
ನೆಂದು ಸಾರಿದಾ ಈರೇಳು ಲೋಕದಿ ಸಂಚರಿಸುತಾ ॥ ॥೫॥



**ಅರ್ಥವಿವರಣೆ:–**

ಇದೊಂದು ಸುಂದರವಾದ ಸಂದರ್ಭವಿಶೇಷ. ಒಮ್ಮೆ ಗೋಕುಲದಲ್ಲಿ ಶ್ರೀಕೃಷ್ಣನು ಪೂಜಾಮಂದಿರದಲ್ಲಿ ದೇವಪೂಜಾಮಗ್ನನಾಗಿದ್ದಾನೆ. ಆ ಸಮಯಕ್ಕೆ ತ್ರಿಲೋಕಸಂಚಾರಿಗಳಾದ ನಾರದಮುನಿಗಳು ಆಗಮಿಸಿದ್ದಾರೆ. ರುಕ್ಮಿಣೀದೇವಿಯನ್ನು ಕೃಷ್ಣನೆಲ್ಲಿದ್ದಾನೆಂದು ಕೇಳಿದ್ದಾರೆ. ದೇವಿಯು

ಶ್ರೀಹರಿಯು ಹರಿ ಮಂದಿರದಲ್ಲಿದ್ದಾನೆಂದು ತಿಳಿಸಿದ್ದಾಳೆ. ನಾರದರು ಪೂಜಾ ಮಂದಿರಕ್ಕೆ ಧಾವಿಸಿದರು. ಅಲ್ಲಿ ಅವರು ಕಂಡ ದೃಶ್ಯವೇನು? ಒಂದು ವಜ್ರಸಂಪುಷ್ಟವನ್ನು ಎದುರಿಗೆ ಇಟ್ಟುಕೊಂಡು ಪೂಜಿಸುತ್ತಿದ್ದಾನೆ. ಆ ತ್ರಿಲೋಕಪೂಜ್ಯ! ಅದೇನೆಂದು ಪ್ರಶ್ನಿಸಿದ್ದಾರೆ-ನಾರದರು. ವಜ್ರದ ಸಂಪುಷ್ಟದ ಮುಚ್ಚಳವನ್ನು ತೆರೆದು, ಅದರಲ್ಲಿದ್ದ ಹರಿದಾಸರಚರಣಧೂಳಿಯನ್ನು ತೋರಿಸಿದ ಆ ಚಕ್ರಪಾಣೀ. ಹರಿದಾಸರ ಚರಣರಜಪೂಜಕನಾದ ಆ ಕರುಣಾಮಯನ ಭಕ್ತವಾತ್ಸಲ್ಯವೆಂತಹುದು !

**ಒಳಿತಾಗಲಿ** = ಶುಭವಾಗಲೆಂದು ಹಾರೈಸುತ್ತಾರೆ. **ನಿನ್ನೊಲುಮೆ** = ನಿನ್ನ ಪರಮಾನುಗ್ರಹ. **ಮನಮಂದಿರದಿ** = ನನ್ನ ಮನಸ್ಸೆಂಬ ಮಂದಿರದಲ್ಲಿ ಹರಿದಾಸರ ಪಾದಧೂಳಿ ಬೀಳಲಿ. ಅದರಿಂದ ನನ್ನ ಮನಸ್ಸು ಪಾವನವಾಗಲಿ–ಎಂದು ದಾಸರ ಹಂಬಲ **ವಿನೋದದಿ** = ಲೀಲೆಯಿಂದ (ಅವನ ಸಕಲವ್ಯಾಪಾರಗಳೂ ಲೀಲಾಯುಕ್ತವೇ). **ಅಮ್ಮ** = ಜಗದಂಬೆಯಾದ ಶ್ರೀಲಕ್ಷ್ಮೀದೇವಿ. **ಬೊಮ್ಮನ ಸಮಯವೇನೆಂದು** = ಪರಬ್ರಹ್ಮನಾದ ಶ್ರೀಕೃಷ್ಣನ ಸಮಯ ಏನು ? –ಎಂದು ನಾರದರು ರುಕ್ಮಿಣಿಯನ್ನು ಕೇಳಿದ್ದಾರೆ. **ಬ್ರಹ್ಮಣ್ಯ ದೇವರ** – ಗೋ ಬ್ರಾಹ್ಮಣರ ಹಿತ ರಕ್ಷಣೆಯೇ ತನ್ನ ಧ್ಯೇಯವೆಂದು ತಿಳಿದಿರುವ ಆ ಬ್ರಹ್ಮಣ್ಯದೇವ. **ರಮ್ಮೆರಮಣ** = ರಮಾಪತಿಯಾದ ಶ್ರೀಕೃಷ್ಣ. **ಸರ್ವೋತ್ತಮನೆಂದು** = ರಮಾಬ್ರಹ್ಮಾದಿವಂದ್ಯನೂ ಕ್ಷರಾಕ್ಷರಪುರುಷಪೂಜಿತಪಾದನೂ ಆದ ಶ್ರೀಕೃಷ್ಣನೇ ಸರ್ವೋತ್ತಮ ದೇವತಾ–ಎಂಬ ಸಾರುತ್ತಾ ಹೊರಟರು ನಾರದ ಮುನಿಗಳು.

## ೭೭೪

## (ಹನುಮೇಶವಿಠ್ಠಲಾಂಕಿತ)

**ರಾಗ–ಮಧ್ಯಮಾವತಿ** **ಅಟ್ಟತಾಳ**

ಗಾನಲೋಲನಾದ–ಶ್ರೀನಿವಾಸನಾ–ಸರ್ವೇಶನಾ
ಗಾನದಿಂ ಭಜನೆ ಮಾಡೋ–ಜಾನಕೀಯ ರಮಣನಾ ॥ ॥ಪ॥

ಮಲಗಿ ಪಾಡೆ ಮುರಲೀಧರನು–ಒಲಿದು ಕುಳಿತು ಕೇಳ್ವನೋ
ಕುಳಿತು ಪಾಡೆ ನಿಲುವ–ನಿಂದರೆ ನಲಿವನೋ–ತಾ ಒಲಿವನೋ ॥ ॥೧॥

ಬಾಲನಾ–ಗೋಪಾಲನಾ–ಸುಶೀಲನಾ–ಕೃಪಾಲನಾ
ನೀಲಮೇಘ–ಲಕುಮೀಲೋಲನಾ–ವಿಶಾಲನಾ ॥ ॥೨॥

ನಿತ್ಯನಾ–ನಿರ್ಲಿಪ್ತನಾ–ಪರಮಾತ್ಮ ಸಕಲವ್ಯಾಪ್ತನಾ
ಭಕ್ತರಲ್ಲಿ ನಿರುತ ಪ್ರೀತಿಯುಕ್ತನಾ–ಸ್ವರಕ್ತನಾ ॥ ॥೩॥

ಆನಂದನಾ–ದಯುವೃಂದನಾ–ಮುಕುಂದನಾ
ಚಂದ್ರಕುಲಕೇ ಇಂದ್ರನಾ–ಉಪೇಂದ್ರನಾ–ಗೋವಿಂದನಾ ॥ ॥೪॥

ಧೀರನಾ–ಗಂಭೀರನಾ–ಯದುವೀರನಾ–ದಧಿಚೋರನಾ
ಮಾರಜನಕ ವರದ–**ಶ್ರೀಹನುಮೇಶವಿಠ್ಠಲರಾಯನಾ** ॥ ॥೫॥

**ಅರ್ಥವಿವರಣೆ :–**

ಧಾರವಾಡಜಿಲ್ಲೆಯ ಸುಪ್ರಸಿದ್ಧ ಹರಿದಾಸರುಗಳ ಪೈಕಿ **ಶ್ರೀಹನುಮೇಶವಿಠ್ಠಲಾಂಕಿತ** ದಾಸವರ್ಯರು ಒಬ್ಬರು. ದಾಸಪರಂಪರೆಯಲ್ಲಿ ಇವರ

ನ್ಧಾನವನ್ನು ಭದ್ರಪಡಿಸಿದವರೆಂದರೆ ಆಗಿನ ಶ್ರೀಮದುತ್ತರಾದಿ ಮಠಾಧೀಶ ರಾಗಿದ್ದ **ಶ್ರೀ ಶ್ರೀ ಸತ್ಯಜ್ಞಾನತೀರ್ಥಶ್ರೀಪಾದಂಗಳವರು** ಈ ದಾಸವ ಬಗ್ಗೆ ರೇಣ್ಕರು ಅನೇಕ ಪದ–ಪದ್ಯ–ಸುಳಾದಿಗಳನ್ನು ರಚಿಸಿದರ ಜೊತೆಗೆ ಶ್ರೀಮಜ್ಜಗನ್ನಾಥದಾಸವರ್ಯರ ಮೇರುಕೃತಿರತ್ನ **ಹರಿಕಥಾಮೃತಸಾರದ** ವಿವರವಾಗಿ ಸಕಲರಿಗೂ ತಿಳಿಯುವಂತೆ ಟೀಕೆಯನ್ನು ಬರೆದು, ಶ್ರೀಹರಿವಾಯು ಗಳ ಸೇವೆಯನ್ನು ಮಾಡಿದ್ದಾರೆ. ಇದರಂತೆಯೇ "ಸುಂದರಕಾಂಡ ರಾಮಾ ಯಣ" ವನ್ನು ಕಾವ್ಯರೂಪದಲ್ಲಿ ಬರೆದಿರುತ್ತಾರೆ. ಅಲ್ಲದೇ ಶ್ರೀರಾಘ ವೇಂದ್ರಗುರುಸಾರ್ವಭೌಮರ ಸ್ತೋತ್ರದ ಕನ್ನಡ ಅರ್ಥವನ್ನೂ ಸಹ ಬರೆ ದಿದ್ದಾರೆ. ಇವರ ಸಾಹಿತ್ಯಕೃತಿಗಳು ಧಾರವಾಡ ಜಿಲ್ಲೆಯಲ್ಲಿ ಅವರ ಶಿಷ್ಯ ವರ್ಗದವರಲ್ಲಿ ಪ್ರಚಲಿತವಾಗಿವೆ-

**ಗಾನಲೋಲನಾ** = ಸಂಗೀತಲೋಲನ (ಸಾಮಗಾನಪ್ರಿಯ), **ಸರ್ವೇಶನಾ** = ಸಕಲಕ್ಕೂ ನಿಯಾಮಕ. **ಸುಶೀಲನಾ** = ಶುಭಚರಿತನ **ವಿಶಾಲನಾ** = ಸರ್ವತ್ರವ್ಯಾಪ್ತವಾದ ವಿರೂಡ್ರೂಪನನ್ನು. **ನಿತ್ಯನಾ**= ಶಶ್ವದೇಕಪ್ರಕಾರನಾಗಿರುವ ಶಾಶ್ವತಮೂರ್ತಿ (ಚತುರ್ವಿಧನಾಶರಹಿತನು) **ನಿರ್ಲಿಪ್ತನಾ** = ಜಡಜೀವರುಗಳಿಂದ ಅತ್ಯಂತ ವಿಲಕ್ಷಣನಾದವನು. **ಆನಂದನಾ** = ಆನಂದಪೂರ್ಣನು. **ಮುಕುಂದನಾ** = ಮೋಕ್ಷಪ್ರದನು. **ಚಂದ್ರಕುಲಕೆ ಇಂದ್ರನಾ** = ಚಂದ್ರಕುಲಶೇಖರನಾದ ಶ್ರೀಕೃಷ್ಣ. **ಉಪೇಂದ್ರನಾ** = ಇಂದ್ರನ ತಮ್ಮನಾಗಿ ಇಂದ್ರಪಟ್ಟವನ್ನು ಉಪೇಂದ್ರ ನಾಮಕನಾಗಿ ಆಳ್ದ ಶ್ರೀವಾಮನಮೂರ್ತಿ. **ಮಾರಜನಕ** = ಮನ್ಮಥನ ತಂದೆ ಶ್ರೀಕೃಷ್ಣ (ಪ್ರದ್ಯುಮ್ನಪಿತ). **ವರದಭಕ್ತರ** ಇಷ್ಟಾರ್ಥದಾಯಕನು.



೬೭೫

(ಜಯೇಶವಿಠ್ಠಲಾಂಕಿತ)

**ಸುವ್ವಿ ಮಟ್ಟು** **ಆದಿತಾಳ**

ಗೋಕುಲೇಶ ಎನ್ನ ದೋಷ-ಭೀಕರಾವ ನೆನಸಲಾರೆ
ಸಾಕು ಸಾಕು ಕ್ಷೇಮಕರ್ತ-ಶರಣು ಶ್ರೀಶನೇ ॥ ॥ಪ॥

ಅಮಿತ ಅಭಯದಾತ-ವಾತಹೃದಯ
ಕಮಲ ಸೂರ್ಯ ಶರಣು
ಅಮಿತಬಂಧು-ಕರುಣಾ ಸಿಂಧು-ಮುದದಿ ಪಾಲಿಸೋ।
ವಿಮಲ ಮಾಡು ಹೃದಯ ಎನ್ನ
ಶ್ರಮದ ಸಿಂಧು ಬತ್ತಿಸಯ್ಯ
ಭ್ರಮೆಯ ಕಳೆದು-ಭಾಗ್ಯ ನೀಡು-ನೈಜ ಕರುಣದೀ ॥ ॥೧॥

ಖ್ಯಾತ ಕೀರ್ತಿವಂತ- ಸತತ
ಭೂತನಾಥ ಸಖನೆ ಎನ್ನ
ಆತುರಕ್ಕೆ ಒದಗಿ ಸಲಹೊ-ಆರ್ಯಮಂದಿರಾ
ಯಾತರವನು ಅಲ್ಲ ನಾನು
ಪ್ರಾತ್ಯ ಮನದ ಸ್ವಪಚ ದೀನ
ನಾಥ ದೂತರಂಘ್ರಿ ಧೂಳಿ-ರಕ್ಷಿಸೋ॥ ॥೨॥

ಕೃಷ್ಣ ನಿನಗೆ-ಸತತ ನಮ್ರ
ಇಷ್ಟಸಿದ್ಧಿ ಮುಖ್ಯವೆಂದು
ಶಿಷ್ಟನಾಥ ಮಧ್ವ ಮುನಿಯು ಪೇಳಿಹನು ಲಾಲಿಸೋ।
ಇಷ್ಟದಾತ ಅರಿಷ್ಟಹರಣ
ನಿಷ್ಟೆಯೀವ ಜಯೇಶವಿಠ್ಠಲ
ತುಷ್ಟನಾಗಿ ಮಾತನಾಡು- ತಡವ ಮಾಡದೆ ॥ ॥೩॥

**ಅರ್ಥವಿವರಣೆ :-**

**ಜಯೇಶವಿಠ್ಠಲಾಂಕಿತ** ಪರಮ **ಪೂಜ್ಯ** ಶ್ರೀ **ಆಟ್ಯಾಚೀ** ವೆಂಕಟರಾಯರ (ಕಟ್ಟೇಮನೆ-ಮೈಸೂರು)ಸುಂದರ ಕೀರ್ತನ ಸಾಹಿತ್ಯವಿದು. ಗೋಕುಲೇಶನಾದ ಗೋಪಾಲಕೃಷ್ಣನನ್ನು ಭಕ್ತಿಭಾವದಿಂದ ಸ್ತೋತ್ರ ಮಾಡುತ್ತಾ, ತಮ್ಮ ಆತ್ಮೋದ್ಧಾರಕ್ಕಾಗಿ ಆ ಅಪ್ರಮೇಯನ ಅಡಿದಾವರೆಗಳಲ್ಲಿ ಪ್ರಾರ್ಥಿಸಿದ್ದಾರೆ. "ತತ್ತ್ವಸುವ್ವಾಲಿ"- ಯನ್ನು ಹೇಳುವ "ತತ್ವಮಟ್ಟು" ನಲ್ಲಿ ಈ ಕೀರ್ತನೆಯನ್ನು ಹಾಡಬೇಕು. ವೃಂದಗಾನದಲ್ಲಿ ಹಾಡಿದರೆ, ಅಮೋಘವಾಗಿರುವುದು.

**ಗೋಕುಲೇಶ** ಗೋಕುಲದ ಪ್ರಭುವಾದ ಗೋಪಾಲಕೃಷ್ಣ. **ದೋಷ ಭೀಕರಾವ** = ಭಯಂಕರವಾದ ದೋಷಸಮೂಹಗಳನ್ನು, **ಕ್ಷೇಮಕರ್ತ** = ಸಜ್ಜನರ ಕ್ಷೇಮ ಭಾರವನ್ನು ವಹಿಸಿರುವ ಕ್ಷಮಾಪತಿ, **ಶ್ರೀಶನೇ** = ರಮಾದೇವಿಯರಿಗೆ ಮುಖ್ಯನಿಯಾಮಕನು. **ಅಮಿತ** = ಮಿತಿಯಿಲ್ಲದ (ಅಪಾರವಾದ), **ವಾತಹೃದಯಕಮಲ ಸೂರ್ಯ** = ಶ್ರೀ ವಾಯುದೇವರ ಹೃತ್ಪದ್ಮಕ್ಕೆ ಸೂರ್ಯಸದೃಶನಾಗಿರುವ ಶ್ರೀಹರಿ. **ಅಮಿತ ಬಂಧು** = ಪರಮಾಪ್ತ ಬಂಧು (ಜೀವರ ಬಿಂಬರೂಪಿ). **ಮುದದಿ** = ಸಂತೋಷದಿಂದ ಅನುಗ್ರಹಿಸಿ. **ವಿಮಲ ಮಾಡು** = ಎನ್ನ ಮನಸ್ಸನ್ನು ಪವಿತ್ರೀಕರಿಸು. **ಶ್ರಮದಸಿಂಧು ಬತ್ತಿಸಯ್ಯ** = ಕಷ್ಟತಮವಾದ ಸಂಸಾರವೆಂಬ ಈ ದುಸ್ತರವಾದ ಸಮುದ್ರವನ್ನು ಬತ್ತಿಸು -ಅಂದರೆ ಭವ ಸಾಗರಕ್ಕೆ ಕಾರಣ ನೀನು. **ಭ್ರಮೆಯ ಕಳೆದು** = ಅಹಂಕರ್ತೃತ್ವ ರೂಪವಾದ ಸ್ವಾಭಿಮಾನವನ್ನು ಪರಿಹರಿಸಿ, **ಭಾಗ್ಯ ನೀಡು** = ನಿನ್ನ ಸಂದರ್ಶನದ ಭಾಗ್ಯವನ್ನು ಕೊಡು (ಅಪರೋಕ್ಷ) **ನೈಜ ಕರುಣದೀ** = ನಿನ್ನ ಸ್ವಾಭಾವಿಕ ದಯೆಯಿಂದ. ನೀನೇ ಕರುಣಿಸಬೇಕೇವಿನಹ ಬೇರೆ ಅನ್ಯಥಾ ಮಾರ್ಗವಿಲ್ಲ. **ಖ್ಯಾತ ಕೀರ್ತಿವಂತ** = ಅಪಾರ ಮಹಿಮಾ ಸಂಪನ್ನ **ಭೂತನಾಥ ಸಖನೆ** = ರುದ್ರದೇವರ ಮಿತ್ರನೆ (ಭೂತನಾಥ-ಪ್ರಮಥ **ಗಣ**

ಗಳ ಒಡೆಯರಾದ ಶ್ರೀರುದ್ರದೇವರು). **ಆತುರಕ್ಕೆ** = ಅವಸರಕ್ಕೆ (ನಮಯಕ್ಕೆ). **ಆರ್ಯಮಂದಿರಾ** = ಬ್ರಹ್ಮಜ್ಞಾನಿಗಳ ಅಂತರಂಗಸ್ಥನೇ, (ಹುದ್ಗುಹಾನಿವಾಸಿಯೇ). **ಪಾಪ್ರತ್ಯಮನದ ಸ್ವಪಚ** = ಮಲಿನವಾದ ಮನಸ್ಸಿನ ಭಾವನೆಗಳಿಂದ ಅಶುದ್ಧನಾಗಿದ್ದೇನೆ. **ದೀನನಾಥ** = ಶರಣಾ ಗತ ವತ್ಸಲ. **ದೂತರಂಘ್ರಿ ಧೂಳಿ** = ನಿನ್ನ ಭಕ್ತರ ಕಾಲಿನ ಧೂಳಿ ಯನ್ನು ಅನುಗ್ರಹಿಸು. **ಇಷ್ಟಸಿದ್ಧಿ** = ಮನೋಭಿಲಾಷೆ–ಭಕ್ತಿಪೂರ್ವಕ ವಾದ ಶ್ರೀಹರಿಯ ಸ್ಮರಣೆ–ಇದೇ ಪ್ರತಿಯೊಬ್ಬ ಏಕಾಂತ ಭಕ್ತನ ಹಂಬಲ. **ಮಧ್ವಮುನಿಯು ಪೇಳಿಹನು** = ಶ್ರೀ ಗುರುಮಧ್ವರು ವಿಷ್ಣುವಾರ ಮ್ಯವನ್ನೂ, ಭಕ್ತಿಮಾರ್ಗದಿಂದಲೇ ಅವನು ಲಭ್ಯನೆಂದೂ–ಶಾಸ್ತ್ರದಲ್ಲಿ ಉಲ್ಲೇಖಿಸಿ, ಉದ್ಘೋಷಿಸಿದ್ದಾರೆ. **ಇಷ್ಟದಾತ** = ನಮ್ಮ ಮನದ ಇಷ್ಟಾರ್ಥಗಳನ್ನು ಕೊಡುವ, **ಅರಿಷ್ಟಹರಣ** = ನಮ್ಮ ಸತ್ಸಾಧನೆಗೆ ಪ್ರತಿಬಂಧಕವಾಗಿರುವ ಅನಿಷ್ಟವಸ್ತುಗಳನ್ನೆಲ್ಲಾ ಪರಿಹರಿಸುವ. **ನಿಷ್ಠೆ ಯೀವ** = ಶ್ರೀಹರಿಯ ಪಾದಕಂಜಗಳಲ್ಲಿ ನಿಶ್ಚಲವಾದ ಜ್ಞಾನಭಕ್ತಿಗಳನ್ನು ನೀಡುವ. **ತುಷ್ಟನಾಗಿ** = ಅನುಗ್ರಹಪೂರ್ವಕವಾಗಿ ಪ್ರಸನ್ನನಾಗಿ.

❋❋❋

## ೬೭೫

## (ಜಯೇಶವಿಠ್ಠಲಾಂಕಿತ)

**ರಾಗ–ಖಡಕು** **ಆದಿತಾಳ**

ಯದುನಾಥ–ಯದುನಾಥ ॥ ॥ಪ॥

ಯದುನಾಥ ತಾ ಮುರಳಿಗಾನ
ತಾ ಮಾಡುತ ನಿಂತ ನಿಧಾನ

ಮಧುರಾಮೃತ ಆರ್ಯರ ಕರುಣಾ
ಸಿಂಧೂದ್ಭವ ಸೋಮ–ಸದ್ಗುಣಪೂರ್ಣ ॥ ॥ಅ॥

ಆದಿಪುರುಷ ಕಲ್ಯಾಣನಿಧಿ ಈತ
ಆತ್ಮಪ್ರದ ಭಕ್ತರಿಗೀವ ದಾತ
ಮೋದ ಪ್ರಮೋದದಾಯಕ ವಿಖ್ಯಾತ
ಮಂದರೋದ್ಧರ ಮುಕುಂದ ಮುಕುತಾರ್ಥ
ಸಾಧು ಭಕ್ತಪರಾಯಣ ಪ್ರಭು ಸತತಾ
ಸಾಧಿಸುವ ಅಪರಿಷ್ಟಾರ್ಥವ ತಾ ನಿರುತಾ
ಸಾಧು ಬಾಧಕರೆಂಬ ಕುಲಘಾತ
ಸಂತತ ತಾನಾಗಿಪ್ಪ ಶ್ರೀನಾಥ ॥

ಬೋಧಮಯ ಮಂಗಳ ಸುಗುಣಾನಂದ
ವೇದರಾಶಿಗೆ ಸಿಗದ ಶ್ರೀಮಂತಾ
ನಾದಿಯ ಸ್ವಾಂತ ಧ್ವಾಂತ ನಿಹಂತಾ
ನಾದ ವಿಬುಧವರೇಣ್ಯ ವಿಧೀರಪಿತ
ಶ್ರೀದ ಭಕ್ತ ಪಪಿಪಂಜರನವರತ
ಪಾದಪಲ್ಲವ ನಖತತಿಗಳ ಸಾಲೂ
ಪಾದತಳಾರುಣ ರುಚಿರರೇಖೆಗಳೂ
ಶ್ರೀದೇವಿ ಬಲು ಮೋದದಿ ಪಿಡಿದಿಪ್ಪಾ
ಶ್ರೀಕರಾಂಗುಳಿ ಸುಂದರ ವನಗುಲ್ಬ
ಮೋದದಾಯಕ ಮಂಗಳ ಪೊಂಗೆಜ್ಜೆ
ನಾದ ಪೆಂಡೆ ಪಾಡಗದ ಸಿರಿಹೆಜ್ಜೆ ॥

ಸ್ಪರ್ಧನಿಪಿತ ಗೋವರ್ಧನಧರ ಫಣಿ
ಮರ್ದನ ಮಾರುಣತಳಪಾದಾ
ಭದ್ರ ಪಂಕಜಳೊರ್ದಿತಿ ಸುಜನರ

ನಿರ್ಝರ ಪೊರೆವುದು ಸಾರ
ಸಿದ್ಧಾದಿ ವಿಧಿ ರುದ್ರ ಹೃದ್ವನಜಭದ್ರ
ಗದ್ದುಗೆ ನಿಂತ ಪ್ರಮೋದ ॥

ಅಸುರಾರ್ದನ ವಿಬುಧರ
ವರ್ಧನ ಜಗವಳೆದದ್ಭುತ ವಿಕ್ರಮಪಾದ
ಆಚ್ಛಾಧಿಕರ ಹರ ಆಮೋದಾ
ವ್ರಜಗೋದನಗಳ ಬಲು ಕಾದ
ಪರಮಾದರಕರ ಸುಸ್ವಾದ
ಶೃತಿ ಬೋಧಿಪ ಪೌರಪ್ರಸಾದ–ಉದಾರ
ಉದಾರ–ಸುರುಚಿರಾಕಾರ
ಶುಭತಮ ಸಮೀರ
ಸುಜನಕಾಧಾರ ಕಲ್ಯಾಣಸಾರ
ಅಮೃತದಾಗಾರಾ
ಖಚಿತ ತಿಳಿಪಾದ ವಿಭವ ಧಾಮ
ಆರ್ತರಾದವರಿಗೆ ಸುಕ್ಷೇಮ–ಸುಕ್ಷೇಮ ॥ ॥೧॥

ನೀಲರತ್ನಪ್ರಭೆಗಳ ಧಿಕ್ಕಾರ
ನಿರವಧಿಕಲಾವಣ್ಯ ಲಕ್ಷ್ಮೀಶರೀರ
ನೀಲಪೆರಡು ಜಂಘೆ ವಲಯಾಕಾರ
ನಾಚಿಸುವುದು ಸಕಲ ಸತ್ವದಸಾರ
ಕೇಳಿ ಜಾನು ಜಂಘೆ ಕಟಿ ಪಟುತರಾ
ಪೋಲಿಕಿಲ್ಲದ ಸುಂದರ ಮನೋಹರ
ಮೇಲು ಹಾಟಕಾಂಬರದಲಂಕಾರ
ಮ್ಯಾಲೆ ತಾರಾಗಣ ಘಟಿತ ಉಡಿದಾರ
ಬಾಲಜರರ ಬ್ರಹ್ಮಾಂಡಾಧಾರ
ಬಿಸಜನಾಭಿಯಿಂದಲಜನವತಾರ

ಸಾಲು ಶ್ರೀವಳಿ ಸಿರಿವಕ್ಷವಿಸ್ತಾರ
ಸಾಂದ್ರ ಸಂಪದ ಕೌಸ್ತುಭಮಣಿಧಾರ
ಪೋಲುವ ದೆಳಿ ಕರಿಕುಂಭ ಕಂಧರಾ
ಶ್ರೀಲಕ್ಷ್ಮಿಯು ಪಿಡಿದ ಕರಗಳು ದಾರ
ಶಂಖಪೋಲ್ವ ಕಂಠದೊಳು ಮಣಿಹಾರ
ನೀಲವಜ್ರ ಕೆಂಪು ಮುತ್ತುಗಳ್ಹಾರ
ನಿಗಮವೇದ್ಯನ ಅದ್ಭುತ ಶೃಂಗಾರ ॥

ಲೋಲಕುಂಡಲ ಶಶಿಮುಖ ಮಂಡಲವೂ
ಲೋಕ ಬೆಳಗುವಾನಂದ ಮಂದಿರವೂ
ಫಾಲದಿ ಕಲ್ಯಾಣಾಲಯು ತಿಲಕ
ಸುನೀಲ ಕುಂತಳ ಶ್ರೀಜಾಲ
ಮ್ಯಾಲೆ ಮಕುಟ ರವಿಪ್ರಭೆ ಥಾಳ
ಶ್ರೀಲೋಲ–ಶ್ರೀಲೋಲ–ವನಮಾಲ
ಲೋಲಾನಂದ ವಿಶಾಲನೇತ್ರ ಅಮೃತಕಳಾ
ಶ್ರೀನೀಲ ಚಂಪಕವ ಪೋಲುವ ನಾಸಿಕ
ಘಾಳಿ ಸೌರಭಗಳಾ ॥

ಜಾಲೇಳುಲೋಕಕೆ ಮಂಗಳ
ತಾಂಬೂಲವದನ ಸಿರಿಕಮಲಾ
ಉಡುಸಾಲು ದಂತಗಳು ವಿಮಲ
ಅರುಣಾಲಯು ಸವಿ ಅಧರವೆಲಾ ॥
ಉಲ್ಲಾಸ–ಉಲ್ಲಾಸ–ಮುಖಮಂದಹಾಸ
ಚಂದ್ರ ಶತಭಾಸಕ್ಷ್ಮಾರ್ಧಕೋಶ
ಭಕ್ತಾರ್ತಿನಾಶ–ಅನಂತಕಲಶ
ಗಂಭೀರ–ಕೋಮಲಕರ ಚೆಲ್ವ
ಲೋಕಪಾಲಕರನೆಲ್ಲ ಆಳ್ವ ॥ ॥೨॥

ಘಾತಿಸಿ ಖಳದುರ್ವ್ರಾತ ಬಲು ಮೆರೆವಾ
ಗಾಢಾಲಿಂಗನದಿ ಲಕ್ಷ್ಮಿಯು ಬಿಗಿವಾ
ಸ್ಫೂರ್ತಿ ಮುತ್ತು ರತ್ನಭಾಪುರಿ ಎಸೆವಾ
ಸುಕುಮಾರ ಮಂಗಳ ಮಣಿಯುಂತಿರುವಾ ॥

ಮಾತಂಗಸೊಂಡಿಲ ಪೋಲ್ವ
ಮಹಿತಬಾಹು ಭುಜಕೀರ್ತಿಗಳ ವಿಭವಾ
ಜಾತರೂಪ ಕಡಗ ಸರಪಳಿ ದಿವ್ಯಾ
ಜಗನ್ನಾಥ ಕರಗಳಲಿ ಧರಿಸಿರುವ
ಧಾತರುದ್ರಸುರರು ಮಸ್ತಕದಿಡುವಾ
ದಿವ್ಯ ಕೋಮಲಕರಾಬ್ಜಗಳ ದೇವ
ದಾತ ಚತುರ್ದಶಲೋಕವ ಪೊರೆವಾ
ದಾನಮಾಳ್ಪ ಕಲ್ಪವೃಕ್ಷವ ಪೋಲ್ವ
ಆರ್ತರ ಹೃತ್ತಾಪವ ಶಾಂತಿಯುಗೈವ
ಕೇತಕಿ ಚಿಗುರುಗಳಂದದಿ ಸರಳೂ
ಕೋಮಲ ಸುಂದರ ದಶಬೆರಳೂ
ಶೀತಾಂಬುಗಳ ಪೋಲ್ವ ನಖಪಂಕ್ತಿ
ಶ್ರೀರತ್ನದೀಪ್ತ ಉಗುರುಗಳ ಕಾಂತಿ
ಹೃತ್ತಮಸಹ್ರದ ಬತ್ತಿಸುವ ಪ್ರೇಮ
ಹಾಸ ಬೆಳಗುವುದು ಅಖಿಳಾಂತರ ಧಾಮ
ವತ್ತಿಲಿ ಯದುಬಲ ವರ್ತಿಸಿ ಶ್ರೀ ಭೂ
ನಿತ್ಯಮುಕ್ತವಾರಿಗಳೂ ಬಲು
ಭೃತ್ಯ ವತ್ಸಲನ ನಿತ್ಯಮಂಗಳ ಸು
ಕೀರ್ತಿ ಲಕ್ಷ್ಮೀರೂಪೆಗಳೂ
ಪುರುಷಾರ್ಥ ಸೌಭಾಗ್ಯವ್ರತಸಾಗರಕೆ

ಪಾತ್ರಭೂತೆ ಜ್ಯೋತಿಗಳೂ
ಪರಮಾರ್ಥವ ನೀಡಲು
ಪತಿಮುಖ ನೋಡುವ
ಎಡಬಲದಲಿ ಬೆಳಗುವಳೂ
ಸರ್ವೋತ್ತಮನನು ಬೆರೆಸಿಹಳು
ಜೀವೋತ್ತಮನಲಿ ದಯಸರಳು
ಅವನಾತುಮದಲಿ ನೆಲೆಸಿಹಳು ॥

ಪತಿಯುಕ್ತಳಾಗಿ ಮೆರೆಯುವಳು–ಸುರವ್ರಾತ
ಸುರವ್ರಾತ ಸೇವಿತರುನೀತ–ಪತಿಪತ್ನಿಭೂತ
ರತ್ನಪೀಠಸ್ಥ ಮ್ಯಾಲೆ ಛತ್ರಿ ಶ್ವೇತ
ಈ ತೆರದಿ ಧ್ಯಾತ–ಜಯೇಶವಿಠ್ಠಲ ನಮ್ಮ
ಮಾತುಮೀರನಪ ನೋಡು ॥ ॥೩॥



**ಅರ್ಥವಿವರಣೆ :–**

**ಜಯೇಶವಿಠ್ಠಲಾಂಕಿತ** ದಾಸವರೇಣ್ಯರ ಇನ್ನೊಂದು ಸುಂದರ ಬಂಧುರ ಸಾಹಿತ್ಯವಿಶೇಷವಿದು. ಇದು ಗದ್ಯರೂಪದಲ್ಲಿದೆ. "**ದ್ವಾರಕಾ ಪುರದ ವರ್ಣನೆ**"ಯಂತೆ ಹೇಳುವ ಶೈಲಿ. ರಾಗ–**ಖಡಕು.** ಎಡಬಿಡದೆ ನಿರಂತರವಾಗಿ ಉತ್ತಮ ರಾಗವಿನ್ಯಾಸದಲ್ಲಿ ಹೇಳುತ್ತಿದ್ದರೆ, ಮೈನವಿರೇಳು ವುದು. ಇಂದ್ರಿಯಗಳು ನರ್ತಿಸುವುವು.

**ಯದುನಾಥ** = ಯದುಕುಲ ಶ್ರೇಷ್ಠನಾದ ಶ್ರೀಕೃಷ್ಣ. **ಮುರಳೀ ಗಾನ** = ಕೊಳಲಿನ ನಾದ. **ಮಧುರಾಮೃತ** = ಅವನ ಅಧರಾಮೃತ ಬಹು ಮಧುರ. ವೇಣುವಿನ ಇಂಚರವು ಮುಕ್ತಿಗೆ ಸೋಪಾನ. **ಆರ್ಯರ** = ಬ್ರಹ್ಮಜ್ಞಾನಿಗಳು. **ಕರುಣಾಸಿಂಧೂದ್ಭವ ಸೋಮ** = ಕಾರುಣ್ಯ

ವೆಂಬ ಸಮುದ್ರದಲ್ಲಿ ಉದ್ಭವಿಸಿದ ಚಂದ್ರನ ಸದೃಶ. ಅಂದರೆ, ಶ್ರೀಹರಿಯು ಕರುಣಾವಾರಿಧಿ ಸೋಮನು. **ಸದ್ಗುಣಪೂರ್ಣ** = ಅನಂತಕಲ್ಯಾಣ ಗುಣಗಣ ಪರಿಪೂರ್ಣನು. **ಆದಿಪುರುಷ** = ಆದಿಮೂಲ. ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳಿಗೆ ತಾನೇ ಪ್ರಧಾನಕಾರಣನು. **ಕಲ್ಯಾಣನಿಧಿ** = ಮಂಗಳದ ನೆಲೆ. **ಆತ್ಮಪ್ರದ** = ತನ್ನ ಏಕಾಂತಭಕ್ತರಿಗೆ ತನ್ನ ದರ್ಶನಭಾಗ್ಯವೆಂಬ ಆನಂದವನ್ನು ಕೊಡುವ ದಯಾನಿಧಿ. **ಮೋದ ಪ್ರಮೋದದಾಯಕ** = ಭಕ್ತರಿಗೆ ಇಹದಲ್ಲಿ ಆನಂದ–ಪರದಲ್ಲಿ ಶಾಶ್ವತ ವಾದ ಮುಕ್ತಿಸುಖವನ್ನು ಕೊಡುವ ಮುಕುಂದನು. **ವಿಖ್ಯಾತ** = ಕೀರ್ತಿವಂತ–ಪ್ರಖ್ಯಾತಪುರುಷನು. **ಮಂದರೋದ್ಧರ** = ಸಮುದ್ರ ಮಥನಸಮಯದಲ್ಲಿ ಕೂರ್ಮರೂಪದಿಂದ ಮಂದರಗಿರಿಯನ್ನು ತನ್ನ ಬೆನ್ನಿನ ಡುಬ್ಬದ ಮೇಲೆ ಹೊತ್ತ ಭಕ್ತವತ್ಸಲನು. **ಮುಕುಂದ** = ಮುಕ್ತಿಪ್ರದನು. **ಪರಾಯಣಪ್ರಭು** = ತನ್ನ ಭಕ್ತರ ನಿರಂತರಧ್ಯಾನಕ್ಕೆ ಮುಖ್ಯವಿಷಯನು. **ಸಾಧು ಬಾಧಕರೆಂಬ** = ಸಜ್ಜನರಿಗೆ ಹಿಂಸೆ ಕೊಡುವ ದುಷ್ಟದೈತ್ಯರ ಕುಲವನ್ನೇ ನಾಶಪಡಿಸುವ ಅಸುರಾರಿ. **ಬೋಧಮಯ** = ಮುಖ್ಯಉಪದೇಶಕ. **ವೇದರಾಶಿಗೆ ಸಿಗದ** = ವೇದಾತೀತನಾದ (ವೇದಾಭಿಮಾನಿಯಾದ ಶ್ರೀಲಕ್ಷ್ಮೀದೇವಿಯಿಂದಲೂ ಅವನ ಅಪಾರಗುಣಗಳನ್ನು ಸಾಕಲ್ಯೇನ ತಿಳಿಯಲಸಾಧ್ಯ). **ಶ್ರೀಮಂತ** = ಷಡ್ಗುಣೈಶ್ವರ್ಯಸಂಪನ್ನ. **ಅನಾದಿಯ ಸ್ವಾಂತ ಧ್ವಾಂತ ನಿಹಂತಾ** = ಸ್ವರೂಪದೇಹಕ್ಕೆ ಆವರ್ಕವಾಗಿರುವ ಅನಾದಿಲಿಂಗದೇಹವು ಉಪಾಧಿಯು. ಅದರಿಂದ ಜನ್ಯವಾದ ಅಜ್ಞಾನವೆಂಬ ಉಪಾಧಿಯನ್ನು ಪರಿಹರಿಸುವ ಮಹಾಮಹಿಮನು. **ವಿಬುಧವರೇಣ್ಯ** — ದೇವೋ ದೇವೋತ್ತಮನು. **ವಿಧಿ ಈರಪಿತ** = ಬ್ರಹ್ಮ ವಾಯುಗಳ ಜನಕನು. (ಮಯಾರಮಣ ವಾಸುದೇವನಿಂದ ವಿರಿಂಚಿನಾಮಕ ಬ್ರಹ್ಮನ ಉತ್ಪತ್ತಿ. ಜಯಾಪತಿ ಸಂಕರ್ಷಣನಿಂದ ಸೂತ್ರನಾಮಕ ವಾಯುದೇವರ ಉತ್ಪತ್ತಿ). **ಶ್ರೀದ** = ಶುಭಪ್ರದ. **ಭಕ್ತ ಪವಿಪಂಜರನನವರತ** = ಎಡಬಿಡದೆ ತನ್ನ ಭಕ್ತರಿಗೆ ವಜ್ರಪಂಜರನಾಗಿದ್ದಾನೆ. **ಪಾದಪಲ್ಲವ ನಖ ತತಿಗಳ** =

**ಕೋಮಲವಾದ** ಚರಣಾರವಿಂದಗಳ ಉಗುರುಗಳ ಕಾಂತಿಯು **ಕೋಟಿ** ಚಂದ್ರಪ್ರಭೆಗಳಂತಿದೆ. ಚಂದ್ರನ ಬೆಳಕು ಪ್ರಶಾಂತವಾದದ್ದು. ಹಾಗೆಯೇ ಶರಣಾಗತರಾದ ಭಕ್ತರಿಗೆ ಶ್ರೀಹರಿಯು ಚರಣ ನಖಗಳ ಕಾಂತಿ ಹೃತ್ತಾಪಹಾರಕವು. **ಪಾದತಳ ಅರುಣ ರುಚಿರ ರೇಖೆಗಳೂ** = ಶ್ರೀಕೃಷ್ಣನ ಪಾದತಳದಲ್ಲಿರುವ ಚಕ್ರ-ವಜ್ರ ಅಂಕುಶಾದಿ ಚಿಹ್ನೆಗಳು. **ಶ್ರೀದೇವಿ** = ಶ್ರೀಲಕ್ಷ್ಮೀದೇವಿಯು ನಿರಂತರದಲ್ಲಿ ಒತ್ತುತ್ತಾ ಸೇವೆ ಮಾಡುತ್ತಿರುವ ಪಾದ ಸೇವಾರೂಪವಾದ ಕೈಂಕರ್ಯ. **ಶ್ರೀಕರಾಂಗುಳಿ** = ಶುಭಪ್ರದವಾದ ಕೈಯ್ಯಿನ ಬೆರಳಿನಲ್ಲಿ ಹಾಕಿದ ಉಂಗುರ. **ಪೊಂಗೆಜ್ಜೆ** = ಚಿನ್ನದ ಗುಂಡು ಗಳಿರುವ ಕಾಲಿನ ಗೆಜ್ಜೆ. **ಪೆಂಡೆ** = ಚರಣಾಭರಣ (ಅಂದುಗೆ). **ಪಾಡಗದ** = ಕಾಲಿನ ಬಳೆ. **ಸ್ವರ್ಧುನಿಪಿತ** = ಗಂಗಾಜನಕನಾದ ತ್ರಿವಿಕ್ರಮಮೂರ್ತಿ (ಸ್ವ-ಸ್ವರ್ಗಲೋಕದ, ಧುನಿ-ಹೊಳೆ-ನದಿ, ಆಕಾಶ ಗಂಗೆ). **ಫಣಿಮರ್ದನ** = ಕಾಳಿಂಗಸರ್ಪನ ಗರ್ವಭಂಗ ಮಾಡಿದ ಶ್ರೀಕೃಷ್ಣ. **ವಿಧಿ ರುದ್ರ ಹೃದ್ವನಜ** = ಬ್ರಹ್ಮದೇವರು, ರುದ್ರದೇವರ ಹೃತ್ಪದ್ಮದಲ್ಲಿ ನಿವಾಸಿಯಾದ ಶ್ರೀಹರಿ. **ಅಸುರಾರ್ದನ** = ದಾನವರ ಸಂಹಾರಿ. **ವಿಬುಧರ ವರ್ಧನ** = ಬ್ರಹ್ಮಜ್ಞಾನಿಗಳ ಆತ್ಮೋದ್ಧಾರಕ್ಕೆ ಕಾರಣನು. **ಆಚ್ಛಾದಿತ ಹರ** = ಸ್ವರೂಪದೇಹಕ್ಕೆ ಉಪಾಧಿರೂಪದಲ್ಲಿರುವ ದೇಹದಲಿಂಗ ಭಂಗವನ್ನು ಮಾಡಿ, ತದ್ವಾರಾ ಜೀವರ ಅನಾದಿಕರ್ಮ ವಿಮೋಚಕ. **ವ್ರಜ ಗೋದನಗಳ** = ಗೋಕುಲದಲ್ಲಿರುವ ದನ ಕರುಗಳನ್ನು ಕಾದ ಗೋಪಾಲಕೃಷ್ಣ. **ಪೌರ ಪ್ರಸಾದ** = ಶ್ರುತ್ಯರ್ಥಗಳ ದ್ವಾರಾ ನಿಜಭಕ್ತರಿಗೆ ಅನುಗ್ರಹಪ್ರದನು. **ಉದಾರ** = ಉದಾರ ಹೃದಯನು. **ಸುರುಚಿರಾಕಾರ** = ದಿವ್ಯಮಂಗಳವಿಗ್ರಹನು. **ಕಲ್ಯಾಣಸಾರ** = ಶುಭಸಾರನು. **ಅಮೃತದಾಗಾರಾ** = ಮೋಕ್ಷ ಸಾಮ್ರಾಜ್ಯದ ಪ್ರಭು (ಅಮೃತ-ಮೋಕ್ಷ)-ವೈಕುಂಠಮಂದಿರನು. **ವಿಭವ ಧಾಮ** = ಶ್ವೇತ ದ್ವೀಪ-ಅನಂತಾಸನ-ವೈಕುಂಠಗಳೆಂಬ ಮುಕ್ತಿಧಾಮ ಗಳನ್ನು ಹೊಂದಿರುವನು.

**ನೀಲರತ್ನ ಪ್ರಭೆಗಳ** = ನೀಲಮಣಿಗಳ ಕಾಂತಿಯನ್ನು ಮೀರುವ. **ಸಿರಿವಧಿಕಲಾವಣ್ಯ** = ಲಕ್ಷ್ಮೀದೇವಿಗೇ ಲಾವಣ್ಯವನ್ನು ಕೊಡುವ ಸಾಕ್ಷಾತ್ ಮನ್ಮಥಮನ್ಮಥನು. **ಜಾನು ಜಂಘೆ ಕಟಿ** = ಮೊಣಕಾಲು, ಮೀನುಖಂಡ, ತೊಡೆ ಮತ್ತು ಸೊಂಟ. **ಮೇಲು ಹಾಟಕಾಂಬರದ ಲಂಕಾರ** = ಮೇಲೆ ಉಟ್ಟಿರುವ ಪೀತಾಂಬರದ ಅಲಂಕಾರ (ಹಾಟಕ–ಚಿನ್ನ ಅಂಬರ–ವಸ್ತ್ರ ಅಂದರೆ, ಪೀತಾಂಬರ). **ತಾರಾಗಣಘಟಿತ** = ಶ್ರೀಕೃಷ್ಣನ ಉಡಿದಾರದ ಮಣಿಗಳು ನಕ್ಷತ್ರಮಾಲೆಯಂತಿವೆ. **ಬಾಲಜಠರ** = ಪ್ರಳಯೋದಕದಲ್ಲಿ ವಟಪತ್ರಶಾಯಿಯಾದ ಶಿಶುರೂಪೀ ಪರಮಾತ್ಮನು ಸಮಸ್ತಜಗತ್ತನ್ನು ತನ್ನ ಉದರದಲ್ಲಿ ಧರಿಸಿದ್ದಾನೆ. **ಬಿಸಜನಾಭಿಯಿಂದ ಅಜನ ಅವತಾರ** = ಶ್ರೀಹರಿಯ ನಾಭೀಕಮಲದಲ್ಲಿ ಬ್ರಹ್ಮನು ಸಂಜಾತನಾದನು. **ಸಾಲು ತ್ರಿವಳಿ** = ಅವನ ಉದರದ ಮೇಲೆ ತ್ರಿವಳಿರೂಪದಲ್ಲಿ ಮೂರು ಗೆರೆಗಳಿವೆ. **ಸಿರಿಪಕ್ಷ ವಿಸ್ತಾರ** = ವಿಶಾಲವಾದ ಎದೆಯು ಶ್ರೀಲಕ್ಷ್ಮೀದೇವಿಗೆ ನಿವಾಸಸ್ಥಾನವು (ಶ್ರೀವತ್ಸವಕ್ಷಾಂಕಿತ). **ಕೌಸ್ತುಭಮಣಿ** = ಕಂಠದಲ್ಲಿ ಸಾಂದ್ರವಾದ ಮಣಿ ಖಚಿತವಾದ ಕೌಸ್ತುಭವೆಂಬ ಪದಕ (ಬ್ರಹ್ಮದೇವರು ಈ ರೂಪದಿಂದ ಸೇವಿಸುತ್ತಿದ್ದಾರೆ). **ಪೋಲುವುದು ಎಳೆ ಕರಿಕುಂಭ** = ಎಳೆಯದಾದ ಆನೆಯ ಮರಿಯ ಕುಂಭಸ್ಥಳದಂತೆ ಹೋಲುತ್ತಿದೇ ಕಂಠದ ಅಂದ. **ಶಂಖ ಪೋಲ್ವ ಕಂಠ** = ಕಡೆದ ಶಂಖದಂತಿರುವ ಕುತ್ತಿಗೆಯಲ್ಲಿ ವನಮಾಲೆ. **ನಿಗಮವೇದ್ಯನ** = ವೇದಗಳಿಂದ ಸ್ತುತ್ಯನಾದ, **ಲೋಲಕುಂಡಲ** = ಓಲಾಡುತ್ತಿರುವ ಕರ್ಣಾಭರಣ. **ಶಶಿಮುಖಮಂಡಲವೂ** = ಪೂರ್ಣಚಂದ್ರನಂತಿರುವ ಅವನ ಮುಖ. **ಫಾಲದಿ** = ಹಣೆಯಲ್ಲಿ ಧರಿಸಿದ ಮಂಗಳಮಯವಾದ ಕಸ್ತೂರೀತಿಲಕ (ಕಸ್ತೂರಿತಿಲಕಾಂಕಿತಫಾಲನು) **ಕುಂತಳ ಶ್ರೀ ಜಾಲ** = ಸುಂದರವಾದ ಮುಂಗುರುಳುಗಳಿಂದ ಆವೃತವಾದ ಹಣೆ ಮತ್ತು ವದನ. **ಶ್ರೀಮ್ಯಾಲೆ ಮುಕುಟ**=ತಲೆಯಲ್ಲಿ ಧರಿಸಿರುವ ಕೋಟಿಸೂರ್ಯ ಪ್ರಭೆಯುಳ್ಳ ಕಿರೀಟ **ಥಾಳ** = ಪ್ರಭೆ (ಕಾಂತಿ) ಯಿಂದ ಬೆಳಗುವುದು, **ಶ್ರೀಲೋಲ** = ಶ್ರೀಲಕ್ಷ್ಮಿಯಲ್ಲಿ ರಮಣಮಾಡುವ ಸ್ವರಮಣನು, **ಅವ್ಯಾತಕಳಾ** =

ಸುಧೆಯನ್ನು ಸೂಸುವ ವಿಶಾಲನೇತ್ರಗಳು (ಸುಧೆ ಎಂದರೆ, ಕರುಣ). **ಶ್ರೀ ನೀಲ** - ನೀಲಮೇಘಶ್ಯಾಮ ಶರೀರ. **ಚೆಂಪೆಕರ** = ಎಳೆಸಂಪಿಗೆ ಹೂವಿನಂತಿರುವ ನೀಳವಾದ ಮೊಟವಾದ ಮೂಗು. **ಜಾಲೇಳು ಲೋಕಕೆ** = ಸಪ್ತಲೋಕಗಳ ಸಮೂಹಕ್ಕೆ. **ತಾಂಬೂಲವದನ** = ತಾಂಬೂಲ ಚರ್ವಣದಿಂದ ಕೆಂಪಾದ ಬಾಯಿ, **ಉಡುಸಾಲು ದಂತಗಳು** = ನೇರವಾಗಿ ಜೋಡಿಸಲ್ಪಟ್ಟ ದಂತಪಂಕ್ತಿ, **ವಿಮಲ** = ದೋಷರಹಿತ. **ಅರುಣಾಲಯ** = ಅರುಣರಾಗವನ್ನು (ಕೆಂಪುಛಾಯೆ) ಹೋಲುವ ತುಟಿಗಳು, **ಉಲ್ಲಾಸ** = ಮನಸ್ಸಿಗೆ ಆನಂದೋದ್ರೇಕವನ್ನು ಕೊಡುವ ಮಂದಹಾಸ **ಚೆಂದ್ರಶತಭಾಸ** = ಶ್ರೀಹರಿಯ ಮುಗುಳು ನಗೆಯ ಬೆಳದಿಂಗಳು ಚಲ್ಲಿ ದಂತೆ (ಅನಂತ ಚಂದ್ರನ ಕಾಂತಿ) **ಅಕ್ಷ್ಣ** = ಅವನ ಕಣ್ಣಿನ ಎವೆಗಳು ಭಕ್ತರ ಪಾಪಗಳ ಪರಿಹಾರಕವು. **ಅನಂತ ಕಲಶ ಗಂಭೀರ** = ಅನೇಕ ಕಲಶ ಕನ್ನಡಿಗಳಿಂದ ಪೂರ್ಣಕುಂಭ ಸ್ವಾಗತ ಪೂರ್ವಕ ಗಂಭೀರವಾಗಿ ನಡೆದು ಬರುವ, **ಲೋಕ ಪಾಲಕರ ಆಳ್ವ** = ದಿಗ್ದೇವತೆಗಳನ್ನು ನಿಯಂತ್ರಿಸುವ ಚೆಲ್ವಕರಗಳು, **ಘಾತಿಸಿ ಖಳ** = ಅವನ ನೀಳವಾದ ಧೃಡವಾದ ಬಾಹುಗಳು ಖಳರಾದ ದೈತ್ಯರನ್ನು ಸಂಹರಿಸುವುವು. **ಲಕ್ಷ್ಮಿಯ ಬಿಗಿದಾ** = ಶ್ರೀಲಕ್ಷ್ಮಿಯನ್ನು ತನ್ನ ಗಾಢಾಲಿಂಗನದಲ್ಲಿ ಬಿಗಿದ ತೋಳುಗಳು. **ಭಾಪುರಿ** = ಆತನು ಧರಿಸಿರುವ ತೋಳಬಂದಿಯು ರತ್ನಖಚಿತವಾದದ್ದು. **ಮಾತಂಗ ಸೊಂಡಿಲ ಪೋಲ್ವ** - ಆನೆಯ ಸೊಂಡಿಲನ್ನು ಹೋಲುವ ಅವನ ಬಲಿಷ್ಠ ಬಾಹುದ್ವಯಗಳು (ಮಹಿತಬಾಹು). **ಜಾತರೂಪಕಡಗ** - ಚಿನ್ನದ ಕಡಗ (ಜಾತರೂಪ-ಸುವರ್ಣ). **ಧಾತ ರುದ್ರ ಸುರರ** = ಬ್ರಹ್ಮ-ರುದ್ರಾದಿ ದೇವತಾವರ್ಗ ನಿನ್ನ ದಿವ್ಯವಾದ ಕೋಮಲವಾದ ಪಾದಪದ್ಮಗಳಲ್ಲಿ ತಮ್ಮ ಮಸ್ತಕವನ್ನಿಡುವರು, **ದಾತ** = ಮಹಾದಾನಿ (ಸಕಲಇಷ್ಟಾರ್ಥಪ್ರದ). **ಕಲ್ಪವೃಕ್ಷ ಪೋಲ್ವ** = ಬೇಡಿದ್ದನ್ನು ಭಕ್ತರಿಗೆ ಕೊಡುವುದರಲ್ಲಿ ಕಲ್ಪವೃಕ್ಷ ಸದೃಶನು. **ಆರ್ತರ ಹೃತ್ತಾಪವ** = ಶರಣಾಗತರಾದ ಭಕ್ತರ ಅಂತರಂಗದ ತಾಪವನ್ನು ಪರಿಹರಿಸಿ, ಮನಸ್ಸಿಗೆ ಶಾಂತಿಯನ್ನು ನೀಡುವ. **ಶ್ರೀ ಶೀತಾಂಬುಗಳ ಪೋಲ್ವ** = ಬೆಳದಿಂಗಳ ಕಾಂತಿಯಂತೆ ಹೊಳೆಯುತ್ತಿರುವ

ನಖಪಂಕ್ತಿಗಳು (ಕೈಬೆರಳಿನ ಉಗುರುಗಳ ಪ್ರಭೆ). **ಹೃತ್ತಮಸಹೃದ** = ಹೃದಯದಲ್ಲಿರುವ ಅಜ್ಞಾನವೆಂಬ ಕತ್ತಲೆಯನ್ನು ಪರಿಹರಿಸುವ ಶ್ರೀಹರಿಯ ಪ್ರೇಮಹಾಸ (ವಾತ್ಸಲ್ಯಪೂರಿತವಾದ ಮಂದಹಾಸ). **ಅಖಿಳಾಂತರಧಾಮ** = ಸಮಸ್ತ ಜೀವರ ಅಂತರಂಗಸ್ಥನಾದ ಬಿಂಬಮೂರ್ತಿ ಜಗದಂಬಾರಮಣನು. **ಲಕ್ಷ್ಮೀರೂಪಗಳೂ** = ದೇಶತಃ ಕಾಲತಃ ಸಮಾನವ್ಯಾಪ್ತಳಾದ ಶ್ರೀಲಕ್ಷ್ಮೀದೇವಿಯ ಅನಂತರೂಪವಿಶೇಷಗಳು. **ಬೆರೆಸಿಹಳು** = ಸರ್ವೋತ್ತಮನಾದ ಸದ್ಗುಣನಿಧಿಯನ್ನು ಎಡಬಿಡದ ನಿತ್ಯಾವಿಯೋಗಿನಿಯು-ನಿತ್ಯಮುಕ್ತಳಾದ ಇಂದಿರೆಯು. **ಜೀವೋತ್ತಮನಲ್ಲಿ ದಯಾಸರಳು** = ಜೀವೋತ್ತಮರಾದ ಬ್ರಹ್ಮವಾಯುಗಳಲ್ಲಿ ಅತ್ಯಂತ ವಾತ್ಸಲ್ಯಪೂರಿತಳು. **ಆವನಾತುಮದಲಿ ನೆಲೆಸಿಹಳು** = ಬ್ರಹ್ಮವಾಯುಗಳ ಆತ್ಮದಲ್ಲಿ ವಿದ್ಯಮಾನಳಾಗಿದ್ದಾಳೆ. **ಪತಿಯುಕ್ತಳಾಗಿ** = ಶ್ರೀಲಕ್ಷ್ಮೀನಾರಾಯಣರು ಅವರ ಸ್ವರೂಪಗತರಾಗಿದ್ದಾರೆ. **ಸುರವ್ರಾತ** = ದೇವತೆಗಳ ಸಮೂಹ. **ಈ ತೆರದಿ ಧ್ಯಾತ** = ರತ್ನಪೀಠದ ಮೇಲೆ ಲಕ್ಷ್ಮೀನಾರಾಯಣರು ಕುಳಿತು ಸಮಸ್ತದೇವತಾವರ್ಗದಿಂದ ಸ್ತುತ್ಯಮಾನರಾಗಿದ್ದಾರೆ. **ನಮ್ಮ ಮಾತು ಮೀರನವನೊಡು** = ಭಕ್ತರ ಮನದಿಷ್ಟಾರ್ಥಗಳನ್ನು ಸಲಿಸುವ ಕಾಮಿತಪ್ರದನಾದ ಜಯೇಶವಿಠ್ಠಲನಾಮಕ ಶ್ರೀಹರಿ.



೬೭೬

(ಖಾದ್ರಿ ನರಹರಿ ಅಂಕಿತದಲ್ಲಿ ಕವಿಕುಲತಿಲಕ ಶ್ರೀ ತಿಪ್ಪಣ್ಣಾರ್ಯ
ಕವಿಯಿಂದ ವಿರಚಿತ–"ಕುಚೇಲೋಪಾಖ್ಯಾನ–ದಿಂದ"
(ಆಯ್ದ ಕೀರ್ತನಸಾಹಿತ್ಯ)

ರಾಗ–ತೋಡಿ ಆದಿತಾಳ

ಪೊರೆಯಲಾರನೆ ನಮ್ಮನು–ಶ್ರೀಕೃಷ್ಣದೇವ
ಪೊರೆಯಲಾರನೆ ನಮ್ಮನು ॥ ॥ಪ॥

ಪೊರೆಯಲಾರನೆ ನಮ್ಮನು ಹರಿಯಾದ ಪರಬ್ರಹ್ಮನು
ನರಗೊಲಿದವನ ತುರಗವ ನಡೆಸಿದ
ಪರಮಪುರುಷ ಪರಿಪೂರ್ಣ ಪರಾತ್ಪರ ॥ ॥ಅ॥

ಕರಿಮಕರಿಗಾಗಿ ಸಿಲುಕಿ–ಸರಸಿಜಭವ ಭವಾದಿ
ಸುರರ ಬೇಡಿ ಬಳಲಿ–ಬಳಿಕ ಗರುಡಗಮನ ಕರುಣಿಸೆನಲು
ಸಿರಿಗೆ ಪೇಳದೆ ಬಾರನೆ–ಚಕ್ರದಿಂ ನಕ್ರನ
ಶಿರವ ತರಿಯುದಾದನೆ–ಸಾಮಜೇಂದ್ರನ
ದುರಿತ ಕಳೆಯಲಾರನೆ–ಮೊಸಳೆಯ ಗಂ–
ಧರುವನ ಮಾಡಿ ತೋರನೆ–ನೀನರಿಯದವನೆ ॥
ಹರಿಯೆ ಸರ್ವೋತ್ತಮನೆಂಬ ಸುತನ್ನ–ಬಾಧೆಯೊಳಿಟ್ಟು
ಹಿರಣ್ಯಕಶಿಪು ಪೀಡಿಸಲವನ್ನ–ಉರವ ಬಗೆಯನೆ
ನರಸಿಂಹರೂಪವ ತಾಳಿ ಸುಮನ್ನ–ಸರಿಂದ ಪೂಜೆ
ವೆರೆಸಿ ರಕ್ಷಿಸನೆ ಪ್ರಹ್ಲಾದನ್ನ–ಲೋಕಪಾವನ
ಕರುಣಾಭರಣ ಸುಚರಣ ವಿತರಣನು
ಶರಣಜನರ ಭವಹರಣ ಗಿರಿಧರನು ॥ ॥೧॥

ಹರನು ಭಸ್ಮಾಸುರನಿಗೊಲಿದು–ವರವೀಯೆ ದನುಜ ಶಿವನ
ಶಿರದಿ ಕರವನಿಡಲು ಬರಲು–ಪರಿದೋಡಿ ಲೋಕಗಳ ಸುತ್ತಿ
ಪರಮಾತ್ಮ ರಕ್ಷಿಸೆನ್ನಲು–ಮೋಹಿನಿರೂಪ
ಧರಿಸಿ ದೈತ್ಯನ್ನ ನೀಗಲು–ಅವನಿಂದಲವನ
ಉರಿಸಿ ಭಸ್ಮವ ಮಾಡಲು–ಶಂಕರನು ಮೋದ
ವೆರೆಸಿ ನುತಿಸಿ ಪೊಗಲು–ಸುರರು ನಲಿಯಲು
ತರಳ ಧ್ರುವನು ತಂದೆಯ ತೊಡೆಯೊಳಿರಲು–ಮಲತಾಯಿ ರೋಷಾ
ತುರದಿ ಬೈದು ಪೋಗೆಂದು ನೂಕಿಸಲು–ಸಂತಾಪಗೊಂಡು
ಭರದಿ ವನದಿ ತಪವನಾಚರಿಸಲು–ಪ್ರತ್ಯಕ್ಷನಾಗಿ
ನಿರುಪಮ ಮೂರ್ತಿಯನು ತೋರಿಸಲು–ಧ್ರುವನ ಪಾಲಿಸಲು
ಸುರವರರಹುದೆನೆ ವರಧ್ರುವಪದವಿಯ
ಸರಸದಿ ದಯವನು ಕರುಣಿಸಿದ ಹರಿ ॥ ॥೨॥

ದುರುಳ ದುಶ್ಶಾಸನನು ಸರಸಿಜಾಕ್ಷಿ ದ್ರೌಪದಿಯ
ಸೆರಗು ಹಿಡಿದು ಸೆಳೆಯಲಾಗ ನೆರೆದ ಸಭೆಯ ಜನರ ಬೇಡಿ
ತರಳೆ ಬಾಯಾರೆ ಬಾಲೆಯ–ಮೊರೆಯಲಾಲಿಸಿ
ಹಿರಿದು ಅಕ್ಷಯ ಸೀರೆಯ–ನಿತ್ತು ಮಾನವ
ಸ್ಥಿರದಿ ಕಾಯನೆ ಶ್ರೀಪ್ರಿಯ–ಕುರುವಂಶವ ಸಂ
ಹರಿಸನೆ ಪಾಂಡವಪ್ರಿಯ–ಸನ್ಮುನಿಗೇಯ ॥
ಸರಸಿಜಾಸನನಾಗಿ ಲೋಕವನು–ಸೃಜಿಸುವ ಸಿರಿ
ಯರಸನಾಗಿ ಪೋಷಿಪ ಶಂಕರನು–ತಾನಾಗಿ ಜಗವ
ಪರಿಹರಿಸುವ ಭಕ್ತವತ್ಸಲನು–ಇವನ ಪೊಗಳಲು
ಉರಗಾಧಿಪನಾಗದು ನೀನಿದನು–ತಿಳಿದು ಬಲ್ಲನು ॥
ಅರಿಯದವನಪರಿ ಇರುವನು ನೂತನಾ
ವರಣಪುರದ ಖಾದಿರಿ ನರಕೇಸರಿ ॥ ॥೩॥



**ಅರ್ಥವಿವರಣೆ :—**

ಶ್ರೀಕೃಷ್ಣನ ಭಕ್ತನಾದ ಸುಧಾಮನ ಸಾಧ್ವೀಮಣಿ ಸುಶೀಲಾದೇವಿಯು ತನ್ನ ಪತಿಯನ್ನು ಶ್ರೀಕೃಷ್ಣನೆಡೆಗೆ ಕಳುಹಿಸುವುದರಲ್ಲಿ ಯಶಸ್ವಿನಿಯಾಗಿ ಕೃಪಾಳುವಾದ ಶ್ರೀಕೃಷ್ಣನು ತಮ್ಮ ಕುಟುಂಬವನ್ನು ರಕ್ಷಿಸಲಾರನೇ—ಎಂದು ಪುರಾಣೇತಿಹಾಸಗಳಿಂದ ಅನೇಕ ದೃಷ್ಟಾಂತಪೂರ್ವಕ ಶ್ರೀಕೃಷ್ಣನನ್ನು ಸ್ತೋತ್ರ ಮಾಡುತ್ತಾಳೆ. ಅವಳ ಸ್ತೋತ್ರರೂಪವಾದ ವಿಷಯವೇ ಪ್ರಸಕ್ತ ಕೀರ್ತನಸಾಹಿತ್ಯದ ವಸ್ತು.

**ಪೊರೆಯಲಾರನೆ** = ನಮ್ಮ ಸಂಸಾರವನ್ನು ಸಂರಕ್ಷಿಸಲಾರನೇ, ದಯಾಳುವಾದ ಆ ವಿಶ್ವಕುಟುಂಬಿ ಶ್ರೀಕೃಷ್ಣ ! **ಪರಬ್ರಹ್ಮನು** = ಪರಾತ್ಪರ ವಸ್ತು—ಸರ್ವೋತ್ತಮನಾದ ಶ್ರೀಹರಿ. **ನರಗೊಲಿದವನ** = ಅರ್ಜುನನಿಗೆ ಒಲಿದು, **ತುರಗವ** = ಅವನ ರಥವನ್ನು ನಡೆಯಿಸಿದ, ಆ ಪಾರ್ಥಸಾರಥಿ. **ಪರಮಪುರುಷ** = ದೇವದೇವೋತ್ತಮನಾದ ಸರ್ವೋತ್ತಮ ವಸ್ತು. **ಪರಾತ್ಪರ** = ಪರನಾಮಕಳಾದ ಶ್ರೀಲಕ್ಷ್ಮಿಗಿಂತ ಅನಂತಕೋಟಿಗುಣಗಳಿಂದ ಉತ್ತಮನು.

**ಕರಿ** = ಗಜೇಂದ್ರ. **ಮಕರಿಗಾಗಿ** = ಮಡುವಿನಲ್ಲಿ ಮೊಸಳೆಯ ಬಾಯ್ಗೆ ಸಿಕ್ಕು. **ಸರಸಿಜಭವ** = ಶ್ರೀಹರಿಯ ನಾಭಿಕಮಲಸಂಜಾತನಾದ ಬ್ರಹ್ಮ. **ಭವಾದಿ ಸುರರ** = ಭವನಾಮಕರಾದ ಶ್ರೀರುದ್ರದೇವರು ಮೊದಲಾದ ದೇವತೆಗಳನ್ನು. **ನಕ್ರನ** ಮೊಸಳೆಯ. **ಗಂಧರ್ವನ** = ಹೂಹೂ ಎಂಬ ಗಂಧರ್ವನು ಶಾಪಗ್ರಸ್ತನಾಗಿ ಮೊಸಳೆಯ ಜನ್ಮತಾಳಿದ್ದ. **ಸುತನ್ನ** = ಹರಿಯೇ ಸರ್ವೋತ್ತಮ. ಸರ್ವತ್ರವ್ಯಾಪಕ ಎಂದು— ಉದ್ಘೋಷಿಸಿದ ಬಾಲಕ ಪ್ರಹ್ಲಾದನನ್ನು – **ಬಾಧೆಯೊಳಿಟ್ಟು** = ಅವನ ತಂದೆಯಾದ ಹಿರಣ್ಯಕಶಿಪು ನಾನಾವಿಧವಾದ ಹಿಂಸೆಗಳಿಗೆ ಗುರಿಮಾಡಿ, **ಉರವ ಬಗೆಯನೆ**- ಅವನ ಹೊಟ್ಟೆಯನ್ನು ಬಗೆಯಲಿಲ್ಲವೇ? **ಸುಮನ್ನಸರಿಂದ**= ದೇವತೆಗಳಿಂದ, **ಲೋಕಪಾವನ್ನ** = ಲೋಕದಲ್ಲಿ ಪವಿತ್ರತಮ

ವಸ್ತುವಾದ ಪಾವನ್ನ ಚರಿತನಾದ ಪರಮಾತ್ಮನು, **ಕರುಣಾಭರಣ** = ದಯೆಯನ್ನೇ ಆಭರಣವನ್ನಾಗಿ ಉಳ್ಳವನು. **ಸುಚರಣ** = ವಜ್ರಾಂಕುಶಾದಿ ಚಿಹ್ನೆಗಳಿಂದ ಅಲಂಕೃತವಾದ ಅಪ್ರಾಕೃತ ಚರಣಾರವಿಂದಗಳು. **ಭವ ಹರಣ** = ಶರಣಾಗತರಾದ ಭಕ್ತರ ಸಂಸಾರವನ್ನು ಪರಿಹರಿಸುವ ಪ್ರಭು. **ಗಿರಿಧರನು** = ಗೋವರ್ಧನೋದ್ಧಾರಿ ಶ್ರೀಕೃಷ್ಣ (ಮಂದಗಿರಿ ಧಾರಿಯಾದ ಕೂರ್ಮ)

**ದನುಜ** = ಆ ಭಸ್ಮಾಸುರನು. **ಅವನಿಂದಲವನ ಉರಿಸಿ** = ಮೋಹಿನೀರೂಪದಿಂದ ಶ್ರೀಹರಿಯು ಭಸ್ಮಾಸುರನನ್ನು ಕಾಮವಶನನ್ನಾಗಿ ಮಾಡಿ, ಅವನ ಕೈಯ್ಯನ್ನು ಅವನ ತಲೆಯ ಮೇಲೆಯೇ ಇಡುವಂತೆ ಮಾಡಿ, ಅವನನ್ನು ಸುಟ್ಟು ಭಸ್ಮಗೊಳಿಸಿದ ಪ್ರಸಂಗ.

**ಮಲತಾಯಿ** = ಧ್ರುವನ ಮಲತಾಯಿಯಾದ ಸುರುಚಿ. **ನಿರುಪಮ ಮೂರ್ತಿಯು** = ಅಸದೃಶಮಹಿಮಾಸಂಪನ್ನನಾದ ಶ್ರೀಮನ್ನಾರಾಯಣ. **ಸರಸಿಜಾಕ್ಷಿ** = ಕಮಲದಳದಂತೆ ವಿಶಾಲನೇತ್ರೆಯಾದ ದ್ರೌಪದಿ. **ತರಳೆ ಬಾಯಾರೆ** = ಅಬಲೆಯಾದ ಅವಳು ಬಾಯ್ದೆರೆದು ಕೃಷ್ಣಾ ತೆರಳಿ ಎನಲು. **ಸರಸಿ ಜಾಸನನಾಗಿ** = ನಾಭೀಕಮಲಸಂಜಾತನಾದ ಬ್ರಹ್ಮನ ಅಂತರ್ಯಾಮಿಯಾಗಿದ್ದು ಬ್ರಹ್ಮಶಬ್ದವಾಚ್ಯನಾಗಿ ಬ್ರಹ್ಮನ ದ್ವಾರಾ ಬ್ರಹ್ಮಾಂಡವನ್ನು ಸೃಷ್ಟಿಸುವವನು, **ಸಿರಿಯರಸನಾಗಿ** = ಲಕ್ಷ್ಮೀಪತಿಯಾಗಿ ಸಾಕ್ಷಾತ್ ವಿಷ್ಣುರೂಪದಿಂದ ನೃಜ್ಯಲೋಕವನ್ನು ರಕ್ಷಿಸುವವನು, **ಶಂಕರನು ತಾನಾಗಿ** = ರುದ್ರಾಂತರ್ಗತನಾಗಿದ್ದು, ರುದ್ರನಾಮಕನಾಗಿ ರುದ್ರನ ದ್ವಾರಾ ಜಗತ್ತಿನ ಲಯಕ್ಕೆ ಕಾರಣನಾಗುವವನು, **ಉರಗಾಧಿಪಗಾಗದು** = ಇಂತಹ ಅಪಾರಮಹಿಮಾಸಂಪನ್ನನ ಅನಂತಕಲ್ಯಾಣಗುಣಗಳನ್ನು ಸ್ತೋತ್ರ ಮಾಡಲು ಸಹಸ್ರ ಹೆಡೆಯುಳ್ಳ ಸರ್ಪಶ್ರೇಷ್ಠವಾದ ಆದಿಶೇಷನಿಗೂ ಅಸಾಧ್ಯ. **ನೂತನಾವರಣಪುರದ** = ಹೊಸಕೋಟೆ, ಕೋಲಾರಜಿಲ್ಲೆಯಲ್ಲಿರುವ ಹೊಸಕೋಟೆಯು ಕವಿಕುಲತಿಲಕ ಶ್ರೀತಿಪ್ಪಣಾರ್ಯನ ಜನ್ಮಸ್ಥಳ (ನೂತನ–ಹೊಸ, ಆವರಣ–ಕೋಟೆ). **ಕಪರಿಯ ನರಸಿಂಹನೇ** = ಅವನ

ಆರಾಧ್ಯ ದೈವ ಅವನ ಅಂಕಿತನಾಮದಲ್ಲಿಯೇ ಗ್ರಂಥವನ್ನು ರಚಿಸಿ ನರಸಿಂಹನ ಚರಣಕಂಜಗಳಿಗೆ ಅರ್ಪಿಸಿದ್ದಾನೆ–ಆ ಕವಿವರ್ಯ.

೩೩೭

(ಕವಿಶಿಷ್ಟಣ್ಣಾರ್ಯವಿರಚಿತ–ಕುಚೇಲೋಪಾಖ್ಯಾನದಿಂದ)

ರಾಗ–ಶಂಕರಾಭರಣ ಅಟ್ಟತಾಳ

ಕಂಡೆನು ಶ್ರೀಕೃಷ್ಣನ ಕಂಡೆನು ॥ ॥ಪ॥

ಕಂಡೆನನಂತ ಬ್ರಹ್ಮಾಂಡಸಂರಕ್ಷನ
ಪುಂಡರೀಕಾಕ್ಷನ ಪಾಂಡವಪಕ್ಷನ ॥ ॥ಅ॥

ಅರೆಬಿರಿದರುಣ ಸಾರಸವ ಮೃದು
ತರ ತಳಿರುಗಳ ಸರಸವ ಗೆಲ್ವ
ಶರಣರಿಗತಿ ಶುಭಕರವನೀವ
ಕಿರುಗೆಜ್ಜೆ ಕಡಗ ಭಾಸುರ ಸರವಣಿಗಳಾ
ಭರಣದಿಂದೆಸೆವ ಶ್ರೀಚರಣಯುಗ್ಮಂಗಳ ॥ ॥೧॥

ಪೊಳೆವ ಪ್ರವಾಳಲತೆಗಳ ನಿಂದೆ
ಗೊಳಿಪ ಪಂಕ್ತಿಗಳಂಗುಳಿಗಳ ತಾರೆ
ಗಳ ಹೊಳವುಳ್ಳ ಘಾಳಿಗಳ ಪೋಲ್ವ
ಇಳೆಯೊಳಗುಳ್ಳ ಭವಗಳ ಕಳವಳಗಳ
ಕಳೆವ ಗಂಗೆಯ ಪೆತ್ತುಜ್ವಲ ನಖಾವಳಿಗಳ ॥ ॥೨॥

ಅಂಕುಶ ಧ್ವಜ ವಜ್ರರೇಖ ಗಂಧ
ಪಂಕ ಶ್ರೀಗೈದಭೀಷೇಕ ಕುಚ
ಕುಂಕುಮಾಂಕಿತ ಶುಭಾನೀತ ವೀಪ
ಪೊಂಕದ ಗರುಡನ ಬಿಂಕದ ಹೆಗಲೊಳ
ಲಂಕಾರಮಾದಕಳಂಕ ಪಾದತಳವ ॥ ॥೩॥

ಬಾಗಿಸಿ ಶಿರವ ಕೂರ್ಮಗಳ ಗೆಲ್ವ
ಮೇಗಾಲುಗಳ ಸೊಗಸುಗಳ ನವ್ಯ
ಮೋಗದಂತಿಹ ಹರಡುಗಳ ಬಂದು
ತಾಗಿದ ದನುಜರ ಬೇಗದಿಂದಲಿ ಗೆಲಿ
ದಾಗ ತಾಳಿದ ಗಂಡು ಪೆಂಡ್ಯದ ಬಿರುದಿನ ॥ ॥೪॥

ಸ್ಮರಕಾರ ಕಹಳಿ ಯುಗ್ಮಗಳ ಜಲ
ಚರಗಳ ದೇಹಭಾವಗಳ ಗೆಲ್ವ
ನಿರುಪಮ ಜಾನುದ್ವಯಗಳ ಪೋಲ್ವ
ಉರುಟು ಕದಳಿ ಮರ ಕರಿಕರಗಳ ಸೋಂಕಿ
ದಿರವ ನೇಡಿಪ ಪೀವರದ ತೊಡೆಗಳನು ॥ ॥೫॥

ಕ್ಷಿತಿಚಕ್ರ ಸೈಕತಾದಿಗಳ ತಿರ
ಸ್ಕೃತವ ಮಾಡುವ ಜಘನಗಳ ಭೃಗು
ಪತಿನಾಥ ಸೂಕ್ಷ್ಮವಸ್ತ್ರಗಳ ಸೋಲ್ವ
ಆತುಲಿತ ಕಟಿತಟ ಪ್ರತಿರಾಹುತದ್ಭುತ
ದ್ಯುತಿಯುತ ಹೇಮನಿರ್ಮಲ ಪೀತವಸನವ ॥ ॥೬॥

ಕಾಳಾಹಿಸುತರ ಸೋಲಿಸುವ ಸತ್ಪಿ
ಪೀಲಿಕಾವಳಿಗಳ ನಗುವ ದಿವ್ಯ
ನೀಲಮಾಣಿಕ ಸಾಲಪೊಳೆವ ಸುರ

ರಾಲಯುವಾದ ಸದಾ ಲಲಿತಾನ್ವಿತ
ಲಾಲಿತವಹ ರೋಮರಾಜಿಯು ಬೆಡಗಿನ ॥ ॥೭॥

ಪಾನೀಯದೆಳೆ ಸುಳಿಯಿಂದ ಅತಿ
ಮಾನಿತ ಗಂಭೀರದಿಂದವರ
ನಾನಾ ಚರಾಚರ ವೃಂದವನಿ
ಧಾನಿಸಿ ಸೃಜಿಪ ನವೀನ ಚತುರ ಚತು
ರಾಸನ ಜನಿತ ನಾಭೀನಳಿನವನೀಗ ॥ ॥೮॥

ನಳಿನಜಾಂದತಿಮೃದುತರವು ವಾಲಿ
ದಳಕಿಂದಧಿಕ ಶುಭಕರವು ತೆರೆ
ಗಳ ಪೋಲ್ವ ತ್ರಿವಳಿ ಬಂಧುರವು ಭವ್ಯ
ನಳಿನಜಾಂಡ ಕೋಟಿಗಳ ತನ್ನೊಳಗಿಟ್ಟು
ಪೊಳೆಯುತಲಿರುತಿಹ ಪೊಳೆವ ಮೇಲುದರನ್ನ ॥ ॥೯॥

ಆ ಲೋಲವನಮಾಲೆ ಧರಿಸಿ ತುಲ
ಸೀ ಲಲಿತ ಸರವೆರೆಸಿ ಕೌಸ್ತು
ಭಾಲಂಕೃತವನಳವಡಿಸಿ ರುಚಿ
ರಾಲಯ ಶ್ರೀವತ್ಸವೈಜಯಂತೀಯುತ
ಶ್ರೀಲಕ್ಷ್ಮಿಯುದರ ವಿಶಾಲವಕ್ಷವನೀಗ ॥ ॥೧೦॥

ನಿರುಪಮವಾದ ಹಸ್ತಗಳು ನಾಲ್ಕು
ವರಗಜಹಸ್ತ ಬಾಹುಗಳು ಚಾರು
ತರಮಣಿ ಕನಕಯುಕ್ತಗಳು ರತ್ನ
ದೆರಕದ ಭುಜಕೀರ್ತಿ ಸರಪಣಿ ಕಡಗವು
ಬಿರುದಿನ ಕಂಕಣ ವರಮಣಿ ಬಂಧಗಳ್ ॥ ॥೧೧॥

ಪೊಳೆವ ಮೂರೇಖೆಯು ಚಂದ ಲಕ್ಷ್ಮಿ
ಯೊಲಿದು ಪೂಸಿದ ದಿವ್ಯಗಂಧ ಹೊಳೆ
ಹೊಳೆವ ಭೂಷಣಂಗಳಿಂದ ಮಾದ
ಸುಲಲಿತ ಶಂಖವ ಗೆಲುವ ಸೊಬಗಿನಿಂದ
ಚೆಲುವಾದ ಮಂಗಳ ಗಳದ ಸಂಭ್ರಮವನ್ನು ॥ ॥೧೨॥

ದರ ಸುದರುಶನ ಪಂಕಜದ ರೇಖೆ
ವೆರೆಸಿದ ಶುಭಕರತಲದ ಮೃದು
ತರ ಕರುಣಾಬ್ಜಪಲ್ಲವದ ಕಾಂತಿ
ಭರಿತ ಪೊನ್ನುಂಗುರ ಬೆರಳು ಸೆಳ್ಳುಗುರ್ಗಳ
ವರ ಶಂಖ ಚಕ್ರ ಪಂಕೇರುಹ ಗದಾದಿಗಳ್ ॥ ॥೧೩॥

ಪಡಿಯಿಲ್ಲ ಚುಬುಕಾಗ್ರನ್ಯಾರ ಚೆಲ್ವ
ಕುಡಿಮೀಸೆಗಳ ಶೃಂಗಾರ ಬರೆ
ದಡೆ ಬಾರದಿಹ ಶ್ರೀಕಾರ ಕರ್ಣ
ದೊಡನೆ ಮಾತಾಡುವೆರಡು ರತ್ನಕುಂಡಲ
ದೆಡೆಯು ಕಪೋಲದ ಬೆಡಗಿನ ಬೆಡಗನ ॥ ॥೧೪॥

ಮುರಳಿಮಾಡಿದ ಪುಣ್ಯನಿಧಿಯೋ ನಮ್ಮ
ಸಿರಿ ಲಕ್ಷ್ಮಿಯುಂಟಿದ ಸುಧೆಯೋ ರುಚಿ
ಕರಗಳು ಜನಿಸಿದ ಮನೆಯೋ ಕೋಟಿ
ಅರುಣ ಕಿರಣದ ಲಹರಿಯು ಪ್ರವಾಳದ
ಪರಿಯು ನಿಂದಿಪ ಬಿಂಬಾಧರದ ವಿಲಾಸದ ॥ ॥೧೫॥

ಕುಂದಪಂಕ್ತಿಯು ಪೋಲ್ವ ರದನ ಪೂರ್ಣ
ಚಂದಿರನ ಗೆಲ್ವ ವದನ ಮಂದ
ಮಂದಸ್ಮಿತಗಳಿಗೆ ಸದನ ಗಿಳಿ

ವೃಂದವ ಕೋಕಿಲವೃಂದವನು ಮಕ
ರಂದ ಸುಧಾಬ್ಧಿಯ ನಿಂದಿಸಿ ನುಡಿವನ ॥ ॥೧೬॥

ತಿಲಕ ಸುಮದಗಂಧ ಪರಿಯ ನಾಗ
ಗೊಳಿಸುವ ನಾಸಿಕ ಪರಿಯ ಮುಕ್ತಾ
ಫಲದಲಂಕಾರದ ಸಿರಿಯ ಭವ್ಯ
ಜಲಚರಂಗಳ ನೈದಿಲೆಯ ಸಾರಂಗ ಚಂ
ಚಲ ಸೂರ್ಯಚಂದ್ರರ ಗೆಲುವ ಲೋಚನಗಳ ॥ ॥೧೭॥

ಸ್ಮರಧನು ಶೋಭಾಯಮಾನ–ಸುರ
ವರನ ಕಾರ್ಮುಕದ ಸಮಾನ–ಚಿತ್ರ
ಬರೆಯಲರಿಯದು ಸಮಾನ–ಮಾಗಿ
ಇರುವ ಭ್ರೂಭಾಗದೋಳ್ ಬರಿ ಬಾಲಶಶಿಯಂತೆ
ಮೆರೆವ ಫಾಲದಲಿ ಕಸ್ತೂರಿಯ ನಾಮದ ಮುದ್ದು ॥ ॥೧೮॥

ನವಭೃಂಗಾಲಕದ ಲಲಾಟ–ನವ್ಯ
ನವರತ್ನಖಚಿತ ಕಿರೀಟ–ಕೋಟಿ
ರವಿಶಶಿಗಳ ಕಾಂತಿಕೂಟ–ಕಣ್ಗ
ಳಿವೆಗೂಡ ವೀಕ್ಷಿಸಿ ಪ್ರವಿಮಲ ರುಚಿರದು
ತ್ಸವದಿ ಶಿಖೆಯೊಳೊಪ್ಪುವ ಪುಷ್ಪಸರಗಳ ॥ ॥೧೯॥

ಸರ್ವಾಂಗ ಸುಂದರಪೂರ್ಣ–ನವ
ದೂರ್ವಾದಳ ಶ್ಯಾಮವರ್ಣ–ಸುರ
ಸಾರ್ವಭೌಮಕ ಸುಪ್ರಸನ್ನ–ನಾಗಿ
ದುರ್ವಾರ ಕಂಸಾದಿ ಗರ್ವಿತರನು ಕೊಂದ
ಸರ್ವತಂತ್ರಸ್ವತಂತ್ರನ ಗೀರ್ವಾಣವಂದ್ಯನ ॥ ॥೨೦॥

ದೇವಕಿ ದೇವಿಯ ಪುತ್ರ–ಪಾಂಡು
ಭೂವರತನುಜರ ಮಿತ್ರ–ದುಷ್ಟ
ಕವುರವಾ (ಕೌರವಾ) ಟವಿ ವೀತಿಹೋತ್ರ–ನಾಗಿ
ಪಾವನ ಭಕ್ತರ ಜೀವ ಮಿತ್ರನಾದ
**ಶ್ರೀವರ ಖಾದ್ರಿ ನೃಸಿಂಹನ** ರೂಪವ ॥ ॥೨೧॥



**ಅರ್ಥವಿವರಣೆ : –**

ಭಕ್ತೋತ್ತಮನಾದ ಕುಚೇಲನು ದ್ವಾರಕಾನಗರದಲ್ಲಿ ಶ್ರೀಕೃಷ್ಣನು ಗೃಹದಿಂದ ಶ್ರೀಕೃಷ್ಣನ ಸಂದರ್ಶನ–ಸೌಭಾಗ್ಯವನ್ನು ಪಡೆದಿದ್ದಾನೆ. ಆ ದಿವ್ಯಮಂಗಳವಿಗ್ರಹನನ್ನು ಕಣ್ಣುತುಂಬಾ ನೋಡುತ್ತಿದ್ದಾನೆ. ಹೃದಯ ಭಕ್ತಿಭಾವದಿಂದ ತುಂಬಿಬಂದಿದೆ. ಆನಂದಾಶ್ರುಗಳು ಸುರಿಯುತ್ತಿವೆ. ಆ ಸಾಕ್ಷಾತ್ ಮನ್ಮಥಮನ್ಮಥನನ್ನು ಆಪಾದಮಸ್ತಕಪರ್ಯಂತ ವರ್ಣಿಸುತ್ತಾನೆ. ಕವಿತಿಲಕ ಶ್ರೀತಿಪ್ಪಣ್ಣಾರ್ಯನು ಪ್ರತಿನುಡಿಯಲ್ಲೂ ರೂಪಕಾಲಂಕಾರವನ್ನು ಉಪಯೋಗಿಸಿದ್ದಾನೆ. ಅವನ ವರ್ಣನಾವೈಖರಿ ಅಸದೃಶವಾಗಿದೆ. ಅಂತಹ ಕರುಣಾಕರ ಶ್ರೀಕೃಷ್ಣನನ್ನು ಕವಿಯ ಕಣ್ಣಿನಿಂದ ನೋಡೋಣ.

**ಅನಂತಬ್ರಹ್ಮಾಂಡ ಸಂರಕ್ಷನ** = ಅನಂತಕೋಟಿಬ್ರಹ್ಮಾಂಡ ನಾಯಕನು ಆ ಅಪ್ರಮೇಯನು. ಅಂತಹ ಅನೇಕ ಬ್ರಹ್ಮಾಂಡಗಳ ಸಂರಕ್ಷನು. **ಪುಂಡರೀಕಾಕ್ಷನ** = ಕಮಲದಳದಂತೆ ವಿಶಾಲನೇತ್ರನು. (ಪುಂಡರೀಕ–ಕಮಲಪುಷ್ಪ). **ಅರೆಬಿರಿದ ಅರುಣ ಸಾರಸವ** = ಅರ್ಧ ಅರಳಿದ ಕೆಂಪು ವರ್ಣದ (ಅರುಣವರ್ಣ) ಕಮಲ. **ಮೃದುವರ ತಳಿರುಗಳ** = ಕೋಮಲವಾದ ಚಿಗುರು, ಅರೆಬಿರಿದ ಅರುಣಸಾರಸ ಮತ್ತು ಮೃದುವರ ಚಿಗುರಿನ ಮೃದುತ್ವ ಕೋಮಲತ್ವವನ್ನು **ಮೀರಿಸುವ**

ಶ್ರೀಹರಿಯು ಚರಣಯುಗ್ಮಗಳು. **ಶುಭಕರವ ನೀವ** = ಶರಣಾಗತ ರಾದವರಿಗೆ ಮಂಗಳಪ್ರದವಾದ. **ಕಿರುಗೆಜ್ಜೆ ಕಡಗ** = ಸಣ್ಣಗೆಜ್ಜೆ ಗಳನ್ನುಳ್ಳ ಕಾಲಿನ ಕಡಗ. **ಭಾಸುರಸರಪಣಿಗಳ** = ಸುಂದರವಾದ ಕಾಲಿನ ಸರಪಳಿಯ ಸೊಗಸು. **ಎಸೆವ** = ಈ ರೀತಿಯ ಚರಣಾಭರಣ ಗಳಿಂದ ಅಲಂಕೃತವಾದ ಶ್ರೀಕೃಷ್ಣನ ಚರಣಾರವಿಂದಗಳನ್ನು ನೋಡಿದ.

**ಪ್ರವಾಳಲತೆಗಳ** = ಹವಳದ ಬಳ್ಳಿಯನ್ನು ನಾಚಿಸುವ. **ಪಂಕ್ತಿ ಗಳ ಅಂಗುಳಿಗಳ** = ಕಾಲಿನ ಬೆರಳುಗಳಿಗೆ ಹಾಕಿಕೊಂಡಿರುವ ಬೆರಳಿನ ಉಂಗುರದ ಸಾಲುಗಳು. **ತಾರೆಗಳ ಹೊಳಪುಳ್ಳ** = ಆಕಾಶದಲ್ಲಿ ಬೆಳ ಗುತ್ತಿರುವ ಪ್ರಕಾಶಮಾನವಾದ ನಕ್ಷತ್ರಗಳ ಮಾಲೆಗಳ ಹೊಳಪು. **ಥಾಳ ಗಳ ಪೋಲ್ವ** = ಶ್ವೇತವರ್ಣದ ಮಣಿಗಳ ಹೊಳಪು. **ಇಳೆಯೊಳಗೆ** = ಈ ಭೂಮಿಯಲ್ಲಿ. **ಅಗ್ಗಳ** = ಅಧಿಕವಾದ. **ಭವಗಳ ಕಳವಳ ಗಳ** = ಸಾಂಸಾರಿಕ ದುಃಖಗಳನ್ನು. **ಗಂಗೆಯ ಪೆತ್ತ** = ಗಂಗಾಪಿತ ನಾದ ಶ್ರೀಹರಿಯು. **ಉಜ್ವಲ ನಖಾವಳಿಗಳ** = ಪ್ರಕಾಶಿಸುತ್ತಿರುವ ಉಗುರುಗಳ ಸಾಲುಗಳು. ಈ ನುಡಿಯಲ್ಲಿ ಕವಿಯು ಶ್ರೀಕೃಷ್ಣನ ಕೋಮಲ ವಾದ ಚರಣಯುಗ್ಮಗಳನ್ನು ಸಾಲಂಕಾರವಾಗಿ ಸ್ತೋತ್ರ ಮಾಡಿದ್ದಾನೆ.

**ಅಂಕಶ ಧ್ವಜ ವಜ್ರರೇಖೆ** = ಶ್ರೀಹರಿಯ ಚರಣತಳದಲ್ಲಿರುವ ಚಿಹ್ನೆಗಳು. **ಶ್ರೀಗೈದ ಅಭಿಷೇಕ** = ಶ್ರೀಲಕ್ಷ್ಮೀದೇವಿಯು ಶ್ರೀಹರಿಗೆ ಮಾಡಿದ ಗಂಧಾಭಿಷೇಕ (ಪಾದಾಭಿಷೇಕ). **ಕುಚ ಕುಂಕುಮಾಂಕಿತ** = ಕುಂಕುಮದಿಂದ ಅಲಂಕೃತವಾದ (ಲಕ್ಷ್ಮಿಯ ಆಲಿಂಗನದಿಂದ) **ಶುಭಾ ನೀಕ ನೀತ** = ಮಂಗಳಸಮೂಹಗಳನ್ನುಂಟುಮಾಡುವ (ಅನೀಕ– ಗುಂಪು, ಸಮೂಹ). **ಪೊಂಕದ ಗರುಡನ** = ಸುವರ್ಣಾತ್ಮಕವಾದ ರೆಕ್ಕೆಗಳುಳ್ಳ (ಸುವರ್ಣ) ಗರುಡದೇವರ. **ಅಕಳಂಕ** = ನಿರ್ದೋಷವಾದ.

**ಮೇಗಾಲುಗಳ** = ಚರಣದ ಮೇಲಿನ ಕಾಲಿನ ಭಾಗ. **ಸೊಗಸು ಗಳ** = ಅವೆಯ ಚಿಪ್ಪು ನುಣುಪಾಗಿ, ನೀಳವಾಗಿರುತ್ತದೆ. ಅಂತೆಯೇ ಶ್ರೀಕೃಷ್ಣನ ಮೇಗಾಲುಗಳ ಮೀನಖಂಡಗಳ ವೈಭವ. **ನವ್ಯ ಮೋಗ**

**ದಂತಿಹ ಹರಡು** = ನಿತ್ಯ ನೂತನವಾಗಿ ಕಾಣುವ ಶ್ರೀಕೃಷ್ಣನ ವಿಸ್ತಾರವಾದ ಮೊಣಕಾಲು. **ದನುಜರ** = ಅಂತಹ ಮೊಣಕಾಲಿನಿಂದ ದೈತ್ಯರ ಗರ್ವಭಂಗ ಮತ್ತು ಸಂಹಾರಗಳನ್ನು ಮಾಡಿದ ಶ್ರೀಕೃಷ್ಣನ ಪಾದವಿಶೇಷ. **ಪೆಂಡ್ಯದ ಬಿರುದಿನ** = ಚರಣಾಭರಣ.

**ಜಲಚರಗಳ** = ನೀರಿನಲ್ಲಿ ಸಂಚರಿಸುವ ಮೀನು ಮುಂತಾದ ಪ್ರಾಣಿಗಳ ಶರೀರವು ನೀಳವಾಗಿರುವುದು ಅದರಂತೆ ಶ್ರೀಕೃಷ್ಣನ ಮೊಣಕಾಲು (ಜಾನುದ್ವಯಗಳು) ನೀಳವಾಗಿ ಪುಷ್ಟವಾಗಿವೆ. **ಸ್ಮರಕಾರ ಕಹಳೆ** = ಮನ್ಮಥನ ವಿಲಾಸವನ್ನು ಮೀರಿಸುವ ಸೌಂದರ್ಯ ಅವನದು (ಕಹಳೆ= ಕಹಳೆ–ತುತ್ತೂರಿ. ಅಂದರೆ ಮನ್ಮಥನ ಲಾವಣ್ಯದ ವಿವರ). **ಉರುಟು** = ದುಂಡಾಗಿರುವ. **ಕದಳಿಯ ಮರ** = ಬಾಳೆಯ ಗಿಡ. **ಕರಿ ಕರಗಳ** = ಆನೆಯ ಸೊಂಡಿಲು. ಆನೆಯ ಸೊಂಡಿಲಿನಂತೆ ನೀಳವಾಗಿ, ಬಾಳೆಯ ದಿಂಡಿನಂತೆ ಗುಂಡಾಗಿರುವ ಶ್ರೀಕೃಷ್ಣನ ಉಬ್ಬಿದ (ಪೀವರ) ತೊಡೆಗಳು **ಜಘನಗಳ** = ಶ್ರೀಹರಿಯ ತೊಡೆಗಳ ವರ್ಣವಿನ್ಯಾಸ. ಶುಭ್ರವಾದ ಮರಳು (ಸೈಕತಾದಿಗಳ) ಮತ್ತು ಗ್ರಹಗಳ ಪ್ರಕಾಶ(ಕ್ಷಿತಿಚಕ್ರ) ವನ್ನೂ ತಿರಸ್ಕರಿಸುವಂತಹುದು. **ಭೃಗುಪತಿ** = ಭೃಗುಕುಲೋದ್ಭವನಾದ ಶ್ರೇಷ್ಠ ಪರಶುರಾಮ (ಭಾರ್ಗವ) (ಅಥವಾ ಭಾರ್ಗವೀಪತಿ ಶ್ರಿಹರಿ) ಶ್ರೀಮನ್ನಾರಾಯಣನ ನಾಭೀಪ್ರದೇಶವು ಜಗತ್ತಿನ ಸೃಷ್ಟಿಗೆ ಮೂಲಸ್ಥಾನ. ನಾಭೀಕಮಲಸಂಜಾತರು ಬ್ರಹ್ಮದೇವರು. ಅವರ ದ್ವಾರಾ ಬ್ರಹ್ಮಾಂಡದ ಸೃಷ್ಟಿ. **ಸೂಕ್ಷ್ಮವಸ್ತುಗಳ** = ಮೂಲಪ್ರಕೃತಿಯ ಸೂಕ್ಷ್ಮವಸ್ತುಗಳು ಶ್ರೀಹರಿಯ ಇಚ್ಛೆಯಿಂದ ವಿಕಾರವೈದಿ ತತ್ತ್ವಗಳ ಸೃಷ್ಟಿ. ತತ್ತ್ವಗಳಿಂದ ಜಗತ್ತಿನ ಉದಯ. **ಅತುಲಿತ ಕಟಿತಟ** = ಅಸದೃಶವಾದ ಸೊಂಟಪ್ರದೇಶ. **ಹೇಮನಿರ್ಮಲ** = ಶುದ್ಧವಾದ ಚಿನ್ನದಿಂದ ತಯಾರಿಸಲ್ಪಟ್ಟ. **ಪೀತವಸನ** = ಪೀತಾಂಬರವು **ಕಾಳಾಹಿಸುತರ** = ಕಪ್ಪುವರ್ಣದ ಸರ್ಪಗಳ ಮರಿಗಳನ್ನು ಸೋಲಿಸುವ (ಕಾಳ–ಕಪ್ಪು. ಅಹಿ– ಸರ್ಪ). **ಸತ್ಪಿಪೀಲಿಕಾವಳಿಗಳ** = ಒಳ್ಳೆಯ ಇರುವೆಗಳ ಸಾಲನ್ನು ಧಿಃಕರಿಸುವ (ಕಪ್ಪು ಇರುವೆಗಳು). **ದಿವ್ಯನೀಲಮಣಿ** = ಭವ್ಯವಾದ

ನೀಲಮಣಿಗಳ ಮಾಲಿಕೆಯನ್ನು ಹೋಲುವ, **ಸುರರಾಲಯು** – ದೇವತೆಗಳ ನಿವಾಸಸ್ಥಳವಾದ ಸ್ವರ್ಗ. **ರೋಮರಾಜಿಯು ಬೆಡಗಿನ** = ಕೂದಲಿನ ಸೊಬಗನ್ನು. ಇಲ್ಲಿ ಕವಿಯು ಶ್ರೀಕೃಷ್ಣನ ವಿಶಾಲವಾದ ಎದೆಯ ಮೇಲೆ ಸುಂದರವಾಗಿ ಬೆಳೆದಿರುವ ರೋಮರಾಶಿಗಳನ್ನು ಕಪ್ಪು ಹಾವಿನ ಮರಿಗಳ ಮತ್ತು ಕಪ್ಪು ಇರುವೆ ಸಾಲಿಗೂ ಹೋಲಿಸಿದ್ದಾನೆ.

ಶ್ರೀಕೃಷ್ಣನ ನಾಭೀಸ್ಥಳದ ವರ್ಣನೆ ಮುಂದಿನ ನುಡಿಯಲ್ಲಿದೆ. **ಪಾನೀಯದೆಳೆಸುಳಿ** = ತಿಳಿನೀರಿನ ಸುಳಿಗಳಂತೆ. **ಅತಿಮಾನಿತ** = ಅತ್ಯಂತ ಶ್ರೇಷ್ಠವಾದ. **ನಾನಾ ಚರಾಚರವ್ಯಂದವ** = ವಿಧವಿಧವಾದ ಜೀವ ಜಡಾತ್ಮಕಪ್ರಪಂಚವನ್ನು ಸೃಷ್ಟಿಸುವ ಶ್ರೀಹರಿಯ ನಾಭೀ ಪ್ರದೇಶವು ಜಗತ್ತಿನ ಅತ್ಯಾಶ್ಚರ್ಯಕರವಾದ ಸೃಷ್ಟಿಗೆ ಮೂಲಸ್ಥಾನವು. ಆವನ ಇಚ್ಛೆಯಿಂದ ಉತ್ಪತ್ತಿಯಾದ ಸುವರ್ಣಾತ್ಮಕನಾಭೀಕಮಲದಲ್ಲಿ ಸಂಜಾತನಾದ ಬ್ರಹ್ಮನ ದ್ವಾರಾ ಜಗತ್ತಿನ ಸೃಷ್ಟಿ. **ನಾಭೀನಳಿನ** = ನಾಭೀ ಕಮಲ.

**ನಳಿನಂಕಿತ ಅತಿಮೃದು** = ಕಮಲಪುಷ್ಪದ ದಳಗಳಿಗಿಂತ ಮೃದುವಾದ. **ವಾಲಿದಳೆಕಿಂಥರ** = ಬಾಲದ ಕೂದಲಿನ ಎಳೆಗಿಂತ ಸೂಕ್ಷ್ಮವಾದ (ವಾಲ–ಬಾಲ. ವಾಲಿ–ತತ್ಸಂಬಧೀ) **ತ್ರಿವಳಿ ಬಂಧುರವು** = ಶ್ರೀಹರಿಯ ಉದರದ ಮೇಲೆ ನಾಭೀಪ್ರದೇಶದ ಸುತ್ತಲೂ ಇರುವ ತ್ರಿವಳಿಗಳ ಸೌಂದರ್ಯ (ಮೂರು ಸುರುಳಿಗೆರೆ). **ನಳಿನಜಾಂಡ ಕೋಟಿಗಳ** = ಬ್ರಹ್ಮಾಂಡಕೋಟಿಗಳ (ನಳಿನ–ನಾಭೀಕಮಲ. ನಳಿನಜ–ಅದರಲ್ಲಿ ಸಂಜಾತನಾದ ಬ್ರಹ್ಮ). ಅಂತಹ ಅನಂತಕೋಟಿಬ್ರಹ್ಮಾಂಡಗಳನ್ನು ತನ್ನ ಉದರದಲ್ಲಿ ಧರಿಸಿರುವ ವಿಶ್ವಂಭರಮೂರ್ತಿ.

ಮುಂದಿನ ನುಡಿಯಲ್ಲಿ ಶ್ರೀಕೃಷ್ಣನ ವಿಶಾಲ ವಕ್ಷವನ್ನು ವರ್ಣಿಸುತ್ತಾನೆ. **ಆ ಲೋಲ ವನಮಾಲ** – ಕುತ್ತಿಗೆಯಿಂದ ಇಳಿಬಿದ್ದು, ವಕ್ಷದ ಮೇಲೆ ಜೋಲಾಡುತ್ತಿರುವ ವನಮಾಲೆ (ಲೋಲ–ಲಾಸ್ಯ, ಓಲಾಡು). **ರಂಜಿ**

**ರಾಜಿಯ** = ಅತ್ಯಂತ ಮನೋಹರವಾದ. **ಶ್ರೀವತ್ಸ** = ಲಕ್ಷ್ಮೀ ದೇವಿಯು ಶ್ರೀವತ್ಸವೆಂಬ ಮಚ್ಚೆಯ ರೂಪದಲ್ಲಿ ಶ್ರೀಕೃಷ್ಣನ ಎಡವಕ್ಷ ಸ್ಥಳವನ್ನು ಅಲಂಕರಿಸಿದ್ದಾಳೆ. ಅವನ ವಿಶಾಲವಕ್ಷದ ಮೇಲೆ ವನಮಾಲೆ-ತುಳಸೀಹಾರ-ವೈಜಯಂತೀಮಾಲಾ-ಶ್ರೀವತ್ಸವೆಂಬ ಚಿಹ್ನೆ-ಕೌಸ್ತುಭವೆಂಬ ದಿವ್ಯಪದಕಗಳು ಅಲಂಕರಿಸಿವೆ.

ಮುಂದಿನ ನುಡಿಯಲ್ಲಿ ಅವನ ಆಗಲವಾದ ಹಸ್ತದ್ವಯಗಳು. ನೀಳವಾದ ಬಾಹುಗಳು, ನಾನಾಭರಣಗಳಿಂದ ಅಲಂಕೃತವಾದ ಚತುರ್ಭುಜಗಳನ್ನು ವರ್ಣಿಸುತ್ತಾನೆ. **ನಿರುಪಮವಾದ** = ಎಣೆಯಿಲ್ಲದ, **ವರ ಗಜಹಸ್ತ** = ಶ್ರೇಷ್ಠವಾದ ಗಂಡಾನೆಯ ಸೊಂಡಿಲಿನಂತೆ ನೀಳವಾಗಿರುವ ಬಾಹುಗಳು. **ಚಾರುತರಮಣಿ** = ಅತ್ಯಂತ ಸುಂದರವಾದ ಅಮೂಲ್ಯ ರತ್ನಗಳು. **ಕನಕಯುಕ್ತಗಳು** = ಚಿನ್ನದಾಭರಣಗಳಲ್ಲಿ ಝಡಿತವಾದ ಹರಳುಗಳು. **ಭುಜಕೀರ್ತಿ** = ಮಣಿಮಯ ಭಾಪುರಿಗಳು (ತೋಳ್ಬಲೆ) **ಬಿರುದಿನ ಕಂಕಣ** = ಮಣಿಖಚಿತ ಹಸ್ತಾಭರಣ. **ವರಮಣಿ ಬಂಥಗಳ** = ರತ್ನಖಚಿತ ಬಳೆಗಳು. ಮುಂದಿನ ನುಡಿಯಲ್ಲಿ ಶ್ರೀಕೃಷ್ಣನ ಸುಂದರ ಕಂಠಪ್ರದೇಶವನ್ನು ವರ್ಣಿಸುತ್ತಾನೆ. **ಲಕ್ಷ್ಮಿಯೊಲಿದು ಪೂಸಿದ** = ಶ್ರೀಲಕ್ಷ್ಮೀದೇವಿಯು ಅತ್ಯಂತ ಅನುರಾಗದಿಂದ ಹಚ್ಚಿದ ದಿವ್ಯಗಂಧದಿಂದ ಶೋಭಿತವಾದ ಸಿರಿಕಂಠ. **ಹೊಳೆವ ಭೂಷಣಗಳಿಂದ** = ಕತ್ತಿನಿಂದ ಇಳಿದು ಬಿದ್ದಿರುವ ನಾನಾ ಆಭರಣ ವಿಶೇಷಗಳು. **ಸುಲಲಿತ ಶಂಖವ ಗೆಲುವ** = ಕಡೆದ ಶಂಖದಂತಿದ ಶ್ರೀಕೃಷ್ಣನ ಕುತ್ತಿಗೆಯ ಮಾಟ. ಮುಂದಿನ ನುಡಿಯಲ್ಲಿ ಶಂಖ ಚಕ್ರಾದಿ ಆಯುಧಗಳಿಂದ ಅಲಂಕೃತವಾದ ಅವನ ಚತುರ್ಭುಜಗಳ ವರ್ಣನೆ. **ದರ** = ಸುದರ್ಶನವೆಂಬ ಚಕ್ರ. **ಪಂಕಜದ ರೇಖೆ** = ಕಮಲದ ರೇಖೆ, **ಮೃದುತರ ತರುಣಾಬ್ಜ** = ಕೋಮಲವಾದ ಎಳೆಯ ಕಮಲದದಳದಂತೆ. **ಪಲ್ಲವದ ಕಾಂತಿ** = ಚಿಗುರಿನ ಕೋಮಲತೆಯ ಪ್ರಕಾಶ. **ಪೊನ್ನುಂಗುರ ಬೆರಳು** = ಚಿನ್ನದ ಉಂಗುರಗಳಿಂದ ಅಲಂಕೃತವಾದ ಬೆರಳುಗಳು.

**ಪಡಿಯಿಲ್ಲ** = ಸಾದೃಶ್ಯವಿಲ್ಲದಿರುವ. **ಚುಬುಕಾಗ್ರ** = ಗದ್ದದ ತುದಿಯ ಸೌಂದರ್ಯ. **ಶ್ರೀಕಾರಕರ್ಣದೊಡನೆ** = ಓಲಾಡುತ್ತಿರುವ ಕಿವಿಯ ಕುಂಡಲಗಳು ಕಪೋಲವನ್ನು ಚುಂಬಿಸುತ್ತಾ, ಮಾತಾಡುತ್ತಿರುವ ಬೆಡಗಿನ ವೈಭವ **ಲಕ್ಷ್ಮೀಯೀಂಟಿದ ಸುಧೆಯೋ** = ಲಕ್ಷ್ಮೀದೇವಿಯು ಶ್ರೀಹರಿಯ ಅಧರಾಮೃತವನ್ನು ಹೀರಿದ ಸುಧೆಯ ಸವಿಯೋ. **ರುಚಿ ಕರಗಳು** = ಪ್ರಶಾಂತವಾದ ಕಿರಣಗಳನ್ನು ಪಸರಿಸುತ್ತಿರುವ ಶ್ರೀಹರಿಯ ಅಧರಗಳ ಕಾಂತಿಯೋ. **ಬಿಂಬಾಧರದ** = ಅವನ ಅರೆಬಿರಿದ ತುಟಿ ಗಳು ಅರುಣರಾಗದ ವರ್ಣವನ್ನು ಮೀರಿಸುತ್ತಿರುವ ಹವಳದ ಕುಡಿಯ ಪ್ರಭೆಯಂತಿವೆ. **ರದನ** = ಅವನ ಶುಭ್ರವಾದ ದಂತಪಂಕ್ತಿಗಳು ಜೋಡಿ ಸಿದ ಕುಂದಪಂಕ್ತಿಗಳಂತಿವೆ (ಮೊಗ್ಗಿನ ಮೊಲ್ಲೆ). **ಮಂದಸ್ಮಿತಗಳಿಗೆ ಸದನ** = ಶರತ್ಕಾಲದ ಪೂರ್ಣಚಂದ್ರನ ಬಿಂಬವನ್ನು ಹೋಲುವ ಅವನ ಸುಂದರ ಮುಖಾರವಿಂದ. ಅದು ಮಂದಹಾಸದ ಸದನ. ಅವನ ಮೃದು ಮಧುರವಾದ ವಾಣಿ ಶುಕಪಿಕಗಳ ಮೃದುಧ್ವನಿಯನ್ನು ಮೀರಿಸುವುವು' ಪುಷ್ಪಗತ ಮಕರಂದದ ಸವಿಯನ್ನು ಸೂಸುವ ವಚನಾಮೃತಗಳು. **ತಿಲಕ** = ಹಣೆಯಲ್ಲಿ ಅಂದವಾಗಿ ಧರಿಸಿರುವ ಕಸ್ತೂರಿ ಮೃಗದ ತಿಲಕ (ಸುಮದ ಗಂಧ). ಮೂಗು ಎಳೆಸಂಪಿಗೆಯ ಸದೃಶವಾಗಿದೆ. ಶ್ರೀಹರಿಯ ನೇತ್ರ ದ್ವಯಗಳು ಮೀನಿನ ಕಣ್ಣುಗಳು (ಭವ್ಯ ಜಲಚರಗಳ), ನೈದಿಲೆಯ ದಳ, ಜಿಂಕೆಯ ಚಂಚಲವಾದ ನೇತ್ರಗಳ ಸೌಂದರ್ಯ. ಸೂರ್ಯ ಚಂದ್ರರ ಪ್ರಭೆ ಗಳನ್ನು ಮೀರುವುವು. ಲೋಲಲೋಚನನು.

**ಸುರವರನ ಕಾರ್ಮುಕವ** = ಶ್ರೀಹರಿಯ ಹುಬ್ಬಿನ ಮಾಟವು ಇಂದ್ರಚಾಪದಂತೆ ಮನೋಹರವಾಗಿದೆ. (ಸುರವರ–ಇಂದ್ರ. ಕಾರ್ಮುಕ– ಬಿಲ್ಲು-ಕಾಮನಬಿಲ್ಲು). ಹಣೆಯಲ್ಲಿರುವ ಕಸ್ತೂರಿಯ ತಿಲಕ ಬಾಲಶಶಿ ಯಂತಿದೆ (ಚಂದ್ರನ ಏಕಕಳಾರೂಪವಾದ ವಕ್ರರೇಖೆ).

ಅವನ ಹಣೆಯಮೇಲೆ ಮುಂಗುರುಳು (ಅಲಕ) ಗುಂಗುರು ಸುರುಳಿ ಯಾಗಿ ಬಿದ್ದಿದೆ.

**ನವಭೃಂಗಾಲಕ ಲಲಾಟ** = ಎಳೆಯ ದುಂಬಿಯ ಬಣ್ಣದಂತೆ ಕಪ್ಪಾದ ಕುಂತಲಗಳಿಂದ ಅಲಂಕೃತವಾದ ಶ್ರೀಹರಿಯ ಹಣೆ. (ನವ–ನೂತನ, ಎಳೆಯದು. ಭೃಂಗ–ದುಂಬಿ, ಭ್ರಮರ. ಅಲಕ–ಮುಂಗುರುಳು. ಲಲಾಟ–ಹಣೆ). **ಕಣ್ಣಾಳಿವೆಗೂಡ** = ಕಣ್ಣಿನ ರೆಪ್ಪೆಗಳು ನಿರ್ಮಲವಾದ ಕಿರಣಗಳ ಕಾಂತಿಯಿಂದ ಕೂಡಿವೆ. (ಅವನ ಕುಡಿನೋಟ–ಮಂದಹಾಸವೀಕ್ಷಣ–ಕೃಪಾ ಕಟಾಕ್ಷವೀಕ್ಷಣ).

**ಸರ್ವಾಂಗಸುಂದರಪೂರ್ಣ** = ಅವನ ಸಕಲ ಅವಯವಗಳೂ ಅಪ್ರಾಕೃತ, ಜ್ಞಾನಾನಂದಮಯ ಮತ್ತು ಪರಿಪೂರ್ಣ. **ಶ್ಯಾಮವರ್ಣ** = ನೀಲಮೇಘಶ್ಯಾಮನು (ನವ ದೂರ್ವಾದಳದ ವರ್ಣ). **ದೂರ್ವಾರ** = ದುಷ್ಟರು. **ಗೀರ್ವಾಣವಂದ್ಯನ** = ಸಕಲ ದೇವತಾಗಣದಿಂದ ನಮ್ಯನು. **ಪಾಂಡು ಭೂವರ ತನುಜರ** – ಭೂಮಿಯಲ್ಲಿ ಶ್ರೇಷ್ಠರಾದ (ಭೂಪಾಲಕರು) ಪಾಂಡವರ ಮಿತ್ರನು **ಅಟವಿ ವೀತಿಹೋತ್ರನಾಗಿ** = ದುಷ್ಟರಾದ ಕೌರವರ ಸೇನೆ ಎಂಬ ಅರಣ್ಯಕ್ಕೆ ಅಗ್ನಿಸದೃಶನು (ವೀತಿಹೋತ್ರ–ಅಗ್ನಿ). **ಜೀವಮಿತ್ರನಾದ** = ಭಾಗವತೋತ್ತಮರ ಆಪದ್ಬಂಧುವಾಗಿ. (ಬಿಂಬ)



೬೭೮

(ಕುಚೇಲೋಪಾಖ್ಯಾನದಿಂದ)

**ರಾಗ–ಕಲ್ಯಾಣಿ** **ಆದಿತಾಳ**

ಕೃಷ್ಣಾ ಪಾಹಿ ಮಾಂ ರಾಮ
ಕೃಷ್ಣಾ ಪಾಹಿ ಮಾಂ ॥ ॥ಪ॥

ಕೃಷ್ಣ ಪಾಹಿ ವರವೃಷ್ಣಿಕುಲೋದ್ಭವ
ಜಿಷ್ಣುವಿನುತ ವರ್ಧಿಷ್ಣು ಗರಿಷ್ಣು ॥ ॥ಅ॥

ಮಾರಜನಕ ಸುಕುಮಾರಶರೀರ ಕು
ಮಾರಜನಕನುತ ಮಾರಮಣಾಬ್ಜ ಕು
ಮಾರಪಿತಾ ಮಹಸಾರಸನಾಭೋ
ದ್ಧಾರ ಸಕಲಗುಣ ಪೂರಕ ಯಮುನಾ
ತೀರ ಕುಂಜಕುಟೀರ ಮಧ್ಯ ಸಂ
ಚಾರ ಚರಣಗೋಕ್ಷೀರಸಾರ ದಧಿ
ಚೋರ ನಿಖಿಲ ಶೃಂಗಾರ ಗೋಕುಲಾ
ಗಾರ ಭಕ್ತಮಂದಾರ ಸಿಂಧು ಗಂ
ಭೀರ ಜಗನ್ಮಯ ಕಾರಣರೂಪ ಸ
ಮೀರಣಜಸ್ತುತ ವಾರಣ ದುರಿತನಿವಾರಣ ಶೌರೇ ॥ ॥೧॥

ಕುಂದರದನ ಮುಚುಕುಂದವರದ ಮು
ಕುಂದ ಮುಕ್ತಜನ ಬೃಂದಾಲಯ ಗೋ
ವಿಂದ ಗೋಕುಲಾನಂದ ಯಶೋದಾ
ನಂದ ಸನಕಸನಂದನವಂದ್ಯ ಪು
ರಂದರಾದಿ ಸುರಸಂದೋಹಪ್ರಿಯ
ಮಂದರಧರ ಮಕರಂದವಚನ ಬಾ
ಲೇಂದುಫಾಲ ಕುರುವಿಂದಾಧರ ಸಂ
ಕ್ರಂದನತನಯ ಸ್ಯಂದನಪಾಲ
ಮಂದಹಾಸ ಬಹುಸುಂದರ ಪರಮಾ
ನಂದಭರಿತ ಪರನಂದಕಧರಕರ ನಂದಕುಮಾರ ॥ ॥೨॥

ಹೇಮವಸನ ಶುಭನಾಮಧೇಯ ಸಂ
ಗ್ರಾಮಧುರೀಣ ಸುಧಾಮ ಸನ್ಮನ
ಕಾಮಿತದಾಯಕ ಪ್ರೇಮಾನ್ವಿತ ಬಲ
ರಾಮಾನುಜ ಬಲಭೀಮ ವಿಕ್ರಮೋ
ದ್ಧಾಮ ಸುರೌಘಲಲಾಮ ಕೈರವದಳ

ಶ್ಯಾಮ ಭವಭಯವಿರಾಮ ತ್ರಿಜಗಭಿ
ರಾಮ ರಾಮ ನಿಸ್ಸೀಮ ಕೌರವ
ಸ್ತೋಮವಿನಾಶನ ಸೋಮಸಮಾನನ
ತಾಮರಸನಯನ ಕೋಮಲರೂಪ ಮ
ಹಾಮಹಿಮೋಜ್ವಲ ಶ್ರೀಮನ್ಮಂಗಳಧಾಮ ಸಂತತ ॥ ॥೩॥

ರಂಗನಾಯಕ ವಿಹಂಗವಾಹನ ಭು
ಜಂಗಶಯನ ರುಕ್ಮಾಂಗದವರದ ರ
ಥಾಂಗಹಸ್ತ ಗೋಪಾಂಗನಾ ಕುಚಾ
ಲಿಂಗನನಿಪುಣ ತುರಂಗವದನ ಭವ
ಭಂಗ ಸತ್ಯಮಾವಾಂಗ ದಿವೌಕಸ
ಸಂಘ ದೈತ್ಯಜನಸಂಘಾತಿಮಿರಪ
ತಂಗ ನೀರದನಿಭಾಂಗ ಹೇಮಸಾ
ರಂಗವಿದಳನ ಕುರಂಗಧರಾನ್ವಯ
ಪುಂಗವ ಕೀರ್ತಿತರಂಗ ನಿರುಪಮೋ
ತ್ತುಂಗ ಚತುರ್ಭುಜ ಶೃಂಗಾರಪ್ರಿಯ ಗಂಗಾಜನಕ ॥ ॥೪॥

ಶ್ರೀನಿವಾಸ ಮುರುಳೀನಿನಾದಪ್ರಿಯ
ದೀನಜನಾವನ ದಾನವ ಗಜಪಂ
ಚಾನನ ನಾರದಗಾನಲೋಲ ಉಪ
ಮಾನ ಚತುರ ಚತುರಾನನ ಭಕ್ತಾ
ಧೀನ ತವಪದ ಧ್ಯಾನನಿರತ ಸು
ಜ್ಞಾನಭರಿತ ಸುಜನಾನುಕೂಲ ಕಲಿ
ಕಾನನದಹನ ಕೃಶಾನುರೂಪ ಪವ
ಮಾನಸುತಾಂಬುಜ ಭಾನು ಬಿಂಬ ನಿಜ

ಮೌನಿವರ್ಯ ಶುಭಮಾನಸಾಂಬುಜ
ನ್ಯಾನನಿವಾಸ **ಶ್ರೀಖಾದ್ರಿನರಸಿಂಹ ನಮೋ ನಮೋ** ॥ ॥೫॥



**ಅರ್ಥವಿವರಣೆ :-**

ಭಾಗವತೋತ್ತಮನಾದ ಸುಧಾಮನು ದ್ವಾರಕೆಗೆ ತೆರಳಿ, ಅಲ್ಲಿ ಭವ್ಯ ಅರಮನೆಯಲ್ಲಿ ಪರಾತ್ಪರವಸ್ತು ಶ್ರೀಕೃಷ್ಣನ ದಿವ್ಯಮಂಗಳಮೂರ್ತಿಯನ್ನು ಸಂದರ್ಶಿಸಿದ್ದಾನೆ. ಆಗ ತಾನು ಕಂಡ ಆ ಭವ್ಯಮೂರ್ತಿಯ ಸೌಂದರ್ಯವನ್ನು ಕಪಿಕುಲತಿಲಕ ತಿಪ್ಪಣ್ಣಾರ್ಯನು ಸುದಾಮನದ್ವಾರಾ ವರ್ಣಿಸುತ್ತಾನೆ.

**ವರವೃಷ್ಣಿಕುಲೋದ್ಭವ** = ಶ್ರೇಷ್ಠಯದುಕುಲಸಂಜಾತನಾದ ಶ್ರೀಕೃಷ್ಣ. **ಜಿಷ್ಣುವಿನುತ** = ಪಾರ್ಥನಿಂದ ಸ್ತುತ್ಯಮಾನನಾದವ. **ವರ್ಧಿಷ್ಣು** ನಿತ್ಯಶಾಶ್ವತಮೂರ್ತಿ (ತನ್ನನ್ನು ನಂಬಿದ ಭಕ್ತರ ಆತ್ಮೋದ್ಧಾರವನ್ನು ಮಾಡುವ), **ಗರಿಷ್ಠ** = ಅತ್ಯಂತ ಶ್ರೇಷ್ಠವಸ್ತು (ಸರ್ವೋತ್ತಮದೇವತಾ).

**ಮಾರಜನಕ** = ಮನ್ಮಥನ ಪಿತನು, **ಕುಮಾರಜನಕನುತ** = ಷಣ್ಮುಖನ ತಂದೆಯಾದ ಮಹರುದ್ರದೇವರಿಂದ ಸ್ತುತ್ಯ (ಕುಮಾರ-ಷಣ್ಮುಖ), **ಮಾರರಮಣ** = ಲಕ್ಷ್ಮೀರಮಣ, **ಅಬ್ಜಕುಮಾರಪಿತಾ** = ನಾಭೀಕಮಲಸಂಜಾತರಾದ ಬ್ರಹ್ಮದೇವರ ತಂದೆ (ಅಬ್ಜ-ನಾಭೀಕಮಲ. ಕುಮಾರ-ಅಬ್ಜದಲ್ಲಿ ಸಂಜಾತ), **ಮಹಸಾರಸನಾಭ** = ಬ್ರಹ್ಮಾಂಡದ ಸೃಷ್ಟಿಗೆ ಕಾರಣವಾದ ಕಮಲವುಳ್ಳ ನಾಭಿ ಉಳ್ಳವನು (ಮಹ-ಬೃಹತ್ತಾದ ಬ್ರಹ್ಮಾಂಡ. ಸಾರಸ-ಕಮಲ), **ಯಮುನಾತೀರ ಕುಂಜ ಕುಟೀರ** = ಯಮುನಾತೀರದಲ್ಲಿರುವ ಪುಷ್ಪವನಭರಿತ ಮನೆ ಅಂದರೆ ಗೋಕುಲ, **ಮಧ್ಯಸಂಚಾರಚರಣ** = ಗೋಕುಲದಲ್ಲೆಲ್ಲಾ ಅಡ್ಡಾಡಿದ ಪಾದಪದ್ಮಗಳು.

**ಗೋಕ್ಷೀರಸಾರ ದಧಿಚೋರ** = ಗೋವಿನ ಕ್ಷೀರಸಾರವಾದ ಬೆಣ್ಣೆ-ಮೊಸರುಗಳನ್ನು ಕದ್ದ, **ಗೋಕುಲಾಗಾರ** = ಗೋಕುಲನಿವಾಸಿ, **ಭಕ್ತ ಮಂದಾರ** = ಭಕ್ತಜನರ ಪಾಲಿಗೆ ಕಲ್ಪವೃಕ್ಷಸದೃಶನು, **ಸಿಂಧು ಗಂಭೀರ** = ಸಮುದ್ರದಂತೆ ಗಾಂಭೀರ್ಯವುಳ್ಳವನು, **ಜಗನ್ಮಯ** = ಜಗತ್ತಿನಲ್ಲಿ ಸರ್ವತ್ರವ್ಯಾಪ್ತನು, **ಸಮೀರಣಜಸ್ತುತ** = ವಾಯುಸುತರಾದ ಮುಖ್ಯಪ್ರಾಣರಿಂದ ಸಂಸ್ತುತ್ಯಮಾನನು (ಸಮೀರಣ-ವಾಯುದೇವರು. ಜ-ವಾಯುಕುಮಾರ), **ವಾರಣದುರಿತನಿವಾರಣ** = ಪಾಪಗಳೆಂಬೋ ಮದಗಜಗಳನ್ನು ನಿವಾರಿಸುವ ಸಿಂಹಸದೃಶನು (ವಾರಣ-ಆನೆ), **ಶೌರೇ** = ಶೂರಸೇನ ಮಹಾರಾಜನ ಕುಲೋದ್ಭವ.

**ಕುಂದರದನ** = ಮೊಗ್ಗಿನ ಮೊಲ್ಲೆಯಂತೆ ಸಾಲಾಗಿ ಜೋಡಿಸಿರುವ ಶುಭ್ರದಂತಪಂಕ್ತಿ. **ಮುಕುಂದ** = ಮುಕ್ತಿಪ್ರದನು. **ಮುಕ್ತಜನ ಬೃಂದಾಲಯ** = ಮುಕ್ತಜೀವರ ನಿವಾಸವಾದ ವೈಕುಂಠವನ್ನು ತನ್ನ ಮನೆಯನ್ನಾಗಿ ಉಳ್ಳವನು. **ಗೋವಿಂದ** = ವೇದಪ್ರತಿಪಾದ್ಯ (ಗೋಬ್ರಾಹ್ಮಣರ ಪಾಲಕ), **ಸನಕಸನಂದನ ವಂದ್ಯ** = ಸನಕಾದಿಗಳಿಂದ ನಮ್ಯನು. **ಪುರಂದರಾದಿಸುರ ಸಂದೋಹ ಪ್ರಿಯ** = ಇಂದ್ರಾದಿ ದೇವತಾಸಮೂಹಕ್ಕೆ ಅತ್ಯಂತ ಪ್ರಿಯನು (ಪುರಂದರ-ಇಂದ್ರ). **ಮಂದರ ಧರ** = ಸಮುದ್ರಮಂಥನ ಸಮಯದಲ್ಲಿ ಮಂದರಗಿರಿಯನ್ನು ಎತ್ತಿ ಹಿಡಿದಿದ್ದ ಕೂರ್ಮ.

**ಮಕರಂದ ವಚನ** = ಅಮೃಸತದೃಶವಾದ ಅವನ ಸದ್ವಚನಗಳು. **ಬಾಲೇಂದು ಫಾಲ** = ಉದಿತಚಂದ್ರನ ರೇಖೆಯಂತೆ ಹಣೆಯ ಸೌಂದರ್ಯ. **ಕುರುವಿಂದಾಧರ** = ಹವಳದಂತಿರುವ ಕೆಂಪಾದ ತುಟಿಗಳು. **ಸಂಕ್ರಂದನತನಯ ಸ್ಯಂದನಪಾಲ** = ಇಂದ್ರನ ಪುತ್ರನಾದ ಅರ್ಜುನನ ರಥವನ್ನು ನಡೆಯಿಸಿದ ಪಾರ್ಥಸಾರಥಿಯಾದ ಶ್ರೀಕೃಷ್ಣ (ಸಂಕ್ರಂದನ-ಇಂದ್ರ. ಸ್ಯಂದನ-ರಥ). **ಕುಧರಧರ** = ಮಂದರಗಿರಿಧರ

ಮತ್ತು ಗೋವರ್ಧನೋದ್ಧಾರೀ (ಕು–ಭೂಮಿ. ಧರ–ಧರಿಸಿದ ಪರ್ವತ). **ನಂದಕುಮಾರ** = ನಂದಗೋಪನ ಸಾಕುಪುತ್ರ.

**ಹೇಮವಸನ** = ಪೀತಾಂಬರಧಾರಿ (ಹೇಮ–ಚಿನ್ನ. ವಸನ–ವಸ್ತ್ರ). **ಶುಭನಾಮಧೇಯ** = ಮಂಗಳನಾಮಧೇಯನು. **ಸಂಗ್ರಾಮಧುರೀಣ** = ಯುದ್ಧದಲ್ಲಿ ಅತಿಪರಾಕ್ರಮಿ (ಸಂಗ್ರಾಮ–ಯುದ್ಧ). **ಸುಧಾಮ** = ಮುಕ್ತಿಧಾಮಗಳಲ್ಲಿರತಕ್ಕ, **ಸನ್ಮನ** = ಉದಾರಮನಸ್ಕನು. **ಕಾಮಿತ ದಾಯಕ** = ತನ್ನ ಭಕ್ತರ ಸಕಲಕಾಮಿತಗಳನ್ನು ನೀಡುವವನು. **ಪ್ರೇಮಾನ್ವಿತ** = ಭಕ್ತರಲ್ಲಿ ವಾತ್ಸಲ್ಯಉಳ್ಳವನು (ಭಕ್ತವತ್ಸಲನು). **ಬಲರಾಮಾನುಜ** = ಬಲರಾಮನ ತಮ್ಮನಾದ ಶ್ರೀಕೃಷ್ಣ. **ಬಲಭೀಮ** = ಅಸಮಪರಾಕ್ರಮಿ. **ಸುರೌಘಲಲಾಮ** = ದೇವತಾವೃಂದದಲ್ಲಿ ಅತ್ಯಂತ ಶ್ರೇಷ್ಠನು (ದೇವದೇವತಾಸಾರ್ವಭೌಮನು). **ಕೈರವದಳಶ್ಯಾಮ** = ಕನ್ನೈದಿಲೆ ಪುಷ್ಪದಳಗಳಂತೆ ನೀಲಮೇಘವರ್ಣನು **ಭವಭಯವಿರಾಮ** = ಸಂಸಾರಜನ್ಯವಾದ ದುಃಖಗಳನ್ನು ಕೊನೆಗೊಳಿಸುವವನು (ಭವಪರಿಹಾರಕನು), **ತ್ರಿಜಗಭಿರಾಮ** = ಮೂರುಲೋಕಗಳಲ್ಲಿ ಅತ್ಯಂತ ಸಂಪೂಜ್ಯನು (ಸೌಂದರ್ಯಸಾರನು). **ರಾಮ** = ಸರ್ವಜೀವರಲ್ಲಿ ಬಿಂಬನಾಗಿದ್ದು ರಮಣಮಾಡುವವನು. **ನಿಸ್ಸೀಮ** = ಅಮಿತಪರಾಕ್ರಮನು. **ಸೋಮಸಮಆನನ** = ಶರತ್ಕಾಲದ ಪೂರ್ಣಚಂದ್ರಬಿಂಬದಂತೆ ಮುಖವುಳ್ಳವನು. **ತಾಮರಸನಯನ** = ಕಮಲದ ದಳಗಳಂತೆ ವಿಶಾಲನೇತ್ರನು (ತಾಮರಸ–ಕಮಲಪುಷ್ಪ). **ಮಹಾಮಹಿಮೋಜ್ವಲ** = ಉಜ್ವಲವಾದ ಮಹಾಮಹಿಮಾಸಂಪನ್ನನು. **ಶ್ರೀಮನ್ಮಂಗಳಧಾಮ** = ಮುಕ್ತಿಧಾಮಗಳಾದ ವೈಕುಂಠ–ಶ್ವೇತದ್ವೀಪ–ಅನಂತಾಸನಗಳಲ್ಲಿ ನಿವಾಸಿಯು.

**ರಂಗನಾಯಕ** = ಶ್ರೀರಂಗಧಾಮನು (ಸರ್ವಜೀವರ ಹೃತ್ಪದ್ಮದಲ್ಲಿ ಕ್ರೀಡೆಯಾಡುವ ಮಹಾಪ್ರಭುವು), **ವಿಹಂಗವಾಹನ** = ಗರುಡಾರೂಢನು (ವಿಹಂಗ–ಪಕ್ಷಿ, ಗರುಡ). **ಭುಜಂಗಶಯನ** = ಶೇಷಶಾಯಿ (ಶಯನ–ಮಲಗಿರುವವನು). **ರಥಾಂಗಹಸ್ತ** = ಕೈಯಲ್ಲಿ ಚಕ್ರವನ್ನು

ಹಿಡಿದಿರುವವನು (ರಥಾಂಗ–ಚಕ್ರ). **ತುರಂಗವದನ** = ಹಯಗ್ರೀವ ಮೂರ್ತಿ. **ದಿವೌಕಸಸಂಘ** = ದೇವತೆಗಳ ಸಮೂಹಕ್ಕೆ ನತ್ಯ ಪಾಪಾಂಗನು. **ದೈತ್ಯನಜಸಂಘ ತಿಮಿರಪತಂಗ** = ದೈತ್ಯರ ಸಮೂಹ ವೆಂಬ ಕತ್ತಲೆಗೆ ಸೂರ್ಯಸದೃಶನು–ದಾನವಾಂತಕನು (ಪತಂಗ–ಸೂರ್ಯ) **ನೀರದನಿಭಾಂಗ** = ಮೇಘವರ್ಣವುಳ್ಳ ದೇಹ. (ನೀರದ–ಮೇಘ ಗಳು. ನಿಭ–ಕಾಂತಿ). **ಹೇಮಸಾರಂಗ ವಿದಳನ** = ಚಿನ್ನದ ಜಿಂಕೆಯ ವೇಷದಲ್ಲಿ ಬಂದಿದ್ದ ಮಾರೀಚನ ಸಂಹಾರಕನು. **ಕುರಂಗಧರ** = ಕಸ್ತೂರಿ ಯನ್ನು ಧರಿಸಿದವ. (ಕುರಂಗ–ಕಸ್ತೂರಿ).

**ದೀನಜನಾವನ** = ದೀನಜನರ ಪಾಲಕ. (ಆವನ–ಸಂರಕ್ಷಕ, ಪಾಲಕ). **ದಾನವಗಜಪಂಚಾನನ** = ದೈತ್ಯರೆಂಬ ಆನೆಗಳ ಸಮೂಹಕ್ಕೆ ಸಿಂಹಸದೃಶನು. (ಪಂಚಾನನ–ವಿಶಾಲವಾದ ಮುಖವುಳ್ಳ ಸಿಂಹ). **ಉಪಮಾನ ಚತುರ** = ಚಾತುರ್ಯಗುಣದಲ್ಲಿ ಅಸದೃಶನು. **ಚತು ರಾನನ ಭಕ್ತಾಧೀನ** = ಬ್ರಹ್ಮನೇ ಮೊದಲಾದ ಭಕ್ತರ ವಶನಾಗಿರು ವವನು (ಭಕ್ತವತ್ಸಲನು). **ಸುಜನಾನುಕೂಲ** = ನಿರುತ ನಿನ್ನ ಪಾದ ಧ್ಯಾನರತರಾಗಿರುವವರಿಗೆ ಸುಜ್ಞಾನವನ್ನು ನೀಡಿ, ಅವರಿಗೆ ಸದಾ ಸಹಾ ಯಕನಾಗಿರುವವನು. **ಕಲಿ ಕಾನನದಹನ ಕೃಶಾನುರೂಪ** = ಕಲಿ ಎಂಬ ಮಹಾ ಕಾಡನ್ನು ಸುಡುವ ಅಗ್ನಿಯಂತಿರುವವನು. (ಕೃಶಾನುರೂಪ– ಅಗ್ನಿರೂಪನು). **ಪವಮಾನ ಸುತಾಂಭೋಜ ಭಾನುಬಿಂಬ** = ವಾಯು ಸುತರಾದ ಶ್ರೀಮುಖ್ಯಪ್ರಾಣದೇವರೆಂಬ ಕಮಲಕ್ಕೆ ಪೂರ್ಣಸೂರ್ಯ ಬಿಂಬಸದೃಶನು. **ನಿಜಮನೌನಿವರ್ಯ** = ತನ್ನ ಅಂತರಂಗಭಕ್ತರಾದ ಸಾಧು ಸಂತರ. **ಶುಭ ಮಾನಸಾಂಬುಜ ಸ್ಥಾನನಿವಾಸ** = ಪವಿತ್ರ ವಾದ ಮನಸ್ಸಿನ ಕಮಲವೆಂಬ ಸ್ಥಾನದಲ್ಲಿ ಸದಾ ವಾಸಿಸುವ. ಅವರ ಹೃತ್ಪದ್ಮಸ್ಥನಾಗಿರುವ ಬಿಂಬಮೂರ್ತಿ.



## ೬೭೯

## (ಕುಚೇಲೋಪಾಖ್ಯಾನದಿಂದ ಆರಿಸಿದ ಕೀರ್ತನೆ)

ರಾಗ–ಕೇದಾರಗೌಳ ಝಾಪುತಾಳ

ಮರೆದೆಯೇನೈ ಸಖನೆ–ಕುಚೇಲನೆ
ಮರೆದೆಯೇನೈ ಸಖನೆ ॥ ॥ಪ॥

ಮರೆದೆಯೇನೈಯ ಸದ್ಗುರುಗಳ ಬಳಿಯು ನಾ
ವಿರುವ ಕಾಲದಿ ಗೈದ ಪರಿಪರಿ
ಚರಿಯು ಭಯಭರಿತಾನುಭವವ ॥ ॥ಅ॥

ಅನಘ ನೀ ಕೇಳೊಂದು ದಿನವೆಮ್ಮ ಗುರುಪತ್ನಿ
ವನಕೆ ಹೋಗಿ ಇಂಧನವನ್ನು ತರಹೇಳಿ
ಕನಲಿ ಕೋಪವ ಮಾಡಲು–ನಾವೀರ್ವರು
ವಿನಯದಿಂ ಪೊರಮೊಡಲು–ಆ ಘೋರಕಾ
ನನವನ್ನು ಪೊಗುತಿರಲು–ಆ ಸಮಯದೋಳ್
ಅನುಪಮ ಪ್ರಳಯಾನಿಲಾಗಮ
ಘನಘನ ಸ್ವನ ಚಪಲಮಯ ಸಂ
ಜನಿತ ಪವಿಪತನಾಗಿಯದ್ಭುತ
ವೆನಿಪ ಮಳೆ ಭಯಪಡಿಸಿದುದ ನೀ
॥ಮರೆದೆಯೇನೈ॥ ॥೧॥

ತರಣಿಮಂಡಲವಸ್ತಗಿರಿಯ ಸಾರಲು ಶಂಕೆ
ತೊರೆದು ಕಾಳ್ಗತ್ತಲೆ ಪರಿಪುಟೇಡೈಸೆ ದು
ಸ್ತರಮಾಗಿ ನಾವೀರ್ವರು–ಮಾರ್ಗವ ಕಾಣ

ಲರಿಯುದೆ ಕಡುಬೆದರು–ಗೊಳ್ಳುತ ಮಿಂಚು
ಬರಲು ಬೆಳಕಿನವರು–ನಾವಾಗುತ
ಕರಗಳನು ವಿಡಿದುರುತರದ ಕರಿ
ಕರದಪೋಲ್ಮಳಿಗರಯೆ ನೆನೆದಂ
ಬರವು ನಡುಗುತ ನಾವು ರಾತ್ರಿಯೊಳಿ
ಳಿರುವುದಕೆ ನೆಲೆಯುರಸುದುರ್ಘದ
॥ಮರೆದೆಯೋನ್ನೆ॥ ॥೨॥

ಕರಿ ಸಿಂಹ ಶಾರ್ದೂಲ ಕರಡಿ ಕಾಡೆಮ್ಮೆ ಸೂ
ಕರ ಘೂಕ ಕಾಕ ಸಂಚರಮಾದ ವಿಪಿನದೋಳ್
ಚರಿಸುತ್ತಲಿರಲಿಲ್ಲವೇ–ಒಂದಾಲದ
ಮರವ ಸಾರಿದೆವಲ್ಲವೇ–ಆ ಇರುಳು ಜಾ–
ಗರವ ಮಾಡಿದುದಿಲ್ಲವೇ–ನಿದ್ರೆಯ ಪರಿ
ಹರಿದು ಸದ್ಗುರು ಚರಣಕಮಲ
ಸ್ಮರಣೆಯನು ಹೃತ್ಸರಸೀರುಹದೊಳು
ಧರಿಸಿ ಧೈರ್ಯದೊಳಿರಲು ಖಾದಿರಿ
ಪುರಿ ನೃಸಿಂಹನ ಕರುಣವಾದುದ
॥ಮರೆದೆಯೋನ್ನೆ॥ ॥೩॥



**ಅರ್ಥವಿವರಣೆ :–**

ಸುಧಾಮನೊಡನೆ ಏಕಾಂತದಲ್ಲಿ ಕುಳಿತು, ಶ್ರೀಕೃಷ್ಣನು ತಾವು ಗುರು ಕುಲದಲ್ಲಿದ್ದಾಗ, ನಡೆದ ಒಂದು ಘಟನೆಯನ್ನು ಸ್ಮರಿಸಿಕೊಳ್ಳುತ್ತಾನೆ. ಆ ಸ್ಮರಣೆಯು ದಿವ್ಯ ಚಿತ್ರಣವಿದೆ–ಈ ಕೀರ್ತನಸಾಹಿತ್ಯದಲ್ಲಿ

**ಮರೆದೆಯೋನ್ನೆ** = ಮರತುಹೋಯಿತೇ ನಿನಗೆ ಸುಧಾಮ. ಆ ಪ್ರಸಂಗವನ್ನು ಸ್ಮರಣೆಗೆ ತಂದುಕೋ. **ನೈಸಖನೆ** = ನಿಜಮಿತ್ರನೇ. **ಸದ್ಗುರುಗಳ** = ಉತ್ತಮಗುರುಗಳಾದ ಸಾಂದೀಪರು. **ಪರಿಪರಿಚರಿಯ** = ಗುರುಕುಲವಾಸದಲ್ಲಿ ನಾವು ಮಾಡಿದ ವಿಧವಿಧವಾದ ಕಾರ್ಯಗಳನ್ನು ಜ್ಞಾಪಿಸಿಕೋ. **ಭಯಭರಿತಾನುಭವವ** = ಭಯಯುಕ್ತವಾದ ನಮ್ಮೀರ್ವರ ಅನುಭವಗಳನ್ನು. **ಅನಘ** = ಪಾಪವಿದೂರನಾದ ಹೇ ಸಖನೇ. (ಅಘ–ಪಾಪ) **ಇಂಧನವನ್ನು** = ಅಡಿಗೆಗೋಸುಗ ಕಟ್ಟಿಗೆಯನ್ನು. **ಕನಲಿ** = ಸಿಟ್ಟಿಗೆದ್ದು. **ಪೊರಮೊಡಲು** = ವನಕ್ಕೆ ತೆರಳಲಾಗಿ. **ಪೋಗುತಿರಲು** = ಭೀಕರವಾದ ಅರಣ್ಯವನ್ನು ಪ್ರವೇಶಿಸಿ, **ಪ್ರಳಯಾನಿಲ ಆಗನು** = ಪ್ರಳಯಾಗ್ನಿಯ ಸಾಲಿನಂತೆ. **ಘನಘನಸ್ವನ** = ಭಯಂಕರವಾದ ಗುಡುಗಿನ ಧ್ವನಿ. **ಚಪಲಮಯ ಸಂಜನಿತ** = ವೇಗವಾಗಿ ಸಂಚರಿಸುತ್ತಿರುವ ಮೇಘಗಳ ಸಂಘಟ್ಟಣೆಯಿಂದ ಉಂಟಾದ. **ಪವಿಪತನನಾಗಿ** = ಸಿಡಿಲಿನ ಹೊಡೆತದಿಂದ (ಪವಿ–ವಜ್ರ. ವಿದ್ಯುತ್ಪ್ರಕಾಶಮಾನವಾದ ಬೆಳಕು ಮತ್ತು ತಜ್ಜನಿತ ಸಿಡಿಲು). **ಅದ್ಭುತವೆನಿಪ** = ಹಿಂದೆ ಎಂದೆಂದಿಗೂ ಆಗಿರದ ಮಳೆ. ನಿನ್ನನ್ನು ಆ ಮಿಂಚು–ಗುಡುಗು–ಸಿಡಿಲುಗಳು ಭಯಪಡಿಸಿದ ಭೀಕರ ಪ್ರಸಂಗವನ್ನು ಮರೆತಿದ್ದೀಯಾ ?

**ತರಣಿಮಂಡಲ** = ಸೂರ್ಯಬಿಂಬವು. **ಅಸ್ತಗಿರಿಯ ಸಾರಲು** = ಅಸ್ತಾಚಲವನ್ನ ಸೇರಲು, ಅಂದರೆ, ಸೂರ್ಯಾಸ್ತವಾಗುತ್ತಿರಲು. **ಶಂಕೆ ತೊರೆದು** = ಸಂದೇಹ ಬಿಟ್ಟು, **ಕಾಳ್ಗತ್ತಲೆ** = ಭೀಕರವಾದ ಗಾಢಾಂಧಕಾರವು **ಪರಿದುವೇಡೈಸೆ** ಆವರಿಸಿ, ಆಡರುತ್ತಿರಲು. **ದುಸ್ತರನಾಗಿ** = ಭಯಕಂಪಿತರಾಗಿ, ಏನೂ ತೋಚದೆ. **ಮಾರ್ಗವ ಕಾಣದೆ** = ಆ ಕಗ್ಗತ್ತಲೆಯಲ್ಲಿ ಮನೆಗೆ ಹೋಗುವ ದಾರಿಯು ಕಾಣಿಸಲಿಲ. **ಕಡು ಬೆದರುಗೊಳ್ಳುತ** = ಅತ್ಯಂತ ಭಯಗೊಂಡು, **ಮಿಂಚು ಬರಲು** = ಫಳಾರನೆ ಹೊಳೆಯುತ್ತಿರುವ ಮಿಂಚಿನ ಬೆಳಕಿನಲ್ಲಿ ದಾರಿ ಅರಸುತ್ತಾ, **ಕರಗಳನುವಿಡಿದು** = ಒಬ್ಬರಿಗೊಬ್ಬರು ಕೈಹಿಡಿದುಕೊಂಡು, **ಉರುತರದ** = ಅತ್ಯಂತ ಹೆಚ್ಚುತ್ತಿರುವ, **ಕರಿಕರದವೋಲ್ ಮಳೆಗರೆಯೆ** =

ಆನೆಯ ಸೊಂಡಿಲಿನಂತೆ ಧಾರಾಕಾರವಾಗಿ ಮಳೆ ಸುರಿಯುತ್ತಿರಲು (ಕರಿಕರ- ಆನೆಯ ಸೊಂಡಿಲು). **ನೆನೆದಂಬರವು** = ನೆನೆದ ವಸ್ತ್ರಗಳಿಂದ ನಡುಗುತ್ತಾ ಆ ರಾತ್ರಿಯಲ್ಲಿ ತಂಗಲು ವಸತಿಯನ್ನು ಹುಡುಕುತ್ತಿದ್ದ ಪ್ರಸಂಗವು ನಿನಗೆ ಜ್ಞಾಪಕವಿಲ್ಲವೇ ?

**ಕರಿ** = ಆನೆ. **ಶಾರ್ದೂಲ** = ಹುಲಿ. **ಸೂಕರ** = ಕಾಡು ಹಂದಿ. **ಘೂಕ** = ಗೂಬೆಗಳು. **ಕಾಕ** = ಕಾಗೆ. ಇತ್ಯಾದಿ ವನ್ಯ ಮೃಗಗಳಿಂದ ತುಂಬಿದೆ. **ವಿಪಿನದೊಳ್** = ಘೋರಾರಣ್ಯದಲ್ಲಿ. **ಒಂದಾಲಯುಮರ** = ನಿವಾಸವನ್ನು ಅರಸುತ್ತಾ ಒಂದು ದೊಡ್ಡ ಆಲದಮರವನ್ನು ಸಮೀಪಿಸಿದೆವು. ಅಲ್ಲವೇ ? ಸಖನೇ ? **ಆ ಇರುಳು** = ಆ ರಾತ್ರಿ ಇಡೀ ಜಾಗರ ಮಾಡಿದೆವು. **ನಿದ್ರೆಯ ಪರಿಹರಿದು** = ರಾತ್ರಿ ಎಲ್ಲಾ ನಿದ್ದೆ ಇಲ್ಲದೇ, **ಹೃತ್ಸರಸೀರುಹದೊಳು** =ಹೃತ್ಕಮಲದಲ್ಲಿ ನಮ್ಮ ಸಾಂದೀಪಿನೀ ಸದ್ಗುರುಗಳ ಚರಣಕಮಲಗಳ ಸಂಸ್ಮರಣೆಯಿಂದ (ಹೃತ್-ಹೃದಯ. ಸರಸೀರುಹ-ಕಮಲ). **ಕರುಣವಾದುದ** = ಶ್ರೀಹರಿಯ ಕರುಣೆಯಿಂದ ಸುರಕ್ಷಿತವಾಗಿ ಬೆಳಿಗ್ಗೆ ಗುರುಗೃಹವನ್ನು ಸೇರಿದ ಭೀಕರಪ್ರಸಂಗವು ನಿನ್ನ ನೆನಪಿನಲ್ಲಿದೆಯೇ ? – ಹೇ ಸುದಾಮ ! – ಎಂದು ಪ್ರಶ್ನಿಸುತ್ತಾನೆ ಪುರುಷೋತ್ತಮನು.



೬೮೦

(ಅಂಕಿತ–ಖಾದ್ರಿ ನೃಸಿಂಹ)

**ರಾಗ–ಕಲ್ಯಾಣಿ** **ಅಟತಾಳ**

ರಾಧಿಕಾ ಹೃದಯಾಂಬುಜ ಮಿಳಿಂದ
ರಕ್ಷಿಸು ದಯದಿಂದ ॥ ॥ಪ॥

ರಕ್ಷಿಸೆನ್ನ ಗೋವಿಂದ ಮುಕುಂದ
ರಕ್ಷಿಸು ಮುರಳೀಧರ ಮಧುರಾಧರಾ ॥ ॥ಅ॥

ನಿರ್ಜರರಿಪುಗಳ ನಿರ್ಜಿಸಿ ಗೋ ದ್ವಿಜ
ನಿರ್ಜರರನು ಪೊರೆವ ಮೂರ್ಜಗದೊಡೆಯ
ದುರ್ಜನ ಕಂಸಾದಿ ದುಷ್ಟದೈತ್ಯರನೆಲ್ಲ
ನಿರ್ಜೀವರನುಗೈದ ನೀರಜನಾಭ
ವರ್ಜಿಸಿದೆನೆಂದಾವನೀಶನ
ವತ್ಸರನ ದ್ರೌಪದಿಯ ಹೃದ್ಭಯ
ಭರ್ಜನಾ ಯಮುಳಾರ್ಜುನಾಘ ವಿ
ಸರ್ಜನಾ ಭೀಮಾರ್ಜುನಪ್ರಿಯ ॥ ॥೧॥

ವರ್ಧೀಶನಾದ ಚತುರ್ದಶಭುವನಕೆ
ಮೂರ್ಧನ್ಯ ಕುಬ್ಜಾಂಗ ದುರ್ದೇಶ ಪರಿದೆ
ಕರ್ದಮಾದಿ ಮುನಿಗಣನುತ ಕುಸುಮ ಧ
ನುರ್ಧರಜನಕ ಮನೋಜ್ಞ ಭೂಷಣನೆ
ನಿರ್ಧರಿಸಿ ಸರ್ವೋತ್ತಮನು ನೀನೆಂ
ದೊಧ್ದ ಭೃಗುವರಿಯನೆ ಮಹಾತ್ಮ ಜ–

ನಾರ್ದನಾ ಮುರಮರ್ದನಾ ಯದು
ವರ್ಧನಾ ಗೋವರ್ಧನೋದ್ಧಾರ ॥ ॥೨॥

ಅಕ್ರೂರವರದನ ಚಕ್ರಗದಾಧರ
ವಿಕ್ರಮಯುಕ್ತ ಸದಾಕ್ರತುಭೋಕ್ತ
ಶುಕ್ರನಂಬಿಕವನ್ನು ವಕ್ರಿಸಿ ಬಲಿಯಿಂದ
ಲಾಕ್ರಮಿಸಿದೆ ಮೂಲೋಕವಗೊಲಿದು
ಶಕ್ರಗಿತ್ತೆ ಮಹಾತ್ಮ ನೂತನ
ಚಕ್ರ ಖಾದ್ರಿ ನೃಸಿಂಹ ಕೃಷ್ಣ ಶ್ರೀ
ವಿಕ್ರಮಧಿಕ ಪರಾಕ್ರಮಾಸರ
ಸಕ್ರಮಾಧವ ನಕ್ರಮದಹರ ॥ ॥೩॥



**ಅರ್ಥವಿವರಣೆ :–**

**ರಾಧಿಕಾಹೃದಯಾಂಬುಜ** = ರಾಧೆಯ ಹೃದಯವೆಂಬ ಕಮಲ ಪುಷ್ಪಕ್ಕೆ, **ಮಿಳಿಂದ** = ಸೂರ್ಯಸದೃಶನು, **ಗೋವಿಂದ** = ವೇದ ಪ್ರತಿಪಾದ್ಯ–ಗೋ ಬ್ರಾಹ್ಮಣರಕ್ಷಕನು. **ಮುಕುಂದ** = ಮುಕ್ತಿಪ್ರದನು. **ಮಧುರಾಧರಾ** = ಸುಧೆಯನ್ನು ಸುರಿಸುವ ತುಟಿಗಳು. **ನಿರ್ಜರರಿಪುಗಳ** = ದೇವತೆಗಳ ಶತ್ರುಗಳಾದ ದೈತ್ಯರನ್ನು (ನಿರ್ಜರ–ಮುಪ್ಪೇ ಇಲ್ಲದ ದೇವತೆ ಗಳು). **ನೀರ್ಜಿಸಿ** = ನಾಶಮಾಡಿ, **ಗೋ ದ್ವಿಜ ನಿರ್ಜರರನು** = ಗೋವುಗಳು, ವಿಪ್ರರು–ದೇವತೆಗಳನ್ನು, **ಪೊರೆವ ಮೂಜಗದೊಡೆಯ** = ಸಂರಕ್ಷಿಸುವ ತ್ರಿಲೋಕಾಧಿಪತಿ. **ನೀರಜನಾಭ** = ಪದ್ಮನಾಭನೇ, **ವರ್ಜಿಸಿನೆದೆಂದ** = ಸಂಹಾರ ಮಾಡಿಯೇಬಿಟ್ಟೆ ಎಂದುಕೊಂಡ (ಅಶ್ವತ್ಥಾಮ). **ಅವನೀಶನ ವತ್ಸರನ** = ರಾಜಕುಮಾರನಾದ ಪರೀ ಕ್ಷಿತನನ್ನು (ಉತ್ತರಾದೇವಿಯ ಗರ್ಭಸ್ಥನಾಗಿದ್ದ ಪರೀಕ್ಷಿತನ ಮೇಲೆ

ಅಶ್ವತ್ಥಾಮನು ಬ್ರಹ್ಮಾಸ್ತ್ರ ಪ್ರಯೋಗಿಸಿದ ಪ್ರಸಂಗ. ಆಗ ಶ್ರೀಕೃಷ್ಣನ ಚಕ್ರದಿಂದ ಸಂರಕ್ಷಿತನಾದ ಪರೀಕ್ಷಿತ). **ದ್ರೌಪದಿಯ ಹೃದ್ಯ** = ಎರಡು ಪ್ರಸಂಗವಿಶೇಷಗಳಲ್ಲಿ ದ್ರೌಪದಿಯ ಮಾನಸಂರಕ್ಷಣೆ ಮಾಡಿದ ಶ್ರೀಕೃಷ್ಣ. (೧) ಅಕ್ಷಯ ವಸ್ತ್ರ ಪ್ರದಾನ. (೨) ದೂರ್ವಾಸಾತಿಥ್ಯ ಪ್ರಸಂಗ. **ಯಮಳಾರ್ಜುನಾಘ ವಿಸರ್ಜನ** = ಅರ್ಜುನವೃಕ್ಷಗಳ ರೂಪದಲ್ಲಿ ಶಪ್ತರಾಗಿದ್ದ ನಳಕೂಬರ ಮತ್ತು ಮಣಿಗ್ರೀವರ ಶಾಪವಿಮೋಚನೆ ಗೈದ ಬಾಲಕೃಷ್ಣ. **ಭೀಮಾರ್ಜುನಪ್ರಿಯ** = ಭೀಮಸೇನನಿಗೆ ಅತ್ಯಂತಪ್ರಿಯನು. ಪಾರ್ಥಸಖ. (ಪಾರ್ಥನಲ್ಲಿ ಶ್ರೀಹರಿಯ ವಿಭೂತಿ ರೂಪವಿಶೇಷ).

**ವರ್ಷ್ಣೀಶನಾದ** = ವೃಷ್ಣಿಕುಲಕ್ಕೆ ಪ್ರಭುವಾದ ಶ್ರೀಕೃಷ್ಣ. **ಮೂರ್ಧನ್ಯ** = ಚತುರ್ದಶಭುವನಾತ್ಮಕವಾದ ಬ್ರಹ್ಮಾಂಡದೊಡೆಯ (ಶ್ರೇಷ್ಠವಸ್ತು). **ಕುಬ್ಜಾಂಗ ದುರ್ದೇಶ ಪರಿದೆ**=ವಕ್ರಳಾಗಿದ್ದ ಕುಬ್ಜೆಯ ಅಂಗಗಳ ವಿರೂಪವನ್ನು ಪರಿಹರಿಸಿ, ಸ್ಫುರದ್ರೂಪಿಯನ್ನಾಗಿಸಿದ ಶ್ರೀಕೃಷ್ಣ. **ಕರ್ದಮಾದಿ** = ಬ್ರಹ್ಮಮಾನಸಪುತ್ರರಾದ ಒಂಭತ್ತು ಮಂದಿ ಬ್ರಹ್ಮರ್ಷಿಗಳಲ್ಲಿ ಒಬ್ಬನು ಕರ್ದಮ ಋಷಿ. ಸ್ವಾಯಂಭುವ ಮನುವಿನ ಪುತ್ರಿ ದೇವಹೂತಿಯ ಪತಿ. ಅವನಿಂದ ಶ್ರೀಹರಿಯೇ ದೇವಹೂತಿಯಲ್ಲಿ ಕಪಿಲನಾಮಕನಾಗಿ ಅವತರಿಸಿನು. **ಕುಸುಮ ಧನುರ್ಧರ ಜನಕ** = ಕುಸುಮಬಾಣಗಳನ್ನು ಧನುಸ್ಸಿನಲ್ಲಿ ಹೂಡುವ ಮನ್ಮಥನ ತಂದೆ ಶ್ರೀಹರಿ. (ಪ್ರದ್ಯುಮ್ನನ ತಂದೆ ಶ್ರೀಕೃಷ್ಣ. ಪ್ರದ್ಯುಮ್ನನು ಮನ್ಮಥನ ಅವತಾರ). **ಮನೋಜ್ಞ** = ಮನಸ್ಸನ್ನು ಪ್ರೇರಿಸುವ ಮಹರುದ್ರದೇವರೇ. **ಒದ್ದ ಭೃಗು ಅರಿಯನೇ** = ನಿನ್ನ ಎದೆಯನ್ನು ಒದ್ದ ಭೃಗುಋಷಿಯು ನಿನ್ನ ಸರ್ವೋತ್ತಮತ್ವವನು ಜಗತ್ತಿಗೆ ನಾರಿದನು. **ಮುರಮರ್ದನ** = ಮುರಾ ಎಂಬ ಅಸುರನನ್ನು ಸಂಹರಿಸಿದ ಶ್ರೀಕೃಷ್ಣ (ಮುರಾರಿ). **ಯದುವರ್ಧನಾ** = ಯದುಕುಲತಿಲಕ, **ಸದಾಕ್ರತುಭೋಕ್ತ** = ಯಜ್ಞಭೋಕ್ತನು.

ಶುಕ್ರನ ಅಂಬಕವನ್ನು ವಕ್ರಿಸಿ — ಶುಕ್ರಾಚಾರ್ಯರ ಒಂದು ಕಣ್ಣನ್ನು ಧರ್ಬೆಯಿಂದ ಕುಕ್ಕಿ ಏಕನೇತ್ರರನ್ನಾಗಿ ಮಾಡಿದ ಪ್ರಸಂಗ



೩೮೧

(ಅಂಕಿತ–ಖಾದ್ರಿ ನರಸಿಂಹ)

**ರಾಗ–ಮುಖಾರಿ** **ಆದಿತಾಳ**

ಕೃಷ್ಣಾ ರಕ್ಷಿಸೋ ರಕ್ಷಿಸೆನ್ನನು–ರಾಮಕೃಷ್ಣ
ಕೃಷ್ಣಾ–ನಂದಕುಮಾರ–ಕೃಷ್ಣಾ–ನವನೀತಚೋರ ॥ ॥ಪ॥

ಕೃಷ್ಣಾ–ವಸುದೇವಬಾಲ–ಕೃಷ್ಣಾ–ರುಕ್ಮಿಣೀಲೋಲ
ಕೃಷ್ಣಾ–ವಾಸುಕೀತಲ್ಪ–ಕೃಷ್ಣಾ–ಶ್ರೀಹರೇ ॥ ॥ಅ॥

ಅಪ್ರಾಕೃತಶರೀರ ಆಶ್ರಿತಮಂದಾರ
ವಿಪ್ರವಂಶೋದ್ಧಾರ ವಿಮಲಸದ್ಗುಣಹಾರ ಕೃಷ್ಣಾ–ರಕ್ಷಿಸೋ
ಕಮಲಲೋಚನ ಕಮಲಾರಮಣ
ಕಲ್ಯಾಣಪ್ರದ ಕಬಂಧಮೋಕ್ಷದ
ಕಲುಷಸಂಹಾರ ಕನಕಾಂಬರಧರ
ಕಸ್ತೂರಿಫಾಲ ಕರುಣಾಲವಾಲ
ಕಪಟನಾಟಕ ಕದನಾದ್ಭುತ ಬಲ
ಕಮನೀಯಾನನ ಕರಿರಾಜಾವನ
ಕಮಲಾಸನನುತ ಕಪಿಕುಲರಕ್ಷ
ಕವಿವೃಂದಾಧಿಕ ಕಲಶಜ ಸನ್ನುತ

ಕಲಶಾಬ್ಧಿ ಶಯನ ಕಟಾಕ್ಷವೀಕ್ಷಣ
ಕಾರ್ಮುಕಹಸ್ತ ಕಾರಣವಿಗ್ರಹ
ಕಂದರ್ಪಜನಕ ಕಂಸವಿಮರ್ದನ
ಕಂಬುಗ್ರೀವ ಕೈವಲ್ಯಪದ
ಸುಪ್ರಸನ್ನ ನೀನಾದೆ ಸುಲಭಧನ್ಯ ನಾನಾದೆ
ಅಪ್ರಮೇಯ ಗೋವಿಂದ ಅಖಿಳಲೋಕೈಕವಂದ್ಯ ॥೧॥

ದೇವಕಿವರಪುತ್ರ ದಿವ್ಯಶುಭಚರಿತ್ರ
ಭಾವಜಾಂತಕಮಿತ್ರ ಭಕ್ತಹೃತ್ಪದ್ಮಮಿತ್ರ–ಕೃಷ್ಣ ರಕ್ಷಿಸೋ
ಅಗಣಿತಗುಣಗಣ ಅಣೋರಣೀಯ
ಅಪ್ರತಿಮಪುರುಷ ಅನೇಕರೂಪ
ಅಪಾರಮಹಿಮ ಅನಂತಶಯನ
ಅಮರಾರ್ಚಿತಪದ ಅಹಲ್ಯಾವರದ
ಅಕ್ರೂರಪ್ರಿಯ ಅಜಾಮಿಳರಕ್ಷ
ಅನಿರುದ್ಧ ಹರೇ ಅಮಲಿತಭುಜಬಲ
ಅಜರಾಮರಣ ಆಶ್ರಿತರಕ್ಷಣ
ಅನಾಥಬಂಧೋ ಅನುಪಮಪಾವನ
ಅಧೋಕ್ಷಜ ಹರೇ ಆಪದ್ಬಾಂಧವ
ಅಂಬುಧಿತಲ್ಪಕ ಅಂಬುಧಿಬಂಧನ
ರಾವಣಾದ್ಯರ ಕೊಂದ ರಾಮ ನೀನೆ ಮುಕುಂದ
ಶ್ರೀವತ್ಸವನಮಾಲ ಶೃಂಗಾರ ಗೋಪಾಲ ॥ ॥೨॥

ಸರ್ವಂ ಸಹಭಾರ ಸಂಹಾರ ಯದುವೀರ
ಸರ್ವಲೋಕೋದ್ಧಾರ ಶರನಿಧಿಗಂಭೀರ–ಕೃಷ್ಣಾ ರಕ್ಷಿಸೋ

ರಥಾಂಗಪಾಣಿ ರಣಜಯಚತುರ
ರಜನೀಚರಹರ ರಮಾವಿನೋದ
ರವಿಶಶಿನಯನ ರತ್ನಕಿರೀಟ
ರಸಿಕಾಗ್ರೇಸರ ರಘುಕುಲವಲ್ಲಭ
ರಾಕೇಂದುವದನ ರಾಘವ ಕೃಷ್ಣ
ರಾಜಶೇಖರ ರಾಧಾಲೋಲ
ರಾಜಸದೂರ ರಾಜಾನ್ವಯಭಯ
ರಾಮಾಭಿರಾಮ ರಾಮಚಂದ್ರಹರೇ
ರಾಮಭದ್ರ ಶ್ರೀರಾಮ ಬಲಾಂತಕ
ರಾಜೀವನಾಭ ರಾಮಸಹೋದರ
ರಮ್ಯಚರಣಯುಗ ರಂಜಿತಗಾತ್ರ
ರಂಭೋರುದ್ವಯ ರಂಗನಾಯಕ
ನಿರ್ವಾಣಪದವೀವ ನೀನೇ ದೇವರದೇವ
ಸರ್ವೋತ್ತಮ ಕೇಶವ ಸ್ವಾಮಿ **ಖಾದ್ರಿನೃಸಿಂಹದೇವ** || ||೩||



**ಅರ್ಥವಿವರಣೆ :–**

ಪರಾತ್ಪರವಸ್ತುವಾದ, ರಮಾಬ್ರಹ್ಮಾದಿವಂದ್ಯನಾದ ಆ ರುಕ್ಮಿಣೀವಲ್ಲಭನನ್ನು ಸಂದರ್ಶಿಸಿ, ಆನಂದತುಂದಿಲನಾಗಿದ್ದಾನೆ ಭಕ್ತಾಗ್ರಣಿ ಸುಧಾಮ. ಶ್ರೀಕೃಷ್ಣನ ಚರಣಾರವಿಂದಗಳಿಗೆ ಸಾಷ್ಟಾಂಗಪೂರ್ವಕವಾಗಿ ನಮಸ್ಕರಿಸಿ, ಆನಂದಾಶ್ರುಗಳಿಂದ ತುಂಬಿದ ನೇತ್ರವುಳ್ಳವನಾಗಿ, ಆ ಕ್ಷರಾಕ್ಷರಪುರುಷ ಪೂಜಿತಪಾದನನ್ನು ಈ ರೀತಿ ಸ್ತುತಿಸುತ್ತಾನೆ.

**ನಂದಕುಮಾರ** = ನಂದಗೋಪನ ಸಾಕುಪುತ್ರ. **ವಾಸುಕೀತಲ್ಪ** = ಶೇಷಶಯನನು, **ಅಪ್ರಾಕೃತಶರೀರ** ಜ್ಞಾನಾನಂದಮಯವಾದ ದೇಹ. **ಆಶ್ರಿತಮಂದಾರ** = ತನಗೆ ಶರಣಾಗತರಾದವರ ಪಾಲಿಗೆ ಕಲ್ಪವೃಕ್ಷ

ಸ್ಥಾಪಿತನು. **ವಿಪ್ರವಂಶೋದ್ಧಾರ** ಗೋ ಬ್ರಾಹ್ಮಣರ ಯೋಗಕ್ಷೇಮ ಕರ್ತನಾದ ಬ್ರಹ್ಮಣ್ಯದೇವ. ಇಲ್ಲಿ ವಿಪ್ರೋತ್ತಮನಾದ ಸುಧಾಮನ ಕುಲವನ್ನೇ ಉದ್ಧರಿಸಿದ ಶ್ರೀಕೃಷ್ಣ. **ವಿಮಲಸದ್ಗುಣಹಾರ** = ಅತ್ಯಂತ ಪರಿಶುದ್ಧವಾದ (ನಿರ್ದೋಷಿಗಳಾದ) ಅನಂತ ಕಲ್ಯಾಣಗುಣಗಳೆಂಬ ಮಾಲಾ ಧಾರನು. (ಅನಂತ ಶುಭಗುಣಗಣಧಾಮನು).

**ಕಮಲಲೋಚನ** = ಕಮಲದ ದಳಗಳಂತೆ ವಿಶಾಲನೇತ್ರವುಳ್ಳವನು. **ಕಮಲಾರಮಣ** = ಲಕ್ಷ್ಮೀಪತಿಯು. **ಕಲ್ಯಾಣಪ್ರದ** = ಸಜ್ಜನರಿಗೆ ಶುಭಕರನು. **ಕಬಂಧಮೋಕ್ಷದ** = ಶಾಪನಿಮಿತ್ತದಿಂದಾಗಿ ವಿಕಾರರೂಪವನ್ನು **ಧರಿಸಿದ್ದ** ಕಬಂಧನೆಂಬುವನನ್ನು ಸಂಹರಿಸಿ, **ಅವನಿಗೆ** ಸದ್ಗತಿಯಿತ್ತ ಶ್ರೀರಾಮಚಂದ್ರ, **ಕಲುಷಸಂಹಾರ** = ದುರಿತಗಳನ್ನು ಪರಿಹರಿಸುವ, **ಕನಕಾಂಬರಧರ** = ಪೀತಾಂಬರ ವಸ್ತ್ರಧಾರಿ. **ಕದನಾದ್ಭುತ ಬಲ** = ಯುದ್ಧದಲ್ಲಿ ಅತ್ಯಂತ ಬಲಶಾಲಿ. **ಕಮನೀಯಮಾನನ** = ಸುಂದರವಾದ ಮುಖವುಳ್ಳವನು. **ಕರಿರಾಜ ಅವನ** = ಗಜೇಂದ್ರ ಸಂರಕ್ಷಕ (ಗಜವರದ). **ಕಮಲಾಸನನುತ** = ಕಮಲಪೀಠಸ್ಥನಾದ ಬ್ರಹ್ಮದೇವರಿಂದ ಸಂಸ್ತುತ್ಯಮಾನನು. **ಕಪಿಕುಲರಕ್ಷಕ** = ಸಮಸ್ತ ವಾನರಕುಲವನ್ನು ಸಲಹಿದ ಕರುಣಾಶಾಲಿ. **ಕವಿವೃಂದಾಧಿಕ** = ಜ್ಞಾನಿಗಳಿಂದ ಸರ್ವೋತ್ತಮನೆಂದು ಹೊಗಳಲ್ಪಟ್ಟ (ಕವಿ–ಜ್ಞಾನಿಗಳು. ಅಧಿಕ–ಸರ್ವೋತ್ತಮ). **ಕಲಶಜ ಸನ್ನುತ** = ಕುಂಭೋದ್ಭವರಾದ ಅಗಸ್ತ್ಯ ಮತ್ತು ವಸಿಷ್ಠರಿಂದ ಚೆನ್ನಾಗಿ ಸ್ತುತ್ಯನಾದ (ಕಲಶ–ಕುಂಭ, ಮಡಿಕೆ) **ಕಲಶಾಬ್ಧಿ ಶಯನ** = ಕ್ಷೀರಸಾಗರಶಯನ. (ಹಿಂದೆ ಅಗಸ್ತ್ಯ ಮಹಾಮುನಿಗಳು ಇಡೀ ಕ್ಷೀರಸಮುದ್ರವನ್ನೇ ಕುಡಿದರು. ಕಲಶ–ಕ್ಷೀರಸಮುದ್ರ ಸಾಂಕೇತ). **ಕಾರ್ಮುಕಹಸ್ತ** ಕೋದಂಡವೆಂಬ ಧನುಸ್ಸನ್ನು ಹಸ್ತದಲ್ಲಿ ಹಿಡಿದಿರುವ ಶ್ರೀರಾಮಚಂದ್ರ. (ಅಥವಾ ಶಾರ್ಙ್ಗವೆಂಬ ಧನುಸ್ಸನ್ನು ಧರಿಸಿರುವ ಶ್ರೀಹರಿ), **ಕಾರಣವಿಗ್ರಹ** = ಸಮಸ್ತ ಜಗದ್ವ್ಯಾಪಾರಗಳಿಗೂ ಮುಖ್ಯ ಕಾರಣನಾದ ಪರಮಮಂಗಳಮೂರ್ತಿ. (ಮುಖ್ಯ ಕಾರಣನು). **ಕಂದರ್ಪಜನಕ** = ಮನ್ಮಥನ ತಂದೆ. **ಕಂಬುಗ್ರೀವ**

= ಕಡೆದ ಶಂಖದಂತಿರುವ ಕುತ್ತಿಗೆ. (ಕಂ—ನೀರು. ಕಂಬು—ನೀರಿನಲ್ಲಿ ಹುಟ್ಟಿದ ಶಂಖ). **ಕೈವಲ್ಯಪ್ರದ** — ಮೋಕ್ಷದಾಯಕ. **ಸುಲಭ ಧನ್ಯನಾನಾದೆ** = ನಿನ್ನ ಸುಪ್ರಸನ್ನತೆಯಿಂದ ಸುಲಭವಾಗಿ ನಾನು ಧನ್ಯನೆನಿಸಿದೆ—ಕೃತಕೃತ್ಯನಾದೆ—ಎನ್ನುತ್ತಾನೆ ಕುಚೇಲ. **ಅಪ್ರಮೇಯ** = ಸಾಕಲ್ಯೇನ ಯಾರಿಂದಲೂ ಅರಿಯಲು ಅಸಾಧ್ಯನು. **ಗೋವಿಂದ**=ವೇದಪ್ರತಿಪಾದ್ಯ. **ಅಖಿಳಲೋಕೈಕವಂದ್ಯ**=ಬ್ರಹ್ಮಾಂಡಗತ ಸಕಲಲೋಕದ ಜನಗಳಿಂದಲೂ ವಂದನೀಯನಾಗಿರುವ ಏಕೈಕವಸ್ತು.

**ದೇವಕಿವರಪುತ್ರ** = ವಸುದೇವ ದೇವಕಿಯರ ತಪಃಪ್ರಭಾವದಿಂದ ಅವರನ್ನು ಅನುಗ್ರಹಿಸಲೋಸುಗ ಅವತಾರಮಾಡಿದ ಶ್ರೀಕೃಷ್ಣ. **ದಿವ್ಯ ಶುಭಚರಿತ್ರ** = ನಿರ್ದೋಷವಾದ ಮಂಗಳಕರವಾದ ಚಾರಿತ್ರ್ಯ ಸುಶೀಲಾದಿ ಗುಣಗಳುಳ್ಳವನು. **ಭಾವಜಾಂತಕ ಮಿತ್ರ** = ರುದ್ರದೇವರ ಸಖ (ಭಾವಜ—ಮನ್ಮಥ. ಭಾವಜಾಂತಕ—ಅವನನ್ನು ದಹಿಸಿದ ರುದ್ರ).

**ಭಕ್ತಹೃತ್ಪದ್ಮಮಿತ್ರ** = ಭಕ್ತರ ಹೃತ್ಕಮಲಕ್ಕೆ ಸೂರ್ಯಸದೃಶನಾಗಿರುವ ಬಿಂಬರೂಪಿ. **ಅಗಣಿತಗುಣಗಣ** = ಅಪಾರಕಲ್ಯಾಣಗುಣಗಣಸಂಪನ್ನ. **ಅರಣೋರಣೀಯ** = ಸೂಕ್ಷ್ಮವಸ್ತುಗಳಿಗಿಂತ ಸೂಕ್ಷ್ಮತರನು. **ಅಪ್ರತಿಪುರುಷ** = ಅಸದೃಶವಸ್ತು (ನಿರುಪಮನು) **ಅನೇಕರೂಪ** = ಅನಂತಾನಂತ ರೂಪಯುಕ್ತನು. **ಅನಂತಶಯನ** = ಶೇಷಶಾಯಿ (ಅನಂತದೇವರು). **ಅಮರಾರ್ಚಿತಪದ** = ಸಮಸ್ತದೇವತಾಗಣದಿಂದ ಪೂಜಿತನಾದ ಪಾದಪದ್ಮನು. **ಅನಿರುದ್ಧ** = ಯಾವ ಪ್ರತಿರೋಧವೂ ಇಲ್ಲದ ಸರ್ವಸ್ವತಂತ್ರವಸ್ತು. **ಅತುಲಿತ ಭುಜಬಲ** — ಅಸದೃಶವಾದ ಭುಜಬಲ ಪರಾಕ್ರಮಿ **ಅಜರಾಮರಣ** = ಜನನಮರಣ ವಿದೂರನು. **ಆಶ್ರಿತರಕ್ಷಣ** = ಆಶ್ರಿತಜನಸಂರಕ್ಷಣ. **ಅಭಯಶುಭಪ್ರದ** = ಅಭಯ ಹಾಗೂ ಮಂಗಳಪ್ರದಾಯಕನು. **ಅಜ್ಞಾನ ದಳನ** = ಅಜ್ಞಾನವನ್ನು ನಾಶಮಾಡುವವನು. **ಅನುಪಮ ಪಾವನ** = ಅಸದೃಶವಾದ ಪರಮಪವಿತ್ರವಸ್ತು (ಸಕಲದೋಷವಿದೂರನು).

**ಅಂಬುಧಿ ತಲ್ಪಕ** = ಕ್ಷೀರಸಾಗರಶಾಯಿ (ಅಂಬುಧಿ–ಕ್ಷೀರಸಮುದ್ರ. ತಲ್ಪಕ–ಹಾಸಿಗೆ). **ಅಂಬುಧಿಬಂಧನ** = ದಕ್ಷಿಣಸಮುದ್ರಕ್ಕೆ ಸೇತುವೆ ಕಟ್ಟಿದ ಶ್ರೀಸೇತೂರಾಮಮೂರ್ತಿ. **ಶ್ರೀವತ್ಸ ವನಮಾಲ** = ಲಕ್ಷ್ಮಿಯನ್ನು ಶ್ರೀವತ್ಸವೆಂಬ ಲಾಂಛನರೂಪದಲ್ಲಿ ತನ್ನ ವಕ್ಷಸ್ಥಳದಲ್ಲಿ ಧರಿಸಿರುವ ಶ್ರೀಹರಿ. ವನಮಾಲಾಧಾರ. **ಶೃಂಗಾರಗೋಪಾಲ** = ಶೃಂಗಾರವಾದ ಮಂಗಳವಿಗ್ರಹ. ಗೋವುಗಳನ್ನು ಕಾಯ್ದ ಶ್ರೀಕೃಷ್ಣ. (ಬ್ರಾಹ್ಮಣರ ಪಾಲ).

**ಸರ್ವಂ ಸಹಾಧಾರ** = ಸಮಗ್ರಬ್ರಹ್ಮಾಂಡವನ್ನೇ ಧರಿಸಿರುವ ಆಧಾರಭೂತ–ಆಶ್ರಯದಾತನು. **ಶರಧಿಗಂಭೀರ** = ಸಮುದ್ರದಂತೆ ಗಾಂಭೀರ್ಯವುಳ್ಳವನು. **ರಥಾಂಗಪಾಣಿ** = ಚಕ್ರಪಾಣಿ (ರಥಾಂಗ–ಚಕ್ರ). **ರಣಜಯಚತುರ** = ಸಂಗ್ರಾಮಚತುರ. **ರಜನೀಚರಹರ** = ರಾತ್ರೀಸಂಚಾರಿಗಳಾದ ದೈತ್ಯರನ್ನು ಸಂಹರಿಸುವವನು (ರಜನೀ–ರಾತ್ರಿ). **ರಮಾವಿನೋದ** = ಶ್ರೀಲಕ್ಷ್ಮೀದೇವಿಗೆ ಆನಂದವನ್ನು ಕೊಡುವವನು. **ರವಿಶಶಿನಯನ** = ಸೂರ್ಯ ಚಂದ್ರರನ್ನೇ ತನ್ನ ನೇತ್ರ ದ್ವಯವನ್ನಾಗಿ ಉಳ್ಳವನು. **ರಸಿಕಾಗ್ರೇಸರ** = ಶೃಂಗಾರ ಶಿಖಾಮಣಿ. **ರಘುಕುಲವಲ್ಲಭ** = ರಘುವಂಶಲಲಾಮ. **ರಾಕೇಂದುವದನ** = ಶರತ್ಕಾಲದ ಪೂರ್ಣಚಂದ್ರಬಿಂಬದಂತಿರುವ ಮುಖವುಳ್ಳವನು. **ರಾಜಶೇಖರ** = ರಾಜರ ಕುಲಕ್ಕೆ ಶ್ರೇಷ್ಠವಸ್ತು. **ರಾಧಾಲೋಲ** = ರಾಧೆಯನ್ನು ರಮಿಸುವ, **ರಾಜಸದೂರ** = ರಾಜಸಗುಣದಿಂದ ವಿದೂರ. (ಪ್ರಾಕೃತಗುಣತ್ರಯಗಳಿಂದಲೂ ವಿದೂರ). **ರಾಜಾನ್ವಯಭಯ** = ರಾಜರುಗಳ ಸಮೂಹಕ್ಕೆ ಭಯಂಕರವಾದ ಪರಶುರಾಮ. **ರಾಮ ಅಭಿರಾಮ** = ಮನೋಹರಮೂರ್ತಿ ಶ್ರೀರಾಮಾಬಿಧನೇ. **ಬಲಾಂತಕ** = ಇಂದ್ರ **ರಾಜೀವನಾಭ** = ಪದ್ಮನಾಭ. **ರಾಮಸಹೋದರ** = ಬಲರಾಮನ ತಮ್ಮ. **ರಮ್ಯಚರಣಯುಗ** = ನಯನಮನೋಹರವಾದ ಪಾದಪದ್ಮಯುಗಳನು. **ರಂಜಿತಗಾತ್ರ** = ಪ್ರಕಾಶಮಾನವಾದ ದೇಹ. **ರಂಭೋರುದ್ವಯ** = ಕದಳಿಯ ಸ್ತಂಭಗಳನ್ನು ಹೋಲುವ ಎರಡು

ತೊಡೆಗಳು. ನಿರ್ವಾಣಪದವೀವ = ಮೋಕ್ಷಸಾಮ್ರಾಜ್ಯವನ್ನು ದಯಪಾಲಿಸುವ.

❋❋

## ೬೮೨

## (ಕುಚೇಲೋಪಾಖ್ಯಾನದಿಂದ)

**ರಾಗ–ಘಂಟಾ** **ಅಟತಾಳ**

ಜಯ ಜಯ ಮಾಧವ ಜಯ ಜಯ ಕೇಶವ
ಜಯ ಯದುಕುಲರಾಜ
ಜಯ ಜಯ ಶ್ರೀಧರ ಜಯ ಜಯ ಭೂಧರ
ಜಯ ಮಮ ಸುರಭೂಜ ॥ ॥೧॥

ಪಂಕಜಲೋಚನ ಪಾಪವಿಮೋಚನ
ಶಂಕರನುತನಾಮ
ಕಿಂಕರಲೋಕದ ಸಂಕಟಹರಣಾಕ
ಳಂಕ ಸುಗುಣಧಾಮ ॥ ॥೨॥

ನಿನ್ನಯ ಶುಭವದನೀರಜ ದರುಶನ
ವನ್ನು ಹರುಷದಿಂದ
ಕಣ್ಣಲಿ ಕಂಡೆ ಪ್ರಸನ್ನದಿ ನಾ ಕಡು
ಧನ್ಯನು ಗೋವಿಂದ ॥ ॥೩॥

ಎನ್ನಯ ಪ್ರಾರಬ್ಧಾದಿ ದುರಿತಗಳು
ಭಿನ್ನವಾಯಿತು ಹರಿಯೆ

ಪನ್ನಂಗಶಯನಾಪನ್ನವರದ ಸುರ
ಸನ್ನುತ ನರಹರಿಯೇ ॥ ॥೪॥

ಅಂಗಜಜನಕ ವಿಹಂಗಾರೋಹಣ
ರಂಗನಾಥ ಶೌರೇ
ಮಂಗಳಫಲದ ಶುಭಾಂಗ **ಖಾದ್ರಿ ನರ**
**ಸಿಂಗ** ಶ್ರೀಮುರಾರೇ ॥ ॥೫॥



**ಅರ್ಥವಿವರಣೆ :-**

ಸುಧಾಮನು ಅವಲಕ್ಕಿಯನ್ನು ನೀಡಿದ ನಂತರ, ಪರಮಸಂತುಷ್ಟ ನಾದ ಶ್ರೀಕೃಷ್ಣನನ್ನು ಸ್ತೋತ್ರಮಾಡಿದ ಈ ಕೀರ್ತನಸಾಹಿತ್ಯವನ್ನು ತಿಪಣ್ಣಾರ್ಯಕವಿ ವಿರಚಿತ- **"ಕುಚೇಲೋಪಾಖ್ಯಾನ"**ದಿಂದ ಆಯ್ಕೆ ಮಾಡಲಾಗಿದೆ.

**ಜಯ ಜಯ** = ನಿನ್ನ ಪರಮಾನುಗ್ರಹದಿಂದ ನನಗೆ ಜಯವಾಗಲಿ- ಎಂದು ಪ್ರಾರ್ಥಿಸುತ್ತಾನೆ ಭಕ್ತೋತ್ತಮ ಸುಧಾಮ. **ಯದುಕುಲರಾಜ** = ಯದುವಂಶಶ್ರೇಷ್ಠನಾದ ಶ್ರೀಕೃಷ್ಣ.

**ಕೇಶವ** = ಬ್ರಹ್ಮರುದ್ರಾದಿಗಳಿಗಿಂತ ಪರಮಶ್ರೇಷ್ಠನು (ಕಂ-ಬ್ರಹ್ಮ. ಈಶ-ರುದ್ರ. ವ-ಕಾರದಿಂದ ಶ್ರೇಷ್ಠ). **ಶ್ರೀಧರ** = ಶ್ರೀಲಕ್ಷ್ಮೀದೇವಿ ಯನ್ನು ತನ್ನ ವಕ್ಷದಲ್ಲಿ ಧರಿಸಿರುವವನು. (ಶ್ರೀಲಕ್ಷ್ಮೀ ಶ್ರೀಹರಿಯ ನಿತ್ಯಾ ವಿಯೋಗಿನಿ). **ಭೂಧರ** = ಭೂದೇವಿಯನ್ನು ಎತ್ತಿ ಉದ್ಧರಿಸಿದ ಶ್ರೀವರಾಹರೂಪೀ ಶ್ರೀಹರಿ (ಭೂರಮಣ). **ನಮ ಸುರಭೂಜ** = ನಮ್ಮಗಳ ಪಾಲಿಗೆ ನೀನು ಕಲ್ಪವೃಕ್ಷಸದೃಶನು (ಸುರ-ದೇವತೆಗಳ, ಭೂಜ- ಮರ, ಕಲ್ಪವೃಕ್ಷ).

**ಪಂಕಜಲೋಚನ** = ಕಮಲದಳದಂತೆ ವಿಶಾಲನೇತ್ರನು (ಪಂಕಜ– ಕೆಸರಿನಲ್ಲಿ ಹುಟ್ಟಿದ ಕಮಲ ಪುಷ್ಪ). **ಪಾಪ ವಿಮೋಚನ** = ಸಜ್ಜನರ ಪಾಪಪರಿಹಾರಕನು ಶ್ರೀಹರಿ. **ಶಂಕರನುತನಾಮ** = ರುದ್ರನಿಂದ ಸ್ತುತ್ಯಪಾದನಾಮವುಳ್ಳವನು (ರಾಮತಾರಕ ನಾಮ) **ಕಿಂಕರಲೋಕದ** = ನಿನ್ನ ಭೃತ್ಯವರ್ಗದವರ, **ಸಂಕಟಹರಣ** = ದುಃಖ ಪರಿಹಾರಕನು. **ಅಕಳಂಕ** = ನಿರ್ದೋಷವಸ್ತು. **ಸುಗುಣಧಾಮ** = ಅನಂತಕಲ್ಯಾಣ ಗುಣಗಣ ಪರಿಪೂರ್ಣನು.

**ಶುಭಪದನೀರಜ** = ಪರಮಮಂಗಳಕರವಾದ ಪಾದಕಮಲಗಳ ದರ್ಶನಭಾಗ್ಯ (ನೀರಜ– ನೀರಿನಲ್ಲಿ ಉತ್ಪತ್ತಿಯಾಗುವ ಕಮಲಪುಷ್ಪ) **ಕಡುಧನ್ಯನು** = ಅತ್ಯಂತ ಧನ್ಯನಾನಾದೆ. **ಭಿನ್ನವಾಯಿತು** = ನನ್ನ ಪ್ರಾರಬ್ಧಜನಿತ ದುಃಖಗಳು ಪರಿಹಾರವಾದುವು ನಿನ್ನ ಮಂಗಳ ದರ್ಶನ ದಿಂದ. **ಪನ್ನಂಗಶಯನಾ** = ಶೇಷಶಾಯಿ. **ಆಪನ್ನವರದ** = ಆಪತ್ತಿ ನಲ್ಲಿರುವ ದೀನರಾದ ನಿನ್ನ ಭಕ್ತರನ್ನು ಅನುಗ್ರಹಿಸುವವನು. **ಸುರಸನ್ನುತ** = ದೇವತೆಗಳಿಂದ ಸಂಸ್ತುತ್ಯಮಾನನೇ.

**ಅಂಗಜಜನಕ** = ಮನ್ಮಥನ ತಂದೆ (ಅಂಗಜ– ಶ್ರೀಹರಿಯ ಮನಸ್ಸಿನಿಂದ ಜನಿಸಿದ ಮನ್ಮಥನು) **ವಿಹಂಗಾರೋಹಣ** = ಗರುಡವಾಹನನು. (ವಿಹಂಗ– ಆಕಾಶದಲ್ಲಿ ಸಂಚರಿಸುವ ಪಕ್ಷಿಗಳು. ಅವುಗಳಲ್ಲಿ ಶ್ರೇಷ್ಠನಾದ ಶ್ರೀಗರುಡದೇವರು) **ಶೌರೇ** = ಶೂರಸೇನರಾಜನ ಕುಲೋದ್ಭವನಾದ ಶ್ರೀಕೃಷ್ಣ **ಮಂಗಳಫಲದ** = ಅತ್ಯಂತ ಶುಭವಾದ ಮೋಕ್ಷವನ್ನೇ ಫಲರೂಪದಲ್ಲಿ ಕರುಣಿಸುವ. **ಶುಭಾಂಗ** = ಅಪ್ರಾಕೃತ ಸುಂದರ ದೇಹವುಳ್ಳವನು. **ಮುರಾರೇ** = ಮುರಾ– ಎಂಬ ದೈತ್ಯನನ್ನು ಸಂಹರಿಸಿದ ಶ್ರೀಕೃಷ್ಣ.

ಕೀರ್ತನೆ

(ಅಂಕಿತ-ಖಾದ್ರಿ ನರಸಿಂಹ)

ದಶಾವತಾರಸ್ತುತಿ (ಶೋಭಾನೆ ಪದ)

**ರಾಗ-ನವರೋಜು** **ಛಾಪುತಾಳ**

ಸೋಮಕಾಸುರನೆಂಬ ತಾಮಸನಸುವ ವಿ-
ರಾಮವಗೈದು ಸುರಸ್ತೋಮಕಮೃತವೀಯ
ಭೂಮಿಧರವನುದ್ಧಾಮದಿ ಧರಿಸಿದ
ಶ್ರೀಮನ್ಮಂಗಳಧಾಮ ರಮಾಧಿಪ
ಸ್ವಾಮಿ ಬಾರೆಂದು ಕರೆದರು- ಶೋಭಾನೆ ॥ ॥೧॥

ಧರಣಿದೇವಿಯನಪಹರಿಸಿದ ದನುಜನ
ಹರಣವಳಿದು ನಿಜಶರಣ ಬಾರೆಂದು ನಿನ್ನ
ಕರೆಯಲು ಕಂಭದಿ ನರಹರಿರೂಪವ
ಧರಿಸಿದ ವಿಶ್ವಂಭರ ಕರುಣಾಕರ
ಸರಸಿಜನಾಭಾ- ಹಸೆಗೇಳು- ಶೋಭಾನೆ ॥ ॥೨॥

ಬಲಿಯ ದಾನವ ಬೇಡಿ ನೆಲನ ಈರಡಿಮಾಡಿ
ಗೆಲಿದು ದುಷ್ಟರಾಯರ ಕುಲವ ಕೌಸಲ್ಯಾಗರ್ಭ
ಜಲನಿಧಿಯಲಿ ಪ್ರಜ್ವಲಿಸಿದೆ ಶಶಿಯಂ
ತಲಘುಪರಾಕ್ರಮನಿಲಯನೆ ರಘುಕುಲ
ತಿಲಕ ಬಾರೆಂದು- ಕರೆದರು- ಶೋಭಾನೆ ॥ ॥೩॥

ದಾರಿದ್ರ್ಯಕಂಜಿ ತನ್ನ ನಾರಿಪೋಗೆನ್ನೆ ಸಖ
ನಾರಾಯಣನೆಂತೆಂದು ಸಾರಿದ ಸುಧಾಮನ
ಸಾರರಹಿತ ಸಂಸಾರಭಯವ ನಿ-
ವಾರಣಗೊಳಿಸಿದಕಾರಣ ವರದ ಮು-
ಹೀರಮಣ ಕೃಷ್ಣಾ- ಹಸಗೇಳು- ಶೋಭಾನೆ ॥ ॥೪॥

**ಹರನಬಾಣದಿನಿಂದು ಪುರಜಸುರರುಹಿ** ಗುರು–
ತರದ ತುರಗವನೇರಿ ಬರುವ ಶ್ರೀನವಸಾಲ
ಪುರಿನಿಲಯನೆ **ಖಾದಿರಿ ನರಸಿಂಹ** ಸು–
ಚರಿತನೆ ತ್ರಿಜದ್ಭರಿತನೆ ಪರತರ
ಪರಮಾತ್ಮ ಕೃಷ್ಣಾ– ಹಸೆಗೇಳು– ಶೋಭಾನೆ ॥ ॥೫॥



**ಅರ್ಥವಿವರಣೆ :–**

ಈ ಕೀರ್ತನೆಯಲ್ಲಿ ಕವಿಯು ಶ್ರೀಹರಿಯು ದಶಾವತಾರಸ್ತೋತ್ರದ ರೂಪದಲ್ಲಿ ಶೋಭಾನೆ ಪದವನ್ನು ಅಳವಡಿಸಿದ್ದಾನೆ.

**ಸೋಮಕಾಸುರನೆಂಬ** = ಸೋಮಕನೆಂಬ ಹೆಸರಿನ ದೈತ್ಯನು (ಇವನಿಗೆ 'ತಮ'– ಎಂದು ಇನ್ನೊಂದು ಹೆಸರು). **ತಾಮಸನ ಅಸುವ ವಿರಾಮಗೈದು** = ಮತ್ಸ್ಯರೂಪದಿಂದ ಶ್ರೀಹರಿಯು ತಮೋಯೋಗ್ಯನಾದ ಆ ಅಸುರನನ ಅಸುವನ್ನು ಅಪಹರಿಸಿದನು (ಕೊಂದನು). **ಸುರಸ್ತೋಮಕೆ** = ದೇವತಾವರ್ಗಕ್ಕೆ, **ಭೂಮಿಧರ** = ಭೂಮಿಯನ್ನು ಅಧರಿಸಿರುವ ಪರ್ವತ, ಇಲ್ಲಿ ಮಂದರಪರ್ವತ ಎಂದರ್ಥ. **ಉದ್ಧಾಮದಿ ಧರಿಸಿದ** = ಕರ್ಮರೂಪದಿಂದ ತನ್ನ ಬೆನ್ನಿನ ಡುಬ್ಬದ ಮೇಲೆ (ಉದ್ಧಾಮದಿ) ಧರಿಸಿದ ಕೂರ್ಮಾವತಾರಿ ಶ್ರೀಹರಿ; **ಶ್ರೀಮನ್ಮಂಗಳಧಾಮನು** = ಮುಕ್ತಿಧಾಮವೆನಿಸಿದ ವೈಕುಂಠದ ನಿವಾಸಿ (ಅಥವಾ ಶ್ರೀಯನ್ನು ತನ್ನ ವಕ್ಷಸ್ಥಳದಲ್ಲಿ ಧರಿಸಿದ) **ರಮಾಧಿಪ** = ಶ್ರೀ ಲಕ್ಷ್ಮೀಪತಿ, **ಶೋಭಾನೆ** = ಎಮಗೆ ಶುಭವನ್ನು ಕೊಡು.

**ಧರಣಿದೇವಿಯನು ಅಪಹರಿಸಿದ** = ಭೂದೇವಿಯನ್ನು ಕದ್ದೊಯ್ದ **ದನುಜನ** = ಹಿರಣ್ಯಾಕ್ಷನೆಂಬ ದೈತ್ಯನ, **ಹರಣವಳಿದು** = ಜೀವವನ್ನು ತೆಗೆದು, (ಕೊಂದು) **ವಿಶ್ವಂಭರ** = ಸಮಸ್ತವಿಶ್ವ

ವನ್ನೇ ತನ್ನ ಉದರದಲ್ಲಿ ಧರಿಸಿದ ಶ್ರೀ ಹರಿ. **ಸರಸಿಜನಾಭ** = ನಾಭಿಯಲ್ಲಿ ಸುವರ್ಣಾತ್ಮಕವಾಗಿ ಕಮಲವನ್ನು ಪಡೆದ, **ಹಸೆಗೇಳು** = ಹಸೆಗೆ ಬಾ.

**ಈರಡಿಯನಾಡಿ** = ಎರಡು ಪಾದಗಳಿಂದ ಅಳೆದ ಶ್ರೀ ವಾಮನ ಮೂರ್ತಿ, **ದುಷ್ಟರಾಯರ ಕುಲವ** = ದುಷ್ಟಸ್ವಭಾವವುಳ್ಳ ಕ್ಷತ್ರಿಯರ ವಂಶವನ್ನು ನಾಶಮಾಡಿದ ಶ್ರೀಪರಶುರಾಮ. **ಕೌಸಲಗರ್ಭಜಲನಿಧಿಯಲಿ** = ಕೌಸಲ್ಯಾದೇವಿಯ ಗರ್ಭಾಂಬುಧಿಯಲ್ಲಿ. **ಪ್ರಜ್ವಲಿಸಿದೆ** = ಅವತರಿಸಿದ ಶ್ರೀರಾಮ. **ಶಶಿಯಂತೆ** = ಚಂದ್ರನ ಪ್ರಕಾಶದಂತೆ ಬೆಳಗಿದೆ. **ಅಲಘುಪರಾಕ್ರಮನಿಲಯನೆ** = ಅತ್ಯಂತ ಶ್ರೇಷ್ಠವಾದ ಪರಾಕ್ರಮವಂತ (ಲಘು–ಸ್ವಲ್ಪ, ಅಲಘು–ಹೆಚ್ಚಾದ) **ರಘುಕುಲತಿಲಕ ಬಾರೆಂದು** = ರಘುವಂಶಲಲಾಮ-ನೀ ಹಸೆಗೆ ಬಾರೆಂದು ಕರೆದರು.

**ದಾರಿದ್ರ್ಯಕಂಜಿ** = ಬಡತನಕ್ಕೆ ಹೆದರಿ, **ತನ್ನ ನಾರಿ ಪೋಗೆನ್ನೆ** = ಸುಧಾಮನ ಪತ್ನಿಯಾದ ಸುಶಿಲಾದೇವಿಯು ಹೋಗಿ ಶ್ರೀಕೃಷ್ಣನ ದರ್ಶನ ಪಡೆದು ಬಾರೆಂದು ಕಳುಹಿಸಿರಲಾಗಿ, **ಸಾರರಹಿತ** = ನಿಸ್ಸಾರವಾದ. **ನಿವಾರಣಗೊಳಿಸಿದ** = ಭವದ ಭಯವನ್ನು ಪರಿಹಾರಮಾಡಿದ. **ಕಾರಣ** = ಸಮಸ್ತಕ್ಕೂ ಕಾರಣಕರ್ತನಾದ. **ವರದ** = ಅನುಗ್ರಹಪ್ರದನಾದ. **ಮಹೀರಮಣ** = ಭೂರಮಣನೇ (ಮಹೀ–ಭೂಮಿ).

**ಹರನ ಬಾಣದಿನಿಂದು** = ಶ್ರೀರುದ್ರದೇವರ ಬಾಣದಲ್ಲಿ ಸನ್ನಿಹಿತನಾಗಿ, **ಪುರವನುರಹಿದ** = ತ್ರಿಪುರಾಸುರನನ್ನು ಸಂಹರಿಸಿದ (ಬುದ್ಧರೂಪ). **ಗುರುತರದ ತುರಗವನೇರಿ** = ವೇಗದಿಂದ ಸಂಚರಿಸುವ ಕುದುರೆಯನ್ನೇರಿದ ಕಲ್ಕ್ಯವತಾರಿ. **ಶ್ರೀನವಸಾಲಪುರಿ ನಿಲಯನೆ** = ಹೊಸಕೋಟೆಯಲ್ಲಿ ನೆಲೆಸಿರುವ. **ತ್ರಿಜಗದ್ಭರಿತನೆ** = ಮೂರುಲೋಕಗಳಲ್ಲೂ ವ್ಯಾಪಿಸಿರುವ.

## ಜಿಲಳಿ

(ಶ್ರೀಕೃಷ್ಣವಿಠ್ಠಲಾಂಕಿತ)

**ರಾಗ–ಧನಾಸರಿ** **ಆದಿತಾಳ**

ಮಗುವು ಅಲ್ಲ ಕಾಣೆ ಗೋಪಿ ಇವನು ನಿನ್ನಾ ॥ ॥ಪ॥

ಜಗವ ನಿರ್ಮಿಸಿ ಪಾಲಿಸಿ ಅಳಿಸುವ
ಅಗಣಿತ ಸುಗುಣಾಭರಣನೆ–ಇವನು ॥ ॥ಅ॥

ಬೆಣ್ಣೆಯು ಕದ್ದನು ಸಣ್ಣವನಿಹ ಬಹು
ಚಿಣ್ಣರ ಕೂಡುತ ಗೋಗಣ ಕಾಯುವ
ಮನ್ಮನ ಪುತ್ಥಳಿ ಕಳಿಸುವದಾಗದು
ಎನ್ನುವ ನುಡಿಗಳ ಬದಿಗಿಡು ತಾಯೇ ॥
ಉಣ್ಣುತ ಉಣ್ಣುತ ಮೊಲೆಯನು ಕೊಂದಿಹ
ಉನ್ನತ ರಕ್ಕಸಿ ಪೂತನಿಯನ್ನಿವ
ಮಣ್ಣನು ಕಂಡರು ಕಂಸನ ದೂತರು
ಪೂರ್ಣಾನಂದನು ಸರಿ ಇವನಮ್ಮ ॥ ॥೧॥

ಜಾರ ಚೋರ ಸುಕುಮಾರನು ಸುಂದರ
ನಾರೇರ ಒಲಿಸಿ ಸೇರಿದ ನಿಶೆಯಲಿ
ಘೋರನೆಂಬ ಮನ ದೂರವಗೈದು ಗ–
ಭೀರ ಮಹಿಮ ಜಗ ಸಾರನೆಂದರಿಯೆ ॥

ಭಾರಿಗಿರಿಯನೆತ್ತಿ ಊರಿಗೆ ಊರನು
ಸೇರಿಸಿ ಪೊರೆದಿಹಪಾರಮಹಿಮ ಜಂ–
ಭಾರಿ ದರ್ಪಹರ ಘೋರನೆ ಬಿಡು ಬಿಡು
ಸೀರೆಯ ನಿಗಮಸಂಚಾರನು ಖರೆಯ ॥ ॥೨॥

ಕಾಲ್ಗಳು ಸೋಕಲು ಶಕಟನು ಬಿದ್ದನು
ಸೀಳುತ ಕೊಕ್ಕನು ಬಕನಂ ಕೊಂದನು
ಕಾಳಿಯ ತುಳಿಯುತ ಗರ್ವವನಿಳಿಸಿದ
ಲೀಲಾಜಾಲದಿ ಜ್ವಾಲೆಯ ನುಂಗಿದ ॥
ಬಾಲರು ಕೇಳಲು ಆಲಯ ತೋರಿದ
ಪಾಲಿಸಿ ವರುಣನ ತಂದೆಯ ತಂದನ
ಲೋಲನೆ ನರಿ ಜಗಮೂಲನು ಕೇಳೆ ॥ ॥೩॥

ನಾರಿಯು ಆಗುತ ಮೋಹವ ತುಂಬಿದ
ನೀರಜನಾಭಗೆ ಗೊಲ್ಲತಿಯ ಗುಣ
ಬೀರಲು ಸಾಧ್ಯವೇ ಮೋಹವನೆಂದಿಗು
ಶ್ರೀರತಿದಾಯಕ ಕೊಳ್ಳುವನೇ ರತಿ ॥
ಮಾರನ್ನೈಯ್ಯ ಭವತಾರಕ ಶುಭ ಶೃಂ-
ಗಾರಪೂರ್ಣ ಪರಿಮಾರದಭೀಷ್ಟವ
ಪೂರೈಸಿದ ದೋಷವಿದೂರ ॥ ॥೪॥

ಮಲ್ಲಗೆ ಬಾಯೊಳು ಎಲ್ಲವ ತೋರಿದ ಮಲ್ಲನು ಸರ್ವರ
ವಲ್ಲಭ ಸಿದ್ಧವು ಗೊಲ್ಲನ ವೇಷದಿ
ಇಲ್ಲಿಹನಮ್ಮ ಇಲ್ಲವೆ ಸಮರಿವಗೆಲ್ಲಿಯು ಸತ್ಯ
ಮಲ್ಲರ ಮರ್ಧಿಸಿ ಕೊಲ್ಲುತ ಕಂಸನ ॥
ನಿಲ್ಲಿಸಿ ಧರ್ಮವ ಕಾಯುವ ನಮ್ಮ
ಬಲ್ಲಿದ ಶ್ರೀಕೃಷ್ಣವಿಠಲನ ಬೇಗನೆ
ನಿಲ್ಲಿಸಿಕೊಳ್ಳದೆ ಕಳುಹೇ ತಾಯಿ ॥ ॥೫॥



**ಅರ್ಥವಿವರಣೆ :-**

**ಶ್ರೀಕೃಷ್ಣವಿಠ್ಠಲಾಂಕಿತ** ದಾಸವರ್ಯರು ಶ್ರೀಉರಗಾದ್ರಿವಾಸ ವಿಠ್ಠಲಾಂಕಿತ ದಾಸವರೇಣ್ಯರ ಶಿಷ್ಯವರ್ಗದಲ್ಲಿ ಅತ್ಯಂತ ಪ್ರಮುಖರು. ಶ್ರೀಯುತರು **ಶ್ರೀಕೃಷ್ಣಚರಿತಾಮೃತ**- ವೆಂಬ ದಶಮಸ್ಕಂಧ **ಭಾಗವತದ** ಶ್ರೀಕೃಷ್ಣನ ಬಾಲಲೀಲೆಗಳು, ಅವನ ಅಪಾರಮಹಿಮೆಗಳನ್ನು ಆಧರಿಸಿದ ಉದ್ಗ್ರಂಥವನ್ನು ರಚಿಸಿರುತ್ತಾರೆ. ಅದು ಮುದ್ರಣವಾಗಬೇಕಾಗಿದೆ. ಅಲ್ಲದೆ **ದಶೋಪನಿಷತ್ತು**ಗಳನ್ನು ಭಾಮಿನಿಷಟ್ಪದಿಯಲ್ಲಿ ರಚಿಸಿರುವ ಜ್ಞಾನಿ ಶ್ರೇಷ್ಠರಿವರು ಶ್ರೀಮದಾಚಾರ್ಯರ ಉಪನಿಷದ್ಭಾಷ್ಯ. ಶ್ರೀಮನ್ಮಂತ್ರಾಲಯರಾಯರ ಖಂಡಾರ್ಥಗಳನು ಭಾವವನ್ನು ಸರ್ವಾಂಗಸುಂದರವಾಗಿ ಚಿತ್ರಿಸಿದ್ದಾರೆ. ಇನ್ನೂ ಅನೇಕ ಪದ- ಪದ್ಯ- ಸುಳಾದಿಗಳನ್ನು ರಚಿಸಿರುತ್ತಾರೆ. ಪ್ರಕಾಶಕರ ಚಿಕ್ಕಪ್ಪಂದಿರು. ಈ ಎಲ್ಲಾ ಕೃತಿರತ್ನಗಳೂ ಬೆಳಕಿಗೆ ಬರಬೇಕಾಗಿವೆ. ಶ್ರೀಹರಿಚಿತ್ತವಿದ್ದರೆ ಆಗಲಿ.

**ಮಗುವು ಅಲ್ಲವು ಕಾಣೆ** = ಯಶೋದೆಗೆ ಹೇಳುತ್ತಾರೆ-ಶ್ರೀಕೃಷ್ಣನು ಸಾಮಾನ್ಯವಾದ ಶಿಶುವಲ್ಲ. ಲೋಕೋದ್ಧಾರಕನಾದ ಧರ್ಮಸ್ವರೂಪಿ ಶ್ರೀಹರಿಯೇ ಅವನು. ಅವತಾರಪುರುಷ. **ಜಗವ ನಿರ್ಮಿಸಿ** = ವಿದ್ಯಮಾನವಾದ ಬ್ರಹ್ಮಾಂಡವನ್ನು ತನ್ನ ಇಚ್ಛಾಮಾತ್ರದಿಂದ ಸೃಷ್ಟಿಸಿ, ಕಾರುಣ್ಯ ವಿಶೇಷದಿಂದ ಪಾಲಿಸಿ, ಲೀಲಾವಿಶೇಷದಿಂದ ಸಂಹರಿಸುವ ಅಷ್ಟಕರ್ತನು. **ಅಗಣಿತ ಸುಗುಣಾಭರಣನು** = ಅಪರಿಚ್ಛಿನ್ನವಾದ, ಅಸದೃಶವಾದ ಅನಂತಕಲ್ಯಾಣಗುಣಗಣಭರಿತನು.

**ಬೆಣ್ಣೆಯ ಕದ್ದನು** = ಸಕಲಲೋಕವೇ ಅವನದಾಗಿರಲು, ಗೋಪಿಯರ ಮನೆಯಲ್ಲಿ ಬೆಣ್ಣೆಯನ್ನು ಕದ್ದ ಸ್ವರಮಣನು. ಬೆಣ್ಣೆಯು ಕ್ಷೀರದಸಾರ. ಅಂತೆಯೇ ಸರ್ವಸಾರಭೋಕ್ತನು **ಚಿಣ್ಣರ ಕೂಡುವ** = ಮಹತ್ತಿಗೆ ಮಹತ್ತಾದ ಆ ಮಹಾಮಹಿಮನು ಚಿಕ್ಕ ಚಿಕ್ಕ ಗೋಪಾಲಬಾಲರೊಡನೆ ಲೀಲೆಯಾಡಿದವನು **ಗೋಗಣ ಕಾಯುವ** = ನಿರಪೇಕ್ಷನಾದರೂ ಗೋವುಗಳನ್ನು ಕಾಯ್ದ ಗೋಪಾಲನು. (ಗೋ- ವೇದಗಳು, ವೇದಗಳಿಂದ ಪ್ರತಿ

ಪಾದ್ಯನು. ಸದಾಗಮೈಕವೇದ್ಯನು). **ಮನ್ಮನ ಪುಥ್ಥಳಿ** = ನನ್ನ ಮನಸ್ಸಿನ ದಿವ್ಯಮಂಗಳಪ್ರತೀಕನು. **ಕಳಿಸುವುದಾಗದು** = ಅವನನ್ನು ಬಿಟ್ಟಿರಲಾರೆ- ಮಥುರಾನಗರಿಗೆ ಅಕ್ರೂರನೊಡನೆ ಕಳುಹಿಸಲಾರೆ- ಎಂಬ ಭ್ರಮೆಯನ್ನು ಬಿಡು. ನಿನ್ನ ಕೈಗೆ ಎಟುಕದ ಅಪ್ರಮೇಯನವನು.

**ಉನ್ನತ ರಕ್ಕಸಿ** = ಜನಿಸಿದ ಏಳನೆಯ ದಿನವೇ ದುಷ್ಟ ರಕ್ಕಸಿ ಪೂತನಿಯನ್ನು ಮೊಲೆಯ ಹಾಲನ್ನು ಹೀರುವ ನೆಪದಲ್ಲಿ ಸಂಹರಿಸಿದ ಅಸದೃಶ ಮಹಿಮನು. **ಮಣ್ಣನು ಕಂಡರು** = ಕಂಸಾಸುರನಿಂದ ಕಳುಹಿಸಲ್ಪಟ್ಟ ದೈತ್ಯರೆಲ್ಲರೂ ಮಣ್ಣುಮುಕ್ಕಿ ನಾಶಹೊಂದಿದರು. **ಪೂರ್ಣಾನಂದನು** – ಆ ದುಷ್ಟರಿಂದ ಏನೇನೂ ಹಾನಿಯಾಗದ **ಪೂರ್ಣಾನಂದಪರಿಪೂರ್ಣನು. ಜಾರ ಚೋರ** = ಲಕ್ಷ್ಮೀಪತಿಯಾದ ಆ ಲಕ್ಷಣವಂತನು ಜಾರನೇ ? ಅನಂತಬ್ರಹ್ಮಾಂಡದ ಒಡೆಯ ಚೋರನೆನಿಸುವನೇ ? **ನಾರೇರ ಒಲಿಸಿ** = ಸ್ವರಮಣನಾದ ಆಪ್ತಕಾಮನು ಪರಾಪೇಕ್ಷರಹಿತನು. ಸ್ವಾನಂದಪೂರ್ಣನು ಆದರೂ ಗೋಪಸ್ತ್ರೀಯರನ್ನು ಉದ್ಧರಿಸುವ ನಲುವಾಗಿ ತನ್ನ ಭಗವದ್ರೂಪಗಳಲ್ಲಿಯೇ ರಮಿಸಿ, ಅವರಿಗೆ ತೃಪ್ತಿಪ್ರದನಾದ ನಿತ್ಯತೃಪ್ತನು. **ಪೋರನೆಂಬುವ ಮನ** = ಅವನು ತುಂಟ-ಎಂಬ ಅಭಿಪ್ರಾಯವನ್ನು ನಿನ ಮನಸ್ಸಿನ ಆಳದಿಂದ ಬೇರುಸಹಿತ ಕಿತ್ತೊಗೆದು, ಆ ಗಂಭೀರನಿಧಿಯನ್ನು ಜಗದ ಸರ್ವಸಾರನೆಂದು ತಿಳಿ.

**ಭಾರಿಗಿರಿಯನೆತ್ತಿ** = ಉನ್ನತವಾದ ಗೋವರ್ಧನಗಿರಿಯನ್ನು ತನ್ನ ಕೈಕಿರುಬೆರಳಿನಿಂದ ಲೀಲಾಜಾಲವಾಗಿ ಎತ್ತಿ ಹಿಡಿದು, ಎಡಬಿಡದೆ ಸುರಿಯುತ್ತಿದ್ದ ಮಳೆಯಿಂದ ಸಕಲ ಗೋಪಾಲಕರನ್ನು ಸಂರಕ್ಷಿಸಿದ ಗೋವಿಂದನು. **ಜಂಭಾರಿ ದರ್ಪಹರ** = ಆ ಅಪಾರಮಹಿಮಾಸಂಪನ್ನನು ದೇವೇಂದ್ರನ (ಜಂಭಾರಿ) ಗರ್ವವನ್ನು ಅಡಗಿಸಿದನು. **ನಿಗಮ ಸಂಚಾರನು** = ಸದಾಗಮಗಳಿಂದ ಸದಾ ಪ್ರತಿಪಾದ್ಯನು. **ಖರೆಯ** = ಇದು ಸತ್ಯವಾದ ಮಾತು.

**ಶಕಟನು** = ಬಾಲನಾಗಿದ್ದಾಗಲೇ ಕಾಲಿನ ಒದೆತದಿಂದ ಶಕಟಾಸುರನನ್ನು ನುಚ್ಚುನೂರು ಮಾಡಿದ ಶೂರ. **ಬಕನಂ ಕೊಂದನು** = ತನ್ನ ಕಡೆಗೆ ಧಾವಿಸಿಬರುತ್ತಿದ್ದ ಕೊಕ್ಕರೆಯ ರೂಪದಲ್ಲಿದ್ದ ಬಕಾಸುರನ ಕೊಕ್ಕನ್ನು ಸೀಳಿದ ಪರಾಕ್ರಮಿ. **ಕಾಳಿಯ ತುಳಿಯುತ** = ಕಾಳಿಂಗನ ಮಡುವಿನಲ್ಲಿ ಧುಮುಕಿ, ಆ ಸರ್ಪದ ಮೇಲೆ ಲಾಸ್ಯವಾಡಿ, ಅವನ ಗರ್ವಭಂಗ ಮಾಡಿದ ಗರುಡಗಮನ ಶ್ರೀಕೃಷ್ಣ. **ಜ್ವಾಲೆಯ ನುಂಗಿದ** = ಸುತ್ತಲೂ ಆವರಿಸುತ್ತಿರುವ ಕಾಳ್ಗಿಚ್ಚನ್ನು ಲೀಲೆಯಿಂದ ನುಂಗಿದ ವಿಶ್ವಭುಕ್.

**ಶ್ರೀರತಿದಾಯಕ** = ಇಷ್ಟಾರ್ಥಪ್ರದಾಯಕನಾದ, **ಕೊಳ್ವವನೇ ರತಿ** = ನಿತ್ಯತೃಪ್ತನಾದ ಆ ನಿಗಮವೇದ್ಯನಿಗೆ ಯಾರಿಂದಲೂ ಆನಂದವಾಗಬೇಕಿಲ್ಲ. ಅವನೇ ಸರ್ವಕಾಮದನು ಮತ್ತು ಸ್ವಾನಂದಪೂರ್ಣನು **ಮಾರನೈಯ್ಯ** = ಮನ್ಮಥನ ತಂದೆ. **ಭವತಾರಕ** = ಸಂಸಾರಸಾಗರದಿಂದ ದಾಟಿಸುವವನು. **ಪರಿವಾರದಭೀಷ್ಟವ** = ತನ್ನವರ ಸಕಲ ಇಷ್ಟಾರ್ಥಗಳನ್ನು ನೀಡುವವನು.

**ಮೆಲ್ಲಗೆ ಬಾಯೊಳಂ** = ಯಶೋದೆಗೆ ಬಾಯ್ತೆರೆದು ವಿಶ್ವರೂಪವನ್ನು ತೋರಿಸಿದ ಪ್ರಸಂಗ. **ಸರ್ವರ ವಲ್ಲಭ** = ಸರ್ವಜೀವರ ರಮಣನು (ಪ್ರಭುವು) **ಮಲ್ಲರ ಮರ್ದಿಸಿ** = ಚಾಣೂರ ಮತ್ತು ಮುಷ್ಟಿಕಾ ಎಂಬ ಪರಮ ಬಲಶಾಲಿಗಳಾದ ಮಲ್ಲರೊಡನೆ ಕುಸ್ತಿಯಾಡಿ, ಅವರನ್ನು ಸಂಹರಿಸಿದ ಶ್ರೀಕೃಷ್ಣ. **ನಿಲ್ಲಿಸಿ ಧರ್ಮವ** = ಧರ್ಮಸಂಸ್ಥಾಪಕನಾಗಿ, **ನಿಲ್ಲಿಸಿ ಕೊಳ್ಳದೆ** = ನಿನ್ನಿಲ್ಲಿ ನಿಲ್ಲಿಸಿಕೊಳ್ಳದೆ ಬೇಗನೇ ಕಂಸವಧೆಗಾಗಿ ಮಧುರಾನಗರಕ್ಕೆ ಕಳುಹಿಸು–ಎಂದಿದ್ದಾರೆ.



# ಮಂಗಳ ಪದಗಳು

## (ಅಂಕಿತ-ಹಯವದನ)

**ರಾಗ-ಭೈರವಿ** **ಝಂಪೆತಾಳ**

ಜಯಮಂಗಳಂ ನಿತ್ಯ ಶುಭಮಂಗಳಂ ॥ ॥ಪ॥

ವಸುದೇವ ತನಯನಿಗೆ ವೈಕುಂಠನಿಲಯನಿಗೆ
ಕುಸುಭನಾಭನಿಗೆ ಕೋಮಲರೂಪಗೆ
ಯಶೋದೆನಂದನಗೆ ವಸುಧೆಯ ರಮಣನಿಗೆ
ನಸುನಗೆಯೊಳೊಪ್ಪುವ ನರಸಿಂಹಗೇ ॥ ॥೧॥

ಕನಕ ಕಿರೀಟನಿಗೆ ಕಸ್ತೂರಿತಿಲಕನಿಗೆ
ಕನಕ ಕುಂಡಲಗೆ ಕೌಸುಭಹಾರಗೆ
ಕನಕಾಂಬರಧರಗೆ ಕಾರುಣ್ಯರೂಪಗೆ
ಸನಕಾದಿಮುನಿವಂದ್ಯ ನರಸಿಂಹಗೆ ॥ ॥೨॥

ಪಂಕಜನಾಭನಿಗೆ ಪಾಂಚಾಲಿರಕ್ಷಕಗೆ
ಲಂಕೆಯನು ವಿಭೀಷಣನಿಗಿತ್ತವಗೆ
ಕುಂಕುಮಾಂಕಿತನಿಗೆ ಕುವಲಯನೇತ್ರನಿಗೆ
ಬಿಂಕದಲಿ ಮೆರೆವ ನರಸಿಂಹಗೆ ॥ ॥೩॥

ಪಕ್ಷಿವಾಹನನಿಗೆ ಪರಮಪಾವನನಿಗೆ
ಕುಕ್ಷಿಯೊಳು ಜಗವನಿಂಬಿಟ್ಟವನಿಗೆ
ಲಕ್ಷುಮೀಕಾಂತನಿಗೆ ಲಕ್ಷಣವಂತನಿಗೆ
ಲಕ್ಷಣದೊಳೊಪ್ಪುವ ನರಸಿಂಹಗೆ ॥ ॥೪॥

ಭಕ್ತವತ್ಸಲನಿಗೆ ಭವದುಃಖದೂರನಿಗೆ
ಮುಕ್ತಿದಾಯಕಗೆ ಚಿನ್ಮಯರೂಪನಿಗೆ
ಮಿತ್ರರುಕ್ಮಿಣಿ ಸತ್ಯಭಾಮೆಯರರಸನಿಗೆ
ನಿತ್ಯಕಲ್ಯಾಣ ಶ್ರೀಹಯವದನನಿಗೆ || ||೫||



**ಅರ್ಥವಿವರಣೆ :-**

**ಕುಸುಮನಾಭನಿಗೆ** = ನಾಭಿಯಲ್ಲಿ ಕಮಲವನ್ನು ಪಡೆದ ಪದ್ಮನಾಭನಿಗೆ. **ಕೋಮಲರೂಪನಿಗೆ** = ದಿವ್ಯಮಂಗಳಶರೀರನಿಗೆ, **ವಸುಧೆಯರಮಣನಿಗೆ** = ಭೂದೇವಿಯ ರಮಣನಾದ ವರಾಹಮೂರ್ತಿ ಶ್ರೀಹರಿಗೆ. **ಕನಕಕಿರೀಟನಿಗೆ** = ಚಿನ್ನದ ಕಿರೀಟವನ್ನು ಧರಿಸಿದವನಿಗೆ. **ಕನಕಕುಂಡಲಗೆ** = ಚಿನ್ನದ ಕರ್ಣಾಭರಣಧಾರಿಗೆ. **ಪಾಂಚಾಲಿರಕ್ಷಕಗೆ** = ದ್ರೌಪದೀವರದನಿಗೆ. **ಕುವಲಯನೇತ್ರನಿಗೆ** = ಕನ್ನೈದಿಲೆ ಪುಷ್ಪದ ದಳದಂತೆ ವಿಶಾಲನೇತ್ರವುಳ್ಳವನಿಗೆ. **ಬಿಂಕದಿಂದಲಿ** = ಪರಮ ವೈಭವದಿಂದ ಮೆರೆವವನಿಗೆ. **ಪಕ್ಷಿವಾಹನನಿಗೆ** = ಗರುಡವಾಹನನಿಗೆ. **ಪರಮಪಾವನನಿಗೆ** = ಅತ್ಯಂತಶುದ್ಧನಿಗೆ (ನಿರ್ದೋಷವಸ್ತು). **ಕುಕ್ಷಿಯೊಳಗೆ** = ತನ್ನ ಉದರದಲ್ಲಿ. **ಜಗವನು ಇಂಬಿಟ್ಟವನಿಗೆ** = ಸಮಸ್ತಬ್ರಹ್ಮಾಂಡಕ್ಕೆ ಆಶ್ರಯಕೊಟ್ಟಿರುವವಗೆ (ಜಗದಾಶ್ರಯರೂಪ) **ಲಕ್ಷಣವಂತನಿಗೆ** = ಸಕಲ ಶುಭ ಲಕ್ಷಣಸಂಪನ್ನನಿಗೆ. **ಭವದುಃಖದೂರನಿಗೆ** = ಭಕ್ತರ ಸಂಸಾರವೆಂಬ ಕ್ಲೇಶವನ್ನು ಪರಿಹಾರ ಮಾಡುವವನಿಗೆ. **ಚಿನ್ಮಯರೂಪಗೆ** = ಜ್ಞಾನಾನಂದಸ್ವರೂಪಿಗೆ. **ಮಿತ್ರ** = ಮಿತ್ರವಿಂದಾ ಮುಂತಾದ ಷಣ್ಮಹಿಷಿಯರ ಅರಸನಿಗೆ. **ನಿತ್ಯಕಲ್ಯಾಣ**= ಅನಾದಿನಿತ್ಯನೂ, ಅನಂತಕಲ್ಯಾಣಗುಣಗಣಪರಿಪೂರ್ಣನೂ ಆದ ಶ್ರೀಹರಿಗೆ.

## ೩೮೩

## (ಪುರಂದರವಿಠ್ಠಲಾಂಕಿತ)

ರಾಗ–ಭೈರವಿ ಅಟತಾಳ

ಮಂಗಳಂ ಜಯ ಮಂಗಳಂ ॥ ॥ಪ॥

ಇಂದೀವರಾಕ್ಷಗೆ ಇಭರಾಜವರದಗೆ
ಇಂದಿರಾರಮಣ ಗೋವಿಂದ ಹರಿಗೆ
ನಂದನ ಕಂದಗೆ ನವನೀತಚೋರಗೆ
ವೃಂದಾರಕೇಂದ್ರ ಉಡುಪಿಯ ಕೃಷ್ಣಗೆ ॥ ॥೧॥

ಕ್ಷೀರಾಬ್ಧಿವಾಸಗೆ ಕ್ಷಿತಿಜನರ ಪಾಲಗೆ
ಮಾರನಪಿತಗೆ ಮಂಗಳ ಮೂರ್ತಿಗೆ
ಚಾರುಚರಣದಿಂದ ಚೆಲುವ ಗಂಗೆಯ ಪಡೆದ
ಕಾರುಣ್ಯಮೂರ್ತಿ ಕೌಸ್ತುಭಧಾರಿಗೆ ॥ ॥೨

ವ್ಯಾಸಾವತಾರಗೆ ವೇದಉದ್ಧಾರಗೆ
ವಾಸಿತಾನಂತಪದ ಸಕಲೇಶಗೆ
ವಾಸುದೇವಮೂರ್ತಿ ಪುರಂದರ ವಿಠ್ಠಲಗೆ
ದಾಸರ ಕಾಯ್ವ ರುಕ್ಮಿಣಿ ರಮಣಗೆ ॥ ॥೩॥



**ಅರ್ಥವಿವರಣೆ :-**

**ಇದಿಂದಿರಾಕ್ಷಗೆ** = ಕನ್ನೈದಿಲೆ ಪುಷ್ಪದ ದಳದಂತೆ ವಿಶಾಲವಾದ ನೇತ್ರವುಳ್ಳವನಿಗೆ, **ಇಭರಾಜವರದಗೆ** = ಗಜೇಂದ್ರ ರಕ್ಷಕನಿಗೆ. **ನಂದನ ಕಂದಗೆ** = ನಂದಗೋಪನ ಸಾಕು ಪುತ್ರನಾದ ಶ್ರೀಕೃಷ್ಣನಿಗೆ. **ವೃಂದಾರಕ ಇಂದ್ರ** ಸುರೋತ್ತಮನಾದ- ದೇವದೇವೋತ್ತಮನಿಗೆ. **ಕ್ಷೀರಾಬ್ಧಿ ವಾಸಗೆ** = ಕ್ಷೀರಸಮುದ್ರಶಾಯಿಗೆ. **ಕ್ಷಿತಿಜನರ ಪಾಲಗೆ** = ಭೂಮಿಯ ಮೇಲಿರುವ ಸಜ್ಜನರ ಪಾಲಕನಿಗೆ. **ಮಾರಪಿತಗೆ** = ಮನ್ಮಥನ ತಂದೆಗೆ **ಚಾರುಚರಣದಿಂದ** = ಮನೋಹರವಾದ, (ಅಪ್ರಾಕೃತವಾದ) ಕಾಲಿನ ಹೆಬ್ಬೆರಳಿನ ನಖಾಗ್ರದಿಂದ. **ಕೌಸ್ತುಭಧಾರಿಗೆ** = ಕಂಠದಲ್ಲಿ ಕೌಸ್ತುಭವೆಂಬ ಪದಕವನ್ನು ಧರಿಸಿರುವವನಿಗೆ. **ವ್ಯಾಸಾವತಾರಗೆ** = ವೇದವ್ಯಾಸರ ಅವತಾರಿಯಾದ ಶ್ರೀಹರಿಗೆ **ವೇದಉದ್ಧಾರಗೆ** = ವೇದಗಳನ್ನು ಉದ್ಧರಿಸಿ, ಬ್ರಹ್ಮನಿಗೆ ತಂದಿತ್ತ ಮತ್ಸ್ಯರೂಪೀ ಶ್ರೀಹರಿಗೆ. **ವಾಸಿತಾನಂತ ಪದ** = ಪರಮಪದವಾದ ವೈಕುಂಠದಲ್ಲಿ ವಾಸಿಸುವವನಿಗೆ. **ಸಕಲೇಶಗೆ** = ಸರ್ವನಿಯಾಮಕಗೆ.



**೬೮೭**

**(ಪುರಂದರವಿಠ್ಠಲಾಂಕಿತ)**

**ರಾಗ-ಸೌರಾಷ್ಟ್ರ** | **ಆದಿತಾಳ**

ಮಂಗಳಂ ಜಯ ಮಂಗಳಂ ॥ ॥ಪ॥

ಶಕುತಿಯಿಂದಲಿ ಶಿಶುಪಾಲಾದಿ
ಸಕಲರಾಯರ ಸಂಗಡ ಕಾದಿ

**ರುಕುಮನ ಗೆಲಿದು ರೂಢಿಯಿಂದಲಿ ತಂದು**
ರುಕುಮಿಣಿಯಾಳಿದ ಶ್ರೀಕೃಷ್ಣಗೆ ॥ ॥೧॥

ಕಾಳಗದಲಿ ನರಕಾಸುರನ ಸೀಳಿ
ಬಿಸಾಡಿ ಕೈಸೆರೆ ಪಿಡಿದು
ಸೋಳಸಾಸಿರ ಸುದತಿಯರೆಲ್ಲರ
ನಾಳಿದ ವಸುದೇವಾತ್ಮಜಗೆ ॥ ॥೨॥

ಸುರರು ಅಸುರರೆಲ್ಲರು ಕ್ಷೀರ–
ಶರಧಿಯ ಮಥಿಸಲು ಸಂಭ್ರಮದಿ
ಸಿರಿಯು ಜನಿಸಲು ನಿತ್ಯದಿ
ವರಿಸಿದ ವರದ **ಪುರಂದರವಿಠ್ಠಲನಿಗೆ** ॥ ॥೩॥



**ಅರ್ಥವಿವರಣೆ:–**

**ಶಕುತಿಯಿಂದಲಿ** = ಪರಾಕ್ರಮದಿಂದ, **ಸಕಲರಾಯರ** = ಸಮಸ್ತದುಷ್ಟರಾದ ರಾಜರುಗಳೊಡನೆ, **ಕಾದಿ** = ಹೋರಾಡಿ, **ರೂಢಿಯಿಂದಲಿ** = ಭೂಮಿಯಲ್ಲಿ, **ರುಕುಮನ** = ರುಕ್ಮಿಣಿದೇವಿಯ ಅಣ್ಣನಾದ ರುಕ್ಮಿಯನ್ನು ಗೆದ್ದು, ರುಕ್ಮಿಣಿ ವಿವಾಹವಾದ ಪ್ರಸಂಗ. **ಕಾಳಗದಲಿ** = ಯುದ್ಧದಲ್ಲಿ, **ನರಕಾಸುರನ** = ವರಾಹರೂಪೀ ಶ್ರೀಹರಿಯ ಶರೀರದ ಬೆವರಿನ ಹನಿಗಳು ಭೂಮಿಯ ಮೇಲೆ ಬೀಳಲು ಭೂಮಿದೇವಿಯಿಂದ ಶ್ರೀಹರಿಯಿಂದ ಜನಿಸಿದ ಭೂಪುತ್ರ ನರಕಾಸುರನನ್ನು ಸಂಹರಿಸಿ, ಅವನು ಬಂಧನದಲ್ಲಿಟ್ಟಿದ್ದ ೧೬,೦೦೦ ಕನ್ಯೆಯರನ್ನು ಬಿಡಿಸಿ, ಅವರನ್ನು ವಿವಾಹವಾದನು ಶ್ರೀಕೃಷ್ಣ, **ಸೋಳಸಾಸಿರ** = ೧೬,೦೦೦ ಸಂಖ್ಯಾಕರಾದ ಕನ್ಯೆಯರು, **ವಸುದೇವಾತ್ಮಜಗೆ** = ವಸುದೇವಕಿಯರ ಪುತ್ರನಾದ ಶ್ರೀಕೃಷ್ಣ, **ಮಥಿಸಲು** = ದೇವಾಸುರರು

ಕ್ಷೀರಸಮುದ್ರವನ್ನು ಕಡೆದ ಪ್ರಸಂಗ, **ಸಿರಿಯು** = ಶ್ರೀಮಹಾಲಕ್ಷ್ಮೀ ದೇವಿಯು ಸಾಗರತನಯಳಾಗಿ ಉದ್ಭವಿಸಿದಳು. **ನಿತ್ಯದಿ** = ಶ್ರೀ ಲಕ್ಷ್ಮೀಯು ಶ್ರೀ ಹರಿಯ ನಿತ್ಯಾವಿಯೋಗಿನಿ.



೬೮೮

(ಅಂಕಿತ–ಮಹಿಪತಿ)

ರಾಗ–ಸೌರಾಷ್ಟ್ರ  **ಆದಿತಾಳ**

ಮಂಗಳ ಜಯ ಮಂಗಳ ಶುಭ<br>ಮಂಗಳ ಶ್ರೀ ಗುರುಮೂರ್ತಿಗೆ ॥ ॥ಪ॥

ವೇದೋದ್ಧಾರ ಶ್ರೀಮತ್ಸ್ಯಗೆ ಮಂಗಳ<br>ಮೇದಿನಿಯ ಪೊತ್ತ ಕೂರ್ಮಗೆ ಮಂಗಳ<br>ಕಾದಿ ಗೆದ್ದ ಶ್ರೀವರಾಹಗೆ ಮಂಗಳ<br>ಒದಗಿ ಮೂಡಿದ ನರಸಿಂಹಗೆ ಮಂಗಳ ॥ ॥೧॥

ಧರೆಯ ದಾನವ ಕೊಂಡ ವಾಮನಗೆ ಮಂಗಳ<br>ಶೂರ ಪರಶುರಾಮಗೆ ಮಂಗಳ<br>ಶರಣ ರಕ್ಷಕ ಶ್ರೀರಾಮಗೆ ಮಂಗಳ<br>ಸಿರಿಯನಾಳುವ ಶ್ರೀಕೃಷ್ಣಗೆ ಮಂಗಳ ॥ ॥೨॥

ಗುಹ್ಯ ಗೋಪ್ಯದಲಿಹ ಬೌದ್ಧಗೆ ಮಂಗಳ<br>ಹಯವನೇರಿದ ಕಲ್ಕಿಗೆ ಮಂಗಳ<br>ಜಯ ಜಯ **ಮಹಿಪತಿ** ಸ್ವಾಮಿಗೆ ಮಂಗಳ<br>ದಯವುಳ್ಳ ಶ್ರೀದೇವಿ ದೇವಗೆ ಮಂಗಳ ॥ ॥೩॥

**ಅರ್ಥವಿವರಣೆ :-**

**ಶ್ರೀಗುರುಮೂರ್ತಿಗೆ** = ಜಗದಾದಿಗುರುವಾದ ಶ್ರೀಹರಿಗೆ. **ಮೇದಿನಿಯ ಪೊತ್ತ** = ಭೂಮಿಯನು ಹೊತ್ತಿರುವ ವಿಷ್ಣುಕೂರ್ಮ. (ಮೂಲರೂಪ). ಮೇದಿನಿ-ಎಂದರೆ ಭೂಮಿಗೆ ಆಧಾರವಾಗಿರುವ ಪರ್ವತ. ಆಗ ಮಂದರಗಿರಿಯನ್ನು ಹೊತ್ತ ಕೂರ್ಮರೂಪೀ ಶ್ರೀಹರಿ ಎಂದಾಗುವುದು. **ಕಾದಿಗೆದ್ದ** = ಹಿರಣ್ಯಾಕ್ಷನೊಡನೆ ಕಾಳಗವಾಡಿ, ಅವನನ್ನು ಸಂಹರಿಸಿ. **ಒದಗಿ** = ಭಾಗವತೋತ್ತಮನಾದ ಬಾಲಕ ಪ್ರಹ್ಲಾದನ ಮೊರೆ ಕೇಳಿ. **ಮೂಡಿದ** = ಕಂಭದಲ್ಲಿ ಆವಿರ್ಭವಿಸಿದ, **ಧರೆಯ** = ಬಲಿಯಿಂದ ಭೂಮಿಯ ದಾನವನ್ನು ಸ್ವೀಕರಿಸಿ, **ಶೂರ** = ದುಷ್ಟ ಕ್ಷತ್ರಿಯರ ಕುಲ ನಾಶಕನಾದ ಅಸಮ ಪರಾಕ್ರಮ ಶ್ರೀಪರಶುರಾಮ. **ಶರಣ ರಕ್ಷಕ** = ಮೊರೆಬಿದ್ದವರನ್ನು ಪರಿಪಾಲಿಸಿದ ಶ್ರೀರಾಮ **ಸಿರಿಯನಾಳುವ** = ಶ್ರೀಲಕ್ಷ್ಮೀಪತಿಯಾದ ಶ್ರೀಕೃಷ್ಣ. **ಗುಹ್ಯ ಗೋಪ್ಯದಲಿಹ** = ಬೆತ್ತಲೆಯಾಗಿ ನಿಂತ ಬುದ್ಧ. **ಹಯವನೇರಿದ** = ಲಕ್ಷ್ಮಿಯನ್ನೇ ಕುದುರೆಯನ್ನಾಗಿ ಮಾಡಿಕೊಂಡ ತುರಗವಾಹನ ಶ್ರೀಕಲ್ಕಿ. **ಶ್ರೀ ದೇವಿ ದೇವಗೆ** = ಶ್ರೀದೇವಿಪತಿಯಾದ ಶ್ರೀಹರಿಗೆ ಮಂಗಳಂ.



**೩೮೯**

**(ಅಂಕಿತ-ಮಹಿಪತಿ ನಂದನ)**

**ರಾಗ-ಸೌರಾಷ್ಟ್ರ** **ಆದಿತಾಳ**

ಜಯದೇವ ಜಯದೇವ ಜಯ ವೆಂಕಟೇಶಾ
ಶ್ರಿಯ ಸುಖದಾಯಕ ಸ್ವಾಮಿ ಉರಗಾಚಲವಾಸಾ ॥ ॥ಪ॥

ಕರುಣಾಕರ ರತ್ನಾಕರಕನ್ಯಾ ಮನೋಹಾರಿ
ಸುರವರ್ಧನ ಮುರಮರ್ಧನ ಗೋವರ್ಧನಧಾರಿ
ವರ ಮಂದರಧೃತ ಕುಂದರದನ ಸುರಸಪಕಾರಿ
ಕರಿವಾಹನಸುತ ಮೋಹನ ಖಗವಾಹನ ಶೌರೀ ॥ ॥೧॥

ಜಗಕಾರಣ ಪರಿಪೂರಣ ಸುಂದರ ಸಾಕಾರಾ
ಅಘಹರಣಾ ಮುನಿಸ್ಫುರಣಾ ತ್ರೈಭುವನಾಧಾರಾ
ನಗರಧರಣಾ ತವಶರಣಾಭರಣಾ ಮಹಾವೀರಾ
ಭೃಗು ಚರಣಾಂಕಿತ ಚರಣಾಂಬುಜಶೋಭಿತ ಧೀರಾ ॥ ॥೨॥

ದುಃಖಹರ್ತಾ ಜಗಕರ್ತಾ ಸರಸೀರುಹನಯನಾ
ಸಕಲಾತ್ಮಾ ಪರಮಾತ್ಮಾ ಫಣಿಕುಲವರಶಯನಾ
ನಿಖಿಳಾಸುರತಮಭಾಸ್ಕರ ದುರಿತಾವಳಿ ಶಮನಾ
ಮಕರಾಂಕಿತ ಮಹಿಪತಿನಂದನ ಪಾಲನಾ ॥ ॥೩॥



**ಅರ್ಥವಿವರಣೆ :-**

ಈ ಕೀರ್ತನಸಾಹಿತ್ಯವು ಮಹೀಪತಿದಾಸರ ಮಕ್ಕಳು ಶ್ರೀಕೃಷ್ಣರಾಯ ದಾಸರಿಂದ ವಿರಚಿತವಾದ ಮಂಗಳಪದ.

**ಸುಖದಾಯಕ** = ಇಹದಲ್ಲಿ ಸುಖ, ಪರದಲ್ಲಿ ನಿತ್ಯಾನಂದರೂಪ ವಾದ ಮುಕ್ತಿಸುಖವನ್ನು ಕೊಡುವ ಮುಕುಂದನಾಮಕ ಶ್ರೀಪರಮಾತ್ಮ. **ಉರಗಾಚಲನಿವಾಸಾ** = ಶೇಷಪರ್ವತವಾಸಿ ಶ್ರೀನಿವಾಸ. **ರತ್ನಾಕರ ಕನ್ಯಾ** = ಸಾಗರಪುತ್ರಿಯಾದ ಲಕ್ಷ್ಮೀದೇವಿ. , **ಮನೋಹಾರಿ** = ಶ್ರೀ ಲಕ್ಷ್ಮೀದೇವಿಯ ಮನಸ್ಸನ್ನು ಅಪಹರಿಸಿರುವ ಅಪ್ರಮೇಯನು. **ಸುರ ವರ್ಧನ** = ದೇವತೆಗಳ ಉದ್ಧಾರಕ. **ಮುರಮರ್ಧನ** = ಮುರಾ

ಎಂಬ ಅಸುರನನ್ನು ಸಂಹರಿಸಿದ ಶ್ರೀಕೃಷ್ಣ. **ವರಮಂದರಧೃತ**=ಶ್ರೇಷ್ಠ ವಾದ ಮಂದರಗಿರಿಯನ್ನು ಎತ್ತಿದ ಕೂರ್ಮಾವತಾರೀ ಶ್ರೀಹರಿ. **ಕುಂದರದನ** = ಮಲ್ಲಿಗೆಯ ಮೊಗ್ಗಿನಂತಿರುವ ದಂತಗಳು. **ಸುರ ಸಹಕಾರಿ** = ದೇವತೆಗಳಿಗೆ ಸಹಾಯಕನು. **ಕರಿವಾಹನನುತಾ** = ಐರಾವತವೆಂಬ ಗಜವನ್ನು ವಾಹನವನ್ನಾಗಿ ಉಳ್ಳ ಇಂದ್ರದೇವರಿಂದ ಸ್ತುತ್ಯಮಾನನಾದವನು. **ಮೋಹನ** = ಲೋಕಸುಂದರ. **ಖಗವಾಹನ** = ಗರುಡವಾಹನ ಶ್ರೀಕೃಷ್ಣ (ಖ–ಆಕಾಶ. ಗ–ಸಂಚಾರಿ. ಪಕ್ಷಿಶ್ರೇಷ್ಠರಾದ ಗರುಡದೇವರು). **ಶೌರೀ** = ಶೂರಸೇನ ಕುಲಸಂಜಾತನಾದ ಶ್ರೀಕೃಷ್ಣ. **ಜಗಕಾರಣ** = ಜಗತ್ತಿನ ಸೃಷ್ಟ್ಯಾದಿ ಅಷ್ಟಕಾರ್ಯಗಳಿಗೆ ಮುಖ್ಯಕಾರಣನು. **ಪರಿಪೂರಣ** = ಸಕಲಗುಣಗಳಲ್ಲಿ ಪರಿಪೂರ್ಣವಸ್ತು **ಸುಂದರ ಸಾಕಾರಾ** = ಅಪ್ರಾಕೃತವಾದ ಸೌಂದರ್ಯ ಉಳ್ಳ ದಿವ್ಯಮಂಗಳವಿಗ್ರಹ. **ಅಘಹರಣಾ** = ಸಜ್ಜನರ ಪಾಪಪರಿಹಾರಕನಾದ ಶ್ರೀಹರಿ. **ಮುನಿಸ್ಫುರಣಾ** = ಋಷಿ ಮುನಿಗಳಿಗೆ ಸ್ಫೂರ್ತಿಪ್ರದನು. **ತ್ರೈಭುವನಾಧಾರಾ** = ಮೂರುಲೋಕಗಳಿಗೆ ಆಧಾರಭೂತನು. **ನಗಧರಣಾ** = ಗೋವರ್ಧನ ಪರ್ವತವನ್ನು ಎತ್ತಿ ಹಿಡಿದ ಶ್ರೀಕೃಷ್ಣ. **ತವಶರಣಾಭರಣಾ** = ನಿನ್ನನ್ನು ಮೊರೆ ಹೊಕ್ಕವರಿಗೆ ಆಭರಣ ಸದೃಶನು (ರಕ್ಷಕನು). **ಮಹಾವೀರಾ** = ಅಸದೃಶ ಪರಾಕ್ರಮಿ. **ಭೃಗು ಚರಣಾಂಕಿತ** = ಭೃಗುವಿನ ಚರಣಸ್ಪರ್ಶವಾದ ವಕ್ಷಸ್ಥಳವುಳ್ಳವನು **ದುಃಖಹರ್ತಾ** = ಭಕ್ತರ ಕ್ಲೇಶಪರಿಹಾರಕನು. **ಸರಸೀರುಹನಯನಾ** = ಕಮಲಪುಷ್ಪದ ದಳದಂತೆ ವಿಶಾಲ ನೇತ್ರವುಳ್ಳವನು. (ಸರಸ-ಸರಸ್ಸಿನ ನೀರನ್ನು. ಉರುಹ-ಬೇಧಿಸಿಕೊಂಡು ಮೇಲಕ್ಕೆ ಬರುವ ಕಮಲಪುಷ್ಪ). **ಸಕಲಾತ್ಮಾ** = ಸಕಲಜೀವರ ಅಂತರ್ಯಾಮಿ. **ಪರಮಾತ್ಮಾ** = ಸರ್ವೋತ್ತಮನಾದ ಪರಾತ್ಪರನು. **ಫಣಿಕುಲವರಶಯನಾ** = ಸರ್ಪಕುಲದಲ್ಲಿ ಅತ್ಯಂತ ಶ್ರೇಷ್ಠರಾದ ಶೇಷದೇವರ ಮೇಲೆ ಮಲಗಿರುವ. **ನಿಖಿಳಾಸುರತಮ ಭಾಸ್ಕರ** = ಸಮಸ್ತ ಅಸುರರೆಂಬ ಕತ್ತಲೆಗೆ ಸೂರ್ಯ ಸದೃಶನು. **ದುರಿತಾವಳಿ ಶಮನಾ** = ಪಾಪಗಳ ಸಮೂಹಗಳನ್ನು ಪರಿಹರಿಸುವವನು. **ಮಕರಾಂಕಿತ**=ನೀರಿನ

ಹಂದಿಯು ಸಾಂಕೇತ–ವರಾಹರೂಪೀ ಶ್ರೀಹರಿ, (ಮಕರ–ನೀರುಹಂದಿ. ಮೀನು–ಮತ್ಸ್ಯ ಎಂದೂ ಅರ್ಥ). **ಮಹಿಪತಿನಂದನಾ** = ಮಹಿಪತಿ ದಾಸರ ಮಕ್ಕಳು, **ಶ್ರೀಕೃಷ್ಣದಾಸರ** ಅಂಕಿತನಾಮವಿದು.



೬೯೦

## ಮಂಗಳಪದ

### (ಅಂಕಿತ–ಪ್ರಸನ್ವೇಂಕಟ)

**ರಾಗ–ವರಾಳಿ** **ಝಂಪೆತಾಳ**

ಜಯ ಮಂಗಳಂ ಜಯ ಮಂಗಳಂ–ಶ್ರೀರಂಗಗೆ ॥ ॥ಪ॥

ಮಂಗಳಮಹಿಮ ತ್ರಿವೆಂಗಳ ಮೂರ್ತಿಗೆ
ಮಂಗಳವ್ವೆಯ ವಕ್ಷಾಂಗದೊಳಿಟ್ಟಗೆ ॥ ॥೧॥

ಮಂಗಳಾನಂತಗುಣಂಗಳ ಪೂರ್ಣಗೆ
ಹಿಂಗಾದೆ ಭಕ್ತರಾ ಸಂಗದಲ್ಲಿಹಗೆ ॥ ॥೨॥

ಮಂಗಳ ಐದೆಲೆಗಂಗಳ ತಲ್ಪಗೆ
ರಂಗ **ಪ್ರಸನ್ವೇಂಕಟೆಗೆ** ತಜ್ಞನಿಗೆ ॥ ॥೩॥



**ಅರ್ಥವಿವರಣೆ :–**

**ತ್ರಿವೆಂಗಳ ಮೂರ್ತಿಗೆ** = ಮೂರುಲೋಕದ ಪ್ರಭುವಾದ ಶ್ರೀಹರಿಗೆ. **ಮಂಗಳವ್ವೆಯ** = ಶುಭಾಂಗಿನಿಯಾದ ಶ್ರೀಲಕ್ಷ್ಮೀದೇವಿ

ಯನ್ನು. ವಕ್ಷಾಂಗದೊಳಿಟ್ಟಗೆ = ತನ್ನ ವಕ್ಷಸ್ಥಳದಲ್ಲಿ ಧರಿಸಿರುವವನಿಗೆ. ಗುಣಂಗಳ ಪೂರ್ಣಗೆ = ಅನಂತಾನಂತ ಕಲ್ಯಾಣಗುಣಗಣ ಪರಿಪೂರ್ಣನಿಗೆ. ಐದೆಲೆ ಗಂಗಳ = ಸಾವಿರ ನೇತ್ರವುಳ್ಳ ಆದಿಶೇಷನನ್ನೇ. ತಲ್ಪಗೆ=ತನ್ನ ಹಾಸಿಗೆಯನ್ನಾಗಿ ಮಾಡಿಕೊಂಡಿರುವ ಶ್ರೀಮನ್ನಾರಾಯಣನಿಗೆ. ತಜ್ಞನಿಗೆ = ಸರ್ವಜ್ಞ ಶಿಖಾಮಣಿಗೆ.



## ೬೯೧

## ಮಂಗಳಪದ

(ವಿಜಯವಿಠ್ಠಲಾಂಕಿತ)

**ರಾಗ-ಸೌರಾಷ್ಟ್ರ** **ಆದಿತಾಳ**

ಜಯ ಮಂಗಳಂ ನಿತ್ಯ ಶುಭ ಮಂಗಳಂ ॥ ॥ಪ॥

ಮಂಗಳಂ ಹತ್ತಾವತಾರದ ದೇವಗೆ
ಮಂಗಳಂ ಹತ್ತು ದಿಕ್ಕಿನ ಒಡೆಯನಿಗೆ
ಮಂಗಳಂ ಹತ್ತಾವರಣದಲಿ ವ್ಯಾಪ್ತನಿಗೆ
ಮಂಗಳಂ ಹತ್ತರದಲಿಪ್ಪ ಹರಿಗೆ ॥ ॥ಅ॥

ನೋಡುವಗೆ ಗಿರಿಯ ಕೆಳಗಾಡುವಗೆ ಭೂಮಿಯನು
ತೋಡುವವಗೆ ಮಹಭಯವ ಮಾಡುವಗೆ
ಬೇಡುವಗೆ ವೈರಿಗಳ ಕಾಡುವಗೆ ಅಮೃತಾನ್ನ
ನೀಡುವಗೆ ಗೋಪಿಯರ ಕೂಡುವಗೆ ॥ ॥೧॥

ಬೆಳವಗೆ ಖಡ್ಗವನು ತೊಳೆವವಗೆ
ಜಲದೊಳಗೆ ಮೊಳೆವವಗೆ ಪಾತಾಳಕಿಳಿವವಗೆ
ಮುಳುಗುವಗೆ ನಖವನ್ನು ತೊಳೆದವವಗೆ ಕ್ಷಿತಿಪನ್ನ
ತುಳಿವವಗೆ ಕ್ಷತ್ರಕುಲವನಿಳವವಗೆ ॥ ॥೨॥

ಚರಿಸುವಗೆ ಪರ್ವತ ಧರಿಸುವಗೆ ವ್ರತವ ಅಪ
ಹರಿಸುವಗೆ ತುರಗವನು ಹಾರಿಸುವಗೆ
ಅರಸುವಗೆ ಸುರರನುದ್ಧರಿಸುವವಗೆ
ಧರೆಯುಪತಿ ಕರಿಸುವಗೆ ದಯಾದೃಷ್ಟಿ ಸುರಿಸುವಗೆ ॥ ॥೩॥

ಪಡೆದವಗೆ ಮಾತೆಯನು ಕಡಿದವಗೆ ಕೋದಂಡ
ಪಿಡಿದವಗೆ ರಥವನು ಹೂಡಿದವಗೆ
ಬಿಡುವವಗೆ ಕಲಿತಾಪ ಸುಡುವವಗೆ ಪದವಿಲ್ಲದೇ
ನಡೆವವಗೆ ಅಮೃತವನು ಕೊಡುವವಗೆ ॥ ॥೪॥

ತಾನಿಹಗೆ ಕಂಬದಿಂಬಾಹನಿಗೆ ಊರ್ಧ್ವಗ
ನಾಹನಿಗೆ ಕ್ಷತ್ರಿಯರ ದ್ರೋಹನಿಗೆ
ಹೋಹನಿಗೆ ಎರಡರಲಿ ಮೋಹನಿಗೆ ಸುಜನರ
ಸ್ನೇಹನಿಗೆ **ಶ್ರೀವಿಜಯವಿಠ್ಠಲ** ಹರಿಗೇ ॥ ಮಂಗಳಂ ॥ ॥೫॥

**ಅರ್ಥವಿವರಣೆ :–**

ಶ್ರೀವಿಜಯದಾಸವರೇಣ್ಯರು ಈ ಮಂಗಳಪದದಲ್ಲಿ ಶ್ರೀಹರಿಯ ದಶಾವತಾರಗಳನ್ನು ಸ್ತೋತ್ರ ಮಾಡಿರುತ್ತಾರೆ. ಕ್ರಮ ವ್ಯತ್ಯಾಸವಾಗಿರುವು ದನ್ನು ಗಮನಿಸಬೇಕು. ಗಣ ಪ್ರಾಸಕ್ಕೆ ತಕ್ಕಂತೆ ಸಾಹಿತ್ಯರಚನೆ ಇದೆ,

**ಹತ್ತು ದಿಕ್ಕಿನ ಒಡೆಯನಿಗೆ** = ಪೂರ್ವಾದಿ 4 ದಿಕ್ಕುಗಳು + ಆಗ್ನೇಯಾದಿ 4 ದಿಕ್ಕುಗಳು + ಊರ್ಧ್ವ ಮತ್ತು ಅಧೋದಿಕ್ಕು ಎರಡು. ಒಟ್ಟು ದಶದಿಕ್ಕುಗಳು. ಆದರೆ, ಸರ್ವತ್ರವ್ಯಾಪ್ತನಾದ ಹರಿಗೆ. **ಹತ್ತಾವರಣದಲಿ** = ಪಂಚಭೂತಾವರಣ + ಮನಸ್ಸು + ಅಹಂಕಾರ + ಮಹತ್ತು + ಅವ್ಯಕ್ತ + ಅವ್ಯಾಕೃತಪ್ರದೇಶ– ಈ ಹತ್ತು ಆವರಣಯುಕ್ತವಾದ ದೇಶಗಳಲ್ಲಿ ವ್ಯಾಪ್ತನಾದವನಿಗೆ. **ಹತ್ತಿರದಲ್ಲಿಪ್ಪ** = ಜೀವನಿಗೆ ಸಮೀಪನಾಗಿ ಸ್ವರೂಪಸ್ಥ ಬಿಂಬನಿಗೆ. **ನೋಡುವಗೆ** = ಮೀನಿಗೆ ರೆಪ್ಪೆಗಳಿಲ್ಲ. ಬರೇ ನೋಟ ಮಾತ್ರ. ಮತ್ಸ್ಯಾವತಾರ. **ಗಿರಿಯ ಕೆಳಗಾಡುವಗೆ** = ಮಂದರಗಿರಿಯ ಕೆಳಗೆ ಕೂರ್ಮರೂಪದಿಂದ ಗಿರಿಯನ್ನು ಹೊತ್ತಿರುವವಗೆ. **ಭೂಮಿಯನು ತೋಡುವಗೆ** = ತನ್ನ ಕೋರೆದಾಡೆಗಳಿಂದ ಭೂಮಿಯನ್ನು ಬಗೆಯುವ ವರಾಹ. **ಮಹಭಯವ** = ಭಯಂಕರವಾದ ರೂಪ ಪ್ರದರ್ಶಿಸಿದ ನರಸಿಂಹನಿಗೆ. **ಬೇಡುವಗೆ** = ಬಲಿಯನ್ನು ದಾನ ಬೇಡಿದ ವಟು ವಾಮನನಿಗೆ. **ವೈರಿಗಳ ಕಾಡುವಗೆ** = ದುಷ್ಟಕ್ಷತ್ರಿಯರನ್ನು ಸಂಹರಿಸುವ ಪರಶುರಾಮನಿಗೆ. **ಅನ್ನುತಾನ್ನ ನೀಡುವಗೆ** = ಮೋಕ್ಷಪ್ರದನೂ, ಇಷ್ಟಾರ್ಥದಾಯಕನೂ ಆದ ಶ್ರೀರಾಮನಿಗೆ.

**ಬೆಳೆವವಗೆ** = ಲೋಕವ್ಯಾಪಿಯಾದ ತ್ರಿವಿಕ್ರಮನಿಗೆ. **ಖಡ್ಗವನು ತೊಳೆವವಗೆ** = ದುಷ್ಟದಾನವರನ್ನು ಸಂಹರಿಸಿ, ರಕ್ತಸಿಕ್ತವಾದ ಖಡ್ಗವನ್ನು ಜಲದಲ್ಲಿ ತೊಳೆಯುವ ಕಲ್ಕಿಗೆ. **ಜಲದೊಳಗೆ ನೊಳೆವವಗೆ** = ನೀರಿನಲ್ಲಿ ಸಂಚರಿಸುವ ಮತ್ಸ್ಯ. ನೀರಿನಲ್ಲಿ ಸ್ಥಿರವಾಗಿ ನಿಂತ ಕೂರ್ಮ. **ಪಾತಾಳಕಿಳಿವವಗೆ** = ಪಾತಾಳವನ್ನು ಹೊಕ್ಕು ಹಿರಣ್ಯಾಕ್ಷನನ್ನು ತನ್ನ ಕೋರೆದಾಡೆಗಳಿಂದ ಸೀಳಿದ ವರಾಹರೂಪಿ. **ನಖವನ್ನು ತೊಳೆವವಗೆ** = ತನ್ನ ನಖಾಗ್ರದಿಂದ ಹಿರಣ್ಯಕಶಿಪುವಿನ ಉದರವನ್ನು ಬಗೆದ ಶ್ರೀನರಸಿಂಹ. (ನಖಾಗ್ರವನ್ನು ಅವನ ರಕ್ತದಲ್ಲಿ ತೊಳೆದ). **ಕ್ಷಿತಿಪನ್ನ ತುಳಿವವಗೆ** = ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ತುಳಿದ ವಾಮನನಿಗೆ. **ಕ್ಷತ್ರ ಕುಲ ವಳಿವವಗೆ** = ದುಷ್ಟ ಕ್ಷತ್ರಿಯರ ಸಂಹಾರಿಯಾದ ಭಾರ್ಗವನಿಗೆ **ಚರಿಸು**

**ವಗೆ** = ನೀರಿನಲ್ಲಿ ಸಂಚರಿಸುವ ಮತ್ಸ್ಯ. **ಪರ್ವತವ ಧರಿಸುವಗೆ** = ಮಂದರಗಿರಿಯನ್ನು ತನ್ನ ಬೆನ್ನಿನ ಮೇಲೆ ಹೊತ್ತ ಕೂರ್ಮನಿಗೆ. **ವ್ರತವ ಅಪಹರಿಸುವಗೆ** = ತ್ರಿಪುರಾಸುರರ ಪತ್ನಿಯರ ವ್ರತಭಂಗ ಮಾಡಿದ ಬುದ್ಧನಿಗೆ. **ತುರಗವನು ಹಾರಿಸುವಗೆ** = ಕುದುರೆಯನ್ನೇರಿ ಬರುವ ಕಲ್ಕಿಗೆ. **ಅರಸುವಗೆ** = ತನ್ನ ಪತ್ನಿ ಸೀತೆಯನ್ನು ಹುಡುಕಿ ಅಲೆದಾಡಿದ ಶ್ರೀರಾಮಚಂದ್ರನಿಗೆ **ಸುರರನು ಉದ್ಧರಿಸುವಗೆ** = ದೇವತೆಗಳನ್ನು ಸಂರಕ್ಷಿಸುವ ಶ್ರೀಕೃಷ್ಣನಿಗೆ. **ಧರೆಯುಪತಿ ಕರಿಸುವಗೆ** = ಭೂರಮಣ ನಾದ ಆದಿವರಹನಿಗೆ.

**ಪಡೆದವಗೆ** = ತನ್ನ ಪಾದಾಂಗುಷ್ಠದಿಂದ ಗಂಗೆಯನ್ನು ಪಡೆದ ತ್ರಿವಿಕ್ರಮನಿಗೆ. **ಮಾತೆಯನು ಕಡಿದವನಿಗೆ** = ಜಮದಗ್ನಿಗಳ ಆದೇಶ ದಂತೆ ತನ್ನ ಮಾತೆಯಾದ ರೇಣುಕಾದೇವಿಯ ತಲೆಯನ್ನು ಕಡಿದ ಪರಶು ರಾಮನಿಗೆ. **ಕೋದಂಡ ಪಿಡಿದವಗೆ** = ಕೋದಂಡ ದೀಕ್ಷಾಚಾರ್ಯ ನಾದ ಶ್ರೀದಶರಥರಾಮನಿಗೆ. **ರಥವನ್ನು ಹೊಡಿದವಗೆ** = ಅರ್ಜುನನ ರಥವನ್ನು ನಡೆಯಿಸಿದ ಪಾರ್ಥಸಾರಥಿ ಶ್ರೀಕೃಷ್ಣನಿಗೆ **ಬಿಡುವವಗೆ** = ವಸ್ತ್ರವನ್ನು ಬಿಸುಟು, ಬೆತ್ತಲೆಯಾಗಿ ನಿಂತ ಬುದ್ಧನಿಗೆ. **ಕಲಿತಾಪ ಸುಡು ವವಗೇ** = ಕಲಿಯ ಬಾಧೆಯನ್ನು ಪರಿಹರಿಸುವ ಕಲ್ಕಿರೂಪಿಗೇ. **ಪಾದ ವಿಲ್ಲದೇ ನಡೆವವಗೆ** = ಕಾಲಿಲ್ಲದೇ ನೀರಿನಲ್ಲಿ ಸಂಚರಿಸುವ ಮತ್ಸ್ಯ. **ಅಮೃತವನ್ನು ಕೊಡುವವಗೆ** = ಕೂರ್ಮರೂಪದಿಂದ ಸಮುದ್ರ ಮಥನಕಾಲದಲ್ಲಿ ಉತ್ಪನ್ನವಾದ ಅಮೃತವನ್ನು ದೇವತೆಗಳಿಗೆ ಹಂಚಿದ ಧನ್ವಂತ್ರೀನಾಮಕನಿಗೆ.

**ತಾಹನಿಗೆ** = ಕೋಲರೂಪೀ ಶ್ರೀವರಹಾವತಾರಿಗೆ. **ಕಂಭದಿಂಬಾ ಹನಿಗೆ** = ಕಂಭದಿಂದ ಉದ್ಭವಿಸಿದ ನರಸಿಂಹನಿಗೆ. **ಊರ್ಧ್ವಗನಾಹ ನಿಗೆ** = ಊರ್ಧ್ವಲೋಕಕ್ಕೆ ಬೆಳೆದು, ವ್ಯಾಪಿಸಿದ ತ್ರಿವಿಕ್ರಮನಿಗೆ. **ಕ್ಷತ್ರಿ ಯರ ದ್ರೋಹನಿಗೆ** = ಕ್ಷತ್ರಿಯರ ಸಂಹಾರಕನಾದ ಪರಶುರಾಮನಿಗೆ. **ಹೋಹನಿಗೆ** = ಜಾರ ಶ್ರೀಕೃಷ್ಣನಿಗೆ, **ಮೋಹನಿಗೆ** = ಅಸುರರನ್ನು

ಮೋಹಿಸಿದ ಬುದ್ಧನಿಗೆ. **ಎರಡರಲಿ** = ಪರಶುರಾಮ, ದಶರಥರಾಮ. ಇವರಿಬ್ಬರ ಯುದ್ಧ ಪ್ರಸಂಗದಿಂದ ಅಸುರರನ್ನು ಮೋಹಿಸಿದವನಿಗೆ. **ಸುಜನ ಸ್ನೇಹನಿಗೆ** = ಸಜ್ಜನರ ಮಿತ್ರ ಕಲ್ಕಿಗೆ-ಶುಭ ಮಂಗಳಂ ಜಯ ಮಂಗಳಂ.



೬೯೨

## ಮಂಗಳಪದ

**(ಗೋಪಾಲವಿಠ್ಠಲಾಂಕಿತ)**

**ರಾಗ-ಸೌರಾಷ್ಟ್ರ** **ಆದಿತಾಳ**

ಮಂಗಳಂ ಮಂಗಳಂ ಭವತು ಹೇ ರಮಾಪತೇ ॥ ॥ಪ॥

ಮಂಗಳಂ ಮಧುವೈರಿ ದೇವವರೇಣ್ಯ ॥ ॥ಅ॥

ಮಾರಜನಕ ದಿವ್ಯಸಾರಸುಂದರದೇಹ<br>
ವಾರಿಜದಳನೇತ್ರ ಕಾರುಣ್ಯ ಗುಣನಿಧೇ ॥ ॥೧॥

ಮಣಿಮಯ ಶುಭಕರ ಕನಕಕುಂಡಲಧರ<br>
ಮಿನುಗುವ ಮಕುಟ ಶೋಭನಕರ ಮೂರುತೇ ॥ ॥೨॥

ವೇದ ವಿಬುಧ ವಂದ್ಯ **ಗೋಪಾಲವಿಠ್ಠಲ**<br>
ಸಾಧು ಸಜ್ಜನಪಾಲ ಶ್ರೀದೇವಿಲೋಲ ॥ ॥೩॥

**ಅರ್ಥವಿವರಣೆ :–**

**ಭವತು** = ನಿನ್ನ ಅನುಗ್ರಹದಿಂದ ನಮಗೆ ಮಂಗಳವಾಗಲಿ (ಶುಭ ವಾಗಲಿ). ಶ್ರೀಹರಿ ನಿತ್ಯಮಂಗಳಮೂರ್ತಿ. **ಮಧುವೈರಿ** = ಮಧು ಎಂಬ ದೈತ್ಯನ ಸಂಹಾರಿ ಶ್ರೀಮನ್ನಾರಾಯಣ. **ದೇವವರೇಣ್ಯ** = ದೇವ ದೇವೋತ್ತಮ (ಸರ್ವೋತ್ತಮ ದೇವತಾ).

**ಮಾರಜನಕ** = ಮನ್ಮಥನ ತಂದೆ. ಮನ್ಮಥನು ವಿರಾಟ್‌ರೂಪೀ ಪುರುಷನಾಮಕ ಶ್ರೀಹರಿಯ ಮನಸ್ಸಿನಿಂದ ಉತ್ಪನ್ನನಾದನು. **ದಿವ್ಯಸಾರ ಸುಂದರದೇಹ** = ಅಪ್ರಾಕೃತವಾದ ಜ್ಞಾನಾನಂದಮಯವಾದ ಸುಂದರ ವಿಗ್ರಹನು. **ವಾರಿಜದಳ ನೇತ್ರ** = ಕಮಲದ ದಳಗಳಂತೆ ವಿಶಾಲ ನೇತ್ರನು. **ಕಾರುಣ್ಯಗುಣನಿಧೇ** = ಕರುಣಾರಸ ಪರಿಪೂರ್ಣನು (ದಯಾ ಸಮುದ್ರನು). **ಮಣಿಮಯ** = ರತ್ನಖಚಿತವಾದ ಆಭರಣಗಳಿಂದ ಭೂಷಣನಾದವನು. **ಕನಕಕುಂಡಲಧರ** = ಚಿನ್ನದ ಕುಂಡಲಗಳನ್ನು ಕರ್ಣದಲ್ಲಿ ಧರಿಸಿರುವವನು. **ಮುಕುಟಶೋಭನ** = ಕಾಂತಿಯಿಂದ ಹೊಳೆಯುತ್ತಿರುವ (ಮಿನುಗುವ) ಕಿರೀಟವನ್ನು ಧರಿಸಿದ್ದಾನೆ, ಆ ಶೋಭನ ವಿಗ್ರಹನು.

**ವೇದ ವಿಬುಧ ವಂದ್ಯ** = ವೇದಗಳಿಂದಲೂ, ಜ್ಞಾನಿಗಳಿಂದಲೂ ನಮ್ಯನು. **ಸಾಧುಸಜ್ಜನ ಪಾಲ** – ಸಜ್ಜನರ ಸಂರಕ್ಷನು. **ಶ್ರೀದೇವಿ ಲೋಲ** = ಶ್ರೀಲಕ್ಷ್ಮಿಯಲ್ಲಿ ರಮಣ ಮಾಡುವವನು.



೬೯೩

## ಮಂಗಳಪದ

### (ವರದಗೋಪಾಲವಿಠ್ಠಲಾಂಕಿತ)

**ರಾಗ–ಸುರಟಿ** **ಛಾಪುತಾಳ**

ಮಂಗಳಂ ಮಂಗಳಂ ದಯಾನಿಧೇ ॥ ॥ಪ॥

ನಂದನಂದನ ಶ್ಯಾಮಸುಂದರಶುಭಕಾಯ
ಇಂದೀವರಾಕ್ಷ ಮುಕುಂದ ಮುರಾರೇ ॥ ॥೧॥

ದೇವ ದೇವೇಶ ದೇಹಿ ಕಲ್ಯಾಣಂ
ಶ್ರೀವರ ಶ್ರೀಧರ ಶ್ರೀ ಶ್ರೀನಿವಾಸ ॥ ॥೨॥

ರಾಜಿತ ವರದಗೋಪಾಲವಿಠ್ಠಲ
ರಾಜಾಧಿರಾಜ ಕಲ್ಪಭೂಜ ಸುತೇಜ ॥ ॥೩॥



**ಅರ್ಥವಿವರಣೆ :–**

**ದಯಾನಿಧೇ** = ಕರುಣಾಸಮುದ್ರನೇ. **ನಂದನಂದನ** = ನಂದ ಗೋಪನ ಸಾಕುಪುತ್ರ ಶ್ರೀಕೃಷ್ಣ. **ಶ್ಯಾಮಸುಂದರ ಶುಭಕಾಯ** = ಶ್ಯಾಮವರ್ಣದ ಸುಂದರ ದೇಹವುಳ್ಳವನು (ಕಾಯ–ಶರೀರ). **ಇಂದೀವರಾಕ್ಷ** = ಕನ್ನೈದಿಲೆಪುಷ್ಪದ ದಳದಂತೆ ವಿಶಾಲನೇತ್ರವುಳ್ಳವನು. **ಮುಕುಂದ** = ಮುಕ್ತಿಪ್ರದನು. **ಮುರಾರೇ** = ಮುರಾ-ಎಂಬ ದೈತ್ಯನನ್ನು ಸಂಹರಿಸಿದ ಶ್ರೀಕೃಷ್ಣ. **ದೇವದೇವೇಶ** = ದೇವತಾವರ್ಗದಲ್ಲಿ ಉತ್ತಮರಾದ ಬ್ರಹ್ಮವಾಯುಗಳಿಗೂ, ದೇವಶ್ರೇಷ್ಠಳಾದ ಲಕ್ಷ್ಮೀದೇವಿಗೂ

ನಿಯಾಮಕನು. **ದೇಹಿ ಕಲ್ಯಾಣಂ** = ಮಂಗಳವನ್ನು ನೀಡು. **ಶ್ರೀವರ** = ಲಕ್ಷ್ಮೀದೇವಿಗಿಂತ ಅನಂತಾನಂತಕೋಟಿ ಗುಣಗಳಿಂದ ಅಧಿಕನು. **ಶ್ರೀಧರ** = ಶ್ರೀಲಕ್ಷ್ಮೀದೇವಿಯನ್ನು ತನ್ನ ವಕ್ಷದಲ್ಲಿ ಶ್ರೀವತ್ಸ ಚಿಹ್ನೆಯ ರೂಪದಲ್ಲಿ ಧರಿಸಿರುವವನು. **ರಾಜಿತ** = ಅತಿಕಾಂತಿಯುಕ್ತನಾದ (ಕೋಟಿ ಸೂರ್ಯಪ್ರಕಾಶ). **ರಾಜಾಧಿರಾಜ** = ಜೀವೋತ್ತಮರಾದ ಬ್ರಹ್ಮ ವಾಯುಗಳಿಗೂ ಮಿಗಿಲಾದ ಸರ್ವೋತ್ತಮನು. **ಕಲ್ಪಭೂಜ** = ಕಲ್ಪ ವೃಕ್ಷ ಸದೃಶನು (ಭೂಜ–ವೃಕ್ಷ). **ಸುತೇಜ** = ಸ್ವಯಂ ಜ್ಯೋತಿಯು.



## ೬೯೪

## ಮಂಗಳಪದ

### (ಜಗನ್ನಾಥವಿಠ್ಠಲಾಂಕಿತ)

ಸುವ್ವಿ ಶ್ರೀದೇವಿರಮಣ ಸುವ್ವಿ ಸರ್ವರಾಜಶಯನ
ಸುವ್ವಿ ದೈತ್ಯಕರಹರಣ ಸುವ್ವಿ ನಾರಾಯಣ ॥ ॥ಪ॥

ಭವ್ಯಚರಿತ ದುರಿತವಿಪಿನ ಹವ್ಯವಹನ ಭವೇಂದ್ರಾದಿ
ಸೇವ್ಯಮಾನ ಸುಪ್ರಸಿದ್ಧ ಸುಲಭ ಮೂರುತೇ
ಅವ್ಯಯಾತ್ಮನೇ ಸುಖಾತ್ಮ ನಿನ್ನ ದಿವ್ಯಮಹಿಮೆ ತುತಿಪ
ಸುವಿವೇಕಿಗಳಿಗೆ ಕೊಡುವುದಮಿತ ಮೋದವ ॥ ॥೧॥

ವಾಸವಾದ್ಯಮರ ವಾತಾಶಿ ಶಾರದೇಂದು ಮಧ್ವ
ದೇಶಿಕಾರ್ಯ ಚಿತ್ತ ಸಿಂಹಪೀಠ ಮಧ್ಯಗ
ದೇಶ ಕಾಲವ್ಯಾಪ್ತ ಸರ್ವೇಶ ಸಾರ್ವಭೌಮ ಶ್ರೀಮ–
ಹೀಸಮೇತ ಕೃಷ್ಣ ಕೊಡಲಿ ನಮಗೆ ಮೋದವ ॥೨॥

ಕಮಲಸಂಭವ ವೇದ ತಮನು ಒಯ್ಯುತಿರಲು ಲಕ್ಷ್ಮೀ
ರಮಣ ಮತ್ಸ್ಯನಾಗಿ ತಂದ ಶರಧಿ ಮಧ್ಯದಿ
ಕಮಠರೂಪದಿಂದ ಸುರರಿಗಮೃತವಿತ್ತು ಕಾಯ್ದ ಅಖಿಳ
ಸುಮನಸೇಂದ್ರ ಸ್ವಾಮಿ ಕೊಡಲಿ ಎಮಗೆ ಮಂಗಳ ॥ ॥೩॥

ಕನಕಲೋಚನನ್ನ ಸದೆದು ಮನುಜಸಿಂಗ ವೇಷನಾದ
ದ್ಯುನದಿ ಪಡೆದ ಜನನಿ ಕಡಿದು ವನವ ಚರಿಸಿದ
ಜನಪ ಕಂಸನೊದೆದು ತ್ರಿಪುರವನಿತೆ ಸುವ್ರತವನಳಿದ
ವಿನುತ ಕಲ್ಕಿ ದೇವರಾಜ ಎಮ್ಮ ಸಲಹಲಿ ॥ ॥೪॥

ಪಾಹಿ ಪಾವನ್ನಚರಿತ ಪಾಹಿ ಪಾಹಿ ಪದ್ಮನೇತ್ರ
ಪಾಹಿ ನಿಗಮನಿಕರ ಸ್ತೋತ್ರ ಲಲಿತಗಾತ್ರ ಮಾಂ
ಪಾಹಿ ಸುಜನಸ್ತೋಮಮಿತ್ರ ದೋಷದೂರ ಸುಗುಣ ಸಂ-
ದೋಹ ಜಗನ್ನಾಥವಿಠ್ಠಲ ಜಯ ತ್ರಿಧಾಮಗ ॥ ॥೫॥

**ಅರ್ಥವಿವರಣೆ :-**

**ಸುಪ್ರಿ** = ಮಂಗಳ ಪದ. **ಶ್ರೀದೇವಿರಮಣ** = ಲಕ್ಷ್ಮೀಪತಿ. **ಸರ್ಪರಾಜಶಯನ** = ಶೇಷದೇವರ ಮೇಲೆ ಮಲಗಿರುವ ಶ್ರೀಮನ್ನಾರಾಯಣ. **ದೈತ್ಯಕರಹರಣ** = ದೈತ್ಯರನ್ನು ಸಮೂಲ ಸಂಹಾರ ಮಾಡಿದವನು (ದಾನವಾಂತಕ). **ಭವ್ಯಚರಿತ** = ನಿರ್ದೋಷವಾದ ಚರಿತ್ರೆಯುಳ್ಳವ. **ದುರಿತ ವಿಪಿನ ಹವ್ಯವಹನ** = ಪಾಪಗಳೆಂಬ ಅರಣ್ಯಕ್ಕೆ ಅಗ್ನಿಸದೃಶನು (ದುರಿತ-ಪಾಪರಾಶಿಗಳು. ವಿಪಿನ-ಕಾಡು. ಹವ್ಯವಹನ-ಅಗ್ನಿ). **ಭವ ಇಂದ್ರಾದಿ ಸೇವ್ಯಮಾನ** = ರುದ್ರ ಇಂದ್ರಾದಿ ಸಮಸ್ತ ದೇವತೆಗಳಿಂದ ಸೇವಿಸಲ್ಪಡುವ. **ಸುಪ್ರಸಿದ್ಧ** = ಜಗತ್ತಿನಲ್ಲಿ ಅತ್ಯಂತ ಪ್ರಸಿದ್ಧನಾದ. **ಸುಲಭ ಮೂರುತೇ** = ಭಕ್ತರ ಪಾಲಿಗೆ ಅತ್ಯಂತ

ಸುಲಭನು. **ಅವ್ಯಯಾತ್ಮನೇ** = ನಿತ್ಯಶಾಶ್ವತಸ್ವರೂಪನೇ. **ಸುಖಾತ್ಮ** = ಆನಂದಮಯ ಶರೀರವುಳ್ಳವನು. (ಆನಂದಸ್ವರೂಪಿ). **ಸುವಿವೇಕಿಗಳಿಗೆ** = ಬ್ರಹ್ಮಜ್ಞಾನಿಗಳಿಗೆ. **ಅಮಿತ ಮೋದವ** = ಗಣನೆಯಿಲ್ಲದ ಸುಖವನ್ನು ಕೊಡು.

**ವಾಸವಾದ್ಯಮರ** = ಇಂದ್ರಾದಿದೇವತೆಗಳ (ವಾಸವ–ಇಂದ್ರದೇವರು). **ವಾತಾಶಿ ಶಾರದೇಂದು** = ಹೃತ್ತಾಪ ಪರಿಹಾರಕನಾದ ಶರತ್ಕಾಲದ ಪೂರ್ಣಚಂದ್ರಬಿಂಬದಂತಿರುವ. **ಮಧ್ವದೇಶಿಕಾರ್ಯ** = ಗುರುಮಧ್ವರ. **ಚಿತ್ತಸಿಂಹಪೀಠ ಮಧ್ಯಗ** = ಮನಸ್ಸೆಂಬ ಸಿಂಹಾಸನದಲ್ಲಿ ವಿರಾಜಮಾನನಾಗಿರುವ. **ದೇಶಕಾಲವ್ಯಾಪ್ತ** = ಸರ್ವ ದೇಶ,ಕಾಲಗಳಲ್ಲಿ ಪರಿಪೂರ್ಣನಾಗಿ ವ್ಯಾಪ್ತನಾಗಿರುವ. **ಸರ್ವೇಶ** = ಸರ್ವರಿಗೂ ನಿಯಾಮಕನಾದ. **ಸೌರ್ವಭೌಮ** = ಸರ್ವೋತ್ತಮನಾದ. **ಶ್ರೀಮಹೀಸಮೇತ** = ಶ್ರೀಭೂದೇವಿಸಹಿತನಾಗಿ (ಮಹೀ–ಭೂಮಿ). **ಮೋದವ** = ಅಂತಹ ಶ್ರೀಕೃಷ್ಣನು ನಮಗೆ ಸಂತೋಷವನ್ನುಂಟುಮಾಡಲಿ.

**ಕಮಲಸಂಭವನ** = ಶ್ರೀಹರಿಯ ನಾಭೀಕಮಲಸಂಜಾತರಾದ ಬ್ರಹ್ಮದೇವರ. **ವೇದವ ತಂದ** = ಮತ್ಸ್ಯರೂಪಿಯಾಗಿ ಅವತರಿಸಿ, ವೇದಚೋರನಾದ ತಮನೆಂಬ ದೈತ್ಯನನ್ನು ಸಂಹರಿಸಿ, ವೇದಗಳನ್ನು ಬ್ರಹ್ಮನಿಗಿತ್ತ. **ಶರಧಿ ಮಥನದಿ** = ಕ್ಷೀರಸಮುದ್ರವನ್ನು ದೇವಾಸುರರು ಕಡೆಯುತ್ತಿರುವ ಸಮಯದಲ್ಲಿ. **ಕಮಠರೂಪದಿಂದ** = ಕೂರ್ಮರೂಪದಿಂದ. **ಸುರರಿಗೆ ಅಮೃತವಿತ್ತು** = ದೇವತೆಗಳಿಗೆ ಅಮೃತಪ್ರಾಶನಮಾಡಿಸಿ, **ಅಖಿಳ ಸುಮನಸೇಂದ್ರ** = ಸಮಸ್ತದೇವತಾಗಣಕ್ಕೆ ಪ್ರಭುವಾದ (ಸುಮನಸ–ದೇವತೆಗಳು) '

**ಕನಕಲೋಚನನ** = ಹಿರಣ್ಯಾಕ್ಷನನ್ನು (ಕನಕ–ಹಿರಣ್ಯ. ಲೋಚನ–ಅಕ್ಷ). **ಸದೆದು** = ಸಂಹರಿಸಿದ ವರಹಾವತಾರೀ ಶ್ರೀಹರಿ. **ಮನುಜಸಿಂಗ ವೇಷನಾದ** = ನರಸಿಂಹರೂಪ ತಾನಾದ (ಮನುಜ–ನರ, ಸಿಂಗ–ಸಿಂಹ). **ದ್ಯುನದಿ ಪಡೆದ** = ಆಕಾಶಗಂಗೆಯನ್ನು ತನ್ನ ಪಾದಾಂಗುಷ್ಠ

ದಿಂದ ಪಡೆದ ತ್ರಿವಿಕ್ರಮ. (ವಾಮನರೂಪ). **ಜನನಿ ಕಡಿದು** = ತಂದೆ ಜಮದಗ್ನಿ ಋಷಿಗಳ ಆದೇಶದಂತೆ, ತನ್ನ ತಾಯಿಯಾದ ರೇಣುಕಾದೇವಿಯ ಶಿರವನ್ನು ಕೊಡಲಿಯಿಂದ ಕಡಿದ ಪರಶುರಾಮ. **ವನವ ಚರಿಸಿದ** = ವನವಾಸಿಯಾದ ಶ್ರೀರಾಮಚಂದ್ರ. **ಜನಪ ಕಂಸನ ಒದೆದು** = ರಾಜನಾಗಿದ್ದ ಕಂಸಾಸುರನನ್ನು ಸಂಹರಿಸಿದ ಶ್ರೀಕೃಷ್ಣ. **ತ್ರಿಪುರ ವನಿತೆ** = ತ್ರಿಪುರಾಸುರರ ಪತ್ನಿಯ ವ್ರತಭಂಗಮಾಡಿದ ಬುದ್ಧರೂಪೀ ಶ್ರೀಹರಿ. **ವಿನುತ ಕಲ್ಕಿ** = ಸಂಸ್ತುತ್ಯನಾದ ಕಲ್ಕಿರೂಪ. **ದೇವರಾಜ** = ದೇವತಾಪ್ರಭುವಾದ ಶ್ರೀಹರಿ. **ಪಾವನ್ನ ಚರಿತ** = ಪವಿತ್ರತಮವಾದ ಚರಿತ್ರೆಯುಳ್ಳವ. **ಪಾಹಿ** = ನಮ್ಮನ್ನು ಸಂರಕ್ಷಿಸು. **ಪದ್ಮನೇತ್ರ** = ಕಮಲದ ದಳದಂತೆ ವಿಶಾಲನೇತ್ರನು. **ನಿಗಮನಿಕರ ಸ್ತೋತ್ರ** = ಸಕಲವೇದ ಸಮೂಹಗಳಿಂದ ಸಂಸ್ತುತ್ಯನು (ಸದಾಗಮೈಕವೇದ್ಯನು). **ಲಲಿತಗಾತ್ರ** = ಸುಂದರ ಶರೀರವುಳ್ಳವನು (ಅಪ್ರಾಕೃತ ಜ್ಞಾನಾನಂದಮಯ ಶರೀರ). **ಸುಜನಸ್ತೋಮ ಮಿತ್ರ** = ಸಜ್ಜನರ ಸಮೂಹಕ್ಕೆ ಮಿತ್ರನಂತಿರುವವನು. **ದೋಷದೂರ** = ಸಮಸ್ತದೋಷವರ್ಜಿತನು. **ಸುಗುಣಸಂದೋಹ** = ಅನಂತಕಲ್ಯಾಣಗುಣಗಣಧಾಮನು. **ತ್ರಿಧಾಮಗ** = ವೈಕುಂಠ–ಅನಂತಾಸನ–ಶ್ವೇತದ್ವೀಪಗಳೆಂಬ ಮೂರು ಮುಕ್ತಿಧಾಮಗಳ ನಿವಾಸಿಯು.



೬೯೫

## ಮಂಗಳಪದ

### (ಪ್ರಾಣೇಶವಿಠ್ಠಲಾಂಕಿತ)

ರಾಗ–ಸಾವೇರಿ ಏಕತಾಳ

ಮಂಗಳಂ ಜಯ ಮಂಗಳಂ
ಶುಭ ಮಂಗಳಂ ಅಕ್ರೂರವರದನಿಗೇ
ಮಂಗಳಂ ಜಯ ಮಂಗಳಂ ॥ ॥ಪ॥

ಕ್ಷರಾಕ್ಷರಪುರುಷ ವಿನುತಗೇ
ಕ್ಷೀರಸಾಗರದಿ ನಿವಾಸನಿಗೇ
ಪರಾಶರನಸುತ ಬಾದರಾಯಣನಿಗೆ
ಮಾರನ ಪಿತ ಮಧುಸೂದನಗೇ॥ ॥೧॥

ಶುಂಡಾಲವರದ ಮೃಡ ನರ ಸಖಗೇ
ಪಾಂಡವಪಕ್ಷ ಕೌರವಾಶಿಕ್ಷಗೇ
ಲೆಂಡ ಚಾಣೂರ ಮುಷ್ಟಿಕರ ಸಂಹಾರಗೇ
ಅಂಡಜವಹನಗೇ ಸರ್ವನಾಮಗೇ ॥ ॥೨॥

ಸಚ್ಚಿದಾನಂದ ಪೂರ್ಣರಾಮನಿಗೇ
ಮತ್ಸ್ಯವಾಮನ ನರಸಿಂಹಗೇ
ಸಿಟ್ಟಿಲಿ ಹಯವೇರಿ ಮೆರೆವ ದೇವಗೆ ಭಕ್ತ–
ವತ್ಸಲ ಶ್ರೀಪ್ರಾಣೇಶವಿಠ್ಠಲನಿಗೇ ॥ ॥೩॥



**ಅರ್ಥವಿವರಣೆ:-**

**ಕ್ಷರಾಕ್ಷರಪುರುಷ ವಿನುತಗೇ** = ಕ್ಷರನಾಮಕರಾದ ಬ್ರಹ್ಮಾದಿ ದೇವತೆಗಳಿಂದಲೂ ಮತ್ತು ಅಕ್ಷರನಾಮಕಳಾದ ಶ್ರೀಲಕ್ಷ್ಮೀದೇವಿಯಿಂದಲೂ ನಮ್ಯನಾದವನಿಗೇ. **ಪರಾಶರನಸುತ** = ಪರಾಶರ ಋಷಿಗಳಿಂದ ಸತ್ಯವತೀದೇವಿಯಲ್ಲಿ ಆವಿರ್ಭವಿಸಿದ ಬಾದರಾಯಣರಿಗೇ. **ಮಾರನಪಿತ** = ಮನ್ಮಥನ ಪಿತ. **ಮಧುಸೂದನಗೇ**=ಮಧು ಎಂಬ ದೈತ್ಯನನ್ನು ಸಂಹರಿಸಿದ ಶ್ರೀಮನ್ನಾರಾಯಣನಿಗೇ.

**ಶುಂಡಾಲವರದ**=ಗಜೇಂದ್ರರಕ್ಷಕನಿಗೇ. **ಮೃಡ ನರ ಸಖಗೇ**= ಶ್ರೀರುದ್ರದೇವರು ಮತ್ತು ನರನಾಮಕನಾದ ಅರ್ಜುನ-ಇವರಿಗೆ ಪರಮ ಮಿತ್ರನಾದವನಿಗೇ. **ಕೌರವ ಶಿಕ್ಷಾನಿಗೇ** = ಸಕಲ ಕೌರವರನ್ನೂ ಸಂಹರಿಸಿದ ಶ್ರೀಕೃಷ್ಣನಿಗೇ. **ಚಂಡ ಚಾಣೂರ ಮುಷ್ಟಿಕರ** = ಬಲಶಾಲಿಗಳಾಗಿದ್ದ ಚಾಣೂರ ಮತ್ತು ಮುಷ್ಟಿಕರೆಂಬ ಮಲ್ಲರನ್ನು ಕೊಂದ ಶ್ರೀಕೃಷ್ಣನಿಗೇ. **ಅಂಡಜವಹನಗೇ** = ಗರುಡವಾಹನನಿಗೇ (ಅಂಡಜ-ಪಕ್ಷಿ). **ಸರ್ವನಾಮಗೇ** - ಸರ್ವ ಶಬ್ದ, ವರ್ಣ, ನಾಮವಾಚ್ಯನಾದ ಶ್ರೀಹರಿಗೇ.

**ಸಚ್ಚಿದಾನಂದ ಪೂರ್ಣರಾಮನಿಗೇ** = ಪೂರ್ಣಾನಂದ ಜ್ಞಾನಮಯನಿಗೇ (ಸತ್-ಚಿತ್-ಆನಂದ). **ಮತ್ಸ್ಯ ವಾಮನ** = ಇದರಿಂದ ದಶಾವತಾರಗಳನ್ನು ಸೂಚ್ಯವಾಗಿ ಸ್ತುತಿಸುತ್ತಾರೆ. ಇದು ಶ್ರೀ ಜಗನ್ನಾಥದಾಸವರ್ಯರ ಪ್ರಥಮ ಶಿಷ್ಯರಾದ ಲಿಂಗಸೂಗೂರಿನ **ಪ್ರಾಣೇಶವಿಠ್ಠಲರ** ಮಂಗಳಪದವು.



## ೬೯೬

## ಮಂಗಳಪದ

### (ಅಂಕಿತ-ಭೀಮೇಶಕೃಷ್ಣ)

ಮುತ್ತಿನಾರತಿಯೆತ್ತಿ ಬೆಳಗಿರೆ
ಕೃಷ್ಣಮೂರುತಿಗೆ ಜಯ ಜಯ ॥ ॥ಪ॥

ಬೆಟ್ಟವನು ಕಿರುಬೆಟ್ಟಲೆತ್ತಿದ ದಿಟ್ಟ ರಂಗಗೆ
ಮಧುರೆಯೊಳ್ಪುಟ್ಟಿ ಮಾವನ ಮಲ್ಲರೊಳಾಡಿದ ದಿಟ್ಟರಂತಕಗೆ
ಕೃಷ್ಣ ಕೃಷ್ಣ ಎಂದು ಕರೆಯೆ ದ್ರೌಪದಿದೇವಿ
ಅಕ್ಷಯವೆಂದಾನಂತ ಮೂರುತಿಗೆ ॥ ॥೧॥

ಮಡುವಿನೊಳ್ಧುಮುಕಿದು ಕಾಳಿಂಗನ್ಹೆಡೆಯ ತುಳಿದವಗೆ
ಗೋಪಿಯರುಡುವೊ ಸೀರೆಗಳ ಕಟ್ಟಿ ಕಡಹಾದ ಗಿಡನೇರ್ದವಗೆ
ಬಡವನವಲಕ್ಕಿ ಹಿಡಿಯುತ ಮುದ್ದು
ಹಿಡಿ ಹಿಡಿಯೊಂದರ್ಥ ಕೊಡುವ ಸಮರ್ಥಗೆ ॥ ॥೨॥

ಅಷ್ಟ ಭಾರ್ಯೇರಿಂದ ಸೋಳಸಾವಿರ ಪತ್ನೇರಾಳ್ದವಗೆ
ರುಕ್ಮಿಣಿ ಸತ್ಯಭಾಮೇರ ಸಹಿತ ಸಂತೋಷದಿ ಸರಸವಾಡ್ದವಗೆ
ಪಾರ್ಥನ ರಥ ಪರಮ್ಪುರುಷದಿ ನಡೆಸಿದ
ಭಕ್ತವತ್ಸಲ ಭೀಮೇಶಕೃಷ್ಣನಿಗೆ ಪೊಸ ॥ ॥೩॥



**ಅರ್ಥವಿವರಣೆ :-**

**ಭೀಮೇಶಕೃಷ್ಣ ಅಂಕಿತವಿರುವ** ಈ ಕೀರ್ತನಸಾಹಿತ್ಯವು **ಹರಪನ ಹಳ್ಳಿ ಭೀಮವ್ವನವರದು.**

**ಬೆಟ್ಟವನು ಕಿರುಬೆಟ್ಟಲೆತ್ತಿದ** = ಗೋವರ್ಧನ ಪರ್ವತವನ್ನು ತನ್ನ ಕೈಯ್ಯಿನ ಕಿರುಬೆರಳಿನಿಂದ ಎತ್ತಿ ಹಿಡಿದು,ಸಕಲಗೋಕುಲವನ್ನು ಭೀಕರ ಮಳೆಯಿಂದ ಸಂರಕ್ಷಿಸಿದ ಶ್ರೀಕೃಷ್ಣ. **ದಿಟ್ಟ ರಂಗಗೆ** = ಧೀರನಾದ ಶ್ರೀ ಹರಿಗೆ. **ಮಾವನ ಮಲ್ಲರೊಳಾಡಿದ** = ತನ್ನ ಸೋದರಮಾವನಾದ ಕಂಸಾಸುರನ ಪರಾಕ್ರಮಿಗಳಾದ ಚಾಣೂರ ಮತ್ತು ಮುಷ್ಟಿಕರೆಂಬ ಮಲ್ಲ ರೊಡನೆ ಮಲ್ಲಯುದ್ಧ ಮಾಡಿ, ಅವರನ್ನು ಸಂಹರಿಸಿದ ಯದುಬಾಲ. **ದಿಟ್ಟರಂತಕಗೆ** = ಧೀರನಾದ ದುಷ್ಟಸಂಹಾರಕನಿಗೆ. **ಬಡವನವಲಕ್ಕಿ** = ದರಿದ್ರನಾದ ಕುಚೇಲನು ಕೊಟ್ಟ ಮೂರು ಹಿಡಿ ಅವಲಕ್ಕಿ. **ಹಿಡಿ ಹಿಡಿಯೆಂದು ಅರ್ಥವ** = ಅದಕ್ಕೆ ಪ್ರತಿಯಾಗಿ, ಪರಮೈಶ್ವರ್ಯವನ್ನು ಕರುಣಿಸಿದವಗೆ.

**ಅಷ್ಟ ಭಾರ್ಯೇರಿಂದ** = ಅಷ್ಟಮಹಿಷಿಯರು. **ಸೋಳಸಾವಿರ** = ೧೬,೦೦೦ ಸಂಖ್ಯಾಕರಾದ. **ಪೂಸ** = ಹೊಸ ಆರತಿಯನ್ನು ಬೆಳಗಿರೆ.



## ೬೯೭

## ಮಂಗಳಪದ

### (ಶ್ಯಾಮಸುಂದರಾಂಕಿತ)

**ರಾಗ–ಭೈರವಿ** **ಏಕತಾಳ**

ಮಂಗಳೆಂದು ಪಾಡಿರೆ ಶ್ರೀರಂಗನೀಗೆ
ಭೃಂಗಾಲಕಿಯರು ಕೂಡಿ ಶೃಂಗಾರದಿ ಬೇಗ ॥ ॥ಪ॥

ದೇವಾದಿದೇವ ಹರಿಗೆ ದೇವೌಘ ವಂದ್ಯಗೆ
ಗೋವರ್ಧನಾದ್ರಿಧರಗೆ ಗೋವೃಂದ ಪಾಲಗೆ
ಪಾವನಾಂಗ ಪಾವಿನಮೇಲೆ ಪವಳಿಸಿವಗೆ
ಭೃಂಗಾಲಕಿಯರು ॥ ॥೧॥

ಮೀನಾಗಪಾಣಿ ಕಟಿಗೆ ಶ್ರೀನಾರಸಿಂಹಗೆ
ಕ್ಷೋಣಿಯು ತೊರೆದ ದಶಾನನಾರಿಗೆ
ಧೇನುಪಾಲ ಸ್ಥಾಣು ಬಾಣ ಘೋಟಕಧ್ವಜಗೆ–
ಭೃಂಗಾಲಕಿಯರು ॥ ॥೨॥

ಪ್ರೇಮಾಬ್ಧಿ ಪವನ ಪಿತಗೆ ಹೇಮಾಂಬಕಾರಿಗೆ
ಸಾಮಜೇಂದ್ರ ಪ್ರಿಯಗೆ ತ್ರಿಧಾಮದೇವಗೆ
**ಶ್ಯಾಮಸುಂದರವಿಠ್ಠಲ** ಸುಧಾಮಸಖಗೆ–
ಭೃಂಗಾಲಕಿಯರು ॥ ॥೩॥



**ಅರ್ಥವಿವರಣೆ :-**

**ಭೃಂಗಾಲಕಿಯರು** = ಕಪ್ಪಾದ ದುಂಬಿಯಂತೆ ಕಪ್ಪು ಮುಂಗುರು ಳುವುಳ್ಳ ಸ್ತ್ರೀಯರೇ. **ಶೃಂಗಾರದಿ** = ಮಂಗಳಮಾರುತಿಗೆ ಅತ್ಯಂತ ಪ್ರೀತಿಯುಕ್ತನಾದ ಭಕ್ತಿಯಿಂದ (ಭಕ್ತಿಯೇ ಶ್ರೀಹರಿಗೆ ಶೃಂಗಾರರೂಪವಾದ ವೇಷಭೂಷಣಗಳು).

**ದೇವಾದಿದೇವ** = ರಮಾ ಬ್ರಹ್ಮಾದಿಗಳಿಗೂ ಪರಮಪ್ರಭುವಾದ. **ದೇವೌಘ ವಂದ್ಯಗೆ** = ದೇವತಾ ಸಮೂಹದಿಂದ ನಮಸ್ಕೃತನಾದವನಿಗೆ (ದೇವ-ಓಘ). **ಗೋವೃಂದ ಪಾಲಗೆ** = ಗೋವುಗಳ ಮಂದೆಯನ್ನು ಕಾಯ್ದ ಗೋಪಾಲಬಾಲನಿಗೆ. **ಪಾವನಾಂಗ** = ಪರಮಪವಿತ್ರವಾದ ಜ್ಞಾನಾನಂದಮಯ ಶರೀರವುಳ್ಳವನಿಗೆ. **ಪಾವಿನಮೇಲೆ** = ಆದಿಶೇಷನ ಮೇಲೆ ಮಲಗಿದ ಹರಿಗೆ.

**ಮೀನ** = ಮತ್ಸ್ಯಾವತಾರಿಗೆ. **ಅಗಪಾಣಿ** = ಮಂದರಪರ್ವತ ಧಾರಿಯಾದ ಕೂರ್ಮನಿಗೆ (ಅಗ-ಚಲಿಸದಿರುವ ಪರ್ವತ. ಪಾಣಿ-ಕೈಯ್ಯಿಂದ ಎತ್ತಿ ಹಿಡಿಯುವುದು-ಎಂದು ಸಾಮಾನ್ಯಾರ್ಥ. ಇಲ್ಲಿ ಬೆನ್ನಿನಮೇಲೆ ಧರಿಸಿರುವ ಕೂರ್ಮ ಎಂದು ಅರ್ಥೈಸಬೇಕು). **ಕಿಟಿಗೆ** = ಹಂದಿ-ವರಹಾವತಾರಿಗೆ. **ಕ್ಷೋಣಿಯ** = ನೆಲವನ್ನು ಅಳೆದ ವಾಮನ. **ತೊರೆದ** = ಕ್ಷೋಣಿಪಾಲರಾದ ದುಷ್ಟ ಕ್ಷತ್ರಿಯರ ಸಂಹಾರಕ ಭಾರ್ಗವರಾಮನಿಗೆ (ತೊರೆದ-ಅಳಿಸಿದ, ನಾಶಗೈದ). **ದಶಾನನಾರಿಗೆ** = ಹತ್ತು ತಲೆಯ ರಾವಣನನ್ನು ಸಂಹರಿಸಿದ ಶ್ರೀರಾಮಚಂದ್ರನಿಗಿ (ದಶಾನನ-ಅರಿ). **ಧೇನು ಪಾಲ** = ಗೋಪಾಲನಾದ ಶ್ರೀಕೃಷ್ಣನಿಗೆ. **ಸ್ಥಾಣು ಬಾಣ** = ರುದ್ರ ದೇವರ ಬಾಣದಲ್ಲಿ ಸನ್ನಿಹಿತನಾದ ವಿಷ್ಣುವಿಗೆ (ಸ್ಥಾಣು-ರುದ್ರ ದೇವರು. ರುದ್ರನ ಬಾಣದಲ್ಲಿ ಶ್ರೀಹರಿಯು ಸನ್ನಿಹಿತನಾಗಿದ್ದು, ತ್ರಿಪುರಾಸುರರನ್ನು ನಾಶಮಾಡಿದ. ಇಲ್ಲಿ ಬುದ್ಧರೂಪವನ್ನು ಪರಿಗಣಿಸಬೇಕು). **ಘೋಟಕ ಧ್ವಜಗೆ** = ಕುದುರೆಯನ್ನೇರಿ ಬರುವ ಕಲ್ಕಿಗೆ (ಘೋಟಕ-ಕುದುರೆ. ಧ್ವಜ-ವಾಹನ).

**ಪ್ರೇಮಾಬ್ಧಿ** = ಭಕ್ತವತ್ಸಲನಿಗೆ (ಭಕ್ತರ ವಿಷಯದಲ್ಲಿ ಕರುಣಾ ಸಮುದ್ರ). **ಪವನಪಿತಗೆ** = ಶ್ರೀವಾಯುದೇವರ ತಂದೆಯಾದ ಜಯಾ ಪತಿ ಸಂಕರ್ಷಣನಿಗೆ. **ಹೇಮಾಂಬಕಾರಿಗೆ** = ಹಿರಣ್ಯಾಕ್ಷನನ್ನು ಕೊಂದ ಶ್ರೀವರಾಹರೂಪೀ ಹರಿಗೆ (ಹೇಮ-ಅಂಬಕ-ಅರಿ = ಚಿನ್ನದ ಕಣ್ಣು. ಅಂದರೆ ಹಿರಣ್ಯಾಕ್ಷ. ಅವನ ಅರಿ-ಶತ್ರು). **ಸಾಮಜೇಂದ್ರಪ್ರಿಯಗೆ**= ಗಜರಾಜ ವರದನಿಗೆ. **ತ್ರಿಧಾಮ ದೇವಗೆ** = ವೈಕುಂಠ-ಅನಂತಾಸನ-ಶ್ವೇತದ್ವೀಪಗಳೆಂಬ ಮುಕ್ತಿ ಧಾಮತ್ರಯಗಳ ಒಡೆಯನಿಗೆ. **ಸುಧಾಮನ ಸಖಗೆ** = ಕುಚೇಲಮಿತ್ರನಾದ ಶ್ರೀಕೃಷ್ಣನಿಗೆ.



೭೯೮

## ಮಂಗಳಪದ

### (ಅಂಕಿತ-ಕಾರ್ಪರನರಹರಿ)

ಮಂಗಳಂ ವೇಣುಗೋಪಾಲಾ-ಸಿರಿಲೋಲ
ಗೆಡಪಾಲ-ಗಜಪಾಲ-ಶುಭಪಾಲ ॥ ॥ಪ॥

ಅಂಗುಟಾಗ್ರದಿಂ ಗಂಗೆಯ ಪಡೆದಿಹ
ಮಂಗಳಚರಿತ ಶುಭಾಂಗ ಶ್ರೀ-
ರಂಗ-ದಯಾಪಾಂಗ-ನೀಲಾಂಗ ॥ ॥೧॥

ನಂದಕುಮಾರ ನವನೀತಚೋರ
ವೃಂದಾವನ ಸುವಿಹಾರ-ಭವದೂರ
ಸುಕುಮಾರ-ಶರೀರ ॥ ॥೨॥

ಧರೆಯೊಳು ಮೆರೆಯುವ ಸಿರಿಕಾರ್ಪರನರ–
ಹರಿ ರೂಪನೆ–ಪೊರೆಯೆನ್ನ ಅಘ–
ಹರಣ–ತಪಚರಣ–ತಪಚರಣಕರಗುವನ ॥ ॥೩॥



**ಅರ್ಥವಿವರಣೆ :–**

ಈ ಮಂಗಳಪದವು **ಶ್ರೀಗಿರಿಯಾಚಾರ್ಯ ಅರ್ಚಕ ಕೊಪ್ಪರ–** ಈ ಜ್ಞಾನಿಗಳಿಂದ ಕ್ಷೇತ್ರಸ್ಥ **ಕಾರ್ಪರ ನರಹರಿ**-ಎಂಬ ಅಂಕಿತನಾಮದಲ್ಲಿ ರಚಿತವಾಗಿದೆ. ಕಲ್ಲೂರಿನ ಶ್ರೀಗೋಪಾಲಕೃಷ್ಣನನ್ನು ಕುರಿತು ರಚಿಸಿದ ಮಂಗಳಪದವಿದು.

**ಸಿರಿಲೋಲ** = ಶ್ರೀಲಕ್ಷ್ಮಿಯಲ್ಲಿ ರಮಣಮಾಡುವ ರಮಾವಲ್ಲಭನು. **ಗಜಪಾಲ** = ಕರಿರಾಜರಕ್ಷಕನು. **ಶುಭಲೀಲಾ** = ಅವನ ಪ್ರತಿಯೊಂದು ಕಾರ್ಯವೂ ಒಂದು ಲೀಲೆ. ಅದು ನಮಗೆ ಶುಭಪ್ರದವಾಗಲಿ. **ಅಂಗುಟಾಗ್ರದಿಂ** = ತ್ರಿವಿಕ್ರಮಾವತಾರದಲ್ಲಿ ತನ್ನ ಎಡಗಾಲಿನ ಬೆರಳಿನ ಉಗುರಿನ ತುದಿಯಿಂದ ಗಂಗೆಯನ್ನು ಪಡೆದ ಮಹಾಮಹಿಮನು. **ದಯಾಪಾಂಗ** = ಕೃಪಾಕಟಾಕ್ಷವುಳ್ಳವನು (ದಯ–ಅಪಾಂಗ). **ನೀಲಾಂಗ** = ನೀಲಮೇಘ ಶ್ಯಾಮವರ್ಣದ ಶರೀರನು.

**ನಂದಕುಮಾರ** = ನಂದಗೋಪನ ಸಾಕುಮಗ ಶ್ರೀಕೃಷ್ಣ. **ವೃಂದಾವನ ಸುವಿಹಾರ** = ವೃಂದಾವನ ಕ್ಷೇತ್ರದಲ್ಲಿ ಗೋ ಗೋಪಾಲಕರೊಡಗೂಡಿ ಸಂಚರಿಸಿದ ಗೋಕುಲೇಶನು. **ಭವದೂರ** = ತನ್ನ ಭಕ್ತರನ್ನು ಸಂಸಾರವೆಂಬ ಮಹಾಸಮುದ್ರದಿಂದ ಪಾರುಮಾಡುವ ಪರಮಕರುಣಾಳು. **ಸುಕುಮಾರ ಶರೀರ** = ಕೋಮಲವಾದ ದೇಹವುಳ್ಳವನು. (ಜ್ಞಾನಾನಂದಮಯ ಶರೀರಿ).

**ಸಿರಿಕಾರ್ಪರನರಹರಿ** = ರಾಯಚೂರು ಜಿಲ್ಲಾ ದೇವದುರ್ಗ ತಾಲ್ಲೂಕಿನ ಕೊಪ್ಪರ ಎಂಬ ಪುಣ್ಯಕ್ಷೇತ್ರವು ಶ್ರೀಕೃಷ್ಣಾ ನದಿಯ ದಡದಲ್ಲಿದೆ. ಕಾರ್ಪರ ಮುನಿಗಳು ತಪಸ್ಸು ಮಾಡಿದ ದಿವ್ಯಭೂಮಿ. ಅಲ್ಲಿ ವಟವೃಕ್ಷ ದಲ್ಲಿ ನರಸಿಂಹದೇವರು ಮೂಡಿದ್ದಾರೆ ಅಲ್ಲಿ ಷೋಡಶಬಾಹು ಶ್ರೀನರ ಸಿಂಹನ ವಿಗ್ರಹವನ್ನು ಶ್ರೀಗಿರಿಯಾಚಾರ್ಯರು ಪೂಜಿಸುತ್ತಿದ್ದರು. ಈಗ ಅವರ ವಂಶೀಕರಿಂದ ಪೂಜೆಗೊಳ್ಳುತ್ತಿದ್ದಾನೆ ಆ ಕಾರ್ಪರ ನರಹರಿ. **ಅಘ ಹರಣ** = ಸಜ್ಜನರ ಪಾಪಗಳನ್ನು ಪರಿಹರಿಸುವವನು. **ತವಚರಣಕೆರ ಗುವನ ಪೊರೆ** = ನಿನ್ನ ಪಾದಾರವಿಂದಗಳಿಗೆ ನಮಸ್ಕರಿಸುವ ಭಕ್ತವೃಂದ ವನ್ನು ಸಂರಕ್ಷಿಸೆಂದು ಪ್ರಾರ್ಥಿಸಿದ್ದಾರೆ.



**೬೯೯**

**ಮಂಗಳಪದ**

**(ಶ್ರೀಕರವಿಠ್ಠಲಾಂಕಿತ)**

**ರಾಗ–ಮಿಶ್ರ** **ಆದಿತಾಳ**

ಮಂಗಳ ಜೈ ಪಾಂಡುರಂಗನಿಗೇ ಜಯ
ಮಂಗಳ ಕಾಳಿಂಗ ಮಥನನಿಗೇ
ಮಂಗಳ ಗಂಗೆಯಂಗುಟದಿಂದ ಪಡೆದವಗೇ
ಮಂಗಳ ಯದುಕುಲ ತಿಲಕನಿಗೇ ‖ ‖ಪ‖

ಶಿಲೆಯನು ಚೆಲುವಾ ಲಲನೆಯಗೈದಗೆ
ಬಲಿಯ ಬಾಗಿಲನು ಕಾಯ್ದವಗೆ
ಖಳನಿಂದ ಬಲುವಿಧ ಬಳಲಿದ ತರಳಗೆ
ಒಲಿದು ಕಂಭದಿ ಬಂದು ಪೊರೆದವಗೆ ‖ ‖೧‖

ಸಖಯಿಂದವಲಕ್ಕಿ ಸವಿಯೆಂದು ಮೆದ್ದವಗೆ
ಹಿತದಿಂ ಪುತ್ರನನು ನೀಡಿದಗೆ ॥ ॥೨॥

ಹಾಟಕರತ್ನ ಕಿರೀಟದಿಂದೆಸೆವಗೆ
ಕೋಟಿ ಮನ್ಮಥಲಾವಣ್ಯನಿಗೆ
ನೋಟಕಾಶ್ಚರ್ಯವಾದ ತಿಲಕವನಿಟ್ಟವಗೆ
ಸಾಟಿ ಇಲ್ಲದ ನಮ್ಮ ಶ್ರೀಕರವಿಠ್ಠಲಗೆ || ॥೩॥



**ಅರ್ಥವಿವರಣೆ :–**

ರಾಯಚೂರು ಜಿಲ್ಲೆಯ ಮಾನವಿಗೆ ಸಮೀಪದಲ್ಲಿರುವ ಕಲ್ಲೂರಿನ **ಶ್ರೀಜಗನ್ನಾಥಾಚಾರ್ಯರು** ಶ್ರೀಕರವಿಠ್ಠಲನಾಮಾಂಕಿತದಲ್ಲಿ ರಚಿಸಿರುವ ಮಂಗಳಪದವಿದು. ಇದರಲ್ಲಿ ಪಾಂಡುರಂಗನಿಗೆ ಮಂಗಳವನ್ನು ಹಾಡಿದ್ದಾರೆ.

**ಶಿಲೆಯನು ... ಗೈದಗೆ** = ತನ್ನ ಪಾದಸ್ಪರ್ಶದಿಂದ ಕಲ್ಲಾಗಿದ್ದ ಅಹಲ್ಯೆಯನ್ನು ಉದ್ಧರಿಸಿದ ಶ್ರೀರಾಮಚಂದ್ರನು. **ಬಲಿಯ** = ಬಲಿಯನ್ನು ರಸಾತಳಕ್ಕೆ ಒತ್ತಿ, ಈಗಲೂ ಅವನ ಅರಮನೆಯ ಬಾಗಿಲನ್ನು ಕಾಯುತ್ತಿರುವ ಶ್ರೀವಾಮನನು. **ಖಳನಿಂದ............ಪೊರೆದವಗೆ** = ದುಷ್ಟನಾದ ಹಿರಣ್ಯಕಶಿಪುವಿನಿಂದ ನಾನಾಪರಿಯಲ್ಲಿ ಹಿಂಸೆಪಟ್ಟು ಬಳಲಿದ ಪ್ರಹ್ಲಾದ ಬಾಲಕನಿಗೆ ಪ್ರತ್ಯಕ್ಷನಾದ ಸ್ತಂಭಜ ನರಸಿಂಹನಿಗೆ.

**ಸಖಯಿಂದ** = ವಿಶ್ವಾಸದಿಂದ ಸುಧಾಮನು ತಂದ ಮೂರು ಹಿಡಿ ಅವಲಕ್ಕಿಯಲ್ಲಿ ಒಪ್ಪಿಡಿ ತಿಂದು, ಸವಿಯಾಗಿದೆ ಎಂದು ಅನುಗ್ರಹಿಸಿದ ಶ್ರೀಕೃಷ್ಣನಿಗೆ. **ಹಿತದಿಂ** = ಗುರುಗಳಾದ ಸಾಂದೀಪರಿಗೆ ಅವರ ಪುತ್ರನನ್ನು ಸಮುದ್ರಗರ್ಭದಿಂದ ಪುನಃ ತಂದು, ಗುರುಕಾಣಿಕೆಯಾಗಿ ಒಪ್ಪಿಸಿದ ಶ್ರೀಕೃಷ್ಣನಿಗೆ.

**ಹಾಟಕ ರತ್ನ** = ರತ್ನಖಚಿತವಾದ ಭಂಗಾರದ ಕಿರೀಟದಿಂದ ಅಲಂಕೃತವಾದ. **ಕೋಟಿಮನ್ಮಥ** = ಕೋಟಿಮನ್ಮಥನ ಸೌಂದರ್ಯ ವನ್ನು ಮೀರುವ (ಸಾಕ್ಷಾತ್ ಮನ್ಮಥ ಮನ್ಮಥಃ). **ನೋಟಕಾಶ್ಚರ್ಯ ವಾದ** = ನೋಡುವುದಕ್ಕೆ ಅತ್ಯಾಶ್ಚರ್ಯಕರವಾದ ಸುಂದರ ತಿಲಕದಿಂದ ಶೋಭಿಸುವ ಲಲಾಟ. **ಸಾಟಿ ಇಲ್ಲದ** = ಸಮರೂ ಅಧಿಕರೂ ಇಲ್ಲದ ಸರ್ವೋತ್ತಮನಿಗೆ.



## ೭೦೦

## ಮಂಗಳಪದ

### (ತಂದೆ ವೆಂಕಟೇಶವಿಠ್ಠಲಾಂಕಿತ)

**ರಾಗ–ಸುರಟಿ** **ಆದಿತಾಳ**

ಮಂಗಳಂ ಮಂಗಳಂ–ವೆಂಕಟೇಶಾ ॥ ॥ಪ॥

ಶೇಷಗಿರೀಶ ಸರ್ವೇಶಾ ಹೃದಾಕಾಶಾ
ಭೇಶ ಖಗೇಶಧ್ವಜ ಶ್ರೀಶ್ರೀನಿವಾಸಾ ॥ ॥೧॥

ಕಪಿಲ ಹಯಾಸ್ಯಾದಿ ವಿಪುಳರೂಪಧರ
ತಪನಕುಲೋದ್ಭವ ಕಪಿರಾಜಪೂಜ್ಯ ॥ ॥೨॥

ಇಂದಿರೆವರ ತಂದೆ ವೆಂಕಟೇಶ ವಿಠ್ಠಲ ಭ-
ವಾಂಧತಿಮಿರ ಅಬ್ಜಬಂಧು ಪ್ರಕಾಶ ॥ ॥೩॥



**ಅರ್ಥವಿವರಣೆ : –**

**ಶೇಷಗಿರೀಶ** = ಶೇಷಪರ್ವತದಲ್ಲಿ (ಶೇಷಾದ್ರಿ) ವಾಸಮಾಡುವ ಶ್ರೀಶ್ರೀನಿವಾಸ. **ಸರ್ವೇಶಾ** = ಸರ್ವಜೀವರಿಗೂ (ರಮಾ ಬ್ರಹ್ಮಾದಿ) ಮುಖ್ಯನಿಯಾಮಕನು. **ಹೃದಾಕಾಶಾಭೇಶ** = ಹೃದಯವೆಂಬ ಆಕಾಶ ದಲ್ಲಿ (ದಹರಾಕಾಶ) ವಿದ್ಯಮಾನನಾಗಿರುವ ಸೂರ್ಯಸದೃಶ. (ಭ–ಈಶ. ಆಕಾಶದಲ್ಲಿ ಬೆಳಗುತ್ತಿರುವ ಸೂರ್ಯ). **ಖಗೇಶಧ್ವಜ** = ಗರುಡವಾಹ ನನು (ಖಗ–ಪಕ್ಷಿ. ಖಗೇಶ–ಪಕ್ಷಿರಾಜನಾದ ಗರುಡದೇವರು).

**ಕಪಿಲ** = ಕರ್ದಮಮುನಿಗಳಿಂದ ದೇವಹೂತಿಯಲ್ಲಿ ಪ್ರಕಟನಾದ ಕಪಿಲನಾಮಕ ಶ್ರೀಹರಿ ಸಾಂಖ್ಯಯೋಗ ಬೋಧಕ. **ಹಯಾಸ್ಯ** = ಹಯಗ್ರೀವ. (ಹಯ–ಕುದುರೆಯಂತಿರುವ. ಆಸ್ಯ–ಮುಖವುಳ್ಳ. ಹಯ ವದನಮೂರ್ತಿ) ಕಪಿಲ, ಹಯಗ್ರೀವ ಇವೆರಡೂ ಜ್ಞಾನಪ್ರಬೋಧಕ ಭಗವದ್ರೂಪಗಳು. **ವಿಪುಳರೂಪಧರ** = ಇಂತಹ ಅನಂತಾನಂತರೂಪ ಗಳನ್ನು ಧರಿಸಿದವನು. **ತಪನ ಕುಲೋದ್ಭವ** = ಸೂರ್ಯ ವಂಶದಲ್ಲಿ ಉದ್ಭವಿಸಿದ ಶ್ರೀರಾಮಚಂದ್ರ (ತಪನ–ಸೂರ್ಯ) **ಕಪಿರಾಜಪೂಜ್ಯ** = ಕಪಿಕುಲಶ್ರೇಷ್ಠರಾದ ಮಾರುತಿಯಿಂದ ಸಂಪೂಜ್ಯನಾದವನು.

**ಇಂದಿರೇವರ** = ಶ್ರೀಲಕ್ಷ್ಮೀಪತಿ–ಲಕ್ಷ್ಮಿಗಿಂತಲೂ ಅನಂತಾನಂತ ಕೋಟಿ ಗುಣಗಳಿಂದ ಅಧಿಕನು. **ಭವಾಂಧತಿಮಿರ** = ಸಂಸಾರವೆಂಬ ಗಾಢಾಂಧಕಾರಕ್ಕೆ. **ಅಬ್ಜಬಂಧುಪ್ರಕಾಶ** = ಕಮಲಮಿತ್ರನಾದ ಸೂರ್ಯ ಪ್ರಕಾಶ ಸದೃಶನು (ಅಬ್ಜ–ಅಪ್– ಜ–ನೀರಿನಲ್ಲಿ ಹುಟ್ಟುವ ಕಮಲಪುಷ್ಪ).



## ೭೦೧

## ಮಂಗಳಪದ

### (ಕಮಲೇಶವಿಠ್ಠಲಾಂಕಿತ)

ಮಂಗಳಂ ಸರ್ವೇಶ ಮಾ ರಮಣ–ದುರಿತಾಪಹರಣ ॥ ॥ಪ॥

ತುಂಗ ವಿಕ್ರಮ ಸ್ತುತಿಪೆ ತವಚರಣ–ಭಕ್ತೋದ್ಧರಣ
ಇರಲಿ ಎನ್ನೊಳು ಕರುಣ ಪರಿಪೂರ್ಣ–ಸೀತಾರಮಣ ॥ ॥ಅ॥

ಸಲಹೋ ಎನ್ನನು ಮಂದರಾದ್ರಿಧರ–ಶ್ರೀರಾಮಚಂದಿರ
ದಶಶಿರಾಂತಕ ರಾಮ ರಘುವೀರ–ಪೀತಾಂಬರಧರ
ಮಾರಜನಪಿತ ಧೀರ ಗಂಭೀರ–ಸರಸಾಕಾರ ॥ ॥೧॥

ಮಾತೆ ದೇವಕಿ ಗರ್ಭದಲಿ ಜನಿಸಿ–ಕಂಸನನ್ನ ಮರ್ಧಿಸಿ
ಪಾರ್ಥನೊಳು ಬಲುಪ್ರೇಮಸಖನೆನಿಸಿ–ಕುರುಕುಲವ ಕೊಲಿಸಿ
ಲೋಕದೊಳು ಅತ್ಯಧಿಕನೆಂದೆನಿಸಿ–ಭಕ್ತರನು ಪೋಷಿಸಿ ॥ ॥೨॥

ಸುರಪುರಿ ಶ್ರೀವೇಣುಗೋಪಾಲ–ಶ್ರೀವೆಂಕಟಾಚಲ
ಶಾಮವರ್ಣ ಶುಭಾಂಗ ಗುಣ ಶೀಲ–ಶ್ರೀಲಕ್ಷ್ಮೀಲೋಲ
ಶ್ರೀನಿವಾಸ ಶುಭಾಂಗ ಗುಣ ಶೀಲ–ಕಮಲೇಶವಿಠ್ಠಲ ॥ ॥೩॥



**ಅರ್ಥವಿವರಣೆ :–**

**ಕಮಲೇಶವಿಠ್ಠಲಾಂಕಿತರಾದ** ಸುರಪುರದ ಆನಂದದಾಸರಿಂದ ವಿರಚಿತ ಮಂಗಳಪದವಿದು. ಮೂರು ನುಡಿಗಳಲ್ಲಿ ಶ್ರೀರಾಮ–ಶ್ರೀಕೃಷ್ಣ–ಶ್ರೀಶ್ರೀನಿವಾಸ ಈ ದೇವರುಗಳ ಪರವಾದ ಸ್ತೋತ್ರಸಾಹಿತ್ಯವಿದೆ.

**ಮಾರಮಣ** = ರಮಾವಲ್ಲಭ. **ದುರಿತಾಪಹರಣ** = ಸಜ್ಜನರ ಪಾಪಗಳ ಪರಿಹಾರಕನು. **ತುಂಗವಿಕ್ರಮ** = ಅತ್ಯುನ್ನತ ಪರಾಕ್ರಮವುಳ್ಳವನು.

**ಮಂದರಾದ್ರಿಧರ** = ಮಂದರ ಪರ್ವತವನ್ನು ತನ್ನ ಬೆನ್ನಿನ ಮೇಲೆ ಧರಿಸಿದ ಕೂರ್ಮರೂಪೀ ಶ್ರೀಹರಿ. **ದಶಶಿರಾಂತಕ** = ಹತ್ತು ತಲೆಯುಳ್ಳ ರಾವಣನನ್ನು ಸಂಹರಿಸಿದ ಶ್ರೀರಾಮಚಂದ್ರ. **ಸರಸಾಕಾರ** = ದಿವ್ಯಮಂಗಳವಿಗ್ರಹನು.

**ಸುರಪುರಿ** = ಸುರಪುರ ಕ್ಷೇತ್ರದಲ್ಲಿರುವ ಶ್ರೀವೇಣುಗೋಪಾಲಮೂರ್ತಿ. **ಶಾಮವರ್ಣ** = ನೀಲಮೇಘ ವರ್ಣವುಳ್ಳ ಶರೀರವುಳ್ಳವನು. **ಶುಭಾಂಗ** = ಮಂಗಳಾಂಗನು. **ಗುಣಶೀಲ** = ಅನಂತಕಲ್ಯಾಣಗುಣಗಣ ಪರಿಪೂರ್ಣನು.



## ೭೦೨

## ಮಂಗಳಪದ

### (ಪ್ರಾಣನಾಥವಿಠಲಾಂಕಿತ)

**ರಾಗ–ಮಧ್ಯಮಾವತಿ** **ಆದಿತಾಳ**

ಆರತಿಯನೆತ್ತುವನು ವಾರಿಜಾಕ್ಷ ಕೃಷ್ಣ ನಿನಗೆ ॥ ॥ಪ॥

ತಾಮರಸದಳಾಕ್ಷ ನಿನಗೆ ಹೇಮದ ತಟ್ಟೆಯನು ಪಿಡಿದು ॥ ॥ಅ॥

ಮಾರಸುಂದರ ಮೋಹನಾಂಗ ಸಾರಸಾಕ್ಷ ಕೃಪಾಪಾಂಗ
ನಾರಿಜನರ ಮತ್ತ ಭೃಂಗ ಧೀರ ಮಂಗಳಾಂಗ ನಿನಗೆ ॥ ॥೧॥

ಕಮಲನಯನ ಹರಿಯೆ ನಿನಗೆ ವಿಮಲ ಮುತ್ತಿನ ಆರತಿಯ
ಕಮಲಮುಖಿಯು ಕರದಿ ಪಿಡಿದು ಕಮಲವದನ ಕೃಷ್ಣ ನಿನಗೆ॥ ॥೨॥

ಜಾಣ ಪ್ರಾಣನಾಥವಿಠ್ಠಲ ಆಣಿಮುತ್ತಿನ ಆರತಿಯ
ಜಾಣತನದಿ ಕರದಿ ಪಿಡಿದು ಪ್ರಾಣಕಾಂತ ಕೃಷ್ಣ ನಿನಗೆ ॥ ॥೩॥



**ಅರ್ಥವಿವರಣೆ :-**

**ಪ್ರಾಣನಾಥವಿಠ್ಠಲಾಂಕಿತರಾದ** ಬಾಗೇಪಲ್ಲಿ **ಶ್ರೀಶೇಷದಾಸರ** ಕೃತಿ ಇದು. ಶ್ರೀಕೃಷ್ಣನನ್ನು ಕುರಿತ ಮಂಗಳಪದರೂಪ ಕೀರ್ತನಸಾಹಿತ್ಯ.

**ವಾರಿಜಾಕ್ಷ** = ಕಮಲದಳದಂತೆ ವಿಶಾಲವಾದ ನೇತ್ರವುಳ್ಳವನು. (ವಾರಿಜ-ಕಮಲ). **ತಾಮರಸದಳಾಕ್ಷ** = ಕಮಲದಳದಂತೆ ನೇತ್ರ (ತಾಮರಸ-ಕಮಲ). **ಹೇಮದ ತಟ್ಟೆಯು** = ಚಿನ್ನದ ಹರಿವಾಣ.

**ಮಾರಸುಂದರ** = ಕೋಟಿ ಮನ್ಮಥ ಲಾವಣ್ಯನು. **ಮೋಹನಾಂಗ** = ದಿವ್ಯ ಮಂಗಳವಿಗ್ರಹನು. **ಸಾರಸಾಕ್ಷ** = ಕಮಲದಳದಂತೆ ನೇತ್ರವುಳ್ಳವನು (ಸಾರಸ-ಕಮಲ). **ಕೃಪಾಪಾಂಗ** = ಕರುಣೆಯ ಕಟಾಕ್ಷವುಳ್ಳವನು. **ನಾರಿಯರ ಮತ್ತ ಭೃಂಗ** = ಮದಿಸಿದ ಭ್ರಮರ ಸದೃಶರು ಗೋಪಿಕಾಸ್ತ್ರೀಯರು. ಅವರು ಶ್ರೀಕೃಷ್ಣನ ಚರಣಕಮಲಕ್ಕೆ ಮತ್ತ ಭೃಂಗರು.

**ವಿಮಲಮುತ್ತಿನ** = ಶುಭ್ರವಾದ ಮುತ್ತಿನ ಆರತಿ (ಬಿಳಿಯ ಮುತ್ತು). **ಕಮಲಮುಖಿಯು** = ಕಮಲದಂತೆ ವದನವುಳ್ಳ ಶ್ರೀ ಲಕ್ಷ್ಮಿಯು. **ಕರದಿ ಪಿಡಿದು** = ಆರತಿಯನ್ನು ಕೈಯಲ್ಲಿ ಹಿಡಿದುಕೊಂಡು, **ಜಾಣ** = ಸರ್ವಜ್ಞ. **ಆಣಿ ಮುತ್ತಿನ** = ಗುಂಡು ಮುತ್ತಿನ. **ಜಾಣತನದಿ** = ಭಕ್ತಿ ವಿನಯಗಳಿಂದ. **ಪ್ರಾಣಕಾಂತ** = ಜೀವರ ಪ್ರಾಣ ದೊಲ್ಲಭ (ಬಿಂಬಮೂರ್ತಿ).



## ೭೦೩

## ಮಂಗಳಪದ

### (ಗುರುಗೋವಿಂದವಿಠ್ಠಲಾಂಕಿತ)

**ರಾಗ-ಸುರುಟಿ** **ಆದಿತಾಳ**

ಮಂಗಳ ಮೂರ್ಜಗದೊಡೆಯನಿಗೇ-ಶುಭ
ಮಂಗಳ ಸೃಷ್ಟ್ಯಾದಿ ಕರ್ತನಿಗೇ ॥ ॥ಪ॥

ಮಂಗಳ ರವಿಕುಲತಿಲಕನಿಗೇ-ಶುಭ
ಮಂಗಳ ಹನುಮನ ಒಡೆಯನಿಗೇ
ಮಂಗಳ ಭೀಮನ ಸಲಹಿದಗೇ
ಮಂಗಳ ಮಧ್ವಹೃದಾಂಬುಜ ರವಿಗೇ ॥ ॥೧॥

ಮಂಗಳ ದಶಗ್ರೀವ ಛೇದಕಗೇ-ಶುಭ
ಮಂಗಳ ಕೌರವ ಹಂತಕಗೇ

ಮಂಗಳ ವ್ಯಾಸರ ಸೇವಕನಿಗೆ–ನಮ್ಮ
ಮಂಗಳ ದಶಮತಿ ಪೋಷಕಗೇ ॥ ॥೨॥

ಮಂಗಳ ಸೀತೆಯ ಪೋಷಕಗೇ–ಶುಭ
ಮಂಗಳ ರುಕ್ಮಿಣಿ ಅರಸನಿಗೇ
ಮಂಗಳ ಮಧ್ವರ ಪೊರೆದವಗೇ–ಶುಭ
ಮಂಗಳ ಗುರುಗೋವಿಂದ ವಿಠ್ಠಲಗೇ ॥ ॥೩॥



**ಅರ್ಥವಿವರಣೆ :–**

**ಗುರುಗೋವಿಂದ ವಿಠ್ಠಲಾಂಕಿತ** ದಾಸವರ್ಯರು ಈ ಮಂಗಳಪದ ರೂಪ ಕೀರ್ತನಸಾಹಿತ್ಯದಲ್ಲಿ ಶ್ರೀರಾಮಚಂದ್ರ–ಶ್ರೀಕೃಷ್ಣ–ಶ್ರೀವೇದವ್ಯಾಸ ದೇವರು – ಅವರ ಪೂಜಕರಾದ ಹನುಮ–ಭೀಮ–ಮಧ್ವ—ಅವತಾರ ತ್ರಯುಗಳಿಂದ ಯುಕ್ತವಾದ ಸ್ತೋತ್ರವಿದೆ.

**ಮೂಜಗದೊಡೆಯನಿಗೇ** = ಸ್ವರ್ಗ- ಮರ್ತ್ಯ–ಪಾತಾಳ–ಎಂಬ ಜಗತ್ರಯಗಳುಳ್ಳ ಬ್ರಹ್ಮಾಂಡದ ನಾಯಕನಾದ ಶ್ರೀಹರಿ. **ಸೃಷ್ಟ್ಯಾದಿ ಕರ್ತನಿಗೇ** = ಸೃಷ್ಟಿ–ಸ್ಥಿತಿ–ಲಯ–ನಿಯಮನ–ಜ್ಞಾನ–ಅಜ್ಞಾನ–ಬಂಧ–ಮೋಕ್ಷ–ಎಂಬ ಅಷ್ಟಕರ್ತೃತ್ವವುಳ್ಳ ಸರ್ವನಿಯಾಮಕನಿಗೇ.

**ರವಿಕುಲತಿಲಕಗೇ** = ಸೂರ್ಯವಂಶಲಲಾಮನಾದ ಶ್ರೀರಾಮ ಚಂದ್ರ. **ಹನುಮನ ಒಡೆಯನಿಗೇ**= ಹನುಮತ್ಸೇವಿತನಾದ ದಾಶರಥಿ. **ಭೀಮನ ಸಲಹಿದಗೇ** = ಭೀಮ ರಕ್ಷಕನಾದ ಶ್ರೀಕೃಷ್ಣನಿಗೇ. **ಮಧ್ವ ಹೃದಾಂಬುಜರವಿಗೇ** = ಗುರುಮಧ್ವರ ಹೃತ್ಪದ್ಮಕ್ಕೆ ಸೂರ್ಯಸದೃಶ ರಾದ ಶ್ರೀವೇದವ್ಯಾಸರಿಗೇ.

**ದಶಗ್ರೀವ ಛೇದಕಗೇ** = ಹತ್ತು ತಲೆ ರಾವಣನ ಸಂಹಾರಿಯಾದ ಶ್ರೀರಾಮನಿಗೇ. **ಕೌರವ ಹಂತಕಗೇ** = ಸಮಸ್ತ ಕೌರವರನ್ನು ಕೊಲಿಸಿದ ಶ್ರೀಕೃಷ್ಣನಿಗೇ. **ವ್ಯಾಸರ ಸೇವಕನಿಗೇ** = ವೇದವ್ಯಾಸರ ಸೇವಕರಾದ ಶ್ರೀಆಚಾರ್ಯ ಮಧ್ವರು. **ದಶಮತಿ ಪೋಷಕಗೇ** = ಪೂರ್ಣಪ್ರಜ್ಞರ ಪಾಲಕನಿಗೆ (ದಶ–ಪೂರ್ಣ. ಮತಿ–ಪ್ರಜ್ಞರು).

**ಸೀತೆಯ ಪೋಷಕಗೇ** = ಸೀತಾದೇವಿಗೆ ಆನಂದಪ್ರದನಾದ ಸೀತಾವಲ್ಲಭನಿಗೇ. **ರುಕ್ಮಿಣಿ ಅರಸಗೇ** = ರುಕ್ಮಿಣೀಪತಿಯಾದ ಶ್ರೀಕೃಷ್ಣನಿಗೇ. **ಮಧ್ವರ ಪೊರೆದವಗೇ** = ಪೂಜ್ಯಮಧ್ವರನ್ನು ಸಲಹುವ ವೇದವ್ಯಾಸರಿಗೇ.

❖

## ೭೦೪

## ಮಂಗಳಪದ

### (ಅಂಕಿತ–ನಾಮಗಿರಿನರಸಿಂಹ)

ಮಂಗಳಾನಿ ಸಂತತಂ ಭವಂತು ತೇ
ರಂಗರಮಣ ತುಂಗವಿಭವ ಮಂಗಳಾತ್ಮನೇ
ರಂಗನಾಯಕೀ ಪ್ರಾಣೇಶ ಕೇಶವ ॥ ಮಂಗಳಂ ॥ ॥೧॥

ಮಾಧವಾಯ ಮಂಗಳಾನಿ ಸಂತು ತೇ
ವೇದವಿನುತ ಮೋದಭರಿತ ಖೇದವರ್ಜಿತ
ಸದವಲೋಕ ಪಾಲಿತಾನತ ॥ ॥೨॥

**ಸಕಲಕಲ್ಯಾಣ ಗುಣಾಢ್ಯಗೆ** = ಅನಂತಕಲ್ಯಾಣ ಗುಣಗಣ ಪರಿಪೂರ್ಣನಾದ ಆ ಅಪ್ರಮೇಯನಿಗೆ. **ನಿಖಿಲದೋಷದೂರಗೆ** = ಸಮಸ್ತ ದೋಷರಹಿತನಾದ ಸರ್ವಶ್ರೇಷ್ಠನಾದವನಿಗೆ. **ಭಾಮಾರಮಣಗೆ**=ಸತ್ಯಭಾಮಾ ಪತಿಯಾದ ಶ್ರೀಕೃಷ್ಣನಿಗೆ.

**ಸೌಭಾಗ್ಯ ಸಂಪನ್ನನಿಗೆ** = ಸಕಲ ವೈಭವಪೂರ್ಣವಾದ, ಷಡ್ಗುಣೈಶ್ವರ್ಯ ಸೌಭಾಗ್ಯ ಸಂಪನ್ನನಿಗೆ. **ರವಿಶತಸಮತೇಜಗೆ** = ಕೋಟಿ ಸೂರ್ಯಪ್ರಕಾಶವುಳ್ಳವನಿಗೆ (ಶತ–ಎಂದರೆ ಕೋಟಿ, ಅನಂತ–ಎಂತಲೂ ಅರ್ಥ). **ಜವದಲಿ** = ಶೀಘ್ರವಾಗಿ.

**॥ಭಜನಕೌಸ್ತುಭದ ತೃತೀಯ ಸಂಪುಟ ಪರಿಸಮಾಪ್ತಿಯಾಯಿತು॥**

॥ ಶ್ರೀಮಧ್ವೇಶಾರ್ಪಣಮಸ್ತು ॥



## ೭೦೫

## ಮಂಗಳಪದ

(ಅಂಕಿತ-ಪ್ರಸನ್ನ)

ರಾಗ-ಆನಂದಭೈರವಿ ಆದಿತಾಳ

ಸಕಲಕಲ್ಯಾಣ ಗುಣಾಢ್ಯಗೆ ಮಂಗಳಂ
ನಿಖಿಲದೋಷದೂರಗೆ ಮಂಗಳಂ
ಭಕುತರ ಸಂತತ ಪೊರೆಯುತಿರುವ ನಮ್ಮ
ರುಕ್ಮಿಣಿ ಭೂಮಾರಮಣಗೆ ಮಂಗಳಂ ॥ ॥೧॥

ಯಾದವಕುಲಭೂಷಣನಿಗೆ ಮಂಗಳಂ
ಸಾಧು ಸುಧಾಮಸಖಗೆ ಮಂಗಳಂ
ಪಾದ ಸೇವಕರಿಗೆ ಮೋದವ ನೀಡುವ
ಮಾಧವನಿಗೆ ಸಂತತ ಶುಭಮಂಗಳಂ ॥ ॥೨॥

ವಿವಿಧ ಸೌಭಾಗ್ಯ ಸಂಪನ್ನಗೆ ಮಂಗಳಂ
ರವಿಶತಸಮತೇಜಗೆ ಮಂಗಳಂ
ಕುಮಿಸಮ್ಮುದಲಿ ಬೇಡುವರಿಗೆ ಶುಭಗಳ
ಜವದಲಿ ಕೊಡುವ ಪ್ರಸನ್ನಗೆ ಮಂಗಳಂ ॥ ॥೩॥

❁❁

**ಅರ್ಥವಿವರಣೆ :-**

ಶ್ರೀಮದ್ವ್ಯಾಸರಾಜಮಠಾಧೀಶರಾಗಿದ್ದ ಶ್ರೀಪ್ರಸನ್ನತೀರ್ಥ ಶ್ರೀಪಾದಂಗಳವರ ಕೀರ್ತನಸಾಹಿತ್ಯವಿದು.

**ಸಕಲಕಲ್ಯಾಣ ಗುಣಾಢ್ಯಗೆ** = ಅನಂತಕಲ್ಯಾಣ ಗುಣಗಣ ಪರಿಪೂರ್ಣನಾದ ಆ ಅಪ್ರಮೇಯನಿಗೆ. **ನಿಖಿಲದೋಷದೂರಗೆ** = ಸಮಸ್ತ ದೋಷರಹಿತನಾದ ಸರ್ವಶ್ರೇಷ್ಠನಾದವನಿಗೆ. **ಭಾಮಾರಮಣಗೆ**=ಸತ್ಯಭಾಮಾ ಪತಿಯಾದ ಶ್ರೀಕೃಷ್ಣನಿಗೆ.

**ಸೌಭಾಗ್ಯ ಸಂಪನ್ನನಿಗೆ** = ಸಕಲ ವೈಭವಪೂರ್ಣವಾದ, ಷಡ್ಗುಣೈಶ್ವರ್ಯ ಸೌಭಾಗ್ಯ ಸಂಪನ್ನನಿಗೆ. **ರವಿಶತಸಮತೇಜಗೆ** = ಕೋಟಿ ಸೂರ್ಯಪ್ರಕಾಶವುಳ್ಳವನಿಗೆ (ಶತ–ಎಂದರೆ ಕೋಟಿ, ಅನಂತ–ಎಂತಲೂ ಅರ್ಥ). **ಜವದಲಿ** = ಶೀಘ್ರವಾಗಿ.

**॥ಭಜನಕೌಸ್ತುಭದ ತೃತೀಯ ಸಂಪುಟ ಪರಿಸಮಾಪ್ತಿಯಾಯಿತು॥**

**॥ ಶ್ರೀಮಧ್ವೇಶಾರ್ಪಣಮಸ್ತು ॥**

